# ಪ್ರಬುದ್ಧ ಕರ್ನಾಟಕ









೨೫೮

ಶ್ರೀ ಸಂಚಿಕೆ

ಮೈಸೂರು ವಿಶ್ವವಿದ್ಯಾನಿಲಯ

# ಲೇಖಕರಿಗೆ ಸೂಚನೆಗಳು

೧. 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟನೆಗಾಗಿ ಎಲ್ಲ ಬಗೆಯ ಲೇಖನಗಳಿಗೂ ಸ್ವಾಗತವಿದೆ. ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೆ ಅನುವಾದಗಳಾಗಿರಬಹುದು. ಅನುವಾದವಾಗಿದ್ದರೆ ಮೂಲಲೇಖಕರ ಹಾಗೂ ಲೇಖನದ ಹೆಸರನ್ನು ತಪ್ಪದೆ ಸೂಚಿಸಿದ್ದು, ಲೇಖನದ ಜೊತೆಯಲ್ಲಿಯೇ ಮೂಲಲೇಖಕರ ಅಥವಾ ಪ್ರಕಾಶಕರ ಸಮ್ಮತಿಯನ್ನು ಕಳುಹಿಸಬೇಕು.

೨. ಲೇಖನಗಳನ್ನು ಕಾಗದದ ಒಂದೇ ಮಗ್ಗುಲಿನಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಇಲ್ಲವೇ ಟೈಪ್ ಮಾಡಿರಬೇಕು. ಲೇಖನದೊಂದಿಗೆ ಲೇಖಕರ ಸಂಕ್ಷಿಪ್ತ ಪರಿಚಯವನ್ನು ಕಳುಹಿಸಿಕೊಡಬೇಕು. ಲೇಖಕರಿಗೆ ಕರಡನ್ನು ತಿದ್ದುವ ಅವಕಾಶವಿಲ್ಲದಿರುವುದರಿಂದ ಹಸ್ತಪ್ರತಿಗಳು ಯಾವ ರೀತಿಯಿಂದಲೂ ಅಸ್ಪಷ್ಟವಾಗಿರಬಾರದು; ಅಸಂಪೂರ್ಣವಾಗಿರಬಾರದು. ಲೇಖನಗಳು ಸಚಿತ್ರವಾಗಿದ್ದರೆ, ಲೇಖನದಲ್ಲಿ ಚಿತ್ರಗಳು ಇರಬೇಕಾದ ಜಾಗವನ್ನು ನಿರ್ದೇಶಿಸಿರಬೇಕು.

೩. ಲೇಖನಗಳಲ್ಲಿ, ಇಂಗ್ಲಿಷನ್ನುಳಿದ ಅನ್ಯಭಾಷೆಗಳ ಉದ್ಧರಿತ ಭಾಗಗಳು ಕನ್ನಡ ಲಿಪಿಯಲ್ಲೇ ಇರಬೇಕು. ಅಡಿ ಟಿಪ್ಪಣಿಗಳಲ್ಲಿ, ಲೇಖಕರ ಹೆಸರು, ಪುಸ್ತಕ ಅಥವಾ ಲೇಖನಗಳ ಹೆಸರು, ಪ್ರಕಾಶಕರ ಹೆಸರು, ಸ್ಥಳ, ಪ್ರಕಟಣೆಯ ವರ್ಷ ಹಾಗೂ ಸಂಬಂಧಿಸಿದ ಪುಟಸಂಖ್ಯೆ ಇವುಗಳನ್ನು ಖಚಿತವಾಗಿ ನಮೂದಿಸಿರಬೇಕು. ಮಾದರಿಗಾಗಿ ಇಲ್ಲಿ ಎರಡು ಉದಾಹರಣೆಗಳನ್ನು ಕೊಟ್ಟಿದೆ:

ನರಸಿಂಹಾಚಾರ್, ಡಿ. ಎಲ್., ಕನ್ನಡ ಗ್ರಂಥಸಂಪಾದನೆ (ಶಾರದಾಮಂದಿರ, ಮೈಸೂರು), ೧೯೬೪, ಪು. ೧೬.

**Sreekantaiya, T. N.,** 'A Century and a Half of Literary Activity in Kannada,' **Kannada Studies, Vol. 1, No. 2 (Mysore 1965), p.62.**

೪. ಕನ್ನಡ, ಇಂಗ್ಲಿಷ್, ಸಂಸ್ಕೃತ, ತೆಲುಗು ಮತ್ತು ಹಿಂದಿ ಭಾಷೆಗಳ ಪುಸ್ತಕಗಳನ್ನು ವಿಮರ್ಶೆಗಾಗಿ ಸ್ವೀಕರಿಸಲಾಗುತ್ತದೆ. ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು **ಎರಡು** ಪ್ರತಿಗಳನ್ನು ಕಳುಹಿಸಬೇಕು.

೫. ಲೇಖಕರಿಗೆ ಅವರ ಲೇಖನಗಳ ೨೫ ಪ್ರತಿಗಳನ್ನು ಒದಗಿಸಲಾಗುತ್ತದೆ. ತಗಲಬಹುದಾದ ವೆಚ್ಚವನ್ನು ವಹಿಸಿದರೆ ಹೆಚ್ಚಿಗೆ ಪ್ರತಿಗಳನ್ನೂ ಒದಗಿಸಲಾಗುತ್ತೆ. ಲೇಖನ ಸ್ವೀಕೃತವೇ ಇಲ್ಲವೇ ಎಂಬುದನ್ನು ತಿಳಿಯಬಯಸುವವರು ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಸಾಕಷ್ಟು ಅಂಚೆ ಚೀಟಿಗಳನ್ನು ಕಳುಹಿಸಬೇಕು.

೬. ಲೇಖನಗಳನ್ನು, ವಿಮರ್ಶೆಗಾಗಿ ಪುಸ್ತಕಗಳನ್ನು, **ಸಂಪಾದಕರು, ಪ್ರಬುದ್ಧ ಕರ್ಣಾಟಕ, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೧೨,** ಇವರಿಗೆ ಕಳುಹಿಸಬೇಕು.

# ಪ್ರಬುದ್ಧ ಕರ್ಣಾಟಕ

ಸಂಪುಟ ೬೫ ಸಂಚಿಕೆ ೪

೨೫೮




ರುಧಿರೋದ್ಗಾರಿ ಸಂವತ್ಸರ



ಪುಷ್ಯ ಸಂಚಿಕೆ

ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೮೪

PRABUDDHA KARNATAKA, Kannada Quarterly of the *University of Mysore.* Volume 65, Number 4, February 1984 [ Special number dedicated to the memory of the late Prof. B. M. Srikantia ] ; Edited by Rame Gowda and Pradhan Gurudatta.





ಪ್ರಧಾನ ಸಂಪಾದಕರು

**ಡಾ. ಹಾ. ಮಾ. ನಾಯಕ**

ಸಂಪಾದಕರು

**ರಾಮೇಗೌಡ**

**ಪ್ರಧಾನ್ ಗುರುದತ್ತ**



ಪ್ರಕಾಶಕರು

**ಕೆ. ಟಿ. ವೀರಪ್ಪ**

ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಮುದ್ರಕರು

ಸಂಸ್ಕೃತ ಸಾಹಿತ್ಯ ಸದನ

೧೦೪೦ ಚಾಮರಾಜಪುರಂ, ಮೈಸೂರು ೫೭೦ ೦೦೪




# ವಿಷಯಸೂಚಿಕೆ

## ಕವನ ಕಾಣಿಕೆ


| | | | |
|---|---|---|---|
| ೧ | ಶ್ರೀನಿವಾಸ | ಕನ್ನಡದ ಕಣ್ವ | 3 |
| ೨ | ಕುವೆಂಪು | ನಿವೇದನ | 4 |
| ೩ | ಕಾನಕಾನಹಳ್ಳಿ ವರದಾಚಾರ್ಯ | ಶ್ರೀಮಂಗಳಾಶಾಸನಂ | 5 |
| ೪ | ಡಿ.ವಿ.ಜಿ. | ಶ್ರೀಕಂಠಂ | 6 |
| ೫ | ಡಿ.ಎಸ್. ಕರ್ಕಿ | ಕೊರಲಿನ ದನಿ ಎಲ್ಲಿ ? | 7 |
| ೬ | ಡಿ.ಎಲ್. ನರಸಿಂಹಾಚಾರ್ | ಶ್ರೀಕಂಠಗುರು | 8 |
| ೭ | ರಂ.ಶ್ರೀ. ಮುಗಳಿ | ಕನ್ನಡದ ವೀರಶ್ರೀ | 9 |
| ೮ | ಕೆ.ಎಸ್. ನರಸಿಂಹಸ್ವಾಮಿ | ಅರೆ ನಿಮ್ಮದನಿಯೊಂದೆ | 10 |
| ೯ | ಜಿ. ವರದರಾಜರಾವ್ | ನೀವಿಂದು ಜೀವಿಸಿರಬೇಕಿತ್ತು | 11 |
| ೧೦ | ಎಸ್.ವಿ. ಪರಮೇಶ್ವರಭಟ್ಟ | ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು | 12 |
| ೧೧ | ಚೆನ್ನವೀರ ಕಣವಿ | ಕಂನಾಡ ಬಾನಿನಲಿ ಶ್ರೀಕಾರ ಬರೆದಂತೆ | 16 |
| ೧೨ | ದ.ರಾ. ಬೇಂದ್ರೆ | ಸಂಭಾವನೆ | 17 |
| ೧೩ | ಜಿ.ಎಸ್. ಶಾಮಣ್ಣ | ನಿನ್ನಂಥವನೊಬ್ಬ ದೊರಕುವನೆ | 18 |
| ೧೪ | ಎಂ.ವಿ. ಸೀತಾರಾಮಯ್ಯ | ಕನ್ನಡದ ಕಲ್ಪತರುವೆ | 20 |
| ೧೫ | ಸಿ.ಪಿ.ಕೆ. | ಹರಿಕಾರ | 23 |
| ೧೬ | ಮಳಲಿ ವಸಂತಕುಮಾರ್ | ಕನ್ನಡದ ಸಿರಿ | 24 |
| ೧೭ | ರಾಗೌ | ಶ್ರೀರಕ್ಷೆ | 26 |
| ೧೮ | ಎಸ್. ಅನಂತನಾರಾಯಣ | ಶ್ರೀಕಂಠವಾಣಿ | 27 |
| ೧೯ | ಗೋವಿಂದ ಕಣೇಕಲ್ | ನಾಡನಾಯಕ | 29 |
| ೨೦ | ಶಂಕರ ಮೊಕಾಶಿ ಪುಣೇಕರ | ಕನ್ನಡದ ತಂದೆ | 31 |
| ೨೧ | ಜೀ.ಶಂ. ಪರಮಶಿವಯ್ಯ | ಭಾಗ್ಯಶ್ರೀ-ಬೆಳ್ಳೂರು | 33 |


## ನಾನು ಕಂಡಂತೆ


| | | | |
|---|---|---|---|
| ೨೨ | ಕುವೆಂಪು | ಹಿರಿಯರ ಹಿರಿಮೆ | 37 |
| ೨೩ | ಮಾಸ್ತಿ ವೆಂಕಟೇಶ ಅಯ್ಯಂಗಾರ್ | ಗುರು-ಶಿಷ್ಯ | 49 |

| | | | |
|---|---|---|---|
| ೨೪ | ಡಿ.ವಿ.ಜಿ. | ಬಹುಮುಖ ಆಸಕ್ತಿ, ಅಪೂರ್ವ ಪ್ರತಿಭೆ | 59 |
| ೨೫ | ವಿ.ಸೀ. | ಹೊಸಗನ್ನಡ ಸಾಹಿತ್ಯದ ಪುಣ್ಯ | 79 |
| ೨೬ | ಎ.ಆರ್. ಕೃಷ್ಣಶಾಸ್ತ್ರೀ | ಅವರ ಪ್ರೋತ್ಸಾಹವಿಲ್ಲದಿದ್ದರೆ | 97 |
| ೨೭ | ಬಿ.ಜಿ.ಎಲ್. ಸ್ವಾಮಿ | ಶ್ರೀಯವರೊಡನೆ ಒಂದೂವರೆದಿನ | 105 |
| ೨೮ | ಎ.ಎನ್. ಮೂರ್ತಿರಾವ್ | ಉತ್ಸಾಹದ ಜ್ಯೋತಿಸ್ಪರ್ಶ | 119 |
| ೨೯ | ಎಸ್.ವಿ. ಪರಮೇಶ್ವರಭಟ್ಟ | ಆ ಅಮೃತಘಳಿಗೆ | 133 |
| ೩೦ | ಎಚ್.ಎಂ. ಶಂಕರ ನಾರಾಯಣರಾವ್ | ಕೆಲವು ನೆನಪುಗಳು | 137 |
| ೩೧ | ಜಿ. ವರದರಾಜರಾವ್ | 'ಶ್ರೀ'ಸ್ಮೃತಿ | 147 |
| ೩೨ | ವಿಶಾಲಾಕ್ಷಿ | ರಸಋಷಿ | 163 |
| ೩೩ | ಕೆ. ವೆಂಕಟರಾಮಪ್ಪ | ಮಹಾ ಪ್ರಾಧ್ಯಾಪಕ | 169 |
| ೩೪ | ತ.ಸು. ಶಾಮರಾಯ | ಕನ್ನಡದ ಕಾರಣಪುರುಷ | 175 |
| ೩೫ | ಬಿ.ಎಂ. ಶಿವರಾಮಯ್ಯ | ನನ್ನ ಅಣ್ಣಂದಿರು | 183 |
| ೩೬ | ಎಂ.ವಿ. ಸೀತಾರಾಮಯ್ಯ | ವಿದ್ಯಾರ್ಥಿಯಾಗಿ ನಾನು ಕಂಡಂತೆ | 195 |
| ೩೭ | ಎಂ. ಗೋವಿಂದಪ್ಪೈ | ಸ್ನೇಹಪೂರ್ಣ ಹಣತೆ | 206 |
| ೩೮ | ಎನ್. ಅನಂತರಂಗಾಚಾರ್ | ಶ್ರೀಯವರು ಮತ್ತು ಪ್ರಬುದ್ಧ ಕರ್ಣಾಟಕ | 207 |


## ಶ್ರೀಯವರು ಮತ್ತು ಕನ್ನಡ


| | | | |
|---|---|---|---|
| ೩೯ | ಶಂಸ | ಶ್ರೀಯವರು ಮತ್ತು ಕನ್ನಡ ಪ್ರಚಾರ | 211 |
| ೪೦ | ಸಿ.ಪಿ.ಕೆ | ಶ್ರೀಯುತರು ಮತ್ತು ಕನ್ನಡ ಇಲಾಖೆ | 217 |
| ೪೧ | ಟಿ. ವಿ. ವೆಂಕಟಾಚಲಶಾಸ್ತ್ರೀ | ಶ್ರೀಯವರು ಮತ್ತು ಕನ್ನಡ ಸಾಹಿತ್ಯ ಪರಿಷತ್ತು | 225 |
| ೪೨ | ಟಿ. ಆರ್. ನಾಗಪ್ಪ | ಶ್ರೀಯವರು ಮತ್ತು ವಯಸ್ಕರ ಶಿಕ್ಷಣ | 235 |
| ೪೩ | ಸೋಮಶೇಖರಗೌಡ | ಶ್ರೀಯವರು ಮತ್ತು ಲಿಪಿಸಂಸ್ಕರಣ | 243 |

## ಸಾಹಿತ್ಯ ಸಾಧನೆ


| | | | |
|---|---|---|---|
| ೪೪ | ಎನ್. ಬಾಲಸುಬ್ರಹ್ಮಣ್ಯ | ಇಂಗ್ಲಿಷ್ ಗೀತಗಳು | 251 |
| ೪೫ | ಎಡ್ವರ್ಡ್ ನೊರೋನಾ | 'ನಿರಾಶೆ' | 257 |
| ೪೬ | ಲಕ್ಷ್ಮೀನಾರಾಯಣ ಅರೋರಾ | 'ದುಃಖಸೇತು' | 263 |
| ೪೭ | ಎಚ್.ಎಸ್. ಹರಿಶಂಕರ್ | 'ಬಾನಾಡಿ' | 277 |
| ೪೮ | ಎನ್.ಎಸ್. ಶಾರದಾ ಪ್ರಸಾದ್ | 'ಮುದ್ದಿನ ಕುರಿಮರಿ' | 295 |
| ೪೯ | ಶಿವರಾಮು ಕಾಡನಕುಪ್ಪೆ | ಹೊಂಗನಸುಗಳು | 301 |
| ೫೦ | ವಿ.ಜಿ. ಕೃಷ್ಣಮೂರ್ತಿ | ಎರಡು ರುದ್ರನಾಟಕಗಳು | 309 |
| ೫೧ | ಚಿದಂಬರ ದೀಕ್ಷಿತ | 'ಶ್ರೀ' ಯವರಿಗೆ | 334 |
| ೫೨ | ಸಿ.ಪಿ. ಸಿದ್ಧಾಶ್ರಮ | ಗದಾಯುದ್ಧ ನಾಟಕಂ | 335 |
| ೫೩ | ಕೆ.ಜಿ. ನಾರಾಯಣಪ್ರಸಾದ್ | ಕನ್ನಡ ಛಂದಸ್ಸಿನ ಚರಿತ್ರೆ | 343 |
| ೫೪ | ಬಿ.ನಂ. ಚಂದ್ರಯ್ಯ | ಕನ್ನಡ ಸಾಹಿತ್ಯ ಚರಿತ್ರೆ | 361 |
| ೫೫ | ಮೂಗೂರು ಮಲ್ಲಪ್ಪ | ಬಿ.ಎಂ.ಶ್ರೀ ಲಾವಣಿ | 375 |
| ೫೬ | **ಅನುಬಂಧ** : 'ಶ್ರೀ ಸಾಹಿತ್ಯ' ಸಂಪುಟ ಬಿಡುಗಡೆ ಸಮಾರಂಭದಲ್ಲಿ ಮಾಡಿದ ಭಾಷಣಗಳು : ಹಾ.ಮಾ. ನಾಯಕ, ಕುವೆಂಪು, ಎ.ಎನ್. ಮೂರ್ತಿರಾವ್, ಎಸ್.ವಿ. ರಂಗಣ್ಣ | | 377 |

# ಲೇಖಕರ ಪರಿಚಯ

| | | |
|---|---|---|
| ೧ | ಶ್ರೀನಿವಾಸ | ಮಾಸ್ತಿ ವೆಂಕಟೇಶ ಅಯ್ಯಂಗಾರ್, ಗವೀಪುರಂ ಬಡಾವಣೆ, ಬೆಂಗಳೂರು-19 |
| ೨ | ಕುವೆಂಪು | 'ಉದಯರವಿ', ವಿ. ವಿ. ಪುರಂ, ಮೈಸೂರು-3 |
| ೩ | ಕಾನಕಾನಹಳ್ಳಿ ವರದಾಚಾರ್ಯ | ಹಿರಿಯ ತಲೆಮಾರಿನ ವಿದ್ವಾಂಸರು, ಈಗ ದಿವಂಗತರು |
| ೪ | ಡಿ.ವಿ.ಜಿ. | ಪ್ರಖ್ಯಾತ ಸಾಹಿತಿಗಳಾದ ಡಿ.ವಿ. ಗುಂಡಪ್ಪನವರು, ಈಗ ದಿವಂಗತರು |
| ೫ | ಡಿ.ಎಸ್. ಕರ್ಕಿ | ಪ್ರಸಿದ್ಧ ಕವಿಗಳು, ವಿದ್ವಾಂಸರು, ಈಗ ದಿವಂಗತರು |
| ೬ | ಡಿ.ಎಲ್. ನರಸಿಂಹಾಚಾರ್ | ಸುಪ್ರಸಿದ್ಧ ವಿದ್ವಾಂಸರು, ಈಗ ದಿವಂಗತರು |
| ೭ | ರಂ.ಶ್ರೀ. ಮುಗಳಿ | 'ಶ್ರೀ ಕಮಲಾಲಯ', 95/ಬಿ, ಒಂದನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10 |
| ೮ | ಕೆ.ಎಸ್. ನರಸಿಂಹಸ್ವಾಮಿ | 'ಮೇಖಲಾ', 54, ಮೈಸೂರು ಬ್ಯಾಂಕ್ ಕಾಲನಿ ಬನಶಂಕರಿ, ಬೆಂಗಳೂರು-50 |
| ೯ | ಜಿ. ವರದರಾಜರಾವ್ | 'ಸುದರ್ಶನ', 12ನೆಯ ಅಡ್ಡರಸ್ತೆ, ಜಯನಗರ, ಮೈಸೂರು-14 |
| ೧೦ | ಎಸ್. ವಿ. ಪರಮೇಶ್ವರ ಭಟ್ಟ | 'ಕಲ್ಪನಾ', ರಾಮಯ್ಯರ್ ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು-4 |
| ೧೧ | ಚೆನ್ನವೀರ ಕಣವಿ | 'ಚೆಂಬೆಳಕು', ಕಲ್ಯಾಣನಗರ, ಧಾರವಾಡ |
| ೧೨ | ದ.ರಾ. ಬೇಂದ್ರೆ | ಕನ್ನಡದ ಸುವಿಖ್ಯಾತ ಕವಿಗಳು, ಈಗ ದಿವಂಗತರು |
| ೧೩ | ಜಿ.ಎಸ್. ಶಾಮಣ್ಣ | ಒಬ್ಬ ಹಿರಿಯ ಲೇಖಕರು |
| ೧೪ | ಎಂ.ವಿ. ಸೀತಾರಾಮಯ್ಯ | 54, 'ಅರವಿಂದ', 3ನೆಯ ಅಡ್ಡ ಬೀದಿ, ಗವೀಪುರ ವಿಸ್ತರಣ, ಬೆಂಗಳೂರು-19 |
| ೧೫ | ಸಿ.ಪಿ.ಕೆ. | ಸಿ.ಪಿ. ಕೃಷ್ಣಕುಮಾರ್, ಕನ್ನಡ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |

| | | |
|---|---|---|
| ೧೬ | ಮಳಲಿ ವಸಂತಕುಮಾರ್ | ಕನ್ನಡ ಅಧ್ಯಾಪಕರು, ಮಹಾರಾಜಾ ಕಾಲೇಜು, ಮೈಸೂರು |
| ೧೭ | ರಾಗೌ | ರಾಮೇಗೌಡ, ಕನ್ನಡ ಅಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೧೮ | ಎಸ್. ಅನಂತನಾರಾಯಣ | ಇಂಗ್ಲಿಷ್ ಪ್ರಾಧ್ಯಾಪಕರು, ಮಹಾರಾಜಾ ಕಾಲೇಜು, ಮೈಸೂರು |
| ೧೯ | ಗೋವಿಂದ ಕಣೇಕಲ್ | ಬಿ.ಎಂ.ಶ್ರೀಯವರ ಧಾರವಾಡದ ಶಿಷ್ಯರಲ್ಲೊಬ್ಬರು |
| ೨೦ | ಶಂಕರ ಮೊಕಾಶಿ ಪುಣೇಕರ | ಇಂಗ್ಲಿಷ್ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೨೧ | ಜೀ.ಶಂ. ಪರಮಶಿವಯ್ಯ | ಜಾನಪದ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೨೨ | ವಿ.ಸೀ. | ಪ್ರಸಿದ್ಧ ಕವಿಗಳಾದ ವಿ. ಸೀತಾರಾಮಯ್ಯನವರು, ಈಗ ದಿವಂಗತರು |
| ೨೩ | ಎ.ಆರ್. ಕೃಷ್ಣಶಾಸ್ತ್ರೀ | ಪ್ರಖ್ಯಾತ ಲೇಖಕರು, ಈಗ ದಿವಂಗತರು |
| ೨೪ | ಬಿ.ಜಿ.ಎಲ್. ಸ್ವಾಮಿ | ಕನ್ನಡದ ಪ್ರಸಿದ್ಧ ಲೇಖಕರು, ಈಗ ದಿವಂಗತರು |
| ೨೫ | ಎ.ಎನ್. ಮೂರ್ತಿರಾವ್ | 983, 3ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-40 |
| ೨೬ | ಎಚ್.ಎಂ. ಶಂಕರ ನಾರಾಯಣರಾವ್ | 'ಶಾರದಾ ಮಂದಿರ', ರಾಮಯ್ಯರ್ ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು-4 |
| ೨೭ | ವಿಶಾಲಾಕ್ಷಿ | 51, ಡಿಫೆನ್ಸ್ ಕಾಲನಿ, ಇಂದಿರಾ ನಗರ, ಬೆಂಗಳೂರು-38 |
| ೨೮ | ಕೆ. ವೆಂಕಟರಾಮಪ್ಪ | ಬಾಲಕೃಷ್ಣರಾವ್ ರಸ್ತೆ, ಚಾಮರಾಜಪುರಂ, ಮೈಸೂರು-4 |
| ೨೯ | ತ.ಸು. ಶಾಮರಾಯ | ಕುವೆಂಪುನಗರ, ಮೈಸೂರು-9 |
| ೩೦ | ಬಿ.ಎಂ. ಶಿವರಾಮಯ್ಯ | ಬೃಂದಾವನ ಕುಟೀರ, ರಾಷ್ಟ್ರಪತಿ ರಸ್ತೆ, ನಂಜನಗೂಡು |
| ೩೧ | ಎಂ. ಗೋವಿಂದ ಪೈ | ಪ್ರಸಿದ್ಧ ಕವಿಗಳು, ವಿದ್ವಾಂಸರು, ಈಗ ದಿವಂಗತರು |
| ೩೨ | ಎನ್. ಅನಂತರಂಗಾಚಾರ್ | 1 ನೆಯ ಮುಖ್ಯರಸ್ತೆ, ಸರಸ್ವತೀಪುರಂ, ಮೈಸೂರು-9 |

| | | |
|---|---|---|
| ೩೩ | ಶಂಸ | ಎಚ್. ಗಣೇಶ ಐತಾಳ, ಸಹಾಯಕ ಭಾಷಾಂತರಕಾರರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು–6 |
| ೩೪ | ಟಿ.ವಿ. ವೆಂಕಟಾಚಲಶಾಸ್ತ್ರೀ | ಕನ್ನಡ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೩೫ | ಟಿ.ಆರ್. ನಾಗಪ್ಪ | ವಯಸ್ಕರ ಶಿಕ್ಷಣ ಸಮಿತಿ, ಮೈಸೂರು-4 |
| ೩೬ | ಸೋಮಶೇಖರಗೌಡ | ಅಧ್ಯಾಪಕರು, ಭಾಷಾವಿಜ್ಞಾನ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು–6 |
| ೩೭ | ಎನ್. ಬಾಲಸುಬ್ರಹ್ಮಣ್ಯ | ಪ್ರಧಾನ ಸಂಪಾದಕರು, ಇಂಗ್ಲಿಷ್–ಕನ್ನಡ ನಿಘಂಟು ( ಪರಿಷ್ಕರಣ ), ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-6 |
| ೩೮ | ಎಡ್ವರ್ಡ್ ನೊರೋನಾ | ಕನ್ನಡ ಅಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೩೯ | ಲಕ್ಷ್ಮೀನಾರಾಯಣ ಅರೋರಾ | ಅಧ್ಯಾಪಕರು, ಭಾಷಾಂತರ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೪೦ | ಎಚ್.ಎಸ್. ಹರಿಶಂಕರ್ | ಅಧ್ಯಾಪಕರು, ಭಾಷಾಂತರಮತ್ತು ಪಠ್ಯ ಪುಸ್ತಕ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು–6 |
| ೪೧ | ಎನ್.ಎಸ್. ಶಾರದಾ ಪ್ರಸಾದ್ | ಸಹಾಯಕ ಭಾಷಾಂತರಕಾರರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೪೨ | ಶಿವರಾಮು ಕಾಡನಕುಪ್ಪೆ | ಕನ್ನಡ ಅಧ್ಯಾಪಕರು, ವಿದ್ಯಾವರ್ಧಕ ಕಾಲೇಜು, ಮೈಸೂರು |
| ೪೩ | ವಿ.ಜಿ. ಕೃಷ್ಣಮೂರ್ತಿ | ಚೈತ್ಯಾಲಯ, ವಾಣೀವಿಲಾಸಪುರಂ, ಮೈಸೂರು-2 |
| ೪೪ | ಚಿದಂಬರ ದೀಕ್ಷಿತ | ನಿವೃತ್ತ ಕನ್ನಡ ಪ್ರಾಧ್ಯಾಪಕರು, ಮುಂಬಯಿ ವಿಶ್ವವಿದ್ಯಾಲಯ |
| ೪೫ | ಸಿ.ಪಿ. ಸಿದ್ಧಾಶ್ರಮ | ಕನ್ನಡ ಅಧ್ಯಾಪಕರು, ಯುವರಾಜಾ ಕಾಲೇಜು, ಮೈಸೂರು |
| ೪೬ | ಕೆ.ಜಿ. ನಾರಾಯಣ ಪ್ರಸಾದ್ | ಅಧ್ಯಾಪಕರು, ಕನ್ನಡ ವಿಭಾಗ, ವಿಶ್ವವಿದ್ಯಾನಿಲಯ ಆರ್ಟ್ಸ್ ಕಾಲೇಜು, ಉಸ್ಮಾನಿಯಾ ವಿಶ್ವವಿದ್ಯಾನಿಲಯ, ಹೈದರಾಬಾದ್ |

| | | |
|---|---|---|
| ೪೭ | ಬಿ.ನಂ ಚಂದ್ರಯ್ಯ | ಕನ್ನಡ ಅಧ್ಯಾಪಕರು, ಮಹಾರಾಜಾ ಕಾಲೇಜು, ಮೈಸೂರು |
| ೪೮ | ಮೂಗೂರು ಮಲ್ಲಪ್ಪ | ಪ್ರಸಿದ್ಧ ಲಾವಣಿಕಾರರು, ಈಗ ದಿವಂಗತರು |
| ೪೯ | ಹಾ.ಮಾ. ನಾಯಕ | ನಿರ್ದೇಶಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-6 |
| ೫೦ | ಎಸ್.ವಿ. ರಂಗಣ್ಣ | 6 ನೇ ಕ್ರಾಸು, ಕೃಷ್ಣಮೂರ್ತಿಪುರಂ, ಮೈಸೂರು-4 |



ಶ್ರೀನಿವಾಸ

# ಕನ್ನಡದ ಕಣ್ವ*

ಆಧುನಿಕ ಕರ್ಣಾಟಕ ಕಾವ್ಯಕುಲಪತಿ ನೀವು,
ಬೆಳ್ಳೂರ ಮೈಲಾರ ಶ್ರೀಕಂಠ ಗುರುವರ.
ಸಿರಿಗನ್ನಡದೊಳಿನ್ನು ಮುಂದಾರು ಬರೆವರು
ಅವರೆಲ್ಲ ನಿಮ್ಮ ನೆನೆಯುವರು, ಪೂಜೆಯ ಹೂವ
ನಿಮಗರ್ಪಿಸುವರು. ಕನ್ನಡದೊಳಿಂದಾವಾವ
ಕಲಕಂಠ ಕೇಳುತಿದೆ ಅದರ ಗಾನದೊಳೆಲ್ಲ
ತೋರುತಿದೆ ನೀವು ತೆರೆದಾ ನವ್ಯ ಅಕ್ಷುಲ್ಲ
ಧೀರಗತಿ, ಸುವಿಶಾಲ ವಿಶ್ವ ವಿಸ್ತರ ಭಾವ.
ನುಡಿದು ಕಲಿಸಿದಿರಿ ; ನುಡಿಯದೆ ಮತ್ತೆ ಕಲಿಸಿದಿರಿ ;
ದುಡಿದು ಕಲಿಸಿದಿರಿ ; ಮನದರಕೆಗಳನೆಚ್ಚರಿಸಿ
ಎಳೆಯರೆದೆಯಲಿ ಹಾಡುವಾಸೆಯನು ಸುಳಿಸಿದಿರಿ.
ಒಂದೊಂದು ವೇಳೆ ನಿಮ್ಮನು ಕುರಿತು ಮಚ್ಚರಿಸಿ
ನುಡಿಯುವರು ಕೆಲರು ಸೋದರರು ; ಅವರೂ ಮುಂದೆ
ತಿಳಿಯುವರು ಕನ್ನಡಕೆ ಕಣ್ವಮುನಿ ನೀವೆಂದು.

* 'ಮಲಾರ', ಪು. ೪೩.



*

ಕುವೆಂಪು

# ನಿವೇದನ*

ಅಂದು ನಿಮ್ಮಕ್ಕರೆಯೆ ಪರಸಿತೆನ್ನಂ ಮೊದಲ್ :
ಇಂದು ರಾಮಾಯಣಕೆ ತಿರುಗಿ ಆ ಕೊಳಲಿನ ತೊದಲ್
ಕಾವ್ಯಗೈದಿದೆ ಬೃಹದ್‌ಗಾನಮಂ. "ನನ್ನೊಡನೆ ಬಾ ;
ಕನ್ನಡದ ನಾಡನೆಚ್ಚರಿಸುವಾವೇಶಮಂ ತಾ.
ವಾಙ್ಮಯ ತಪೋಬಲದಿ ಜಿಹ್ವಾತಟಿಚ್ಛಕ್ತಿ ತಾಂ
ಹೃದಯ ಗಹ್ವರದಲ್ಲಿ-ಚಿಜ್ಜ್ಯೋತಿ : ಪ್ರದೀಪಮಂ
ಪೊತ್ತಿಪೋಲ್ ಮಾಳ್ಪಂ, ತವಿಸಿ ತಮಶಾಪಮಂ."
—ಇಂತೆನಿತ್ತೆನಿತೊ ನೀಂ ಪೇಳ್ದೆನ್ನ ಕರೆದೊಡಂ
ನಾಂ ಪೊರಮಟ್ಟೆನಿಲ್ಲೆನ್ನ ಪೊಕ್ಕ ವಲ್ಮೀಕದಿಂ :
"ನಿಮ್ಮ ಧರ್ಮಂ ನಿಮಗೆ ; ನನ್ನ ಧರ್ಮಂ ನನಗೆ.
ಪಲವು ಬಟ್ಟೆಗಳಲ್ತೆ ಭಗವದಿಚ್ಛೆಯ ಮನೆಗೆ ?
—ಕೈಕೊಂಡ ರಸತಪಸ್ ಸಿದ್ಧಿಯ ಅನಂತರಮೆ
ನೋಳ್ಪೆನ್; ಅದಕಿಂ ಮುನ್ನ ಏಳ್ವುದೇಂ ತರಮೆ ?"
ಎಂದೆನ್. ಅರಿತವರಲ್ತೆ ಸೊಗಸುತೆಂದಿರಿ "ನಲ್.
ನಿನ್ನಾ ತಪಸ್ಯೆಯಿಂ ನಮಗಕ್ಕೆ ಋದ್ಧಿ. ಗೆಲ್."
ಆ ಋದ್ಧಿಯ ಸಮುದ್ರದ ತರಂಗವೊಂದೆನೆಲ್
"ನಿಮಗಿದು ನಿವೇದನಂ ಈ 'ಜೆರಳ್‌ಗೆ ಕೊರಳ್' "

* 'ಜೆರಳ್‌ಗೆ ಕೊರಳ್'—ಅರ್ಪಣೆ.

ಕಾನಕಾನಹಳ್ಳಿ ವರದಾಚಾರ್ಯ

# ಶ್ರೀ ಮಂಗಳಾಶಾಸನಂ *

ಶ್ರೀಕಂಠಯ್ಯಾಹ್ವಯಕ ಸುಗುಣಿನ್ ಮಂಗಳಂ ಸಂತನೋತು
ಶ್ರೀ ಶೇಷಾದ್ರೇಃ ಶಿರಸಿ ವಿಲಸನ್ ಕೋಪಿ ತೇ ನೀಲಮೇಘಃ
ದೇವೀ ಮಧ್ಯೇಹೃದಯಮನಿಶಂ ಭೂಷಯಂತೀ ರಮಾ ಯಂ
ವಿದ್ಯುದ್ವಲ್ಲೀಸ್ಥಿರರುಚಿರಿವಾಭಾತಿ ಜಾಂಬೂನದಾಂಗೀ

ಶ್ರೀಮನ್ನಾಲ್ವಡಿಕೃಷ್ಣಭೂಮಿಪತಿನಾ ದತ್ತಾಭಿನೂತ್ನಾಂಕನಃ
ಶ್ರೀಕಂಠಯ್ಯ ಇತಿ ಪ್ರತೀತಿಮುಪಯಾನ್ ಆಂಗ್ಲೇಯಕಾವ್ಯೇ ಸುಧೀಃ
ಬೆಳ್ಳೂರ್ ಗ್ರಾಮ ವಿಭೂಷಣಸ್ಯ ಮಹತೋ ಮೈಲಾರನಾಮ್ನಃ ಸುತಃ
ಜೀಯಾತ್ ಪಾಠಕತಾವಿರಾಮಮುಪಯಾನ್ ಆನಂದಲಾಭಾತ್ ಸದಾ

ಕಾರ್ಣಾಟಕಾಂಗ್ಲ ಭಾಷಾನಿಪುಣೇನಾನೇನ ಭಾಷಿತಂ ಜೀಯಾತ್
ಕರ್ಣಾಟಗಿರಾಂ ಮಾರ್ಗಪ್ರದರ್ಶಕಂ ತದ್ಗಿರಾಂ ಶಾಸ್ತ್ರಂ

ಶ್ರೀಕಂಠಯ್ಯವರೇಣ್ಯ ಕನ್ನಡದೆ ಸದ್ಗ್ರಂಥಾಳಿಗೆಯ್ವಿಚ್ಛೆಯಿಂ
ಕೈಕೊಂಡೈ ವಲಮಾಂಗ್ಲಕಾವ್ಯದೊಲವಿಂ ಮೇಲಾದ ಶಿಷ್ಯಾಳಿಯಂ
ಶ್ರೀಕಂಠಂ ನಿನಗಿತ್ತನೀಶನೊಲವಿಂ ಶ್ರೀಮನ್ಮಹಾರಾಜರೊಳ್
ನೀ ಕೊಂಡೈ ಬಿರುದಂ ಶಿವಂ ಕುಡುಗೆ ತಾಂ ನಿತ್ಯಂ ಶುಭಂ ಮಂಗಳಂ

* 'ಸಂಭಾವನೆ', ಪು. xi

ಡಿ. ವಿ. ಜಿ.

## ಶ್ರೀಕಂಠಂ*

ಕಾವ್ಯ ತಪಸ್ಸಂಪಾದಿತ
ದಿವ್ಯಯಶಃಕಾಯ ಶಾಶ್ವತಂ ಶ್ರೀಕಂಠಂ ||
ಸೇವ್ಯಂ ಕನ್ನಡಮೆಂಬೊಂ-
ದವ್ಯಾಹತ ಭವ್ಯ ದೀಕ್ಷೆಯೊಳ್ ಗುರುವಾದಂ ||

*'ಕೇತಕೀವನ', ಪು. ೧೩೦.

ಡಿ. ಎಸ್. ಕರ್ಕಿ

# ಕೊರಲಿನ ದನಿ ಎಲ್ಲಿ ?*

ಶ್ರೀಕಂಠನು ಎಂಬುವ ಹೆಸರನ್ವರ್ಥಕ ನಿನಗೆ !
ನಿನ್ನಾ ಕೊರಲಿನ ಸಂಗದಿ ಸಿರಿ ಬಂದಿತು ನುಡಿಗೆ.
ಸಿರಿನಿಂದಿದೆ ಕೊರಲೆಲ್ಲಿದೆ ? ಕೊರಲಿನ ದನಿಯೆಲ್ಲಿ ?
ದನಿಯಲಿ ನಯವನು ತೋಡಿದ ಮೃದು ಹೃದಯವೆಲ್ಲಿ ?
ತಿಳಿಬಗೆಯನು ಕನ್ನಡಿಸುವ ನಗೆ ಮುಳುಗಿದುದೆಂತು ?
ತಡೆಯಿಲ್ಲದೆ ಹೊರಹೊಮ್ಮುವ ನುಡಿ ಅಡಗಿದುದೆಂತು ?
ನಿಮ್ಮೊಲು ನಮ್ಮಾಂತರ್ಯವ ಮೀಂಟುವರಿನ್ನಾರು ?
ಸಕಲಸ್ವರ ಗುರಿಯೊಂದಕೆ ಮೇಳಿಸುವರದಾರು ?

ಆ ಎಡೆ ಈ ಎಡೆ ಎಲ್ಲೆಡೆ ತನಿವಾತನು ಸೂಸಿ
ನಾಡಿನ ನರನಾಳಗಳಲಿ ಚೇತನವನು ಹರಿಸಿ
ಕನ್ನಡತಾಯಿಯ ಅಡಿಯಲಿ ನಿನ್ನಸುವನೆ ತೇದು
ಕನ್ನಡರಂತಃಕರಣದಿ ಕನ್ನಡತನ ನೆಯ್ದು
ನೀ ಕಂಡಾ ಹೊಂಗನಸದು ನೆನಸಾಗುವ ಮುನ್ನ
ಕಣ್ಮರೆಯಾದುದು ಉಚಿತವೆ ಕರುನಾಡಿನ ಚಿನ್ನ ?

*'ನಕ್ಷತ್ರಗಾನ', ಪು. ೬೯.

ಡಿ. ಎಲ್ ನರಸಿಂಹಾಚಾರ್

# ಶ್ರೀಕಂಠಗುರು*

ಶ್ರೀಕಂಠಗುರುವ ಕಾವ್ಯಮ
ನಾಕರ್ಣಿಸಿ ರಸದ ಮಡುವೊಳಾಡಿದನಾವಂ
ಕೇಕಿಕ ನೃತ್ಯದ್ ಬರ್ಹಾ
ಲೋಕದವೋಲಡುವೆ ಚಿತ್ರವರ್ಣಾಕೀರ್ಣಂ

ಆವಂ ಕನ್ನಡ ಕಬ್ಬಿಯೊಳ್ ಪರಿಣತಂ ತಾನಾಗಿ ತನ್ನಬ್ಬೆಯಿಂ
ಶ್ರೀಪುತ್ರಂ ನಿಜ ಶಿಷ್ಯವೃಂದಪೆರ್ದೆಯೊಳ್ ಸಾಹಿತ್ಯ ಸಂಪ್ರೀತಿಯಂ
ಭಾವಾವೇಶ ರಸಂಗಳಂ ತುಳುಕಿಸಾ ಶ್ರೀಕಂಠ ವಾಗ್ಧಾರೆಯಿಂ
ದೇವ್ರೋ ಕೀರ್ತಿಯನಾಂತನಾ ಗುರುವರಂಗೀ ಗ್ರಂಥಮಾಯ್ತರ್ಪಿತಂ

*'ವಡ್ಡಾರಾಧನೆ'ಯ ಅರ್ಪಣೆ ಭಾಗದಿಂದ.

ರಂ. ಶ್ರೀ. ಮುಗಳಿ

# ಕನ್ನಡದ ವೀರಶ್ರೀ*

೧

''ಕನ್ನಡದ ವೀರಶ್ರೀ ಕಣ್ಣುಮರೆಯಾಯಿತಿಂದು
ನಾಡುನುಡಿ ಹೆಗ್ಗಳಿಕೆಯನು ತನ್ನ ನರನರದ
ನಾಳದಲಿ ನೆರೆತುಂಬಿ ತಪದ ಗನಿಯಿಂದೆದ್ದು
ತನ್ನ ದುಃಖವ ತುಳಿದು, ಹೆರರ ತುಳಿತಕೆ ಸಿಕ್ಕು
ಹುಡಿಯಾದ ನಾಡಿಗರ ಕೆಚ್ಚನೆಚ್ಚರಿಸಲಿಕೆ
ಕನ್ನಡದ ಬಾವುಟವ ಹಿಡಿದೆತ್ತಿ ಹಾಡುತ್ತ
ತಾಯನೋಟವ ಕಂಡು ಏಳೆಂದು ಬಾಳೆಂದು
ಹುರಿಗೊಂಡು ಕರೆಯುತ್ತ ಹಗೆಯೊಡನೆ ಹೋರುತ್ತ
ಮಿರಿಮಿಂಚಿ ಹಿರಿಮೊಳಗಿ ಮಳೆಗರೆದು ತಂಪೆರೆದ
ಕನ್ನಡದ ವೀರಶ್ರೀ ಕಣ್ಣುಮರೆಯಾಯಿತಿಂದು"

೨

''ಕನ್ನಡದ ವೀರಶ್ರೀ ಕಣ್ಣುಮರೆಯಾಯಿತಿಂದು ?
ತಿಳಿಯದೇ ಇದು ನಿನಗೆ ಹೊರಗಣ್ಣ ಸತ್ಯವೆಂದು ?
ನಾಡಿನೆದೆಯಲಿ ಹೊಕ್ಕು ಹಮ್ಮುಸೊಮ್ಮನು ನೀಡಿ
ಒಂದೆ ತಾಯಿಯ ನಿಚ್ಚನೋಟವನು ಕೊರೆಕೊರೆದು
ಇದಕಾಗಿ ದುಡಿಯುವೆನು ಇದಕಾಗಿ ಮಡಿಯುವೆನು
ಎಂಬ ಕನಸನು ನಿಲಿಸಿ ಸಂಕಲ್ಪವನು ಬಲಿಸಿ
ಪ್ರಭೆಯೊಂದೆ ಶತಕೋಟಿ ಚಿಕ್ಕೆಯಲಿ ಚೆದರಿದೊಲು
ನೂರಾರು ಕಿಡಿಯಾಗಿ ನಾಡಿನಲಿ ಅವತರಿಸಿ
ತಾ ಹಿಂದೆ ಸರಿದಿಹುದು ತನ್ನ ಕೃತಿ ನೋಡಲೆಂದು.
ಕನ್ನಡದ ವೀರಶ್ರೀ ಕಣ್ಣುಮರೆಯಿಲ್ಲವಿಂದು !''

* 'ಅಪಾರಕರುಣೆ', ಪು. ೫೫.

**ಕೆ. ಎಸ್. ನರಸಿಂಹಸ್ವಾಮಿ**

# ಅರೆ ನಿಮ್ಮ ದನಿಯೊಂದೆ*

ಪ್ರಸನ್ನ ಶರದಿಂದುಮಂಡಲದಂತೆ 'ಶ್ರೀ' ಗುರುವೆ
ನೀವೆನ್ನ ಹೃದಯಪೀಠವನೇರಿದಂತೆನಗೆ
ನಿಮ್ಮ ಸಂಸ್ಮರಣೆ. ನಿಮ್ಮಿಂದ ಪಂಪನ ಜೊತೆಗೆ
ಬಂದರಾ ಷೇಕ್ಸ್‌ಪಿಯರ್ ಸಾಫೊಕ್ಲೀಸ್ ಭಾಸರೆ ;
ದೈವಹತ ಧನ್ಯಾತ್ಮನಾದನಶ್ವತ್ಥಾಮನ್.
ಇತ್ತ 'ಇಂಗ್ಲಿಷ ಗೀತೆ' ಹೊಸತೊಂದು ಲೋಕಮನ್
ಕನ್ನಡದ ಕಣ್ಗೆ ತೆರೆದಿತ್ತು ಸಂಪ್ರೀತಿಯಲಿ
ನಿಮ್ಮ ಸಿಂಹ ಧ್ವನಿಯೆ ಪಂಜಾಯ್ತು ಪಯಣದಲಿ.

ಈಗ, ನೀವಂದು ಮುತ್ತಿಟ್ಟು ಮೀರಿದ ನೆಲವೆ
ನಿಮ್ಮ ನೆನೆವಂತೆ ನನ್ನೆಣಿಕೆ. ಅಂತಿರಬಹುದೆ ?
ಜ್ವಲಿಸುವ ವಸಂತವಿದೆ, ತಿಳಿ ನೀಲಿಗಗನವಿದೆ
ಅರೆ ಯಾವುದಿಲ್ಲಿ ? ಅರೆ ನಿಮ್ಮ ದನಿಯೊಂದೆ.
ನಿಮ್ಮ ಸಿರಿದನಿಯೊಂದೆ, ಅರೆ ನಿಮ್ಮ ದನಿಯೊಂದೆ.
ಅರಕೆಯನೆ ಸರಕಟ್ಟಿ ನಿಮ್ಮಡಿಗಳಿಗೆ ತಂದೆ.

* 'ಇರುವಂತಿಗೆ', ಪು. ೪೬.

ಜಿ. ವರದರಾಜರಾವ್

# ನೀವಿಂದು ಜೀವಿಸಿರಬೇಕಿತ್ತು*

ನೀವಿಂದು ಜೀವಿಸಿರಬೇಕಿತ್ತು ಶ್ರೀಕಂಠ
ಗುರುವರ್ಯ ! ಓ, ಕನ್ನಡದ ನುಡಿಯ ಆಚಾರ್ಯ !
ಚಣಚಣವು ನಿಮ್ಮನೇ ನೆನೆಯುತಿಹೆ ಗುರುವರ್ಯ
ಉಗ್ರವಾಗುತಿರೆ ಕರ್ಣಾಟಕದ ಜನಕಂಠ !
ಕನ್ನಡದ ಗಡಿಗಾಗಿ, ಕನ್ನಡದ ನುಡಿಗಾಗಿ,
ಕನ್ನಡದ ತಾಯ್ನಾಡ ಒಂದುಗೂಡಿಸಲೆಂದು
ಹಗಲಿರುಳು ಒಂದೆ ಸಮ ಸಂಚರಿಸಿ ನೀವಂದು
ನುಡಿದ ಆ ನುಡಿಗುಡುಗು ಕೇಳಿ ಬರದೇ ಮೊಳಗಿ ?
ನಾಡ ನಾಡಿಯ ಮಿಡಿವ ಕನ್ನಡದ ನುಡಿಯಿಂದು
ಸಿಡಿಲು ಮಿಂಚುಗಳಂತೆ ಕನ್ನಡದ ಬಾನಿನಲಿ
ಕೆರಳಿ ಕಿಡಿಗಾರುತಿದೆ, ಕೆಂಪೇರುತಿದೆ ಕನಲಿ
ತಾಯ್ನಾಡ ಬಿಡದಂತೆ ಇಂದೆ ಕಟ್ಟುವೆವು ಎಂದು !
ಕನ್ನಡದ ಕುಲವೆಲ್ಲ ಒಂದೆ ಹಿರಿ ಸಂಸಾರ !
ಕನ್ನಡದ ನೆಲವೆಲ್ಲ ಒಂದೆ ಭೂವಿಸ್ತಾರ !

* 'ವಿಜಯದಶಮಿ', ಪು. ೨೯.

ಎಸ್. ವಿ. ಪರಮೇಶ್ವರಭಟ್ಟ

# ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು*

ಓವೊ ನಮ್ಮಾಚಾರ್ಯ ಓವೊ ನಾಡಿನ ಸೂರ್ಯ
ಓವೊ ಕನ್ನಡ ತಾಯ ಹಿರಿಯ ಸತ್ಪುತ್ರ
ಓವೊ ನಮ್ಮಕ್ಕರೆಯ ಸಿರಿಯ ವರ ಗುರುದೇವ
ಓವೊ ನಮ್ಮಿನಾಡ ಪ್ರೇಮ ಸತ್ಪಾತ್ರ !
ಓವೊ ಕರುನಾಡವರ ಹೊಸಕುಲದ ತಲೆವಣಿಯೆ
ಓವೊ ನಮ್ಮಿನುಡಿಯ ದಿವ್ಯ ಸತ್ಕೀರ್ತಿ.
ಓವೊ ಹೊಸಗನ್ನಡದ ಕಾವ್ಯದೋಂಕಾರವೇ
ಓವೊ ನಮ್ಮಿನೆಲದ ಪುಣ್ಯಮೂರ್ತಿ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.

ಶ್ರೀಕೃಷ್ಣನೊಲುಮೆಯಲಿ ನಲಿದು ನೆಮ್ಮದಿವಡೆದು
ಮನವುಬ್ಬಿ ಹಸುರಾದೆ ನಮಗೆ ನೆಳಲಾದೆ ;
ನಿನ್ನೊಲುಮೆ ಪೊನ್ನುಡಿಯ ಸಿರಿತೊಡವುಗಳ ತೊಡಿಸಿ
ಕನ್ನಡವ ಸಿಂಗರಿಸಿ ನಮಗೆ ಗುರುವಾದೆ.
ಕನ್ನಡ ಯಶೋಗಾನದುಲಿಯ ಜೇನಿಂಚರವ
ನುಡಿಯಿಸುವ ಶ್ರೀವಾಣಿ ಕೈವೀಣೆಯಾದೆ ;
ಕನ್ನಡಮ್ಮನ ತಲೆಯ ವಯಿರುಮುಡಿ ಕಿಡಿಯಾದೆ
ಬೆಳಬೆಳಗಿ ಹೆಸರಾದೆ ನಮಗೆ ಬೆಳಕಾದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.

* 'ಅಂಚೆಯ ಪೆಟ್ಟಿಗೆ', ಪು. ೩೨-೩೬.

ಆರ್ಯ ಋಷಿಗಳ ಪುಣ್ಯರಸತೀರ್ಥದಲಿ ಮಿಂದೆ
ದಿವ್ಯದರ್ಶನ ಕಂಡೆ ಹೃತ್ ಶುದ್ಧನಾದೆ.
ಧರ್ಮಸಂಸ್ಥಾಪಕರ ತತ್ವಮಂದಾಕಿನಿಯ
ಅಮೃತ ಜಲದಲಿ ನಾಂದೆ ಚಿತ್ ಸುಭಗನಾದೆ.
ವಿಶ್ವಕವಿಗಳ ಮಹಾ ಕಾವ್ಯಗಂಗಾಲಹರಿ
ನಿನ್ನಾತ್ಮವಂ ಮಿಸಿಸೆ ಪರಿಪೂತನಾದೆ.
ಅಂತೆ ರಸಋಷಿಯಾದೆ ರಸಚಕ್ರಿ ನೀನಾದೆ
ಲೋಕನಾಯಕನಾದೆ ಲೋಕಗುರುವಾದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದೆಹೆನಿಂದು ಬಾಷ್ಪದಂಜಲಿಪಿಡಿದು.

ಷೇಕ್ಸ್‌ಪಿಯರ್ ನಿನಗಮೃತ ಷೆಲ್ಲಿ ನಿನಗಾವೋದ
ಪಂಪ ರನ್ನರ ಕಾವ್ಯ ನಿನ್ನೊಲುಮೆ ಹುಚ್ಚು
ಸಾಫೊಕ್ಲೀಸ್ ಈಸ್ಕಲೀಸ್ ನಿನ್ನ ಆತ್ಮಾನಂದ
ವೀರನಾರಾಯಣನ ಕೃತಿ ನಿನಗೆ ಕೆಚ್ಚು.
ಕೋಲರಿಜ್ ವರ್ಡ್ಸ್‌ವರ್ತರಮಳ ಕೃತಿ ನಿನಗಿನಿದು
ಬಸವ ತಿರುವಳ್ಳುವರ್ ನಿನ್ನೆದೆಗೆ ತಂಪು.
ಆರ್ನಾಲ್ಡ್ ಮಿಲ್ಟನ್ನರಂತೆ ನಿನಗತಿ ಸೊಂಪು
ಹರಿಹರನ ರಾಘವನ ಕವಿತೆ ನಿನಗಿಂಪು.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.

ಹೊನ್ನ ಹರಿವಾಣದಲಿ ಹಾಲಾಹಲಂ ತುಂಬಿ
ಬಳಿ ಬಂದ ವಿಧಿಯ ನೀಂ ಸ್ವಾಗತಿಸಿದೆ.
ಕಾವ್ಯ ಶಾರದೆಯೊಲಿದು ರುದ್ರವೀಣೆಯ ಮಿಡಿದು
ಸಿಡಿಲ ದನಿಯಲಿ ಹಾಡಿ ಮಿಂಚನೆಸೆದು
ಕೂರ್ಪಾಗಿ ಬೆಳಗಿ ತಾನಿಳೆಗಿಳಿದು ಬಳಿಗೆ ಬರೆ
ಅವಳನಾರಾಧಿಸಿದೆ ಆದರಿಸಿದೆ.
ಅವಳ ಸಾಕ್ಷಾತ್ಕಾರದಾನಂದದುಕ್ಕೇರಿ
ಹಾಡಿ ಆಡಿದೆ ನಲಿದೆ ರಸಪುರುಷನಾದೆ.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.

ತುಳಸಿದಳದೊಡನಿರುವ ತುಂಗೆ ನೀರೆಂತಂತೆ
ಮರುಗದೊಡವೆರೆದಿರುವ ಮೊಲ್ಲೆಯರಳಂತೆ
ಸಿಗುರೆಸೆದ ಕಬ್ಬಂತೆ ಕಾವಳಿದ ಹಾಲಂತೆ
ಹುತ್ತದಿಂದದೆ ಕಿತ್ತ ಕೋಲ್ ಜೇನಿನಂತೆ
ನಿನ್ನ ನಡೆ ನುಡಿ ಸೊಂಪು ಭಾವದರ್ಥವು ಪೆಂಪು.
ಅತಿಸರಳ ಅತಿಸಹಜ ಅತಿಸುಭಗಕೃತಿಯು.
ನಿನ್ನ ಕನ್ನಡ ಕೂರ್ಪು ನಿನ್ನ ಕನ್ನಡದಾರ್ಪು
ಆ ತೆಳ್ಪು ಆ ಮೆಲ್ಪು ಎಲ್ಲ ಅನುಪಮವು.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.

ಕನ್ನಡದ ಬಾವುಟವನೆತ್ತರಕೆ ಹಾರಿಸಿದೆ
ಕನ್ನಡದ ಸತ್ವವನು ಮತ್ತೆ ಘೋಷಿಸಿದೆ.
ಕನ್ನಡದ ಕೀರ್ತಿಯನು ಧವಳಗಿರಿಗೇರಿಸಿದೆ
ಕನ್ನಡದ ಮಹಿಮೆಯನು ಮೇಲೆತ್ತಿ ಹಿಡಿದೆ.
ಕನ್ನಡದ ತೀರ್ಥಗಳ ಕನ್ನಡ ಕ್ಷೇತ್ರಗಳ
ಪ್ರತ್ಯಕ್ಷದಲಿ ಕಂಡೆ ಭಕ್ತಿಯಲಿ ಮಣಿದೆ.
ಕನ್ನಡದ ಹೊಂದೇರನೂರೂರಿಗೆಳತಂದೆ.
ಕನ್ನಡಕೆ ಕೊಡುಗೈಯ ಕಾಣ್ಕೆಗಳ ತಂದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.

ಕನ್ನಡಂ ಸೊಂಪೆಂದೆ ಇಂಪೆಂದೆ ಪೆಂಪೆಂದೆ.
ಗೆಲುವೆಂದೆ ಚೆಲುವೆಂದೆ ಸಿರಿಯೊಲುಮೆಯೆಂದೆ.
ಕಬ್ಬೆಂದೆ ಮಾನೆಂದೆ ಪಾಲೆಂದೆ ಜೇನೆಂದೆ
ಮಕರಂದವೆಂದೆ ಮೇಣಮೃತರಸವೆಂದೆ.
ಕನ್ನಡಂ ತವರೆಂದೆ ಕನ್ನಡಂ ತಾಯೆಂದೆ
ಕನ್ನಡಂ ನಮ್ಮುಸಿರ್ ನಮ್ಮಾತ್ಮವೆಂದೆ.

ಚಕ್ರವರ್ತಿನಿಯೆಂದೆ ಸಾಮ್ರಾಜ್ಞಿಯವಳೆಂದೆ
ನಮ್ಮ ಆರಾಧನೆಯ ದೈವವೆಂದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.

ಋತವೊಂದೆ ಗೆಲ್ಲುವುದು ಅನೃತ ಗೆಲ್ಲದು ಎಂದೆ
ಅಮೃತವೆನೆ ವಿದ್ಯೆಯೆ ಅವಿದ್ಯೆಯಲ್ತೆಂದೆ.
ವಿಶ್ವಭಾರತಿ ಶರಣು ಕಿರುತೀರ್ಥವಲ್ಲೆಂದೆ
ಸರ್ವ ಜೀವಕು ಮುಕ್ತಿ ಸಲೆ ದೊರೆಯಲೆಂವೆ.
ದೇವರೊಳ್ ಪಗೆವವರ ಕಾಳಗಂ ನಿಲಲೆಂದೆ
ಜ್ಞಾನ ಧರ್ಮಂಗಳಿಂದಿಳೆ ತಣಿಯಲೆಂದೆ.
ಸಾವುದೆಲ್ಲಾ ಸತ್ತು ಬಾನಾಳ್ಕೆ ಪೂಣ್ಗೆಂದೆ
ಕನ್ನಡಿಗರುಸಿರಾಗಿ ನುಡಿ ಬಾಳಲೆಂದೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿ ಪಿಡಿದು.

ಕನಿಕರಿಸಿ ನೀಂ ಕರೆದ ಕರುಣಾಳು ಬೆಳಕಿಂಗೆ
ಕೈಮುಗಿದು ಬೇಡುವೆಂ ಮೌನದಿಂ ಬಾಗಿ.
ನೆಮ್ಮುಗೆಯ ನಾಡಿಂಗೆ ಸಚ್ಚಿದಾನಂದಕ್ಕೆ
ನಡೆದ ನಿನ್ನಾತ್ಮಕ್ಕೆ ಸದ್ಗತಿಯದಕ್ಕೆ,
ನಿನ್ನ ಜೀವನದೀಕ್ಷೆ ನಮಗೆ ದೀವಿಗೆಯಾಗಿ
ನಮ್ಮ ಬಾಳ್ ಕನ್ನಡದ ಸೇವೆಯಲಿ ಸಲ್ಗೆ.
ನಿನ್ನ ಜೀವನ ಮಂತ್ರ ನಿನ್ನ ಜೀವನ ತಂತ್ರ
ನಮ್ಮೆದೆಗಳಂ ಬೆಳಗಿ ಕನ್ನಡಂ ಗೆಲ್ಗೆ.
ಓವೊ ಪೆರ್ಮನೆ ನಿನ್ನ ಅಡಿದಾವರೆಗೆ ಮಣಿದು
ಬಾಡಿ ನಿಂದಿಹೆನಿಂದು ಬಾಷ್ಪದಂಜಲಿಪಿಡಿದು.



ಚೆನ್ನವೀರ ಕಣವಿ

# ಕಂನಾಡ ಬಾನಿನಲಿ ಶ್ರೀಕಾರಬರೆದಂತೆ *

ಕಂನಾಡ ಬಾನಿನಲಿ ಶ್ರೀಕಾರ ಬರೆದಂತೆ
'ಶ್ರೀ' ಜೆಳ್ಳಿ ಚಿಕ್ಕೆ ಲಕಲಕಿಸಿ ಬೆಳ್ಳಂಗೆಡೆಯೆ
ನಾಡ ನಾಡಿಗಳಲ್ಲಿ ಚೈತನ್ಯ ಸೆಲೆಯೊಡೆಯೆ
ಬಾವುಟವನೆತ್ತಿ ದಿಗ್ವಿಜಯಮಂ ಪಡೆದಂತೆ,
ದಂಡಯಾತ್ರೆಯು ಗೈದ ವಾಗ್ವಿಭವದುನ್ನತಿಯು !
ತುಂಬು-ವಿದ್ಯೆಯ ತುಂಬುಗಾಂಭೀರ್ಯದಲಿ ಮೆರೆದು
ಕನ್ನಡದ ಸಾರ ಸರ್ವಸ್ವ ಕಡಲಂ ಕಡೆದು
ನವನೀತಮಂ ತೆಗೆದ ಹಿರಿಗೌರವದ ಪರಿಯು.
ಥೇಮ್ಸ ನದಿ, ಕಾವೇರಿ ಸಂಗಮಿಸಿ ಹರಿಯುವೊಡೆ
ನಿಮ್ಮ ಗೀತಸ್ರೋತ ! ಏನಿದಚ್ಚರಿಯೆಂದು
ಕಂದೆರೆದು ನೋಡುತಿರೆ ಆ ಪ್ರವಾಹದಿ ಮಿಂದು
"ಸಿರಿಗನ್ನಡಂ ಗೆಲ್ಗೆ !" ಎಂದು ಮುನ್ನಡೆದ ಪಡೆ !
"ಬೀಳ್ಕೊಡಿಂ" ಎನಲೇಕೆ ? ಕರುಣಾಳು ಬಾ ಬೆಳಕೆ !
ಸದ್ಗುರು ಪರಂಪರೆಯ ಪುಣ್ಯ ಶ್ರೀಕಂಠಿಕೆ !

* 'ಆಕಾಶಬುಟ್ಟಿ', ಪು. ೭೬.

17

ದ. ರಾ. ಬೇಂದ್ರೆ

# ಸಂಭಾವನೆ*

ಕನ್ನಡದ ಶ್ರೀಕಂಠದಿಂದ ಸಾರಿದ ವಾಣಿ
ಅಂದು ವೀಣಾಪಾಣಿಯಾಗಿ ಬಾಜಿಸಲಾಗಿ
ಆ ರಾಗವೇ ಜನದ ಅನುರಾಗವೆನೆ ಮಾಗಿ
ರಾರಾಜಿಸುವದಿಂದು ರಾಷ್ಟ್ರಹೃದಯದ ರಾಣಿ
ಆ ಪ್ರಗಾಥದ ವಾಣಿ ನಾಡನೌಕೆಯ ನೂಗಿ
ಧ್ರುವಪ್ರವಾಸಕೆ ದಿಕ್ಕುಗಾಣಿಸುವ ಚುಕ್ಕಾಣಿ–
ಯಾಗೆಯುದ ಹೇಳುವೊಬ್ಬೊಬ್ಬ ಕನ್ನಡ ಮಾಣಿ
ಮೆರೆವನಗೊ, ನಾಡನಂಬುಗೆಯ ಅಂಬಿಗನಾಗಿ.

ಇಂಥ ಉಜ್ವಲ ಚಿತ್ರದೊಂದು ಕೀರ್ತಿಪ್ರಭೆಗೆ
ಕಳೆಕಟ್ಟಬೇಡವೇ ಶ್ಯಾಮಶೀಮಾರೇಖೆ
ಎನೆ, ಅದರ ಹಿಂದೆ ನೆಳಲಾಗಿ ನೆಲಸಿದೆ ಛಾಯೆ
'ಇದುವೆ ಸಂಭಾವನೆಯೆ ನಿನ್ನ ಸೇವೆಗೆ ತಾಯೆ ?'
ಎಂಬ ಪ್ರಶ್ನೆಗೆ ಬಾನದನಿಯು ಸಾರಿತು ಸಭೆಗೆ
'ವಿಷ ನುಂಗೆ ಶ್ರೀಕಂಠ, ಬೇರೆ ಭೂಷಣ ಬೇಕೆ ?'

*'ಗಂಗಾವತರಣ', ಪು. 38.

ಜಿ. ಎಸ್. ಶಾಮಣ್ಣ

# ನಿನ್ನಂಥವನೊಬ್ಬ ದೊರಕುವನೆ*

ಆ ಕುಳಿರ ಶಿಶಿರ ಕಾಲಿಟ್ಟನಂದು ಕನ್ನಡದ ಕಾವ್ಯವನಕೆ :
ಬಿಳಿ-ಮಂಜು-ಮಂದೆ ಮೇಯಿತ್ತು ಎಲ್ಲು ಹೂ ಚಿಗುರು ಕಾಯಿ ಗರುಕೆ ;
ಸೊರಗಿತ್ತು ಕಮಲ, ಮರುಗಿತ್ತು ಹಕ್ಕಿ, ಮಲಗಿತ್ತು ಮೊರೆವ ಭೃಂಗ,
ಇರಲಿಲ್ಲ ಜೀವ ಚೇತನವವೆಲ್ಲು—ಘನಿಸಿತ್ತು ಅಂತರಂಗ.

ನೀ ಬಂದೆಯಾಗ ಕನ್ನಡದ ವನಕೆ ಋತುರಾಜ ಚೈತ್ರನಂತೆ ;
ಕೈಹಿಡಿದು ಕುಣಿಸಿ ಪೊಸಕಬ್ಬವೆಣ್ಣ ಅವಳೊಡನೆ ಆಡಿ ನಿಂತೆ ;
ಚಿಗುರಿಟ್ಟಿತಾಗ ಹೂಬಿಟ್ಟಿತಾಗ ಕೂಗುಟ್ಟಿತಾಗ ಕಾಡು ;
ಆ ದನಿಯ ಕೇಳಿ ಮುದವನ್ನು ತಾಳಿ ಆಗಿತ್ತು ಕಾಡು ನಾಡು.

ಪಡುಗಡಲನಾಡ ಹೆಣ್ಣೊಡನೆ ಕಲಿತ ಆ ಲಾಸ್ಯ ಭಂಗಿಯನ್ನು
ನೀ ಕಲಿಸೆ ನಮ್ಮ ಹೆಣ್ಣಿಂಗೆ ಅದುವೆ ತೋರಿತ್ತು ಜೇರೆ ಚೆನ್ನು ;
ಸಂಶಯದ ಸುಳಿವು ಮೊಳೆಯಿತ್ತು ಮೊದಲು ಕೆಲವೆಸೆಯ ಬಯಲಿನೊಳಗೆ,
ಬಳಿಕದನು ಕಿತ್ತು ಮೂಡಿತ್ತು ಬೇರೆ ಹೊಸ-ನೆಚ್ಚ-ಬಳ್ಳಿ ಕಡೆಗೆ.

ಅದರಿಂದ ಬಂದು ಕೆಲವೆಳೆಯರೆಲ್ಲ ನಿನ್ನೊಡನೆ ಕೂಡಿ ಕುಣಿದು
ಆ ನಿನ್ನ ಲಾಸ್ಯದಾ ಭಂಗಿಗಳನು ಅನುಕರಿಸಿ ನೋಡಿ ತಣಿದು
ಹೊಸಹುರುಪದೊಂದು ಎದೆಚಿಮ್ಮುತಿರಲು, ಗುರು-ಭಾವ-ಭಕ್ತಿಯಲ್ಲಿ
'ತಳಿರ'ನ್ನು ಮೊದಲು 'ಕಿರುಗಾಣ್ಕೆ' ಬಳಿಕ ತಂದಿಹರು ಅರ್ತಿಯಲ್ಲಿ.

ಈ ನಿನ್ನ ಬಳಗ ನಿನ್ನಿಂದ ಕಲಿತು ಎಲ್ಲೆಲ್ಲು ಕಲಿಸುತಿಹುದು
ಕನ್ನಡಕೆ ಇನ್ನು ಕೊರಗಿಲ್ಲವೆಂದು ಅದು ಸಾರಿ ಹೇಳುತಿಹುದು ;

'ಪ್ರಬುದ್ಧ ಕರ್ಣಾಟಕ,' ಸಂ. ೨೩, ಸಂ. ೪, ೧೯೪೬, ಪು. ೮೮.

ನೀಸಿಟ್ಟ ಅಡಿಯ ಗೆಲುಬಟ್ಟೆಯಲ್ಲಿ ತಾ ಸಾಗಿಸಿಹುದು ನಡೆದು
ನಿನ್ನಂಥ ತುಂಬಿದೆದೆ ಪ್ರೇಮದಿಂದ ತಾಯ್ನಾಡ ಗುಡಿಯ ಹಿಡಿದು.

ಸಿರಿಗನ್ನಡಕ್ಕೆ ಕುಲಪತಿಯದಾಗಿ ನೀನಿದ್ದೆಯಂದು ಮೊದಲು,
ನಾವಾಡುತಿರುವ ಮಾತಿವುಗಳೆಲ್ಲ ನಿನ್ನಿಂದ ಕಲಿತ ತೊದಲು ;
ಹೊಸಗನ್ನಡಕ್ಕೆ ಕಳೆಯೊಂದು ಬಂತು 'ಶ್ರೀ'–ಕಾವ್ಯನಾಮದಿಂದ
ಬೆಳಗಾಗ ಮೂಡಲಲಿ ಮೂಡಿಬರುವ ಭಾಸ್ಕರನ ತೇಜದಂದ.

ಆ ನಿನ್ನ ನುಡಿಯು ಗಂಭೀರ, ಗುಂಭ, ಮುನ್ನೀರ ತಳದ ಆಳ,
ದರಹಸಿತವದನ ತೋರಿತ್ತದೆನಿತು ಕನಿಕರವ ನೀನೆ ಪೇಳ ;
ನಿನ್ನೊಂದು ಮಾತಿನಲಿ ಹತ್ತು ಭಾವಗಳ ತೋರುತಿದ್ದೆ ಮನಕೆ ;
ನಿನ್ನಂಥವನೊಬ್ಬ ದೊರಕುವನೆ ಮುಂದೆ ಕನ್ನಡದ ನಾಡ ಜನಕೆ ?

ಎಂ. ವಿ. ಸೀತಾರಾಮಯ್ಯ

# ಕನ್ನಡದ ಕಲ್ಪತರುವೆ *

೧

ಓ ಕನ್ನಡದ ನೆಲನೆ, ಕನ್ನಡದ ಪೊಲನೆ
ಮೌನದಿಂ ಮರುಗಿಂ
ಓ ಕನ್ನಡದ ಬಾನೆ
ಕನ್ನಡದ ಬಾನೊಳಾಡುವ ಚೆನ್ನ ಮುಗಿಲೆ,
ಕಂಬನಿಯ ಕರೆಯಿಂ ;
ಓ ಕನ್ನಡದ ಎಲರೆ—
ಕನ್ನಡದ ಪಯಿರ ಪರಿಮಳ ಪೊತ್ತ ತಂಬೆಲರೆ,
ಕಾವೇರಿ ಕೃಷ್ಣೆಯರ ನಡುನಾಡೊಳೆಲ್ಲಂ
ಸುಯ್ಯುತ್ತೆ ಸುಯ್ಯುತ್ತೆ ಸುದ್ದಿಯಂ ಸಾರಯ್
ಓವೊ ಕನ್ನಡವಕ್ಕಿ,
ಎಂದಿನಂತಲ್ಲದೆಯೆ ಏನ್ ಮೂಗುವಟ್ಟಿರ್ಪಯ್ ?
ಕನ್ನಡದ ಮಕ್ಕಳ್ಗೆ ಸವಿನುಡಿಯ ನೊರೆಯುಯ್,
ಒರೆದು ಸಂತವಿಸಯ್.

೨

ಅಮ್ಮ, ಕನ್ನಡದ ತಾಯೆ,
ನಿನ್ನಳಲ್ ಪಿರಿದಲ್ತೆ
ಎಮ್ಮಳಲ್ಗಿಂ :
ನಿನ್ನ ಶ್ರೀಕಂಠನೋ
ಪೋಯ್ತು ತಾಯೆ

* 'ಒಡಿಪೂವು', ಪು. ೧–೩.

ಕಳಿಯೆ ಶ್ರೀಕಂಠನ್
ನಿನ್ನ ವರಪುತ್ರನ್
ಪ್ರೇಮಪುತ್ರನ್:
ಕೊರಗದಿರ್
ಮರುಗದಿರ್
ಸೊರಗದಿರ್ :
ನಿನ್ನೆಲ್ಲ ಮಕ್ಕಳೊಳಮವನೆ ಧನ್ಯನ್
ನಿನ್ನೆಲ್ಲ ಮಕ್ಕಳೊಳಮವನೆ ಸನ್ಮಾನ್ಯನ್
ನಿನ್ನ ಸೇವೆಯೊಳವನೆ ಅಗ್ರಗಣ್ಯನ್
ನಿನಗುಸಿರ ಮುಡಿಪಿಟ್ಟ ಕನ್ನಡವರೇಣ್ಯನ್.

೩

ಓ ಗುರುವೆ, ಓ ಗುರುವೆ,
ಕನ್ನಡದ ಕಲ್ಪತರುವೆ.
ಕನ್ನಡದ ಸಿರಿಯೆ !
ಇನಿತು ಬೇಗಡಿನೇಕೆ ಕಣ್‌ಮುಚ್ಚಿದಯ್
ನಮಗೆ ಕಾವಳ ಮುಚ್ಚಿದಯ್?
ಬರಿದಾಯ್ತು ಕನ್ನಡದ ಆಚಾರ್ಯಪೀಠಂ :
ಮರೆಯಾಯ್ತು ಬೆಳಕೀವ ನಿನ್ನ ನೋಟಂ ;
ಕೇಳದಾಯ್ತಿನ್ನು ಕನ್ನಡದ ಕಲಕಂಠಂ :
ಬಿನ್ನೈನ್ನುತಿದೆ ನಾಡ ನುಡಿಯಸ್ಸ್ತೋಂಟಂ.
ನಿನ್ನ ಕೃತಿಗಳೆ, ನಿನ್ನ ನೆನಪೆ, ನಮಗಿಂದು ಸಿರಿ :
ನಿನ್ನ ಶಾಶ್ವತ ಕೀರ್ತಿ ನಿನ್ನ ತೇಜೋಮೂರ್ತಿ.
ನಿನ್ನ ಗೈಮೆಗಳೊಂದೆ, ಎರಡೆ, ಮೂರೆ ?
ಎನಿತು ಕೊಂಡಾಡುವುದೊ ನಮ್ಮ ಮನವಾರೆ !
ಕನ್ನಡದ ಕಲ್ಮೆಯಿಂ ಬೀರಿದಯ್ ಗುರುವೆ
ಕನ್ನಡದ ನಯ ನಲ್ಮೆ ಸಾರಿದಯ್ ಗುರುವೆ
ನಾಡು ನುಡಿಯೊಕ್ಕೂಟಕೊರ್‌ದಾರಿ ತೋರಿಸಿದೆ
ಕುರಿಪಾಗಿ, ಕನ್ನಡದ ಬಾವುಟವ ಹಾರಿಸಿದೆ

ನಿನ್ನಂತೆ ಕೊಟ್ಟರಾರ್ ತನು ಮನ ಧನವ ನುಡಿಗೆ,
ನಿನ್ನಂತೆ ಇಟ್ಟರಾರ್ ವಯಿರಮುಡಿ ತಾಯ ಮುಡಿಗೆ ?
ನಿನ್ನ ನೆನೆವೆವು, ಗುರುವೆ, ಅನುದಿನಂ ಅಡಿಗಡಿಗೆ ;
ನಿನಗೆ ಸದ್ಗತಿ ನೀಡಲೆಂದೆರಗುವೆವು ಪರಮನಡಿಗೆ.

ಕನ್ನಡದ ತೇಜ, ಕನ್ನಡದೋಜ, ಹರಸಯ್ :
ಸಗ್ಗದಾ ನಾಡಿಂದ
ಬಾನವರ ಬೀಡಿಂದ
ಕನ್ನಡಕೆ ಶುಭವ ಹರಸಯ್
ನೀನ್ ಕಂಡ ಹೊಂಗನಸು
ಅಕ್ಕೆ ನಾಳಿನ ನನಸು !
ನಿನ್ನ ಕಡೆ ಹಾರೈಕೆ ಸಲ್ಗೆ, ಸಲ್ಗೆ !

'ಸಿರಿಗನ್ನಡಂ ಗೆಲ್ಗೆ, ಕನ್ನಡದ ತಾಯ್ ಬಾಳ್ಗೆ' !
ಸಂತತಂ ಶ್ರೀಪೆಸರ್ ನಿಲ್ಗೆ, ನಿಲ್ಗೆ !

ಸಿ. ಪಿ. ಕೆ.

# ಹರಿಕಾರ

ಬಹುಕಾಲ ಮುಚ್ಚಿದ್ದ ಮನೆಯ ಬಾಗಿಲು ಕಿಟಕಿ-
ಗಳನೆಲ್ಲ ತೆರೆದು ದಶದಿಕ್ಕಿನಿಂದಲು ಗಾಳಿ,
ಬೆಳಕ ಬರಮಾಡಿದಿರಿ ; ಹರಿಕಾರ ನೀವು. ಕಸಿ
ಮಾಡಿದಿರಿ ಪ್ರಾಚ್ಯ-ಪಾಶ್ಚಾತ್ಯಗಳ. ಕನ್ನಡದ
ಅಕ್ಕರೆಯ ಕೆಂಡವನು ಊದಿ ಪ್ರಜ್ವಲಿಸಿದಿರಿ,
ಸುತ್ತಿ ನಾಡನು. ಸಂಪ್ರದಾಯ ಶರಣರ ದಾಳಿ-
ಯನು ದಿಟ್ಟತನದಿಂದ ಮೆಟ್ಟಿದಿರಿ. ನಿಮ್ಮಿಂದ
ಮಡಿವಂತಿಕೆಯ ಚಿರಂಜೀವಿ ಅಶ್ವತ್ಥಾಮ
ಆತ್ಮಹತ್ಯದಿ ಮಡಿದ! ನುಡಿಯಾಯ್ತು ನಿಸ್ಸೀಮ
ಕಡಲ ಸಂಸರ್ಗದಲಿ. ಹೊಸತೊಂದು ಸರ್ಗವೇ
ಮೊದಲಾಯ್ತು ವಾಙ್ಮಯದ ಇತಿಹಾಸದಲಿ. ಇಂದು
ಕನ್ನಡದ ಬಾವುಟವು ಬಾನೆತ್ತರಕೆ ಹಾರ-
ದಿದ್ದರೂ, ನಿಮ್ಮ ದುಡಿಮೆಯಿನಾಯ್ತು ಬಹು ಏಳ್ಗೆ;
ನೀವು ಕಲಿಸಿದ ಮಂತ್ರ: 'ಸಿರಿಗನ್ನಡಂ ಗೆಲ್ಗೆ !'

**ಮುಳಲಿ ವಸಂತಕುಮಾರ್**

# ಕನ್ನಡದ ಸಿರಿ

ಮುಂಗಾರು ಮಳೆಯಲ್ಲಿ
ಕನ್ನಡದ ಹೊನ್ನೆಲಕೆ
ಹೊನ್ನಾರು ಕಟ್ಟಿದವರು— ನೀವು
ನವೋದಯದ ಬೀಜ ಬಿತ್ತಿದವರು

ಗರಿಕಳಚಿ ಮುದಡಿದ್ದ
ಸಂಪ್ರದಾಯದ ಸಸಿಗೆ
ಪಾಶ್ಚಾತ್ಯ ಕಸಿಯ ಕಟ್ಟಿದವರು— ನೀವು
ಹೊಸತಳಿಯ ಈ ನೆಲಕೆ ಊರಿದವರು

ದನಿಸತ್ತು ಮಲಗಿದ್ದ
ಕನ್ನಡದ ಕಂದಗಳ
ಭುಜ ತಟ್ಟಿ ಮೇಲೆತ್ತಿ ಕೂಗಿದವರು— ನೀವು
ದನಿಗೊಟ್ಟು ಪ್ರೇಮದಲಿ ಹಾಡೆಂದವರು

ತಾಯಿ ಹಕ್ಕಿ ತನ್ನ
ಮರಿಗಳೊಂದಿಗೆ ಕೂಡಿ
ಹಾಡುವಂತೆ ಹಾಡಿದವರು— ನೀವು
ನವ ನವೋದಯವ ಸಾರಿದವರು

ಹೊಸ ಭಾವ ಹೊಸ ಛಂದ
ಹೊಸ ಅರ್ಥ ಹೊಸ ತಂತ್ರ
ಹೊಸದಾದ ಗೀತೆಗಳ ಹಾಡಿದವರು —ನೀವು
ಹೊಚ್ಚ ಹೊಸತನವ ಚಿಮ್ಮಿದವರು

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಕನ್ನಡ ನಾಡೆಲ್ಲ ಸುತ್ತಿ
ಕನ್ನಡ ಪ್ರೇಮವ ಬಿತ್ತಿ
ಕನ್ನಡ ಕಂಕಣವ ಕಟ್ಟಿದವರು—ನೀವು
ಕನ್ನಡ ಬಾವುಟವ ನಭಕೆ ಎತ್ತಿದವರು

ಆಳ್ ಕನ್ನಡ ತಾಯ್
ಬಾಳ್ ಕನ್ನಡ ತಾಯ್
ಸಿರಿಗನ್ನಡಂ ಗೆಲ್ಗೆ ಎಂದವರು—ನೀವು
ಕನ್ನಡದ ಸಿರಿಯಾಗಿ ನಿಂದವರು.

ರಾಗೌ

# ಶ್ರೀರಕ್ಷೆ

ಕನ್ನಡದ ಕಲಕಂಠ ಶ್ರೀಕಂಠನೆಂಬಭಿಧಾನದಿ ಮೆರೆಯೆ
ಹೊತ್ತು ಮೂಡುವ ಮೊದಲೆ ಸುತ್ತ ಪರಿಮಳವ ಹರಹೆ
ತೆಯ್ದುಕೊಂಡೆಯೊ ನಿನ್ನ ನೀನು ನಿರಪೇಕ್ಷದಿಂದೆ
ನಾಳೆ ತೇರನೇರುವವರು ಹಿಂದೆ ನೀ ಬಂಡಿ ಹೊಡೆದುದ
ನರಿಯರು. ಹೊನ್ನಾರು ಹೂಡಿ ಹದ ಮಾಡಿದ ನೆಲವ
ತೆಗೆದುಕೊಂಡಿದ್ದೇವೆ ಈಗ ಸಮೃದ್ಧ ಪಚ್ಚೆ ಪೈರು
ಇಂದಿನುದಯಕೆ ಮುನ್ನ ನಾಳಿನುದಯವ ಕಂಡು
ಹತ್ತಿ ಗಿರಿಶಿಖರಗಳನು ಬಾವುಟವನೆತ್ತಿ ನೆಟ್ಟಿ
ಸುತ್ತಿ ನಾಡಿನೆಲ್ಲೆಡೆ ಸತ್ತ ನರರೆಲ್ಲರೆದೆಗೊಂದೆ
ಜೀವಜಲ ಕನ್ನಡವೆಂದುತ್ಸಾಹದ ಜೇನನೆರೆದೆ
ತಳಿತ ಮಾಮರದಿ ಕುಳಿತ ಕೋಗಿಲೆಯೊಂದು
ಬಂದ ವಸಂತನ ಚೆಂದದೊಸಗೆಯುಲಿಯುವಂತೆ
ಬಯಲ ಮೇಲೆಲ್ಲ ಬರಲಿರುವ ಹೊಸ ಬೆಳಗಿಗೆ
ಪ್ರಥಮ ಸುಪ್ರಭಾತದ ಪ್ರವಾದಿಯೊಲು ನಿಂದೆ
ಕನ್ನಡದ ಹರಿಕಾರನಿವನೆಮ್ಮ ಭಾವದಾಕಾಂಕ್ಷೆ
ಎನ್ನುವವರೆಲ್ಲರೆದೆಯಲ್ಲಿ ಒಲಿಯಲಿಂದವನ ಶ್ರೀರಕ್ಷೆ



ಎಸ್. ಅನಂತನಾರಾಯಣ

# ಶ್ರೀಕಂಠವಾಣಿ

ಹರಜಟಾಜೂಟದಿಂದಿಳಿದು, ಹರಿಯಡಿಗೆರಗಿ
ಹರಕೆಯನು ಹೊತ್ತು ಹಿಮಶೃಂಗದರಸನಿಂ,
ವಿಶ್ವನಾಥನ ಕಾಲಬಳಿ ಸಾರ್ವ ಗಂಭೀರೆ
ಪಾಪಮೋಚನಿ ಅಮಲ ಗಂಗೆಗಿಂತಲು ಮಿಗಿಲು,
ಕನ್ನಡದ ಕರುನಾಡಿನಲಿ ಹುಟ್ಟಿ, ಮಲೆನಾಡ
ತೆಂಗುಕಂಗಿನ ಜೋಡಿ ಬೀಸಣಿಗೆಯನು ಪಡೆದು
ಹರಕೆಯಾಶಿಷವಡೆದು ಶೃಂಗೇರಿ ಗುರುವಿನಿಂ,
ಹರಿಹರನ ಕೈಂಕರ್ಯಕ್ಕೈಕೊಂಡು, ಧಾವಿಸುತ
ಪಂಪಾಪತಿ ವಿರೂಪಾಕ್ಷನೋಲಗದಿ ನರ್ತಿಸುತ
ಕಲರವದಿಕುಣಿಯುತ್ತ ಕೌಮುದಿಯರಾಗದಲಿ
ಮಂತ್ರಾಲಯದ ಗುರುವಿನೊಡನಾಡಿ ನಮಿಸುತ್ತ
ಕನ್ನಡದ ನಾದಮಯದೋಂಕಾರ ನಾದವನು
ಜಗಕೆಲ್ಲ ಹರಹುತ್ತ ನಡೆಯುತ್ತ ಕುಣಿಯುತಿಹ
ಪಾವನೆ, ಭದ್ರೆ ತುಂಗಾತರಂಗಿಣೀ ಸಲಿಲ !
ನೋಡದೋ ಋಷಿಮೂರ್ತಿ ಬಾನಿನಲಿ ಮೂಡಿಹನು
ಕನ್ನಡಿಗರೆದೆಯ ಕನಸೆಲ್ಲ ಕಂಡಂತೆ
ಕನ್ನಡದ ಸಿರಿಯೆಲ್ಲ ಮೂರ್ತಿಗೊಂಡಿಹುದೆನಿಸಿ
ಗಂಭೀರಮೊಗದಲ್ಲಿ ಸಿರಿನಗೆಯ ಸೂಸುತಲಿ
ಕರೆಯುತಿದೆ ಶ್ರೀಮೂರ್ತಿ-ನುಡಿಯುತಿದೆ ನುಡಿಸುತಿದೆ
ಬಾನೆಲ್ಲ ಮುಗಿಲಾಗಿ, ಮುಗಿಲೆಲ್ಲ ಹನಿಯಾಗಿ
ಹನಿಯೆಲ್ಲ ಮಧುವಾಗಿ, ಮಧುವೆಲ್ಲ ಮೃದುಮಧುರ
ಕನ್ನಡದ ನುಡಿಯಾಗಿ, ನಾಡಿನಾಡಿಯೊಳುಲಿವ

ನಾದವೇ ತಾನಾಗಿ, ನುಡಿಯುತಿದೆ, ನುಡಿಸುತಿದೆ
ಮೊಳಗುತಿದೆ ಬಾಸಿನಲಿ, ನಾಡಿಸಲಿ, ನಾಡಿಯಲಿ
"ಸಿರಿಗನ್ನಡಂಗೆಲ್ಗೆ, ಸಿರಿಗನ್ನಡಂ ಬಾಳ್ಗೆ
ಕನ್ನಡದ ತಾಯಿ ಓ ರಾಜರಾಜೇಶ್ವರಿ
ಸಿರಿಗನ್ನಡಂ ಗೆಲ್ಗೆ."—ಶ್ರೀಕಂಠವಾಣಿ

ಗೋವಿಂದ ಕಣೇಕಲ್

# ನಾಡನಾಯಕ *

ಏಳು ಕನ್ನಡ 'ಶ್ರೀ'ಯೇ, ವಿದ್ಯೆಯ ಖನಿಯೇ, ಸ್ಫೂರ್ತಿಯ ಬುಗ್ಗೆಯೇ,
ಇರುಳು ಹಗಲೆನ್ನದಲೆ ದುಡಿದಿಹ ನಿಮಗೆ ಇಂತಹ ನಿದ್ದೆಯೇ,
ತಂದೆ ಏಳ್ಳೈ ನಾಡನಾಯಕ, ಹಿಡಿದು ಕನ್ನಡ ಬಾವುಟ,
ಗೆಲ್ಗೆ ಕನ್ನಡ ಎಂದು ಘೋಷಿಸು ಇಡುಗೆ ನಾದವು ಬಾನ್‌ಮುಟ !

ಬೆಳಗಿನಿಂದಲಿ ಬೈಗುವರೆಗೂ ಸರ್ವಜನ ಸುಖಕಾಗಿಯೇ
ಮರೆತು ದಣಿವನು, ಬೆಳಗಿ ಇರುಳಲಿ ಸರಿವ ದಿನಕರನಂತೆಯೇ
ಮೊದಲಿನಿಂದಲಿ ಕೊನೆಯವರೆಗೂ ಕನ್ನಾಡಿನ ಕಣ್ಮರೇ,
ನಾಡು-ನುಡಿಗಳ ಸೇವೆಗೈಯುತ, ನಗುತ ಸಿದ್ರೆಗೆ ಸಂದಿರೇ

ಕನ್ನಡಾಂಬೆಯ ಕಂಠಹಾರದ 'ಶ್ರೀ' ರತ್ನವು ಕಳಚಿತೆ
ಕನ್ನಡಾಕಾಶದಲಿ ಬೆಳಗಿದ ಶುಕ್ರ ಕಣ್ಮರೆಯಾಯಿತೇ
ಜನ್ಮ ಮುಗಿಸುವ ಮೊದಲೆ ಏಕೀಕರಣ ದೀಕ್ಷಿತರಳಿದರೇ,
ಚನ್ನ ಕನ್ನಡ ಜೇನ ನುಲಿಯುವ ಮಧುರ ಕಂಠರು ಕಳೆದರೇ ;

ಇಹದ ಹೊಂಗನಸುಗಳ ನನಸಾಗಿರಿಸೆ ಸಗ್ಗಕೆ ನಡೆದರೇ
ಕನ್ನಡಾಂಬೆಗೆ ಅಮೃತತರಲೀನಜ್ಞ ಮೇಲಕೆ ಜಿಗಿದರೆ ?
ಬಾನಮುಟ ಏರಿಸಲು ಬಾವುಟ ಬಾನಿನಾಚೆಗೆ ಸರಿದರೆ ?
ಗರಳಗೊರಳನ ಕೊರಳಹಾರದ 'ರತ್ನ ಶ್ರೀ'ಯವರಾದರೆ ?

ಆಂಗ್ಲ ಭಾಷಾಭ್ಯಾಸದಲ್ಲಿಯ ಅಮರ ಕೀರ್ತಿಯ ಪಡೆದಿರಿ
ಅವಳ ತೊಡಿಗೆಯ ಇವಳಿಗಿಡುತಲಿ ನುಡಿಗೆ ಹುಲುಸನು ತಂದಿರಿ.

* 'ಗಾನಕೇಳಿ', ಪು. ೫೨.

ರಾಜಸೇವಾಸಕ್ತ, ದಾಸಿರ್ಯೇ, ಮಾತುಗಾರರಿ, ಸಾಹಿತಿ,
ಕವಿ, ವಿಮರ್ಶಕ, ಮರೆಯಲಾಪೆವೆ ನಿಮ್ಮ ಮಂಗಳ ಮೂರುತಿ.

ಶರಣಸತ್ಯವ ಮರಣದಲ್ಲಿ ಕಾಣೆಂಬ ಅನುಭವ ಮಾತಿನ
ನೈಜ ತೋರಿತು ನಿಮ್ಮ ಮರಣದ ದಿವ್ಯ ಭವ್ಯ ನಿದರ್ಶನ.
ನಾಡು–ನುಡಿ ಹೊಂಗನಸ ಕಾಣುತ, ನಗುತ ನಿದ್ರೆಗೆ ಸಂದಿರಿ.
ಇಂಥ ಸುಖಮಯ, ದಿವ್ಯ ಮರಣವ, ಗುರುವೆ, ಶಿಷ್ಯಗೆ ನೀಡಿರಿ.



ಶಂಕರ ಮೊಕಾಶಿ-ಪುಣೇಕರ

# ಕನ್ನಡದ ತಂದೆ *

ಮಿಂಚಿನಂದದಿ ನೀವು ಕೈಮೀರಿ ನಡೆದಿಹಿರಿ
ನಿರ್ವಾಣ ಪಥವನ್ನು ಹಿಡಿದು ಮುಂದೆ,
ಕೊಂಚ ಕರುಣೆಯು ಇಲ್ಲವೇನಯ್ಯ ಮಗುಗಳಲಿ
ಗುರುವರ‍್ಯ, ಯೋಗಿ, ಹೇ ಕನ್ನಡದ ತಂದೆ

ಮಗುದೊಮ್ಮೆ ನಿಮ್ಮ ನಗುಮೊಗವ ಕಾಣುವೆನೆಂಬ
ಹಗಲುಗನಸುಗಳನ್ನು ಕಾಣುತಿರಲು
ಉದುರಿಹೋಯಿತು ಪರ್ಣ, ಮುದುರಿ ಹೋಯಿತು ಪುಷ್ಪ
ನೋಡ ನೋಡುತ ಸುತ್ತು ಬಟ್ಟ ಬಯಲು

ಎನಿತೋ ವರುಷಗಳಿಂದ ಬೆಳಕು ನೀಡುತಲಿರುವ
ತಾರೆಯಿದು ಚಿರವಾಗಿ ಬಾಳಬಹುದು—
ಎನ್ನುತಿರೆ ಉದುರಿತ್ತೈ ಕಾಲನುದರವಲಿಂದು
ಮತ್ತು ಕಾಳ್ಗತ್ತಲೆಯೆ ಆಳಲಿಹುದು

ಒಂದು ವರುಷದ ಸ್ನೇಹಬಂಧನದ ತಂತ್ರಿಯಲಿ
ಧನ್ಯರಾದೆವು ನಾವು ನಿಮ್ಮಡಿಯ ಬಳಿಗೆ,
ಜೀವಿತದ ವೈಭವದ ಸಪ್ತವರ್ಣವ ತೋರಿ
ಹೊಸ ದಾರಿ ನೀಡಿದಿರಿ ನಮ್ಮ ನಡೆವಳಿಗೆ

* 'ಗಾನಕೇಳಿ', ಪು. ೫೨.

ತಿರೆಯು ತಿರುಗಿತು, ನೀವು ಸ್ಥಿರವಾಗಿ ಉಳಿದಿರೈ
'ವಿಶ್ವಭಾರತಿ ಶರಣು' ಎಂದು ಘೋಷಿಸುತ,
ಕೊನೆಯ ಉಸುರಿನವರೆಗೂ 'ಋತವೊಂದೇ ಗೆಲ್ಲುವದು'
ಎಂಬ ಗೀತವೇ ನಿಮ್ಮ ಹೃದಯಗಾಥ

ಮನೆಯ ಅಂಗಳದಲ್ಲಿ ಮರಳಿ ಅರಳಿವೆಯೆರಡು
ಚೆಂಗುಲಾಬಿಗಳಿಂದು, ಕಂಪನೆರಚುತ್ತ
ಅವನು ಕಾಣುತ 'ದೇವಕೃಪೆ'ಯೆಂದು ಉಸಿರಿಡುವ
ಯೋಗಿವರ್ಯನು ಮಾತ್ರ ತೆರಳಿಹನು ಎತ್ತ

ಜೀ. ಶಂ. ಪರಮಶಿವಯ್ಯ

# ಭಾಗ್ಯಶ್ರೀ—ಬೆಳ್ಳೂರು*

ಕನ್ನಡದ ಕಣ್ವ 'ಶ್ರೀ' ಅವತರಿಸಿದೀ ನೆಲೆಯು,
ಕನ್ನಡಮ್ಮನ ಕೊರಳಿಗಿತ್ತುದಿಲ್ಲವೆ ರನ್ನ !
ಆ ವಿಮಲ ಗರ್ಭದಲಿ ಹೊಮ್ಮಿತೀ ನವಶಕ್ತಿ,
ನಾಡಿನಾಡಿಯಲೊಂದು ಹೊಸನೆತ್ತರನು ಬಿತ್ತಿ
ನುಡಿಯ ಕಟ್ಟಡದಡಿಗೆ ವಜ್ರಗಾರೆಯ ಮಾಡಿ
ನವ ಉದಯವಾಣಿಯನೆ ಮೊಳಗಿ ಮೆರೆದವನಲ್ತೆ
ಕನ್ನಡದ ಪ್ರತಿಮೆಯನೆ ಹೊಸ ಮಿಸುನಿ ರಸದಲ್ಲಿ
ಮೆರುಗನಿತ್ತಾರ್ತಿಯಲಿ ತಾಯ್ನುಡಿಯ ವರಶಿಲ್ಪಿ
ಜನಿಸಿದನೆ—ಎನ್ನೂರಬಳಿಯ ಬೆಳ್ಳೂರಿನಲ್ಲೆ !

ಧನ್ಯನಪ್ಪೆನು ನಾನು—ಓ ! ಎನ್ನ ಬೆಳ್ಳೂರೆ !
ಕೋಟಿ ಊರುಗಳಲ್ಲಿ ನೀನೊಂದು ಊರಂತೆ
ಲಕ್ಷ ನಕ್ಷತ್ರಗಳ ಮಾಲೆ ಇರಲೇನಂತೆ
ಚಂದ್ರಮನ ಚಲುವಿಲ್ಲದಾ ಮುಗಿಲು ಬಂಜೆ !
ನಿನ್ನ ಹಿರಿಮೆಯ ನೀನೆ ಅರಿಯದಿಹೆ ಆದರದೊ
ರಾಜಾಧಿರಾಜರನೆ ಮರೆತ ಕನ್ನಡ ಜನತೆ
ತವಕುವರನಗಲಿಕೆಗೆ ಕಂಬನಿಯ ಕರೆಯುತಿದೆ
ಹಸಿರಹಾಸಿಗೆಯಲ್ಲಿ ನೀನೊರ್ವ ದೇವಿಯೊಲು !

* 'ಜೀವನಗೀತ', ಪು. ೨೭.

ಗದ್ದೆ ಬಯಲಿನ ಹೊನ್ನ ತೆನೆತೆನೆಯ ತೇರೇರಿ
ವೀರವೈಷ್ಣವ ನದಿಯ ತಟದಿ ನಿಚ್ಚವು ಮುದದಿ
ಬಾಳುತಿರೆ ನಾ ಬರುವೆ ಮಣಿವೆ ಮನದಾಳದಲೆ
ಸಿರಿಗುವರನನು ನುಡಿಯ ಗುಡಿಯ ಚೇತನಕಾಗಿ
ನೀಡಿದೆಲೆತಾಯಿ (ತಾಯಲ್ಲದಿನ್ನೇನು !) ನೀನೆನಿತು
ಪುಣ್ಯವತಿಯಹುದಹುದು ಕೌಶಲ್ಯಾದೇವಿ !

ಕುವೆಂಪು

# ಹಿರಿಯರ ಹಿರಿಮೆ *

ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಶರೀರತ್ಯಾಗ ಮಾಡಿದರಂತೆ. ಮಾಡಿದರು ಎಂದು ಹೇಳಲು ಮನಸ್ಸು ಹಿಂಜರಿಯುತ್ತಿದೆ. ಅಷ್ಟು ಅನಿರೀಕ್ಷಿತ ಆ ಸುದ್ದಿ. ಅಷ್ಟು ಆಕಸ್ಮಿಕ ಅದು ಬಂದ ರೀತಿ. ಸುದ್ದಿಯನ್ನು ಆಲಿಸಿದ ಪ್ರತಿಯೊಬ್ಬ ಅಕ್ಕರಿಗ ಕನ್ನಡಿಗನೂ "ಹೌದೆ!" ಎಂದು ಹೌಹಾರಿ ಬೀಳದಿರಲಾರನು.

ಹೌದು! ಕನ್ನಡ ಸಾಹಿತ್ಯ ನವೋದಯಕ್ಕೆ ನಾಂದೀ ಸ್ವರೂಪರಾದವರು, ಕನ್ನಡದ ಬಾವುಟವನ್ನು ತೋಳ್ ನೀಡಿ ನಭಕ್ಕೆತ್ತಿದವರು, ಕನ್ನಡದ ಏಳ್ಗೆಗಾಗಿ ಕನ್ನಡದ ಬಾಳ್ಕೆಗಾಗಿ ನಾನಾ ರಂಗಗಳಲ್ಲಿ ಅನೇಕ ವಿಧಾನಗಳಲ್ಲಿ ಉಸಿರ್ಕಟ್ಟಿ ಒಮ್ಮನಸ್ಸಿನಿಂದ ಹೋರಾಡಿದವರು, "ಬಾಳ್ ಕನ್ನಡ ತಾಯ್! ಏಳ್ ಕನ್ನಡ ತಾಯ್, ಆಳ್ ಕನ್ನಡ ತಾಯ್" ಎಂದು ಕೊರಳೆತ್ತಿ ಕೂಗಿದವರು, ಕೈಬೀಸಿ ಕರೆದವರು, ತೆರಪಿಲ್ಲದೆಚ್ಚರಿಸಿದವರು, ಹುರಿದುಂಬಿಸಿದವರು, ಹಾರೈಸಿದವರು, ಹರಸಿದವರು ನಿನ್ನೆ ಹಗಲು ದೇಹತ್ಯಾಗಮಾಡಿದರಂತೆ! ಕನ್ನಡಮ್ಮನಿಗಾಗಿ ಬಹಿರಂಗವಾಗಿಯೂ ಅಂತರಂಗವಾಗಿಯೂ ಅನೇಕ ತ್ಯಾಗಗಳನ್ನು ಮಾಡಿದ ಆ ಮಹಾದಾನಿಗೆ ಇದು ಕೊನೆಯ ತ್ಯಾಗ, ಈ ಶರೀರ ತ್ಯಾಗ.

ಕೊನೆಯದೆಂದು ಹೇಳುವುದು ನಮ್ಮ ಲೋಕವ್ಯವಹಾರ ದೃಷ್ಟಿಯಿಂದ ಮಾತ್ರ. ಏಕೆಂದರೆ ಅಮೃತಾತ್ಮದ ಅನಂತ ಯಾತ್ರೆಗೆ ಕೊನೆ ಎಲ್ಲಿ? ಯಾವುದು ಅನಂತವೋ ಅದರ ಅನಂತ ಸಾಹಸಿಗಳಿಗೆ ಅಂತ್ಯವೆಲ್ಲಿ? ಆದ್ದರಿಂದ ಅದು ಕಡೆಯದೂ ಅಲ್ಲ, ಕೊನೆಯದೂ ಅಲ್ಲ. ಕೈಕೊಂಡ ಕಾರ್ಯವನ್ನು ಮುಂದುವರಿಸುವ ಸಲುವಾಗಿ, ಕನ್ನಡದ ಅಭ್ಯುದಯ ಸಾಧನೆಗೆ ಸ್ವರ್ಗವೇದಿಕೆಯಲ್ಲಿ ಸೊಂಟಕಟ್ಟುವ ಸಲುವಾಗಿ, ಅಲ್ಲಿಯ ದೇವತಾಶೀರ್ವಾದ ಶಕ್ತಿಗಳನ್ನು ಇಲ್ಲಿಗೆ ಆಮಂತ್ರಿಸುವುದಕ್ಕಾಗಿ, ನಮ್ಮ ಇಲ್ಲಿಯ ಸಾಧನೆಗೆ ಅಲ್ಲಿಯ ಕೃಪಾ ಸಹಾಯವನ್ನು ಸಂಪಾದಿಸುವುದಕ್ಕಾಗಿ ಪೂಜ್ಯ ಶ್ರೀಕಂಠಯ್ಯನವರು ಅಶರೀರ ಯಾತ್ರೆ ಹೋಗಿದ್ದಾರೆ. ಯಾರು ಹೇಳಿದರು ಅವರು ಮಡಿದರೆಂದು?

---

* 'ಪ್ರಬುದ್ಧ ಕರ್ಣಾಟಕ', ಸಂ. ೨೭, ಸಂ. ೩, ೧೯೪೬, ಪುಟ ೧೧೧-೧೧೪. (ಮೈಸೂರು ಆಕಾಶವಾಣಿಯಲ್ಲಿ ಪ್ರಸಾರವಾದುದು).

ಈ ಬದುಕಿನಿಂದ ಆ ಬದುಕಿಗೆ ವರ್ಗವಾಗಿದ್ದಾರೆ! ಕನ್ನಡಕ್ಕಾಗಿ ದುಡಿದು ಮುನ್ನಡೆದ ಮಹನೀಯರೊಡನೆ ಸೇರಿದ್ದಾರೆ, ಕಾರ್ಯಾರ್ಥವಾಗಿಯೆ! ಕಳೆದವರಿಗಾಗಿ ಅಳುವುದು ಲೋಕದ ರೂಢಿ. ಆದರೆ ಚಿರಂಜೀವಿಯಾದ ಶ್ರೀಯವರಿಗಾಗಿ ನಾವು ಅಳುವುದು ಸಲ್ಲ. ಏತಕ್ಕೆ ಅಳು? ನಶ್ವರ ಹೋಯಿತು, ಶಾಶ್ವತ ತೇಜಸ್ಸಿನ ಶಾಶ್ವತ ವೈಭವಕ್ಕಾಗಿ. ಇಂದು ಶ್ರೀಕಂಠಯ್ಯನವರು ಹಿಂದಿಗಿಂತಲೂ ನೂರ್ಮಡಿಯಾಗಿ ಬದುಕಿದ್ದಾರೆ! ನನ್ನೆದೆಯಲ್ಲಿ ಉಕ್ಕುತ್ತಿರುವ ಗೌರವ ಭಾವವೇ ಅದನ್ನು ಸಮರ್ಥಿಸುತ್ತಿದೆ! ನಮ್ಮ ಹೃದಯ ಭೂಮಿಕೆಯಲ್ಲಿ ಹೆಡೆಯೆತ್ತುತ್ತಿರುವ ದಿವ್ಯೋಲ್ಲಾಸದ ಅಗ್ನಿ ಶೇಷನೇ ಅದಕ್ಕೆ ಸಾಕ್ಷಿ! ಆಚಾರ್ಯ ಶ್ರೀಕಂಠಯ್ಯನವರು ದೇಹಬಂಧನದಿಂದ ವಿಮುಕ್ತರಾಗಿ, ಏಕಕಾಲದಲ್ಲಿ ನಮ್ಮೆಲ್ಲರೊಡನೆಯೂ ಯಾವಾಗಲೂ ಇರುವ ದಿವ್ಯ ಸ್ಥಿತಿಗೇರಿದ್ದಾರೆ.

ಪೂಜ್ಯ ಶ್ರೀಕಂಠಯ್ಯನವರ ಪರಿಚಯದ ಪುಣ್ಯ ನನ್ನನ್ನು ಸುಮಾರು ಇಪ್ಪತ್ತು ಇಪ್ಪತ್ತೆರಡು ವರ್ಷಗಳಿಂದಲೂ ಅವಿರಾಮವಾಗಿ ಆಶೀರ್ವದಿಸುತ್ತಿದೆ. ಮೊದಲು ನನಗವರು ಗೋಚರವಾದದ್ದು ಮೈಸೂರಿನ ಮಹಾರಾಜರ ಕಾಲೇಜಿನಲ್ಲಿ ಇಂಗ್ಲಿಷ್ ಪ್ರೊಫೆಸರ್ ಆಗಿ. ಆಗ ಇನ್ನೂ ನನ್ನ ಬಾಳಿನ ದಿಗಂತದಲ್ಲಿ ಕನ್ನಡ ಕಾವ್ಯರವಿ ಮೂಡಿರಲಿಲ್ಲ. ಮೂಡಿರಲಿಲ್ಲ ಮಾತ್ರವಲ್ಲ, ಅದು ಮೂಡುವ ಸುಳಿವೂ ಇರಲಿಲ್ಲ. ನನ್ನ ಒಲವೂ ಒಲವರವೂ ಇಂಗ್ಲಿಷ್ ಸಾಹಿತ್ಯಕ್ಕೆ ಸಂಪೂರ್ಣವಾಗಿ ಮೀಸಲಾಗಿದ್ದ ಕಾಲ. ನನ್ನ ಕಾವ್ಯದೇವಿ ನನಗೆ ಗೋಚರವಾದುದೂ ಇಂಗ್ಲಿಷ್ ಮೊಗವಾಡ ಹಾಕಿಕೊಂಡೇ ! ನನ್ನ ಕವಿಪ್ರತಿಭೆಯನ್ನು ಕನ್ನಡದ ಕಡೆಗೆ ತಿರುಗಿಸಿದ ನಿಮಿತ್ತ ಮಾತ್ರ ವ್ಯಕ್ತಿ ಒಬ್ಬ ವಿದೇಶೀಯ ಕವಿಯಾದರೂ, ಅದಕ್ಕೆ ಮೆಚ್ಚುಗೆಯ ಪ್ರೋತ್ಸಾಹ ತೀರ್ಥವನ್ನು ತಳಿದು ನಿದರ್ಶನ ಮಾತ್ರದಿಂದಲೇ ನನಗೆ ಮಾರ್ಗದರ್ಶಕರಾಗಿ, ಅದರ ಬೆಳೆಗೆ ಬೇಕಾದ ವಿದ್ವದ್ಬಲವನ್ನು ಶೇಖರಿಸಲು ಕಾರಣವಾದ ವ್ಯಕ್ತಿಗಳಲ್ಲಿ ಶ್ರೀಯವರು ಅಮಿತಗಣ್ಯರಾಗಿದ್ದಾರೆ.

ನನಗಿನ್ನೂ ನೆನಪಿದೆ. ಒಂದು ಸಂಜೆ ಕಾಲೇಜಿನ ಕರ್ಣಾಟಕ ಸಂಘದಲ್ಲಿ ಅವರು ರನ್ನನ 'ಗದಾಯುದ್ಧ'ವನ್ನು ಕುರಿತು ಉಪನ್ಯಾಸ ಮಾಡಿದರು. ಬಹುಶಃ ಅದನ್ನು ನಾಟಕಕ್ಕೆ ತಿರುಗಿಸುತ್ತಿದ್ದ ಕಾಲವೋ ಅಥವಾ ತಿರುಗಿಸಲು ಸಂಕಲ್ಪಿಸುತ್ತಿದ್ದ ಕಾಲವೋ ತಿಳಿಯದು. ಹೊರಗೆ ಬಂದ ಮೇಲೆ ಸಮೀಪದಲ್ಲಿಯೆ ಗುಂಪಿನಲ್ಲಿ ಹೋಗುತ್ತಿದ್ದ ನನ್ನನ್ನು ಕರೆದರು. ನಾನು ಆ ಕೃತಿಗೆ ಬಹಳ ಹೆಮ್ಮೆಪಟ್ಟುಕೊಂಡೇ ಅವರೆಡೆಗೆ ಹೋದೆ. ಅವರು ಕಾಲೇಜಿನ ಅಂಗಳಕ್ಕೆ ಮೊಗವಾಗಿ ಕಟಕಟೆಯ ಮೇಲೆ ಒರಗಿ ನಿಂತು ನನ್ನೊಡನೆ ವಿಷಯ ಪರಿಶೀಲನೆ ಮಾಡತೊಡಗಿದರು. ನಾನು ಬಿ.ಎ. ತರಗತಿಯ ಮೊದಲನೆಯ ವರ್ಷದಲ್ಲೋ ಎರಡನೆಯ ವರ್ಷದಲ್ಲೋ ಇದ್ದೆ. ಆಗ ನನಗೆ ಕನ್ನಡದಲ್ಲಿ ಸಡ್ಡೆಯಾಗಲಿ, ಅಭಿಮಾನವಾಗಲಿ, ಪರಿಶ್ರಮವಾಗಲಿ, ಪ್ರಯೋಗಾಸಕ್ತಿ

ಯಾಗಲಿ ವಿಶೇಷವಾಗಿರದಿದ್ದ ಕಾಲ. ಆದರೆ ಇಂಗ್ಲಿಷಿನಲ್ಲಿ ಅತಿಮೋಹ, ಅತಿಗೌರವ, ಅತಿಶ್ರದ್ಧೆ ಇದ್ದುದರಿಂದ ಇಂಗ್ಲಿಷ್ ಪ್ರೊಫೆಸರನ್ನು ಕಂಡರೆ ಗೌರವ. ಇಂಗ್ಲಿಷ್ ಪ್ರೊಫೆಸರ್ ಕೂಡ ಕನ್ನಡ ಸಂಘದಲ್ಲಿ ಕನ್ನಡದಲ್ಲಿ ಕನ್ನಡ ಕವಿಯೊಬ್ಬನ ಕಾವ್ಯವನ್ನು ಕುರಿತು ಮಾತನಾಡುತ್ತಾರೆಂದು ಸಭೆಗೆ ಹೋಗಿದ್ದೆನೋ ಅಥವಾ ಆಗತಾನೆ ಕನ್ನಡದ ಕಡೆಗೆ ನನ್ನ ಕಣ್ಣು ಕೃಪಾಕಟಾಕ್ಷವೆಂಬಂತೆ, ಒಲೆಯುತ್ತಿದ್ದ ಕಾಲವೋ! ಶ್ರೀಕಂಠಯ್ಯ ನವರು 'ಗದಾಯುದ್ಧ'ವನ್ನು ಕುರಿತು ಸಂವಾದ ನಡೆಸತೊಡಗಿದರು. ನನ್ನಲ್ಲಿ ಯಾವ ಯೋಗ್ಯತೆಯನ್ನು ಕಂಡರೋ ಯಾವ ಅಧಿಕಾರವನ್ನು ಊಹಿಸಿದರೋ ನಾನರಿಯೆ. ಯಾವ ಯಾವ ವಿಷಯದಲ್ಲಿ ಕುರಿತು ಪ್ರಸ್ತಾಪಿಸಿದರೋ ಅದೂ ನೆನಪಾಗುವುದಿಲ್ಲ. ಒಂದು ಮಾತ್ರ ಸುಸ್ಪಷ್ಟವಾಗಿ ಮನಸ್ಸಿನಲ್ಲಿದೆ.

ವೃತ್ತಗಳನ್ನು ಅಥವಾ ಕನ್ನಡ ಪದ್ಯಗಳನ್ನು ಇಂಗ್ಲಿಷ್ ಪದ್ಯಗಳನ್ನು ವಾಚಿಸು ವಂತೆ ಏಕೆ ನಾಟಕೀಯವಾಗಿ ಓದಬಾರದು? ಹಾಗೆ ಮಾಡುವುದಾದರೆ (ಅವರೇ ಆ ದಿನ 'ಗದಾಯುದ್ಧ'ದ ಭಾಗಗಳನ್ನು ಓದಿತೋರಿಸಿದಂತೆ), ಇಂಗ್ಲಿಷ್ 'ಬ್ಲಾಂಕ್ ವರ್ಸ್' ಅನ್ನು ಹೋಲುವಂತೆ ಕನ್ನಡದಲ್ಲಿಯೂ ವೃತ್ತ ಛಂದಸ್ಸಿನಲ್ಲಿ ಕಾವ್ಯರಚನೆ ಮಾಡಬಹು ದಲ್ಲವೇ ? — ಅವರ ಪ್ರಶ್ನೆಗೆ ನಾನೇನು ತೊದಲುತ್ತರ ಹೇಳಿದೆನೋ ನೆನಪಿಲ್ಲ. ಒಂದು ಮಾತ್ರ ನೆನಪಿದೆ : ವೃತ್ತಗಳನ್ನು ರಾಗವಾಗಿಯೇ ಓದಬೇಕೆಂದು ನಾನು ಹಟಹಿಡಿದೆ. ಅವರು ವಾದಕ್ಕೆ ತೊಡಗಲಿಲ್ಲ. ಸರಿ, ಇರಲಿ ಎಂದು ಬೇರೆಯ ವಿಷಯಕ್ಕೆ ಹೊರಟರು. ಕೆಲಕಾಲದ ತರುವಾಯ ನಾನು ಸ್ವತಂತ್ರವಾಗಿಯೇ, ಆಗ ತಾನೆ ಬಳಕೆಗೆ ಬರುತ್ತಿದ್ದ ಸರಳರಗಳೆಯ ಛಂದಸ್ಸಿನಲ್ಲಿ ಮೊತ್ತಮೊದಲನೆಯ ನಾಟಕವನ್ನು ರಚಿಸಿ ಶ್ರೀ ವೆಂಕಣ್ಣಯ್ಯನವರಾದಿಯಾಗಿ ಹಲವು ಹಿರಿಯರ ಮೆಚ್ಚುಗೆಗೆ ಪಾತ್ರನಾದಾಗ ಶ್ರೀಕಂಠಯ್ಯನವರು ಎಷ್ಟು ಸಂತೋಷಪಟ್ಟರೆಂಬುದನ್ನು ಸೂಚಿಸಲು ಕಲ್ಬುರ್ಗಿಯ ಸಾಹಿತ್ಯ ಸಮ್ಮೇಳನದಲ್ಲಿ ನಡೆದ ಒಂದು ಸಣ್ಣ ಘಟನೆಯನ್ನು ಸದಸ್ಯರ ಕ್ಷಮೆ ಬೇಡಿ, ತಿಳಿಸುತ್ತೇನೆ. ಶ್ರೀಯವರ 'ಗದಾಯುದ್ಧ ನಾಟಕ' ಮತ್ತು ನನ್ನ 'ಯಮನ ಸೋಲು' ಎರಡು ನಾಟಕಗಳನ್ನೂ ಪ್ರೇಕ್ಷಕರು ಮನದಣಿಯೆ ನೋಡಿದ ಮೇಲೆ ಶ್ರೀ ಯವರು ತಮಗೆ ಅರ್ಪಿತವಾಗಿದ್ದ ಹಾರವನ್ನು ರಂಗದ ಮೇಲೆ ಬಹಿರಂಗವಾಗಿ ನನ್ನ ಕೊರಳಿಗೆ ಹಾಕಿ "ಇದು ಇವರಿಗೆ ಹೆಚ್ಚಾಗಿ ಸಲ್ಲತಕ್ಕದ್ದು" ಎಂದು ಹೇಳಿಬಿಟ್ಟರು ! ಹೀಗೆ ಒಂದಲ್ಲ, ಎರಡಲ್ಲ, ಅನೇಕ ಸಮಯಗಳಲ್ಲಿ ಹಲವು ರೀತಿಗಳಿಂದ ನನ್ನಂತಹ ಇನ್ನೂ ಅನೇಕ ಕಿರಿಯರನ್ನು ಸಮಾನರೆಂಬಂತೆ ಕಂಡು, ಅವರ ಲಜ್ಜಾಭಯಗಳನ್ನು ಪರಿಹರಿಸಿ, ಶ್ರೀಯವರು ತಮ್ಮ ಕನ್ನಡತನದ ತೇಜಸ್ಸನ್ನು ಸಾವಿರಾರು ಹೃದಯಗಳಲ್ಲಿ

ಹರಿಯ ಬಿಟ್ಟಿದ್ದಾರೆ. ಕನ್ನಡನಾಡು ತನ್ನ ನುಡಿ, ತನ್ನ ಸಾಹಿತ್ಯ ಇರುವವರೆಗೆ ಶ್ರೀಕಂಠಯ್ಯನವರನ್ನು ನೆನೆಯುತ್ತಿರುತ್ತವೆ.

ಹಿರಿಯ ಬಾಳನ್ನು ಬಾಳಿದ ಅವರ ವಿಚಾರವಾಗಿ ಈ ಹದಿನೈದು ನಿಮಿಷದ ಭಾಷಣದಲ್ಲಿ ಹೇಳಬೇಕಾದ್ದೆಲ್ಲವನ್ನೂ ಹೇಳಿಬಿಡುತ್ತೇನೆಂದು ಪ್ರಯತ್ನಿಸುವುದು ಬಾಲ ಚಾಪಲ್ಯವಾದೀತು. ಆ ಅಸಾಧ್ಯ ಪ್ರಯತ್ನಕ್ಕೆ ಬಹುದೂರ ನಿಲ್ಲುತ್ತದೆ, ಕೈಮುಗಿದು, ನನ್ನ ಈ ನಿವೇದನ. ನಾನು ಅವರನ್ನು ಕಂಡಿರುವುದು ವಿಶೇಷವಾಗಿ ಸಾರ್ವಜನಿಕ ಜೀವನದಲ್ಲಿ—ಅಧ್ಯಾಪಕ, ವಾಗ್ಮಿ, ಸಾಹಿತ್ಯವಿಮರ್ಶಕ, ಸಾಹಿತ್ಯಕರ್ತೃ, ಕನ್ನಡಭಕ್ತ, ಪ್ರಚಾರಪಟು, ದಾನಿ, ತ್ಯಾಗಿ ಇತ್ಯಾದಿ ಪಾತ್ರಗಳಲ್ಲಿ. ಆದರೆ ಈ ಎಲ್ಲ ಪಾತ್ರಗಳಿಗೂ ಶಕ್ತಿದಾಯಕವಾಗಿರುವ ಪಾತ್ರಗಳೂ ಆತ್ಮವ್ಯಾಪಾರಗಳೂ ಜೀವಾತ್ಮನಿಗೆ ಇವೆ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ಬಹುಶಃ ಅವುಗಳಲ್ಲಿ ಕೆಲವು ಆಯಾ ವ್ಯಕ್ತಿಗಲ್ಲದೆ ಇತರರಿಗೆ ಅಗೋಚರವೂ ಆಗಿರುತ್ತವೆ. ನನ್ನ ಮಟ್ಟಿಗೆ ಹೇಳುವುದಾದರೆ, ಆ ಅಗೋಚರ ವ್ಯಾಪಾರಗಳಿಗೇ ನಾನು ವರಿಷ್ಠವಾಗಿ ಬೆಲೆಕಟ್ಟುತ್ತೇನೆ. ಶ್ರೀಮಾನ್ ಶ್ರೀಕಂಠಯ್ಯನವರು ತಮ್ಮ ಓದುಮನೆಯ ಮೇಜಿನ ಮೇಲೆ ತಮಗೆದುರಾಗಿ ಬುದ್ಧದೇವನ ಒಂದು ಪ್ರಶಾಂತ ಸುಂದರವಾದ ಬಿಳಿಯ ವಿಗ್ರಹವನ್ನು ಇಟ್ಟುಕೊಂಡಿರುತ್ತಿದ್ದುದು ನಾನು ಅವರಲ್ಲಿಗೆ ಹೋದಾಗಲೆಲ್ಲ ಕಣ್ಣಿಗೆ ಬೀಳುತ್ತಿತ್ತು. ಅದರ ವಿಚಾರವಾಗಿ ಅವರು ಒಂದೇ ಒಂದುಸಾರಿ ನನ್ನೊಡನೆ ಹೇಳಿದ್ದೆಂದರೆ: ಅದನ್ನು ಯಾವುದೋ ಒಂದು ಪ್ರದರ್ಶನದಲ್ಲಿ ಕೊಂಡುಕೊಂಡ ವಿಚಾರವಾಗಿ! ಆದರೆ ಅದನ್ನು ನೋಡುತ್ತಿದ್ದ ಅವರ ಕಣ್ಣೂ, ಅದನ್ನು ಬಣ್ಣಿಸುತ್ತಿದ್ದ ರೀತಿಯಲ್ಲಿ ಇಣುಕುತ್ತಿದ್ದ ದಿವ್ಯರುಚಿಯೂ ಬೇರೊಂದು ರಹಸ್ಯ ಕಥೆಯನ್ನು ಬಯಲಿಗೆಳೆಯುತ್ತಿದ್ದುವು. ಅವರ ಕೆಲವು ಭಾಷಣಗಳಲ್ಲಿಯೂ ಆ ರುಚಿ ಅಲ್ಲಲ್ಲಿ ತಲೆಹಾಕದೆ ಇರುತ್ತಿರಲಿಲ್ಲ. ಅದೆಲ್ಲ ಅವರ ಆತ್ಮಶ್ರೀಗೆ ಸಂಬಂಧಪಟ್ಟುದು; ಚಿರಕಲ್ಯಾಣಕ್ಕೆ ಕಾರಣವಾದದ್ದು; ಅವರ ಜನ್ಮ ಜನ್ಮಾಂತರಗಳ ಸಂಸ್ಕಾರಗಳಿಗೂ ಸಚ್ಚಿದಾನಂದ ಸಾಧಕವಾದ ಆತ್ಮವಿಕಾಸಕ್ಕೂ ಸಮನ್ವಿತವಾದದ್ದು; ನಮಗೆ ಪ್ರಕೃತವಾದದ್ದು ಈ ಜನ್ಮದಲ್ಲಿ ವ್ಯಕ್ತಗೊಂಡ ಈ ಪುರುಷಕಾರಕ್ಕೆ ಸಂಬಂಧಪಟ್ಟದ್ದು ಮಾತ್ರ.

ಕನ್ನಡ ಸಾಹಿತ್ಯಕ್ಕೆ ಶ್ರೀಯವರ ಕಾಣಿಕೆ ಅಪೂರ್ವವಾದದ್ದು. 'ಇಂಗ್ಲಿಷ್ ಗೀತೆಗಳು,' 'ಅಶ್ವತ್ಥಾಮನ್,' "ರಜತಮಹೋತ್ಸವ ಪ್ರಗಾಥ"— ಒಂದೊಂದೂ ಕನ್ನಡ ನವೋದಯಕ್ಕೆ ಹಾದಿ ತೋರಿಸಿದ ಕೃತಿಗಳು. ಅವೆಲ್ಲವುಗಳನ್ನು ಕುರಿತ ವಿಶಾಲವಾದ ಪ್ರಶಂಸೆಯೂ ವಿವರವಾದ ವಿಮರ್ಶೆಯೂ ಈ ಆಕಾಶವಾಣಿಯಿಂದಲೇ ಇನ್ನು ಒಂದೆರಡು ವಾರಗಳ ಒಳಗಾಗಿ ನಡೆಯಲಿದೆಯೆಂದು ಕೇಳುತ್ತೇನೆ. ಇದು ಸಮಯವೂ ಅಲ್ಲ, ಇಲ್ಲಿ ಸಮಯವೂ ಇಲ್ಲ.

ಪ್ರಬುದ್ಧ ಕರ್ನಾಟಕ — ಬಿಎಂಶ್ರೀ : ನೂರರ ನೆನಪು

ಶ್ರೀ ಅರವಿಂದರು ಸ್ವಾಮಿ ವಿವೇಕಾನಂದರ ಪುರುಷಕಾರದ ವಿಚಾರವಾಗಿ ಹೇಳುತ್ತಾ ಕೊನೆಯಲ್ಲಿ ಹೀಗೆಂದಿದ್ದಾರೆ : "Not only are the men greater than their works, but their influence is so wide and formless that it has little relation to any formal work that they have left behind them."

ಹಿರಿಯರ ಹಿರಿಮೆ ಅವರು ತಮ್ಮ ಹಿಂದೆ ಬಿಟ್ಟು ಹೋಗುವ ಕೃತಿಗಳಿಗಿಂತಲೂ ಹಿರಿದಾದುದು. ಆಚಾರ್ಯ ಶ್ರೀಕಂಠಯ್ಯನವರ ವಿಚಾರದಲ್ಲಿ ಅದು ಬಹಳ ಸತ್ಯವೆಂದು ನನ್ನ ಭಾವನೆ. ಅವರು ಸಂಕಲ್ಪಿಸಿದ್ದ ಕೃತಿಗಳನ್ನು ಅವರು ಕೈಗೂಡಿಸಿರುವ ಕೃತಿಗಳಿಗೆ ಹೋಲಿಸಿದರೆ ಆ ಮಾತು ಮತ್ತೂ ಅರ್ಥವತ್ತಾಗುತ್ತದೆ.

ಷೇಕ್ಸ್ಪಿಯರ್ ನಾಟಕಗಳನ್ನೆಲ್ಲ ಕನ್ನಡಕ್ಕೆ ಇಳಿಸಬೇಕು ; ಗ್ರೀಕ್ ನಾಟಕಗಳನ್ನು ಭಾಷಾಂತರಿಸಬೇಕು ; ಕರ್ಣಾಟಕವನ್ನು ಮತ್ತೆ ಕೂಡಿಸಬೇಕು ; ಕರ್ಣಾಟಕಕ್ಕೊಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕು ; ಕನ್ನಡ ಎಲ್ಲೆಲ್ಲಿಯೂ ವೈಭವದಿಂದ ಮೆರೆಯಬೇಕು ; ಅದಕ್ಕೆ ಎಲ್ಲರ ಮನ್ನಣೆಯೂ ದೊರೆಯುವಂತಾಗಬೇಕು— ಒಂದೇ ? ಎರಡೇ ? ಮೂರೇ ? ಈ ಹೊಂಗನಸುಗಳು, ಈ ಹೆಗ್ಗನಸುಗಳು ? ನೂರಾರು ! ಆದರೇನು ? ಮೂರಕ್ಕಾಶಿಸಿ ಮೂರನ್ನು ಪಡೆದವನಿಗಿಂತ ನೂರಕ್ಕಾಶಿಸಿ ಆರನ್ನೇ ಪಡೆಯುವಾತನು ಹಿರಿಯನೆ ದಿಟ !

ಯಾರು ಬಲ್ಲರು ? ಈಡೇರದ ಸಂಕಲ್ಪಗಳನ್ನು ಈಡೇರಿಸುವುದಕ್ಕೆ ಮತ್ತೊಮ್ಮೆ ....ಅದನ್ನೇಕೆ ಬಾಯಿಬಿಟ್ಟಾಡಬೇಕು ಈ ಸಮಯದಲ್ಲಿ ! ಲೋಕಲೋಕಾಂತರಗಳಲ್ಲಿ ಆ ಜೀವಕ್ಕೆ ಹಾದಿ ಸುಗಮವಾಗಲೆಂದು ಈಶೋಪನಿಷತ್ತಿನ ಮಂತ್ರಗಳಲ್ಲಿ ಪ್ರಾರ್ಥಿಸಿ, ಈ ಭಾಷಣವನ್ನು ಪೂರೈಸುತ್ತೇನೆ :

ವಾಯುರನಿಲಮಮೃತಮಥೇದಂ ಭಸ್ಮಾನ್ತಂ ಶರೀರಮ್ ।
ಓಂ ಕ್ರತೋ ಸ್ಮರ, ಕೃತಂ ಸ್ಮರ ; ಕ್ರತೋ ಸ್ಮರ, ಕೃತಂ ಸ್ಮರ ॥
ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್
ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜುಹುರಾಣಮೇನೋ
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥

ಓಂ ಶಾಂತಿಃ

* * *

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

## ಪರೋಕ್ಷ ಪ್ರೇರಣೆ *

೧೯೨೪ನೆಯ ಮೇ ೮ನೆಯ ಗುರುವಾರ ಮತ್ತೂ ಒಂದು ಕಾರಣಕ್ಕಾಗಿ ವಿಶೇಷ ಗಮನಾರ್ಹವಾಗಿದೆ. ದಿನಚರಿಯಲ್ಲಿ ಉಕ್ತವಾಗಿರುವಂತೆ ಅಂದು ಇಂಗ್ಲಾದಿಯಲ್ಲಿ ಒಂದು ಹಳೆಯ 'ಅರ್ಥಸಾಧಕ ಪತ್ರಿಕೆ'ಯಲ್ಲಿ ಮೊತ್ತಮೊದಲು ನಾನು ಕನ್ನಡಕ್ಕೆ ಭಾಷಾಂತರವಾಗಿದ್ದ ಇಂಗ್ಲಿಷ್ ಕವನವನ್ನು ಸಂದರ್ಶಿಸಿದೆ. ದಿನಚರಿಯಲ್ಲಿ ಹೇಳಿರುವಂತೆ ಅದು ಚಾರಲ್ಸ್ ಲ್ಯಾಂಬ್‌ನ "The Old Familiar Faces." ಅಂದು ನನಗೆ ಆ ಪತ್ರಿಕೆಯ ವಿಚಾರವಾಗಲಿ, ಅದರ ಸಂಪಾದಕರು ಯಾರು ಏನು ಎಂಬುದಾಗಲಿ, ಆ ಭಾವಗೀತೆಯ ಭಾಷಾಂತರಕಾರರು ಯಾರು ಎಂಬುದಾಗಲಿ ಸ್ವಲ್ಪವೂ ಗೊತ್ತಿರಲಿಲ್ಲ. ಕನ್ನಡ ಸಾಹಿತ್ಯ ಲೋಕದಲ್ಲಿ ಏನೇನು ಚಳುವಳಿ ಪ್ರಯತ್ನಗಳು ನಡೆಯುತ್ತಿದ್ದುವು ಎಂಬುದಕ್ಕೂ ನನಗೂ ಸಂಬಂಧವೇ ಇರಲಿಲ್ಲ. ಯಾವ ಕನ್ನಡ ಸಾಹಿತಿಯ ಪರಿಚಯವೂ ಇರಲಿಲ್ಲ. ಅವರ ಹೆಸರುಗಳನ್ನು ಕೂಡ ಕೇಳುವ ಗೋಜಿಗೆ ಹೋಗಿರಲಿಲ್ಲ. ನನ್ನ ಬದುಕಿನ ಹೊಳೆ ಕನ್ನಡ ಸಾಹಿತ್ಯದ ನವೋದಯದ ನದಿಗೆ ಬಹು ದೂರದಲ್ಲಿಯೆ ಹರಿಯುತ್ತಿತ್ತು. ಅದನ್ನು ಸಮೀಪಿಸಿಯೂ ಇರಲಿಲ್ಲ. ಒಂದು ಅರ್ಥದಲ್ಲಿ ನಾನು ಸಾಹಿತ್ಯದ ದಿಕ್ಕಿನಿಂದ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಲಿಲ್ಲ. ಕಾಲೇಜಿಗೆ ಸೇರಿದ ಮೇಲೆಯೆ ಕನ್ನಡದ ಕಡೆಗೆ ನನ್ನ ಗಮನ ಮತ್ತು ಅಭಿಮಾನ ತಿರುಗಿದ್ದು. (ಆದರೆ ಅಂದು ಕನ್ನಡಕ್ಕೆ ಅಷ್ಟು ಸೊಗಸಾಗಿ ಅನುವಾದಗೊಂಡ ಆ ಇಂಗ್ಲಿಷ್ ಭಾವಗೀತೆಯನ್ನು ಓದಿ ನಾನು ಬಹುವಾಗಿ ಹಿಗ್ಗಿರಬೇಕು. ಬಹುಶಃ ಅದರಿಂದಲೆ ಪ್ರಚೋದಿತನಾಗಿ, ಮರುದಿನದ ಮೇ ೯ನೆಯ ತಾರೀಖಿನ ದಿನಚರಿಯಲ್ಲಿ ಬರೆದಿರುವಂತೆ, ಕನ್ನಡದಲ್ಲಿ 'ಕವಿಗಳು' ಎಂಬ ಕವನ ರಚನೆ ಮಾಡಿದೆನೆಂದು ತೋರುತ್ತದೆ. ಆ ಪದ್ಯ ಎಲ್ಲಿ ಹೋಯಿತೊ ಏನೊ, ಹುಡುಕುತ್ತೇನೆ. ಪತ್ತೆಯಾದರೆ ಕೊಡುತ್ತೇನೆ.) ಅದನ್ನು ಅನುವಾದಿಸಿದವರು ಮುಂದೆ ಕಾಲೇಜಿನಲ್ಲಿ ನನಗೆ ಪ್ರೊಫೆಸರ್, ಅದರಲ್ಲಿಯೂ ಇಂಗ್ಲಿಷ್ ಭಾಷಾ ಪ್ರೊಫೆಸರ್ ಆಗಲಿರುವ ಬಿ.ಎಂ. ಶ್ರೀಕಂಠಯ್ಯನವರು ಎಂಬುದೂ, ಆ 'ಅರ್ಥಸಾಧಕ ಪತ್ರಿಕೆ'ಯನ್ನು ಹೊರಡಿಸುತ್ತಿದ್ದ ಅದರ ಸಂಪಾದಕರು ಡಿ.ವಿ. ಗುಂಡಪ್ಪನವರು ಎಂಬುದೂ ಎಷ್ಟೋ ಕಾಲದ ಮೇಲೆ ತಿಳಿಯಿತು. "ಹಳೆಯ ಪಳಕೆಯ ಮುಖಗಳು"— ಶೀರ್ಷಿಕೆಯ ಅನುವಾದವೂ ಎಷ್ಟು ಸರಳ ಸುಂದರ :

---

* ಇಲ್ಲಿಂದ ಮುಂದಿನ ಭಾಗಗಳನ್ನು 'ನೆನಪಿನ ದೋಣಿಯಲ್ಲಿ' ಗ್ರಂಥದಿಂದ ಆಯ್ದುಕೊಳ್ಳಲಾಗಿದೆ.

ಕಂದ ಬಿದ್ದೆಯ ಎಂದು ಮುದ್ದಿಸಿ ನನಗೆ ಮರುಗುವರಿದ್ದರು
ಅಂದಿನೋದಿನ ಸುಖದ ದಿನದಲಿ ಜತೆಗೆ ಕುಣಿಯುವರಿದ್ದರು
ಎಲ್ಲ, ಎಲ್ಲಾ ಮಾಯವಾದುವು ಹಳೆಯ ಪಳಕೆಯ ಮುಖಗಳು....

ಈ ಅರ್ಥದಲ್ಲಿ ನನ್ನನ್ನು ಕನ್ನಡದ ಕಡೆಗೆ ತಿರುಗುವಂತೆ ಪರೋಕ್ಷವಾಗಿ ಪ್ರೇರಿಸಿದವರು ಬಿ.ಎಂ. ಶ್ರೀಯವರೆಂದು ಹೇಳಬಹುದು, ಮುಂದೆ ಪ್ರತ್ಯಕ್ಷವಾಗಿ ಆ ಕೆಲಸ ಮಾಡಿದವರು ಜೇಮ್ಸ್ ಎಚ್. ಕಸಿನ್ಸ್ ಮಹಾಶಯರಾದರೂ !

* * *

## ಯೂನಿಯನ್ನಿನ ಅಧ್ಯಕ್ಷರು

ಆಗ ಯೂನಿಯನ್ನಿನ ಅಧ್ಯಕ್ಷರಾಗಿದ್ದವರು ಪ್ರೊ. ಬಿ.ಎಂ. ಶ್ರೀಕಂಠಯ್ಯನವರು: ಇಂಗ್ಲಿಷಿನಲ್ಲಲ್ಲದೆ ಕನ್ನಡದಲ್ಲಿ ಮಾತನಾಡಲಾಗಲಿ ಭಾಷಣ ಮಾಡಲಾಗಲಿ ಎಂದಿಗೂ ಒಪ್ಪದಿರುತ್ತಿದ್ದ ಮಡಿವಂತಿಕೆಯ ಕಾಲವಾಗಿತ್ತು ಆಗ ಅವರದು! ಜೊತೆಗೆ ಅವರ ರಾಜಭಕ್ತಿಗೂ ರಾಜನಿಷ್ಠೆಗೂ ಮೇರೆಯಿರಲಿಲ್ಲ ! ಮೈಸೂರು ಸಂಸ್ಥಾನದ ಕೀರ್ತಿಗೆ ಮಾಡಿದ ಅವಮಾನ ಮಹಾರಾಜರಿಗೇ ಮಾಡಿದ ಅವಮಾನವಾಗಿತ್ತು ಅವರ ಭಾಗಕ್ಕೆ. ಇಂಗ್ಲೆಂಡಿನ ಜನಮನದಲ್ಲಿ ಮೈಸೂರಿಗಿದ್ದ ಸ್ಥಾನ 'ಸೊನ್ನೆ' ಎಂಬ ಹೇಳಿಕೆಯಂತೂ ರಾಜನಿಂದೆಗೇ ಸಮಾನವಾಗಿ, ರಾಜದ್ರೋಹವೇ ಆಗಿತ್ತು ಅವರ ದೃಷ್ಟಿಯಲ್ಲಿ ! ತಮ್ಮಂತಹ ರಾಜಸೇವಾಸಕ್ತರು ಅಧ್ಯಕ್ಷರಾಗಿದ್ದ ಯೂನಿಯನ್ ಏರ್ಪಡಿಸಿದ್ದ ಭಾಷಣದಲ್ಲಿ ಇಂತಹ ರಾಜನಿಂದಾ ಸದೃಶವಾದ ವ್ಯಾಪಾರ ನಡೆದದ್ದು ಅವರಿಗೆ ವೈಯಕ್ತಿಕ ಆಘಾತವಾದಂತಿತ್ತು. ಯಾರು ಲೇಖನ ಕಳಿಸಿದವರು ? ಎಂದು ಪತ್ತೆ ಹಚ್ಚಲು ಪ್ರಯತ್ನಪಟ್ಟುದೆಲ್ಲ ವ್ಯರ್ಥವಾಯಿತು. 'ಕಿಶೋರಚಂದ್ರವಾಣಿ' ಎಂಬ ಹೆಸರು ಕಾಲೇಜಿನ ಯಾವ ಹಾಜರಿ ರಿಜಿಸ್ಟರಿನಲ್ಲಿಯೂ ದೊರೆಯಲಿಲ್ಲ !....

ಹೀಗೆಯೇ ಮೂರು ನಾಲ್ಕು ದಿನಗಳು ಕಳೆದವು. ಅಷ್ಟರಲ್ಲಿ ನನ್ನ ಇಬ್ಬರು ಮೂವರು ಬಹಳ ಹತ್ತಿರದ ಗೆಳೆಯರಿಗೆ ಲೇಖನ ಬರೆದವನು ನಾನೇ ಎಂಬ ಗುಟ್ಟು ಗೊತ್ತಾಗಿ, ಒಂದು ದಿನ ಅಂಗಲಾಚಿ ಬೇಡಿಕೊಂಡರು : 'ಡಿಸೋಜ ಅವರಿಗೆ ತುಂಬ ಮನಸ್ಸು ನೊಂದು ಕಾತರವಾಗಿದ್ದಾರೆ. ಲೇಖನ ಬರೆದವನು ನಾನೇ ಎಂದು ನೀವೇ ಹೋಗಿ ಹೇಳಿಬಿಡಿ' ಎಂದರು.

ಅಲ್ಲದೆ ಪ್ರೊ. ಡಿಸೋಜ ಅವರು ಪಾಠ ಹೇಳುತ್ತಿದ್ದ ವಿಷಯವನ್ನೇ ಐಚ್ಛಿಕವಾಗಿ ಆರಿಸಿಕೊಂಡು ಅವರ ಮೆಚ್ಚಿನ ವಿದ್ಯಾರ್ಥಿಯೂ ಆಗಿದ್ದ ಆ ಮಿತ್ರರು ನನ್ನನು ಅವರ ಕೊಠಡಿಗೆ ಕರೆದೊಯ್ದು ಪರಿಚಯ ಮಾಡಿಸಿದರು.

ಆಗಲೇ ನನ್ನ ಹೆಸರಿನ ಪರಿಚಯವಿದ್ದ ಅವರು ನನ್ನನ್ನು ವಿಶ್ವಾಸದಿಂದ ಬರಮಾಡಿಕೊಂಡು ಪಕ್ಕದಲ್ಲಿದ್ದ ಕುರ್ಚಿ ತೋರಿ ಕುಳಿತುಕೊಂಡರು. ಲೇಖನವನ್ನು 'ಕಿಶೋರಚಂದ್ರವಾಣಿ'ಯ ಹೆಸರಿನಲ್ಲಿ ಬರೆದವನು ನಾನೆ ಎಂದು ತಿಳಿದು ಅದರ ಭಾಷೆಯ ಮತ್ತು ರೀತಿಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ಆ ಲೇಖನದಲ್ಲಿ ಉದ್ಧರಿಸಿದ್ದ ಕವನ ಪಂಕ್ತಿಗಳು ನನ್ನ ರಚನೆಗಳೆ ಎಂದು ತಿಳಿದ ಮೇಲೆ ತುಂಬ ಹೊಗಳಿದರು. ಆ ಲೇಖನದಲ್ಲಿ ನಿಂದಾತ್ಮಕವಾದುದು ಏನೂ ಇಲ್ಲ ಎಂಬುದನ್ನೂ ಒಪ್ಪಿದರು. 'Cipher' ಎಂದು ತಾವು ಉತ್ತರ ಕೊಟ್ಟುದರಲ್ಲಿ ಯಾವ ತಾತ್ಸಾರ ಭಾವವೂ ಇರಲಿಲ್ಲವೆಂದೂ, ಪ್ರಶ್ನೆ ಕೇಳಿದವರನ್ನು ಅವಮಾನಗೊಳಿಸುವ ಉದ್ದೇಶ ತಮ್ಮದಲ್ಲವೆಂದೂ, ದೀರ್ಘಕಾಲ ಭಾಷಣ ಮಾಡಿದ ಅನಂತರ ಆಯಾಸವಾಗಿತ್ತಾಗಿಯೂ ಮತ್ತು ಭಾಷಣವನ್ನೆಲ್ಲ ಉದ್ದಕ್ಕೂ ಲಘುವಾಗಿ, ವಿನೋದಕರವಾಗಿ, ವಿದ್ಯಾರ್ಥಿಗಳನ್ನು ನಗಿಸಿ ಉಲ್ಲಾಸಗೊಳಿಸುವ ದೃಷ್ಟಿಯಿಂದಲೆ ಮಾಡಿದ್ದು, ತುದಿಯಲ್ಲಿ ಕೇಳಿದ ಪ್ರಶ್ನೆಗಳಿಗೂ ಅದೇ ರೀತಿಯ ಉತ್ತರ ಕೊಟ್ಟುದಾಗಿಯೂ ತಮ್ಮ ನಿಲುವನ್ನು ವಿವರಿಸಿದರು.

"ನನ್ನ ಲೇಖನವನ್ನು ಆತ ಅಗ್ರಲೇಖನವನ್ನಾಗಿ ಪ್ರಕಟಿಸುತ್ತಾನೆಂದು ನಾನು ತಿಳಿದಿರಲಿಲ್ಲ. ಅಲ್ಲದೆ ಮಧ್ಯೆ ಮಧ್ಯೆ 'ಬ್ರೇವೊ, ಲ್ಯಾಡ್!' ಎಂದು ಮುಂತಾದ ತನ್ನವೇ ಟೀಕೆ ಟಿಪ್ಪಣಿಗಳನ್ನು ಸೇರಿಸಿ ಭಾಷೆ ಭಾವಗಳಿಗೆ 'ಹುಳಿ' ಹಿಂಡಿಬಿಟ್ಟಿದ್ದಾನೆ. ಆ ಲೇಖನದಿಂದ ತಮಗೆ ತೊಂದರೆಯಾಗುತ್ತದೆಂದು ನಾನು ಕನಸಿನಲ್ಲಿಯೂ ಭಾವಿಸಿರಲಿಲ್ಲ ಅಂದಮೇಲೆ ತೊಂದರೆ ತರುವ ಉದ್ದೇಶ ಎಲ್ಲಿ ಬಂತು ?....

"ನನಗೆ ಆಯಾಸವಾಗಿದ್ದರಿಂದ ಚುಟುಕದಲ್ಲಿಯೇ ಮುಗಿಸುವ ಉದ್ದೇಶದಿಂದ ಹಾಗೆ ಹೇಳಿಬಿಟ್ಟೆ. ಭಾಷಣ ಮುಗಿದ ಮೇಲೆ ನೀವು ನನ್ನನ್ನು ವಿಚಾರಿಸಿದ್ದರೆ ಸಾವಧಾನವಾಗಿ ವಿವರಿಸುತ್ತಿದ್ದೆ. ಈಗೇನು ಮಾಡುವುದು ? ಆದದ್ದು ಆಗಿಹೋಯಿತು. ಸಂಘದ ಅಧ್ಯಕ್ಷರಾಗಿರುವ ಪ್ರೊ. ಬಿ.ಎಂ. ಶ್ರೀಕಂಠಯ್ಯನವರು ನೊಂದುಕೊಂಡಿದ್ದಾರೆ. ವಿಷಯ ಅರಮನೆಯವರಿಗೂ ಮುಟ್ಟಿ ಸ್ವಲ್ಪ ಗೊಂದಲ ಎಬ್ಬಿಸಿದೆಯಂತೆ! ಅವರಲ್ಲಿಗೆ ನಿಮ್ಮನ್ನು ಕರೆದೊಯ್ದು ಪರಿಚಯಿಸುತ್ತೇನೆ. ಅವರು ಹೇಳುವಂತೆ ಮಾಡಿ, ದಯವಿಟ್ಟು...." ಎಂದು ಪ್ರೊ. ಡಿಸೋಜ ಅವರು ನನ್ನೊಡನೆ ಬಂದು ಅಲ್ಲಿಯೆ ಪಕ್ಕದಲ್ಲಿದ್ದ ಬಿ.ಎಂ.ಶ್ರೀ ಅವರ ಕೊಠಡಿಗೆ ಪ್ರವೇಶಿಸಿ, ನನ್ನ ಪರಿಚಯ ಹೇಳಿ ವಿಷಯವೆಲ್ಲವನ್ನೂ ವಿವರವಾಗಿ ತಿಳಿಸಿದರು. ಬಿ.ಎಂ.ಶ್ರೀ ನನ್ನನ್ನು ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳಹೇಳಿದರು ; ಡಿಸೋಜ ತಮ್ಮ ಕೊಠಡಿಗೆ ಹಿಂತಿರುಗಿದರು.

ಬಿ.ಎಂ.ಶ್ರೀಯವರು ಆಗ ತುಂಬ ಬಿಗುಮಾನದ ವ್ಯಕ್ತಿಯಾಗಿದ್ದರೆಂದು ನನ್ನ ಭಾವನೆ. ವೇಷ ಭೂಷಣ ಮಾತುಕತೆ ಎಲ್ಲದರಲ್ಲಿಯೂ ಭಾರತೀಯತ್ವಕ್ಕಿಂತಲೂ

ಆಂಗ್ಲೇಯತ್ವವೆ ಅವರ ವ್ಯಕ್ತಿತ್ವದ ಹೊರಭಂಗಿಯಾಗಿತ್ತು. ಸಾರ್ವಜನಿಕ ವೇದಿಕೆಯಲ್ಲಾಗಲಿ ಕಾಲೇಜಿನ ಸಂಘಸಂಸ್ಥೆಗಳಲ್ಲಾಗಲಿ ಕಡೆಗೆ ಕಾಲೇಜು ವಿದ್ಯಾರ್ಥಿಗಳೊಡನೆಯೆ ಆಗಲಿ ಕನ್ನಡದಲ್ಲಿ ಮಾತನಾಡಿ ವ್ಯವಹರಿಸುವುದು ತಮ್ಮ ಅಂತಸ್ತಿಗೆ ತಕ್ಕುದಲ್ಲವೆಂಬಂತೆ ವರ್ತಿಸುತ್ತಿದ್ದರು. ಮುಂದೆ ಕೆಲವು ವರ್ಷಗಳಲ್ಲಿಯೆ ಅವರು ಕನ್ನಡದ ಕಣ್ವರಾದ ಮೇಲೆ ಎಷ್ಟು ತೆರೆದ ಹೃದಯರಾದರೋ ಎಷ್ಟು ಸರಳ ಮನಸ್ಕರಾದರೋ ಎಷ್ಟು ಸಾಮಾನ್ಯರೊಡನೆ ಸಾಮಾನ್ಯರಾಗಿ ಹೊಕ್ಕು ಬಳಸಲು ಕಲಿತರೋ ಅಷ್ಟೂ ತದ್ವಿರುದ್ಧವಾಗಿ ತೋರುತ್ತಿದ್ದರು ಆಗ !

ಅವರೂ ನನ್ನ ಲೇಖನದ ಭಾಷೆ, ಭಾವ, ಅಲ್ಲಿ ಉದ್‌ಧೃತವಾಗಿದ್ದ ಕವನ ಭಾಗಗಳು ಇವುಗಳನ್ನೆಲ್ಲ ಮೆಚ್ಚಿದರು : "ಸರಕಾರದ ಅಧಿಕಾರಿಗಳಾಗಿರುವ ಒಬ್ಬ ಪ್ರಾಧ್ಯಾಪಕರು ಸಂಸ್ಥಾನದ ಹೆಸರಿಗೆ ಅವಹೇಳನವಾಗುವಂತೆ ಮಾತನಾಡಿದ್ದಾರೆ ಎಂಬ ಭಾವನೆ ಬರುವಂತೆ ಮಾಡಿಬಿಟ್ಟಿದ್ದಾನೆ ಆ ಸಂಪಾದಕ. ಅದಕ್ಕೆ ನೀವೇ ಒಂದು ಪತ್ರ ಬರೆಯಬೇಕು ಆತನಿಗೆ" ಎಂದು ಹೇಳಿ ಕಾಗದ ಲೇಖನಿಗಳನ್ನು ನನ್ನ ಮುಂದಿಟ್ಟರು.

"ಏನು ಬರೆಯಬೇಕೋ ನನಗೆ ತಿಳಿಯುವುದಿಲ್ಲ. ನೀವು ಹೇಳಿದಂತೆ ಬರೆಯುತ್ತೇನೆ" ಎಂದೆ.

ಅವರು ಹೇಳತೊಡಗಿದರು ; ನಾನು ಬರೆಯತೊಡಗಿದೆ. ಆದರೆ ಒಂದೆರಡು ವಾಕ್ಯಗಳಲ್ಲಿಯೇ ಹೇಳುವುದನ್ನು ನಿಲ್ಲಿಸಿ, ನನ್ನ ಕೈಯಿಂದ ಕಾಗದ ಲೇಖನಿಗಳನ್ನು ವಾಪಸ್ಸು ತೆಗೆದುಕೊಂಡು ಅವರೇ ಬರೆದರು.

ಅವರು ಬರೆದುಕೊಟ್ಟದ್ದನ್ನು ನಾನು ಓದಿದೆ. ಕೆಲವು ವಾಕ್ಯಗಳನ್ನು ಹೊಡೆದು ಹಾಕಲು ಹೇಳಿದೆ. ಆ ವಾಕ್ಯಗಳಲ್ಲಿ ನನ್ನ ಲೇಖನವನ್ನು ಸಂಪಾದಕನು ಅಗ್ರಲೇಖನವನ್ನಾಗಿ ಮಾಡಿಕೊಂಡದ್ದು ತಪ್ಪು ಎಂಬ ಅಭಿಪ್ರಾಯವೂ, ಅದಕ್ಕಾಗಿ ಅವನ ವರ್ತನೆ ಖಂಡನೀಯ ಎಂಬ ಭಾವನೆಯೂ ಧ್ವನಿಸುವಂತಿತ್ತು.

ಅವರು ಬರೆದುಕೊಟ್ಟದ್ದಕ್ಕೆ ನಾನು ತೆಪ್ಪಗೆ ರುಜು ಹಾಕುತ್ತೇನೆ ಎಂಬುದು ಅವರ ಭಾವನೆಯಾಗಿತ್ತೆಂದು ತೋರುತ್ತದೆ. ಯಾವಾಗ ನಾನು ಹಾಗೆ ಮಾಡಲು ಒಪ್ಪಲಿಲ್ಲವೋ ಅವರ ಅಭಿಮಾನ ತುಸು ಕೆರಳಿದಂತಾಯ್ತು, ಈಗತಾನೆ ಕಾಲೇಜು ಪ್ರವೇಶಿಸಿರುವ ಈ ಹುಡುಗ ಹಲವು ವರ್ಷಗಳ ಪ್ರಾಧ್ಯಾಪಕನಾಗಿ ವಿಶ್ವವಿದ್ಯಾನಿಲಯದಲ್ಲಿ ಸುಪ್ರತಿಷ್ಠಿತ ಸ್ಥಾನ ಸಂಪಾದನೆ ಮಾಡಿರುವ ತಮಗೆ ಸಲಹೆ ಕೊಡಲು ಬರುತ್ತಿದ್ದಾನಲ್ಲಾ ಎಂದು ! ಅವರು ಬರೆದಿದ್ದ ಆ ಪತ್ರವನ್ನು ನನ್ನ ಕೈಯಿಂದ ವಾಪಸು ತೆಗೆದುಕೊಂಡು, 'ಹೋಗಲಿ ಬಿಡಿ, ನಾನೇ ಸಂಘದ ಅಧ್ಯಕ್ಷನಾಗಿ ಸಂಪಾದಕನಿಗೆ

ಬರೆಯುತ್ತೇನೆ' ಎಂದು ಇಂಗ್ಲಿಷಿನಲ್ಲಿಯೇ ಹೇಳಿದರು. ನಾನು ಎದ್ದು ನಮಸ್ಕಾರ ಹೇಳಿ ಹೊರಗೆ ಬಂದೆ.

* * *

## ರಿಜಿಸ್ಟ್ರಾರ್

ಆ ಸ್ಥಾನಕ್ಕೆ ಆ ವರ್ಷ ಕನ್ನಡ ಎಂ.ಎ. ಪಾಸು ಮಾಡಿದ್ದ ಯಾರು ಯಾರು ಅರ್ಜಿ ಸಲ್ಲಿಸಿದ್ದರೊ ನನಗೆ ತಿಳಿಯದು. ನಾನಂತೂ ಆ ವಿಚಾರವಾಗಿ ಯಾರ ಮನೆ ಮೆಟ್ಟಿಲನ್ನೂ ಹತ್ತಲಿಲ್ಲ; ಯಾರಿಂದಲೂ ಸಿಫಾರಸು ಮಾಡಿಸುವ ಗೋಜಿಗೆ ಹೋಗ ಲಿಲ್ಲ. ಫಲಿತಾಂಶದ ಕಡೆಗೂ ಇನಿತೂ ಗಮನವಿಲ್ಲದೆ 'ದಿವ್ಯ ನಿರ್ಲಕ್ಷತೆ'ಯಿಂದಿದ್ದು ಬಿಟ್ಟಿದ್ದೆ. ಆದರೂ ಇಂಟರ್‌ಮಿಡಿಯಟ್ ಕಾಲೇಜಿನ (ಈಗಿನ ಯುವರಾಜಾ ಕಾಲೇಜು) ಕನ್ನಡ ಲೆಕ್ಚರರ್ ಆಗಿ ಅಪಾಯಿಂಟ್‌ಮೆಂಟ್ ಆರ್ಡರ್ ನನ್ನ ಕೈಸೇರಿತು, ತಿಂಗಳಿಗೆ ೧೦೦ ರೂ. ಸಂಬಳದ ಮೇಲೆ!

.... ಸಾಧಾರಣವಾಗಿ ಕನ್ನಡದವರನ್ನು 'ಪಂಡಿತ' ನಾಮಕ ಪಟ್ಟಿಯಲ್ಲಿಟ್ಟು ತಿಂಗಳಿಗೆ ೭೫ ರೂ. ಮೇಲೆಯೇ ನೇಮಿಸುತ್ತಿದ್ದುದು ರೂಢಿ. ನನ್ನನ್ನು ಲೆಕ್ಚರರ್ ಎಂದು ಕರೆದು ನೂರು ರೂಪಾಯಿಯ ಮೇಲೆ ನೇಮಿಸಿದ್ದರು.

.... ಬಿ.ಎಂ.ಶ್ರೀ ರಿಜಿಸ್ಟ್ರಾರ್ ಆಗಿದ್ದುದು. ಅವರಿಗೆ ನನ್ನ ಸಾಹಿತ್ಯಕ ಪ್ರತಿಭೆ ಚೆನ್ನಾಗಿ ತಿಳಿದಿತ್ತು. ಅವರು ಸರಳರಗಳೆಯಲ್ಲಿ 'ಅಶ್ವತ್ಥಾಮನ್' ಬರೆಯುವುದಕ್ಕೆ ಬಹು ಮುನ್ನವೇ ನಾನು 'ಜಲಗಾರ', 'ಯಮನ ಸೋಲು', 'ಮಹಾರಾತ್ರಿ', 'ಬಿರುಗಾಳಿ' ಗಳನ್ನು ಬರೆದಿದ್ದು, ಬಹುಶಃ ಅವರಿಗೂ ನನ್ನ ಪ್ರಯೋಗವೇ ಪ್ರೇರಣೆಯಾಗಿದ್ದರೂ ಇರಬಹುದು. ನನ್ನ ಆ ನಾಟಕಗಳು ಮಹಾರಾಜಾ ಕಾಲೇಜಿನ ಅಂಗಳದಲ್ಲಿ ಅಭಿನಯಿ ಸಲ್ಪಟ್ಟಾಗ ಎಷ್ಟೋ ಸಾರಿ ಅವರೇ ಅಧ್ಯಕ್ಷತೆ ವಹಿಸಿ ಅವುಗಳನ್ನು ತುಂಬ ಮೆಚ್ಚಿ ಹೊಗಳಿ ಹರಸಿದ್ದರು. ಅಲ್ಲದೆ ನನ್ನ ಮೊದಲ ಕವನಸಂಗ್ರಹ 'ಕೊಳಲು' ಅವರಿಂದಲೆ ಮುನ್ನುಡಿಯ ಆಶೀರ್ವಾದ ಪಡೆದಿತ್ತು. ನನ್ನಿಂದ ಕನ್ನಡ ಸಾಹಿತ್ಯಕ್ಕೆ ಮಹೋನ್ನತ ಸೇವೆ ಒದಗುತ್ತದೆ ಎಂಬ ನಂಬುಗೆ ಅವರಿಗೆ ಮುಂಗಾಣ್ಕೆಯಾಗಿತ್ತೆಂದು ತೋರುತ್ತದೆ. ಆದ್ದರಿಂದಲೇ ಅವರು ರೂಢಿಯ ಸಾಮಾನ್ಯ ನಿಯಮವನ್ನೂ ಬದಿಗೊತ್ತಿ, ಬರಬಹು ದಾದ ಟೀಕೆಗಳಿಗೂ ಸೊಪ್ಪು ಹಾಕದೆ ನನ್ನನ್ನು ೧೦೦ ರೂ. ಸಂಬಳದ ಲೆಕ್ಚರರ್ ಸ್ಥಾನಕ್ಕೆ ನೇಮಿಸಿದ್ದರು.

ನನ್ನ ನೇಮಕದ ಆರ್ಡರನ್ನು ನನಗೆ ಕಳಿಸುವ ಮುನ್ನ ಆಫೀಸಿನ ಮುಖ್ಯ ಕರಣಿಕನು– Superintendent –ಆತ ಜಾತಿ ಬ್ರಾಹ್ಮಣ— ರಿಜಿಸ್ಟ್ರಾರ್ ಬಳಿಗೆ ನೇಮಕಾಜ್ಞೆಯನ್ನು ತೆಗೆದುಕೊಂಡು ಹೋಗಿ, ನಿಯಮ ಭಂಗವಾದದ್ದನ್ನು ತೋರಿಸಿ "ಸಾರ್, ರೂಲ್ಸಿನ ಪ್ರಕಾರ ಎಲ್ಲರನ್ನೂ ತಿಂಗಳಿಗೆ ೭೫ ರೂ. ನಂತೆ ನೇಮಕ ಮಾಡಬೇಕು. ಇವರಿಗೆ ೧೦೦ ರೂಪಾಯಿ ಮಾಡಿಬಿಟ್ಟಿದ್ದೀರಿ. ಆಮೇಲೆ 'ಅಬ್ಜೆಕ್ಷನ್' ಬರುತ್ತೆ...." ಎಂದೆಲ್ಲ ತನ್ನ ಕರ್ತವ್ಯಪ್ರಜ್ಞೆ ಪ್ರದರ್ಶನ ಮಾಡಿದನಂತೆ. ಅದಕ್ಕೆ ಅವರು ಮುಗುಳು ನಗುತ್ತಾ ಹೇಳಿದರಂತೆ : "ಮಿಸ್ಟರ್........ಯ್ಯ, ಎಲ್ಲಿ ಸಿಗುತಾರ್ರಿ ನಿಮಗೆ ಅವರಂಥವರು, ಸಾವಿರ ರೂಪಾಯಿ ಕೊಟ್ಟರೂ ?.... ಇವೊತ್ತೇ ಆರ್ಡರ್ ಕಳಿಸಿಬಿಡಿ, ಆಶ್ರಮಕ್ಕೆ."

*        *        *

## ಕೊನೆಯ ಗುರಿ

೬–೧೧–೧೯೩೨ :

ಬೆಳಿಗ್ಗೆ ಬಿ.ಎಂ.ಶ್ರೀಯವರ ಮನೆಗೆ ಹೋದೆ. ಅವರು ತಮ್ಮ ಹೃದಯದ ತಾಪವನ್ನೆಲ್ಲ ತೋಡಿಕೊಂಡರು. ಕನ್ನಡ ಎಂದರೆ ಅವರಿಗೆ ಪ್ರಾಣ. ಅದರ ಗೆಲವೇ ಅವರ ಜೀವನದ ಕೊನೆಯ ಗುರಿ.



" ಒಂದು ದೊಡ್ಡ ...ಸಂತೋಷವೇನೆಂದರೆ ಪ್ರೌಢಮಾರ್ಗದಲ್ಲಿ ಪರಭಾಷೆಯ ಆಡಂಬರ ಚಮತ್ಕಾರಗಳಿಗೆ ಮಾರಿಹೋಗಿ ಕಬ್ಬಿಣದ ಕಡಲೆಯಾಗಿದ್ದ ನಮ್ಮ ಇಂಪಾದ ತಿರುಳುಕನ್ನಡ ಮತ್ತೆ ಜೀವಗನ್ನಡವಾಗಿ, ಜೀವಗನ್ನಡಿಯಾಗಿ, ಕನ್ನಡನಾಡಿನ ಊರು ಹಳ್ಳಿಗಳಲ್ಲಿ, ಕೇರಿ-ಮನೆಗಳಲ್ಲಿ, ಆಡುವ, ಓಡಾಡುವ, ನಲಿದಾಡುವ ಕನ್ನಡವಾಗುತ್ತಿರುವುದು. ಹಿರಿಯರು ಕಿರಿಯರು, ಹೆಣ್ಣುಮಕ್ಕಳು, ಚಿಕ್ಕಮಕ್ಕಳು, ಓದಿ, ಹೀರಿ, ಹಿಗ್ಗಬಹುದಾದ ಕನ್ನಡವಾಗುತ್ತಿರುವುದು. — ಬಾಳಲಿ ಈ ಬಾಳುಗನ್ನಡ."

— 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', ('ಶ್ರೀಸಾಹಿತ್ಯ'ದಲ್ಲಿ) ಪು. ೩೮೫

ಮಾಸ್ತಿ ವೆಂಕಟೇಶ ಅಯ್ಯಂಗಾರ್

# ಗುರು-ಶಿಷ್ಯ*

ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಬಂದಮೇಲೆ ಇಂಗ್ಲಿಷಿನ ತಾತ್ಪರ್ಯ ಲೇಖನ, ಭಾಷಾಂತರ, ಈ ಪಾಠಗಳು ಅವರ ಪಾಲಿಗೆ ಬಿದ್ದುವು. ಶ್ರೀಕಂಠಯ್ಯನವರು ಇಂಗ್ಲಿಷಿನಲ್ಲಿ ಗಟ್ಟಿಗರೆಂದು ಹೆಸರು ಪಡೆದಿದ್ದವರು. ಆ ವೇಳೆಗೆ ಅವರು ಎಂ.ಎ. ಡಿಗ್ರಿ ಪಡೆದಿದ್ದರು. ಬಿ. ಎಲ್. ಮುಗಿಸಿದ್ದರು ಎಂದು ನನ್ನ ನೆನಪು. ಅವರು ಮೊದಲಿನಿಂದಲೂ ಕನ್ನಡವನ್ನು ಆಸಕ್ತಿಯಿಂದ ಪಾಠ ಮಾಡಿದ್ದರು. ಅದರ ಹಿಂದಿನ ವರ್ಷ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಗೆ ಹೋಗಿದ್ದರು. ಅದರಲ್ಲಿ ಅವರಿಗೆ ಸ್ಥಾನ ದೊರೆಯಲಿಲ್ಲ. ಆ ವೇಳೆಗೆ ಕಾಲೇಜುಗಳಲ್ಲಿ ಕನ್ನಡದಲ್ಲಿ ಶಕ್ತರಾದ ಗ್ರಾಜುಯೇಟ್ ಉಪಾಧ್ಯಾಯರನ್ನು ನೇಮಿಸಬೇಕು ಎನ್ನುವ ಒಂದು ಮನೋಭಾವ ಬೆಳೆದಿತ್ತು. ಶ್ರೀಕಂಠಯ್ಯನವರನ್ನು ಕನ್ನಡದ ಲೆಕ್ಚರರ್ ಆಗಿ ಬನ್ನಿ ಎಂದು ವಿಯರ್ ಸಾಹೇಬರು ಕೇಳಿದರು. ಬರಿಯ ಕನ್ನಡದ ಲೆಕ್ಚರರ್ ಆದರೆ ತಕ್ಕಷ್ಟು ಗೌರವ ಇರುವುದಿಲ್ಲ. ಇಂಗ್ಲಿಷಿಗೂ ಸಂಬಂಧ ಇದ್ದರೆ ಗೌರವ ಹೆಚ್ಚು. ಶ್ರೀಕಂಠಯ್ಯನವರು ತಮ್ಮ ಸ್ಥಾನಕ್ಕೆ Lecturer in English and Kannada ಎಂದು ಹೆಸರು ಕೊಡುವುದಾದರೆ ಬರುತ್ತೇನೆ ಎಂದರು. ವಿಯರ್ ಸಾಹೇಬರು ಒಪ್ಪಿದರು. ಉಪಾಧ್ಯಾಯರಾಗಿ ಬಂದು ಶ್ರೀಕಂಠಯ್ಯನವರು ಕೆಲವು ಇಂಗ್ಲಿಷ್ ಕೆಲವು ಕನ್ನಡ ಪಾಠಗಳನ್ನು ಹೇಳಲು ತೊಡಗಿದರು.

ಇವರ ನನ್ನ ಗುರು ಶಿಷ್ಯ ಸಂಬಂಧದ ಎರಡು ಮಾತನ್ನು ಇಲ್ಲಿ ಹೇಳಬೇಕು.

ಒಂದು ದಿನ ಒಂದು ಪಾಠದಲ್ಲಿ ಇವರು ವರ್ಡ್ಸ್‌ವರ್ತ್ ಕವಿಯ ಹದಿನಾಲ್ಕು ಸಾಲಿನ ಒಂದು ಪದ್ಯವನ್ನು ಭಾಷಾಂತರಕ್ಕೆ ಕೊಟ್ಟರು. ಎಲ್ಲರಲ್ಲಿಯೂ ಪದ್ಯದ ಪ್ರತಿ ಇರುವುದಿಲ್ಲವಲ್ಲ, ಅವರು ಅದನ್ನು ಸೀಮೆಸುಣ್ಣದಲ್ಲಿ ಹಲಗೆಯ ಮೇಲೆ ಬರೆದರು. ಪುಸ್ತಕವನ್ನು ನೋಡಿಕೊಂಡು ಬರೆಯಲಿಲ್ಲ. ಜ್ಞಾಪಕದಿಂದ ಬರೆದರು. ಬರೆಯುವುದರಲ್ಲಿ ಅಜಾಗ್ರತೆಯಿಂದಲೋ, ಇಲ್ಲ ಪಾಠ ತಪ್ಪಾಗಿದ್ದರಿಂದಲೋ, ಒಂದು ಪಂಕ್ತಿಯಲ್ಲಿ Towers ಎಂಬ ಒಂದು ಪದ ಬಿಟ್ಟುಹೋಗಿತ್ತು. ನಾನು ಆಗಾಗ ಅಭ್ಯಾಸಕ್ಕಾಗಿ

---

* ಈ ಭಾಗಗಳನ್ನು 'ಭಾವ' ಗ್ರಂಥ ಸಂಪುಟಗಳಿಂದ ಆಯ್ದುಕೊಳ್ಳಲಾಗಿದೆ.

ಇಂಗ್ಲಿಷ್ ಪದ್ಯಗಳನ್ನು ಬಾಯಿಪಾಠ ಮಾಡುತ್ತಿದ್ದೆ. ನಾನು ಆ ಮುನ್ನ ಬಾಯಿಪಾಠ ಮಾಡಿದ್ದ ಪದ್ಯಗಳಲ್ಲಿ ಇದೂ ಒಂದಾಗಿತ್ತು. ಉಪಾಧ್ಯಾಯರು ಕುಳಿತ ಮೇಲೆ ನಾನು, "Sir, one word seems to have been left out in one of the lines" ಎಂದೆ. "Which line ?" ಎಂದು ಅವರು ಹಲಗೆಯ ಬಳಿಗೆ ಹೋದರು. ನಾನು ಪಂಕ್ತಿಯ ಗುರುತನ್ನು ಹೇಳಿದೆ. "What is the word left out ?" ಎಂದು ಅವರು ಕೇಳಿದರು. "I think it is the word towers, sir." ಉಪಾಧ್ಯಾಯರು, "That is so" ಎಂದರು. ತಪ್ಪಾದ ಭಾಗವನ್ನು ಒಟ್ಟೆಯಿಂದ ಒರೆಸಿ ಪಂಕ್ತಿಯನ್ನು ಸರಿಯಾಗಿ ಬರೆದರು; "Is any other word left out ?" ಎಂದರು. "I don't think so, sir." ಅವರು ಬಾಯಿಬಿಟ್ಟು ಏನೂ ಹೇಳಲಿಲ್ಲ. ಆದರೆ ಪದ್ಯವನ್ನು ಕಲಿತಿದ್ದೆ ಎನ್ನುವುದು, ಪದ ಬಿಟ್ಟುಹೋಗಿದ್ದುದನ್ನು ಗುರುತಿಸಿದೆ ಎನ್ನುವುದು, ಅವರಿಗೆ ಸಂತೋಷ ಎಂದು ಅವರ ರೀತಿಯಿಂದ ಕಾಣುತ್ತಿತ್ತು.

ಇವರ ಇನ್ನೊಂದು ಪಾಠದ ದಿನ ಒಂದು ಸಂಗತಿ ನಡೆಯಿತು. ಅದು ಆಗ ಹೊಸದಾಗಿ ಏರ್ಪಾಡಾಗಿ ವಾಡಿಕೆ ಬಂದಿದ್ದ Religious class. ಶ್ರೀಕಂಠಯ್ಯನವರು ಯಾವುದೋ ಮಾತನಾಡುತ್ತ ಬಂದು ರಾಮಚಂದ್ರನ ನಡತೆಯನ್ನು ಪ್ರಸ್ತಾಪಿಸಿ, ಅವನು ವಾಲಿಯನ್ನು ಕೊಂದದ್ದು, ಯಾವನೋ ಅಲ್ಪ ಕೆಟ್ಟ ಮಾತನಾಡಿದನೆಂಬ ಕಾರಣದಿಂದ ಹೆಂಡತಿಯನ್ನು ಮನೆಯಿಂದ ಕಾಡಿಗೆ ಅಟ್ಟಿದ್ದು, ತಪ್ಪಾಯಿತು ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಮಾತನ್ನಾಡಿ ಅವರು ಮುಂದಕ್ಕೆ ಹೋಗಿದ್ದರೆ ನಾನು ಸುಮ್ಮನಿರುತ್ತಿದ್ದೆ ಎಂದು ಕಾಣುತ್ತದೆ. ಅವರು ಈ ಮಾತನ್ನಲ್ಲಿಗೆ ಬಿಡಲಿಲ್ಲ. ಸೀತಾದೇವಿಯನ್ನು ಕಾಡಿಗೆ ಅಟ್ಟಿದ ಮಾತನ್ನು ಹಿಡಿದು, "ಇದೊಂದು ದುರಭಿಮಾನದ ನಿಲುವು. Caesar's wife must be above suspicion ಎಂದು ಆಂಗ್ಲ ವಚನ. ರಾಮ ಈ ಅಭಿಪ್ರಾಯದ ಮನುಷ್ಯನಾಗಿದ್ದ" ಎಂದು ಹೇಳಿದರು. ಇದು ನನಗೆ ಸಹಿಸಲಿಲ್ಲ. ಸಾಲದ್ದಕ್ಕೆ ನಾನು ಇಂಥ ಮಾತನ್ನು ಉಪಾಯದ ವಾಕ್ಯಗಳಲ್ಲಿ ಹೇಳಿ ಹಿಂದೂ ಧರ್ಮವನ್ನು ತೆಗಳುತ್ತಿದ್ದ ಮಿಷನರಿಗಳ ಶಾಲೆಯಲ್ಲಿ ಓದಿ ಬಂದಿದ್ದವನು. ಇಂಥ ಜನಕ್ಕೆ ಉತ್ತರ ಹೇಳಬೇಕಾದ ನಮ್ಮ ಹಿರಿಯರು ತಾವೇ ತೆಗಳಿಕೆಯ ಮಾತನ್ನಾಡಿ ನಮ್ಮ ಗೌರವಕ್ಕೆ ಕುಂದು ತರುತ್ತಿದ್ದಾರಲ್ಲಾ ಎಂದು ನನಗೆ ವ್ಯಥೆಯಾಯಿತು. ಬಹಳ ಯೋಚನೆಗೆ ಅವಕಾಶವಿರಲಿಲ್ಲ. ನನಗೆ ಬಹಳ ಯೋಚನೆ ಮಾಡುವ ಮನಸ್ಸೂ ಇರಲಿಲ್ಲ. ನಾನು ಎದ್ದುನಿಂತೆ. ಉಪಾಧ್ಯಾಯರು, "Yes, what is it ?" ಎಂದು ಕೇಳಿದರು.



ನಾನು "I am sorry, sir. I do not think that we are right to sit in judgement upon Rama thus " ಎಂದೆನು.

ಅವರು "Why? Why? it is not wrong to think about these things " ಎಂದರು.

ನಾನು "It may be more the fault of the chronicler than of the hero " ಎಂದೆ.

ಉಪಾಧ್ಯಾಯರು ಯಾವ ಮಾತಿನಿಂದ ಸಮಾಧಾನ ಹೇಳಿದರು, ನನಗೆ ಜ್ಞಾಪಕವಿಲ್ಲ. ಸಮಾಧಾನದ ಮಾತನ್ನು ಆಡಿ ಆ ವಿಷಯವನ್ನು ಬಿಟ್ಟು ಬೇರೆ ಸಂಗತಿಯಿಂದ ಪಾಠವನ್ನು ಮುಂದುವರಿಸಿದರು. ನನ್ನ ಮಾತು ಮುಗಿದೊಡನೆಯೇ ನಾನು ಕುಳಿತೆನು. ಆಮೇಲಿನ ಮಾತೆಲ್ಲ ತೀರ ಉಚಿತವಾಗಿಯೇ ಇತ್ತು.

ಪಾಠ ಮುಗಿದ ಮೇಲೆ ನನ್ನ ಜೊತೆಯ ವಿದ್ಯಾರ್ಥಿಗಳು ನನಗೆ ಮುತ್ತಿಕೊಂಡರು. "ಒಳ್ಳೆಯ ಕೆಲಸ ಮಾಡಿದೆ. ನಾವೂ ಇದನ್ನೇ ಹೇಳಬೇಕು. ಆದರೆ ಎಲ್ಲರಿಗೂ ಧೈರ್ಯ ಇಲ್ಲ " ಎಂದು ನನ್ನನ್ನು ಪ್ರಶಂಸಿಸಿದರು.

ಉಪಾಧ್ಯಾಯರು ಕೋಪಿಸಿಕೊಂಡಿದ್ದಾರೋ ಎಂದು ನನಗೆ ಶಂಕೆ. ಆಗ ನಮ್ಮ ತರಗತಿಯ ಒಂದು ಪರೀಕ್ಷೆಯ ಒಂದು ಪತ್ರಿಕೆಯ ಉತ್ತರಗಳು ಅವರ ಕೈಯಲ್ಲಿದ್ದವು. ಅವರ ಇನ್ನೊಂದು ಪಾಠದ ವೇಳೆ ತರಗತಿಗೆ ಹೋಗುವ ಮುನ್ನ ನಾನು ಹೊರಗಡೆ ನಿಂತಿದ್ದಾಗ ಅವರು ಅತ್ತ ಬಂದರು. ನಾನು ಉಪಾಧ್ಯಾಯರಿಗೆ ಮರ್ಯಾದೆ ತೋರುವ ವಾಡಿಕೆಯ ರೀತಿಯಲ್ಲಿ ಅಡಕವಾಗಿ ಒಂದು ಕಡೆಗೆ ನಿಂತೆ. ಅವರು ತರಗತಿಯ ಒಳಕ್ಕೆ ಹೋಗಲಿಲ್ಲ. ನನ್ನ ಬಳಿಗೆ ಬಂದರು. ಏನು ಹೇಳುವರೋ ಎಂದು ನನ್ನ ಮನಸ್ಸು ಚಿಂತಿಸುವಲ್ಲೆ ಅವರು, "You have done very well in such and such paper. I have given you the highest mark " ಎಂದರು. ನಾನು "Thank you, sir " ಎಂದೆ. ಮನಸ್ಸಿನಲ್ಲಿದ್ದ ಶಂಕೆ ಹರಿಯಿತು.




* * *

## ಹೊಸ ಸಾಹಿತ್ಯ ಕುರಿತು ಚರ್ಚೆ

ಸಾವಿರದ ಒಂಬೈನೂರ ಮೂವತ್ತಮೂರರ ಸುಮಾರಿನಲ್ಲಿ ನಾನು ಹೊಸ ಸಾಹಿತ್ಯವನ್ನು ಕುರಿತು ಅನೇಕ ಆಕ್ಷೇಪಣೆಗಳು ಕೇಳಬರುತ್ತಿರುವಲ್ಲಿ ಶ್ರೀ ವೆಂಕಣ್ಣಯ್ಯನವರು ವಿದ್ಯಾರ್ಥಿಗಳು ಈ ವಿಷಯದಲ್ಲಿ ಬೇರೆ ಬೇರೆ ಅಭಿಪ್ರಾಯಗಳನ್ನು ಕೇಳಿ

ಯೋಚಿಸಲು ಅನುವಾಗಲಿ ಎಂದು ಹೊಸ ಸಾಹಿತ್ಯವನ್ನು ಕುರಿತು ಒಂದು ಚರ್ಚೆಯ ಸಭೆಯನ್ನು ಏರ್ಪಡಿಸಿದರು....ಹೊಸ ಕಾವ್ಯದ ಸಮರ್ಥನೆಗೆ ಶ್ರೀ ಶ್ರೀಕಂಠಯ್ಯ ನವರನ್ನು ಪ್ರಮುಖ ಭಾಷಣಕಾರರನ್ನಾಗಿ ಮಾಡಿದರು. ಪ್ರತಿ ಪಕ್ಷದ ಮುಂದಾಳಾಗಿ ರಲು ಶ್ರೀ ತಾತಾಚಾರ್ಯ ಶರ್ಮರನ್ನು ಒಪ್ಪಿಸಿದರು. ಸಭೆ ಕಾಲೇಜ್ ಕಟ್ಟಡದ ಒಳಅಂಗಳದ ತುಂಬ ತುಂಬಿತ್ತು. ಚರ್ಚೆ ಒಲು ಚೆನ್ನಾಗಿಯೂ ನಡೆಯಿತು. ಶ್ರೀಕಂಠಯ್ಯನವರು ಹೊಸ ಸಾಹಿತ್ಯದಲ್ಲಿ ಗುಣವಿದೆ ಎಂಬುದನ್ನು ತುಂಬ ಸಾಮರ್ಥ್ಯ ದಿಂದ ಪ್ರತಿಪಾದಿಸಿದರು. ಶರ್ಮರವರು ಉತ್ತರ ಹೇಳುತ್ತ ಅಷ್ಟೇ ಚೆನ್ನಾಗಿ ಮಾತ ನಾಡಿದರು. ಆದರೆ ಅವರ ಹೊಸ ರೀತಿಗಳು ಪ್ರಾಸ ಇಲ್ಲದಿರುವುದು ಇತ್ಯಾದಿ ಒಂದು ಅತಿರೇಕಕ್ಕೆ ಹೋಗುತ್ತದೆ ಎಂದು ಅಪ್ಪಣೆ ಕೊಡಿಸಿದರು. ಶ್ರೀಕಂಠಯ್ಯನವರು ಇದು ತಮ್ಮನ್ನು ಕುರಿತು ಹೇಳಿದ ಮಾತು ಎಂದುಕೊಂಡರು. ಮುಖ ಕೆಟ್ಟರು. ವಿನೋದ ಕ್ಕೆಂದು ಏರ್ಪಡಿಸಿದ ಚರ್ಚೆ ಇವರ ಮನಸ್ಸು ನೋಯುವುದಕ್ಕೆ ಕಾರಣ ಆಯಿತು. ಆಮೇಲೆ ಮಾತನಾಡುತ್ತ ಇವರು, "ಪ್ರಾಸ ಇಲ್ಲ ಎನ್ನುವುದೇ ಒಂದು ಅಪರಾಧವೇ ? ಕಾಲ ಮಾರ್ಪಟ್ಟಂತೆ ಅನೇಕ ಸಂಗತಿಯಲ್ಲಿ ಅನೇಕ ವಿವರ ಮಾರ್ಪಡುತ್ತವೆ. ನಮ್ಮ ಇಂದಿನ ವಸ್ತ್ರ ಹಿಂದಿನ ದಿನದ ವಸ್ತ್ರ ಅಲ್ಲವಲ್ಲ ? ಐವತ್ತು ವರ್ಷದ ಹಿಂದೆ ಸಭೆಗೆ ಬರ ಬೇಕಾದರೆ ತಲೆಯಮೇಲೆ ಒಂದು ರುಮಾಲು ಇರುತ್ತಿತ್ತು. ಈಗಿನ ಜನ ಇದು ಅನವಶ್ಯಕ ಎಂದು ಅದನ್ನು ಬಿಟ್ಟಿಲ್ಲವೇ ? ಬರಿಯ ತಲೆಯಲ್ಲಿ ಬರುತ್ತಿಲ್ಲವೇ ?" ಎಂದು ಮುಂತಾಗಿ ಮಾತನಾಡಿದರು. ಮಾತು ತಪ್ಪಲ್ಲ. ರೀತಿಯೂ ತಪ್ಪಲ್ಲ. ತೆಗೆದುಕೊಂಡ ಉದಾಹರಣೆ ತಪ್ಪು ಎಂದು ಕಾಣವಂಥದಾಗಿತ್ತು. ತಾತಾಚಾರ್ಯ ಶರ್ಮರು ಆ ದಿನ ಬರಿಯ ತಲೆಯಲ್ಲಿ ಬಂದಿದ್ದರು. ಶ್ರೀಕಂಠಯ್ಯನವರು ಅವರು ರುಮಾಲು ಟೋಪಿ ಯಾವುದೂ ಇಲ್ಲದೆ ಬಂದಿದ್ದನ್ನು ಆಕ್ಷೇಪಿಸುತ್ತಿದ್ದರೆ ? ಆಕ್ಷೇಪಿಸದಿದ್ದರೂ ಉದಾಹರಣೆ ಯಾಗಿ ತೆಗೆದುಕೊಂಡರೆ ? ಅವರ ಉದ್ದೇಶ ಹೇಗಿದ್ದರೂ ಸಭೆ ಅವರ ಎಲ್ಲ ಮಾತನ್ನೂ ಶರ್ಮರಿಗೆ ಅನ್ವಯಿಸಿ ನಕ್ಕಿತು. ಶರ್ಮರಿಗೆ ಕೋಪ ಬಂದಿತು. ಅವರು ತುಂಬಾ ಅಸಮಾಧಾನಪಟ್ಟರು. ಅಸಮಾಧಾನವನ್ನು ತೋರಿಸಿದರು. ಶ್ರೀಕಂಠಯ್ಯನವರು, "ಇವನು ತಲೆಗೆ ಬಟ್ಟೆ ಇಲ್ಲದ ಮನುಷ್ಯ, ಇವನಿಗೆ ಈ ಸಭೆಗೆ ಬರುವುದಕ್ಕೆ ಯೋಗ್ಯತೆ ಇಲ್ಲ ಎಂದು ಹೇಳಿದರು," ಎಂದು ದುಃಖವನ್ನು ತೋರಿದರು. ಅಧ್ಯಕ್ಷ ಸುಬ್ಬರಾಯರು, "ಇದು ವಿನೋದದ ಚರ್ಚೆ. ಇದನ್ನು ಒಂದು ಕದನ ಮಾಡಬೇಡಿ," ಎಂದು ಸಮಾಧಾನ ಹೇಳಿದರು. ಮತ್ತೆ ಕೆಲವು ಮಾತು ನಡೆದ ಮೇಲೆ ಸುಬ್ಬರಾಯರು ನನ್ನನ್ನು "ನೀವು ಎರಡು ಮಾತನಾಡುತ್ತೀರಾ ?" ಎಂದು ಕೇಳಿದರು. ನಾನು, "ಶರ್ಮರು ಹೇಳಿದ ಮಾತು ಶ್ರೀಕಂಠಯ್ಯನವರ ಪದ್ಯದಲ್ಲಿ ಪ್ರಾಸ ಇಲ್ಲ ಎನ್ನು

ವುದನ್ನು ಕುರಿತ ಮಾತಲ್ಲ. ಒಟ್ಟು ಹೊಸ ರೀತಿಯನ್ನು ಕುರಿತ ಮಾತು. ಶ್ರೀಕಂಠಯ್ಯನವರು ಹೇಳಿದ ಮಾತು ಶರ್ಮರು ತಲೆಗೆ ಬಟ್ಟೆ ಇಲ್ಲದೆ ಬಂದಿದ್ದಾರೆ ಎಂದಲ್ಲ. ಒಂದು ಕಾಲದಲ್ಲಿ ಇದು ತಪ್ಪಾಗುತ್ತಿತ್ತು, ಈಗ ಇದು ತಪ್ಪಲ್ಲ, ಎಂಬ ಅರ್ಥದಲ್ಲಿ ಹೇಳಿದ ಮಾತು. ಶರ್ಮರು ಶ್ರೀಕಂಠಯ್ಯನವರಲ್ಲಿ ಪಾಠ ಕಲಿತ ವಿದ್ಯಾರ್ಥಿ. ಶ್ರೀಕಂಠಯ್ಯನವರು ಶರ್ಮರಿಗೆ ಪಾಠ ಹೇಳಿದ ಗುರು. ಇವರು ಒಬ್ಬರಿಗೊಬ್ಬರು ವ್ಯಕ್ತಿಪರವಾದ ಮಾತುಗಳನ್ನು ಆಡಿಕೊಂಡಾರೇ ? ಆಡಿಕೊಂಡರು ಎಂದು ಇಬ್ಬರಲ್ಲಿ ಯಾರೂ ಯೋಚಿಸುವುದು ಬೇಡ. ಮಾತೆಲ್ಲ ಲೋಕಾಭಿರಾಮವಾಗಿ ಆಡಿದ ಮಾತು, ವ್ಯಕ್ತಿಗಳನ್ನು ಕುರಿತದ್ದಲ್ಲ, ಎಂದು ತಿಳಿಯಬೇಕು ಎಂದು ನನ್ನ ಪ್ರಾರ್ಥನೆ. ಕಾವ್ಯ ಎನ್ನುವುದು ಏನು ? ರಸ ಇದ್ದರೆ ಕಾವ್ಯ. ರಸ ಇಲ್ಲದ ಪ್ರಾಸ ಕಾವ್ಯ ಆಗುವುದಿಲ್ಲ, ರಸ ಇದ್ದರೆ ಗದ್ಯವೂ ಕಾವ್ಯವೇ, ಪ್ರಾಸ ಬೇಕಿಲ್ಲ," ಎಂದು ನಾನು ಆ ಮೊದಲು ಹಾಸ್ಯಕ್ಕೆಂದು ಕಟ್ಟಿದ ಎರಡು ಕಂದ ಪದ್ಯಗಳನ್ನು ಹೇಳಿದೆನು. ಎರಡು ಪಕ್ಷವೂ ಸ್ವಲ್ಪ ಏನೋ ಸಮಾಧಾನ ತಂದುಕೊಂಡಂತೆ ಕಂಡಿತು. ಸುಬ್ಬ ರಾಯರು ಅಧ್ಯಕ್ಷ ಭಾಷಣದಲ್ಲಿ ಇದೇ ಭಾವವನ್ನು ಇನ್ನಷ್ಟು ವಿವರವಾಗಿ ಹೇಳಿ, "ಶ್ರೀಕಂಠಯ್ಯನವರು ಹೊಸ ಸಾಹಿತ್ಯದ ನಾಯಕರು ಎಂಬುದನ್ನು ಶರ್ಮರು ಬಲ್ಲರು. ಶರ್ಮರು ಹೊಸ ಸಾಹಿತ್ಯದ ಪ್ರಮುಖ ಲೇಖಕರಲ್ಲಿ ಒಬ್ಬರು ಎಂಬುದನ್ನು ಶ್ರೀಕಂಠಯ್ಯನವರು ಬಲ್ಲರು. ತಮ್ಮ ವಿದ್ಯಾರ್ಥಿಯಾಗಿದ್ದವರು ಇಂಥ ಉನ್ನತ ಸಾಹಿತಿಗಳಾಗಿದ್ದಾರೆ ಎನ್ನುವುದು ಅವರಿಗೆ ಹೆಮ್ಮೆ," ಎಂದು ಮುಂತಾಗಿ ಹೇಳಿ ಚರ್ಚೆ ಯನ್ನು ಮುಕ್ತಾಯಕ್ಕೆ ತಂದರು. ಸಭೆ ಮುಗಿಯುವ ವೇಳೆಗೆ ಮನಸ್ಸುಗಳು ತಕ್ಕಷ್ಟು ಶಾಂತವಾಗಿದ್ದವು.

* * *

## ಪ್ರಿನ್ಸಿಪಾಲರಾಗಿ

ಪರಿಷತ್ತಿನ ಉಪಾಧ್ಯಕ್ಷ ಸ್ಥಾನದಿಂದ ಬಿಡಿಸಿಕೊಂಡ ಮೇಲೆ ಶ್ರೀ ಶ್ರೀಕಂಠಯ್ಯ ನವರು ಕೆಲವು ದಿನ ನೆಮ್ಮದಿಯಾಗಿ ಮನೆಯಲ್ಲಿದ್ದರು. ಆ ದಿನಗಳಲ್ಲಿ ಧಾರವಾಡದ ಕೆಲವರು ಹಿರಿಯರು ಅಲ್ಲಿ ಸ್ವಂತ ಕಾಲೇಜು ಒಂದನ್ನು ನಿರ್ಮಿಸಬೇಕೆಂದು ಯೋಚಿ ಸಿದರು. ಈ ಬಗ್ಗೆ ಒಂದು ಸಮಿತಿ ಏರ್ಪಟ್ಟು ಶ್ರೀ ವಾಮನರಾವ್ ಮುಧೋಳ್‌ಕರ್ ಅದರ ಕಾರ್ಯದರ್ಶಿ ಆದರು. ಹೊಸ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಪ್ರತಿಷ್ಠಿತ ವ್ಯಕ್ತಿಯೊಬ್ಬರನ್ನು ನೇಮಿಸಿಕೊಳ್ಳಬೇಕೆಂದು ಸಮಿತಿ ಬಯಸಿತು. ಪ್ರತಿಷ್ಠಿತರಲ್ಲಿ ಬಹು ಪ್ರತಿಷ್ಠಿತರೆಂದರೆ ಆ ದಿನಕ್ಕೆ ಶ್ರೀ ಶ್ರೀಕಂಠಯ್ಯನವರು. ಸಮಿತಿ ಈ ಮಹನೀಯರನ್ನು

ಪ್ರಿನ್ಸಿಪಾಲ್ ಸ್ಥಾನಕ್ಕೆ ಆಹ್ವಾನಿಸಿ ಪ್ರಾರ್ಥನೆಯನ್ನು ಪ್ರತ್ಯಕ್ಷವಾಗಿ ಸಲ್ಲಿಸಲು ಕಾರ್ಯದರ್ಶಿ ಶ್ರೀ ವಾಮನರಾಯರನ್ನು ಕಳುಹಿಸಿತು. ವಾಮನರಾವ್ ಬಂದು ಶ್ರೀ ಶ್ರೀಕಂಠಯ್ಯನವರಲ್ಲಿ ಈ ಪ್ರಾರ್ಥನೆಯನ್ನು ಸಲ್ಲಿಸಿದಾಗ ಈ ಹಿರಿಯರು, "ನನ್ನ ದೇಹ ಸ್ಥಿತಿ ಸರಿಯಾಗಿಲ್ಲ. ಮಧುಮೇಹವೊಂದು, ರಕ್ತದ ಒತ್ತಡ ಒಂದು. ಈ ಕಾರಣ ದಿಂದಲೇ ಪರಿಷತ್ತಿನಿಂದ ಬಿಡಿಸಿಕೊಂಡೆ. ಹೊಸ ಕಾಲೇಜಿನ ಕೆಲಸ ಪರಿಷತ್ತಿನ ಕೆಲಸ ಕ್ಕಿಂತ ಹೆಚ್ಚೇ ಆದೀತು. ನಾನು ಬರಲಾರೆ," ಎಂದರು. ವಾಮನರಾವ್, "ಕಾಲೇಜಿಗೆ ಶಿರಸ್ಸಾಗಿ ಒಬ್ಬ ಪ್ರತಿಷ್ಠಿತ ಮಹನೀಯರಿರಬೇಕೆಂದು ನಮ್ಮ ಅಪೇಕ್ಷೆ. ಅಷ್ಟಕ್ಕಾಗಿ ತಮಗೆ ತೊಂದರೆ ಕೊಡುತ್ತಿದ್ದೇವೆ. ತಾವು ಪ್ರಿನ್ಸಿಪಾಲ್ ಎಂತ ತಮ್ಮ ಹೆಸರನ್ನು ಕೊಡಿ. ಪಾಠ ಹೇಳುವುದು ಬೇಡ, ಆಡಳಿತ ನೋಡಿಕೊಳ್ಳುವುದೂ ಬೇಡ. ಒಳ್ಳೆಯ ಸಹಾಯಕರನ್ನು ಕೊಡುತ್ತೇವೆ. ಅವರು ಕೆಲಸವನ್ನು ನಡೆಸಿಕೊಂಡು ಹೋಗುತ್ತಾರೆ. ನಿಮ್ಮ ಪ್ರಿನ್ಸಿಪಾಲ್ ಯಾರು ಎಂದರೆ ಶ್ರೀ ಬಿ.ಎಂ. ಶ್ರೀಕಂಠಯ್ಯನವರು ಎಂದು ಹೇಳುವಷ್ಟಕ್ಕೆ ನಮಗೆ ನಿಮ್ಮ ಹೆಸರು ಬೇಕು" ಎಂದರು. ಶ್ರೀಕಂಠಯ್ಯನವರು ಸ್ವಲ್ಪ ತಡೆದರು. "ಒಪ್ಪುವುದೇ ಬಿಡುವುದೇ ತೋಚಲಿಲ್ಲ. ಮಾಸ್ತಿಯವರನ್ನು ಒಂದು ಮಾತು ಕೇಳಿ ಹೇಳುತ್ತೇನೆ," ಎಂದರು. ನನ್ನನ್ನು ಕಾಣಬೇಕೆಂದು ನನ್ನ ಮನೆಗೆ ಹೇಳಿಕಳುಹಿಸಿದರು. ಆಗ ನಾನು ಪರಿಷತ್ತಿನ ಕೆಲಸಕ್ಕಾಗಿ ಉತ್ತರ ಕರ್ಣಾಟಕಕ್ಕೆ ಹೋಗಿದ್ದೆನು. ವಾಮನರಾವ್ ನಾನಿರುವಲ್ಲಿಗೆ ಬಂದು ನನಗೆ ಸಂಗತಿಯನ್ನು ತಿಳಿ ಸಿದರು. ನಾನು, "ಶ್ರೀಕಂಠಯ್ಯನವರಿಗೆ ಆರೋಗ್ಯ ಸರಿಯಾಗಿಲ್ಲ, ದಿಟ. ಆದರೆ ನೀವು ಹೇಳುವಂತೆ ಕಾಲೇಜಿಗೆ ಪ್ರತಿಷ್ಠೆ ತರುವುದಕ್ಕಾಗಿ ಬೇಕು ಎನ್ನುವುದಾದರೆ ಅವರು ಪ್ರಿನ್ಸಿಪಾಲರಾದರೆ ತಪ್ಪಾಗುವುದಿಲ್ಲ. ಇಷ್ಟೇ ; ನೀವು ನಿಮ್ಮ ಉದ್ದೇಶವನ್ನು ನಡೆಸ ಬೇಕು. ವಾರಕ್ಕೆ ನಾಲ್ಕು ಗಂಟೆ ಪಾಠ, ದಿನಕ್ಕೆ ಒಂದು ಗಂಟೆ ಕೆಲಸ, ಇಷ್ಟಕ್ಕೆ ಹೆಚ್ಚಾಗಿ ಅವರು ದುಡಿಯದಂತೆ ನೋಡಿಕೊಳ್ಳಬೇಕು. ಬೆಂಗಳೂರಿನಲ್ಲಿ ಮನೆಯಲ್ಲಿ ರುವುದಕ್ಕೆ ಪ್ರತಿಯಾಗಿ ನಿಮ್ಮ ಕಾಲೇಜಿನ ಮನೆಯಲ್ಲಿರುತ್ತಾರೆ" ಎಂದೆನು. ವಾಮನ ರಾವ್, "ನಾವು ಹೇಳುವುದೂ ಅಷ್ಟೇ" ಎಂದರು. ನಾನು, "ಬೆಂಗಳೂರಿಗೆ ಹೋಗಿ ಅವರೊಂದಿಗೆ ಮಾತನಾಡಿ ನಿಮಗೆ ಪತ್ರ ಬರೆಯುತ್ತೇನೆ" ಎಂದು ಹೇಳಿದೆನು. ವಾಮನ ರಾವ್, "ನಾನೂ ಜೊತೆಗೆ ಬರುತ್ತೇನೆ. ಅವರ ನಿಶ್ಚಯವನ್ನು ತಿಳಿದೇ ಧಾರವಾಡಕ್ಕೆ ಹಿಂತಿರುಗುತ್ತೇನೆ" ಎಂದರು. ನನ್ನೊಂದಿಗೇ ಬೆಂಗಳೂರಿಗೆ ಬಂದರು.

ಶ್ರೀಕಂಠಯ್ಯನವರು, ನಾನು, ವಾಮನರಾವ್, ಕುಳಿತು ಮಾತನಾಡಿ, ನನ್ನ ಸೂಚನೆಯಂತೆ ನಡೆದುಕೊಳ್ಳುವಂತೆ ವಾಮನರಾವ್ ಒಪ್ಪಿದ ಮೇಲೆ ನಾನು ಶ್ರೀಕಂಠಯ್ಯನವರಿಗೆ, "ನಿಮ್ಮ ಶಕ್ತಿಗೆ ಮಿಂಚಿ ದುಡಿಯುವುದಿಲ್ಲ ಎಂದು ನೀವು

ಮಾತು ಕೊಟ್ಟರೆ ನಾನು ಇವರ ಆಹ್ವಾನವನ್ನು ಅಂಗೀಕರಿಸಬಹುದು ಎನ್ನುತ್ತೇನೆ" ಎಂದೆನು. ಶ್ರೀಕಂಠಯ್ಯನವರು, "ಹೋಗುವುದು ಬೇಡ ಎಂದು ನೀವು ಹೇಳುತ್ತೀರೆಂದು ನನ್ನ ನಿರೀಕ್ಷೆ ಇತ್ತು, ನೀವು ಹೀಗೆ ಹೇಳುತ್ತಿದ್ದೀರಿ. ಈಗ ಏನು ಮಾಡುವುದು ?" ಎಂದು ಸ್ವಲ್ಪ ಯೋಚಿಸಿ, "ನಿಮ್ಮನ್ನು ಕೇಳಿ ನೀವು ಹೇಗೆ ಹೇಳಿದರೆ ಹಾಗೆ ಮಾಡುವುದು ಎಂದುಕೊಂಡಿದ್ದೆ. ಹಾಗೆಯೇ ಮಾಡುತ್ತೇನೆ" ಎಂದರು. ಧಾರವಾಡಕ್ಕೆ ಹೋಗಲು ನಿಶ್ಚಯಿಸಿದರು. ವಾಮನರಾವ್ ಈ ಸಂತೋಷದ ಸುದ್ದಿಯೊಡನೆ ಧಾರವಾಡಕ್ಕೆ ಹಿಂತಿರುಗಿದರು.

ಈ ಸಂದರ್ಭವನ್ನು ವಿವರಿಸುತ್ತ ನನ್ನ ಮನಸ್ಸಿನಲ್ಲಿರುವ ಒಂದು ಯೋಚನೆಯನ್ನು ಇಲ್ಲಿ ಹೇಳಬೇಕು. ಶ್ರೀಕಂಠಯ್ಯನವರು ಮೈಸೂರಿನಲ್ಲಿ ಹುಟ್ಟಿದವರು. ಶ್ರೇಷ್ಠ ಅಧ್ಯಾಪಕರೆಂದು, ಶ್ರೇಷ್ಠ ಪಂಡಿತರೆಂದು, ಹೆಸರು ಗಳಿಸಿದ ಪ್ರತಿಭಾವಂತರು. ಸಂಸ್ಥಾನದ ದೈವ ಹೊರಗಿನ ಯಾರು ಯಾರನ್ನೋ ಇಲ್ಲಿಗೆ ಕರೆತಂದು ಉನ್ನತ ಸ್ಥಾನಗಳಲ್ಲಿ ನಿಲ್ಲಿಸಿತು. ಅವರಷ್ಟೆ ಶಕ್ತರಾದ ಸಂಸ್ಥಾನದ ಮಕ್ಕಳಿಗೆ ಈ ಸ್ಥಾನಗಳು ದೊರೆಯಲಿಲ್ಲ. ಈ ದುರ್ದೈವದಿಂದ ಶ್ರೀಕಂಠಯ್ಯನವರು ತಮ್ಮ ಅಧ್ಯಾಪಕ ಜೀವನವನ್ನು ಅಧ್ಯಾಪಕರಾಗಿ ಮುಗಿಸಬೇಕಾಯಿತು. ಅವರು ಒಂದು ಕಾಲೇಜಿಗೆ ಪ್ರಿನ್ಸಿಪಾಲರಾಗಲಿಲ್ಲ; ವಿದ್ಯಾಖಾತೆಯ ಮುಖ್ಯಾಧಿಕಾರಿಯಾಗಲಿಲ್ಲ. ಇವರ ಜೊತೆಯ ಇಂಥ ಜನ ಈ ಸ್ಥಾನಗಳನ್ನು ಪಡೆದದ್ದುಂಟು. ನನಗೆ ಈ ನಮ್ಮ ಹಿರಿಯರು ತಮ್ಮ ಜೀವನದಲ್ಲಿ ಒಂದು ಕಾಲೇಜಿನ ಪ್ರಿನ್ಸಿಪಾಲ್ ಎನ್ನಿಸಿಕೊಳ್ಳಲಿ ಎಂದು ಆಶೆ. ಸ್ವಂತ ವಿಷಯದಲ್ಲಿ ನಾನು ವೈರಾಗ್ಯವನ್ನು ವಹಿಸುತ್ತಿದ್ದೆನು. ಬೇರೊಬ್ಬರ ವಿಷಯಕ್ಕೆ ಇಂಥ ದುರ್ಲಕ್ಷ್ಯ ವೈರಾಗ್ಯವಲ್ಲ, ದುಷ್ಟ ಆದೀತು. ಈ ಕಾರಣದಿಂದ ನನಗೆ ಈ ಹಿರಿಯರು ಧಾರವಾಡಕ್ಕೆ ಪ್ರಿನ್ಸಿಪಾಲರಾಗಿರಲು ಹೋಗುವುದು ರುಚಿಸಿತು.

* * *

## ಕೊನೆಯ ದಿನಗಳು

ಶ್ರೀಕಂಠಯ್ಯನವರು ಕಾಲೇಜಿನ ಪ್ರಿನ್ಸಿಪಾಲರಾಗಿ ಸುಮಾರು ಎರಡು ವರ್ಷ ಕೆಲಸ ಮಾಡಿದರು. ಆದರೆ ನನಗೆ ಮಾತು ಕೊಟ್ಟಿದ್ದಂತೆ ನಡೆಯದೆ ಶಕ್ತಿಮಿಂಚಿ ದುಡಿದರು. ಅವರನ್ನು ಪ್ರಿನ್ಸಿಪಾಲರಾಗಿ ನೇಮಿಸಿಕೊಂಡ ಸಂಸ್ಥೆ ಸಹ ಈ ವಿಷಯದಲ್ಲಿ ತಕ್ಕಷ್ಟು ಎಚ್ಚರವಹಿಸಲಿಲ್ಲ. ಎಚ್ಚರ ಅವಶ್ಯವಿಲ್ಲ ಎಂದೇ ಸಂಸ್ಥೆಯ ಪ್ರವರ್ತಕರಿಗೆ ಕಂಡಿದ್ದರೆ ಆಶ್ಚರ್ಯವಿಲ್ಲ. ಶ್ರೀಕಂಠಯ್ಯನವರು ಅಷ್ಟು ಉತ್ಸಾಹದಿಂದ ದುಡಿದರು.

ಪ್ರಾಯದ ದಿನದಲ್ಲಿ ಪಾಠ ಹೇಳಿದಂತೆ ಒಬ್ಬ ಅಧ್ಯಾಪಕನ ಸಂಪೂರ್ಣ ಪಾತ್ರವನ್ನು ವಹಿಸಿ ಕಾಲೇಜಿನಲ್ಲಿ ಪಾಠ ಹೇಳಿದರು. ತನ್ನ ಶಕ್ತಿಗೆ ಈ ಕೆಲಸ ಸಾಲಲಿಲ್ಲ ಎಂಬಂತೆ ವಾರಕ್ಕೆ ಒಮ್ಮೆ ಹತ್ತು ದಿನಕ್ಕೆ ಒಮ್ಮೆ ಧಾರವಾಡದಲ್ಲಿ, ಬೇರೆ ಸ್ಥಳಗಳಲ್ಲಿ, ಬೇರೆ ಬೇರೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಭಾಷಣ ಮಾಡಿ ದಣಿದರು. ಏಕೀಕರಣಕ್ಕಾಗಿ ಶ್ರಮಿಸುವುದರಲ್ಲಿ ಕೆಲವು ಸಭೆಗಳಲ್ಲಿ ಒಂದೂವರೆ ಗಂಟೆ ಹೊತ್ತು ಮಾತನಾಡಿದರಂತೆ. ಮಾತನ್ನು ಕೇಳುವ ಸಂತೋಷದಲ್ಲಿ ಸಭೆಯನ್ನೇರ್ಪಡಿಸಿದ ಜನ, ನೀವು ಇಷ್ಟು ದುಡಿಯುವುದು ಬೇಡ ಎಂದು ಅವರನ್ನು ತಡೆಯಲಿಲ್ಲ. ಕೆಟ್ಟಿದ್ದ ಆರೋಗ್ಯ ಮತ್ತಷ್ಟು ಕೆಟ್ಟು ಈ ಬಡಪಾಯಿ ಕನ್ನಡ ಸೇವಕರು ಒಂದು ದಿನ ಅನಿರೀಕ್ಷಿತವಾಗಿ ಕಣ್ಣು ಮುಚ್ಚಿಕೊಂಡರು.

ಆ ಕಣ್ಣು ಮುಚ್ಚಿಕೊಂಡ ತೆರನೂ ನೆನೆಯಲು ತಗುವಂಥದು. ಕಾಲೇಜಿನ ಪ್ರಿನ್ಸಿಪಾಲರಾಗಿ ಇವರು ವಾಸ ಮಾಡುತ್ತಿದ್ದ ಇವರ ಮನೆಗೆ ಆ ದಿನ ತರುಣ ಮಿತ್ರರಿಬ್ಬರು ಕನ್ನಡದ ಕೆಲಸ ಒಂದನ್ನು ಕುರಿತು ಮಾತನಾಡಲು ಬಂದರು. ಅವರಲ್ಲಿ ಒಬ್ಬರು ಶ್ರೀ ಮುಗಳಿ ರಂಗಣ್ಣನವರು. ಇನ್ನೊಬ್ಬರು ಯಾರು, ನಾನು ಈಗ ಮರೆತಿದ್ದೇನೆ. ಕೆಲಸ ರಂಗಣ್ಣನವರ ಒಂದು ಪುಸ್ತಕಕ್ಕೆ ಶ್ರೀಕಂಠಯ್ಯನವರು ಒಂದು ಮುನ್ನುಡಿ ಬರೆದುಕೊಡಬೇಕು ಎನ್ನುವುದು. ಬಂದ ಅತಿಥಿಗಳನ್ನು ಆದರದಿಂದ ಬರ ಮಾಡಿಕೊಂಡು ಶ್ರೀಕಂಠಯ್ಯನವರು ತರುಣ ಮಿತ್ರರ ಮಾತನ್ನು ಸಂತೋಷದಿಂದ ಒಪ್ಪಿ ಬೇರೆ ಮಾತು ನಾಲ್ಕುನ್ನಾಡಿ ತುಂಬ ಹರ್ಷಚಿತ್ತರಾಗಿ ಬೀಳ್ಕೊಟ್ಟರು. ಮಿತ್ರರು ಕೋಣೆಯಿಂದ ಹೊರಕ್ಕೆ ಬಂದು ಪೌಳಿ ಬಾಗಿಲ ಬಳಿ ಬಂದಿದ್ದಾರೆ. ಶ್ರೀಕಂಠಯ್ಯನವರ ಮಗಳು ಅಯ್ಯೋ ಎನ್ನುತ್ತ ಹೊರಕ್ಕೆ ಬಂದು ಇವರನ್ನು ಕರೆದರು. ಏನು ಸಂಗತಿಯೋ ಎಂದು ಇವರು ಮತ್ತೆ ಒಳಗೆ ಹೋದರು. ಅಲ್ಲಿ ಶ್ರೀಕಂಠಯ್ಯನವರು ಬೀಳ್ಕೊಡುವ ವೇಳೆ ಎಲ್ಲಿ ನಿಂತಿದ್ದರು ಅಲ್ಲೇ ನಿಶ್ಚೇಷ್ಟರಾಗಿ ಕುಳಿತಿರುವುದು ಕಂಡಿತು. ಇವರು ಹತ್ತಿರ ಹೋಗಿ ನೋಡುತ್ತಾರೆ, ಜೀವ ಹೋಗಿದೆ. ದುಡಿದು ದುಡಿದು ಆ ದೇಹದಲ್ಲಿ ಸತ್ವ ಉಡುಗಿ ಹೋಗಿತ್ತು. ಮಿತ್ರರನ್ನು ಬರಮಾಡಿಕೊಂಡು ಉತ್ಸಾಹದಿಂದ ಮಾತನಾಡಿ ಬೀಳ್ಕೊಡುವ ಶ್ರಮದಲ್ಲಿ, ಇದ್ದ ಅಲ್ಪ ಶಕ್ತಿ ವೆಚ್ಚವಾಗಿತ್ತು ; ಹೃದಯ ವ್ಯಾಪಾರ ನಿಂತಿತ್ತು.

ಈ ಸುದ್ದಿ ಬಂದಾಗ ನಾನು ಈ ಹಿರಿಯರ ಸಾವಿಗೆ ನಾನೂ ಕಾರಣನಾದೆನೊ ಎಂದು ಸ್ವಲ್ಪ ಚಿಂತಿಸಿದೆನು. ಧಾರವಾಡಕ್ಕೆ ಹೋಗಬಹುದು ಎಂದು ನಾನು ಹೇಳದೆ ಇದ್ದಿದ್ದರೆ ಇವರ ದೇಹಕ್ಕೆ ಇಷ್ಟು ಶ್ರಮ ಆಗುತ್ತಿರಲಿಲ್ಲ. ಅವರು ಇನ್ನು ಕೆಲವು ಕಾಲ ಇರಬಹುದಾಗಿತ್ತೇನೋ. ಆದರೆ ಅವರು ಅಲ್ಲಿಗೆ ಹೋಗಬಹುದು ಎಂದ ಹೊತ್ತಿನಲ್ಲಿ,

ದುಡಿಮೆಯಲ್ಲಿ ಮಿತ ಇರಬೇಕು ಎಂಬ ಬೇಡಿಕೆಯನ್ನೂ ನಾನು ಸೇರಿಸಿದ್ದೆನು. ಇರುತ್ತದೆ ಎಂದು ಧೈರ್ಯಕೊಟ್ಟು ಅವರು ಆ ಮಿತಿಯನ್ನಿರಿಸಿಕೊಳ್ಳದೆ ದುಡಿದರು. ಈ ಅನರ್ಥ ಆಯಿತು. ಬೆಂಗಳೂರಿನಲ್ಲಿ ಇದ್ದಿದ್ದರೂ ಇಂಥ ಚೇತನ ಬೇರೆ ರೀತಿ ಯಲ್ಲಿ ಇದೇ ರೀತಿ ಶಕ್ತಿಯನ್ನು ಮೀರಿ ದುಡಿಯುವಂಥದೇ. ಸ್ವಭಾವಕ್ಕೆ ಯಾರು ಹೊಣೆ ? ಬೇರೆಯವನಾದ ನಾನಲ್ಲ. ಅವರೇ ಈ ವಿಷಯದಲ್ಲಿ ಅಸಮರ್ಥರಾಗಿರು ತ್ತಿದ್ದರು. ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇಃ ಜ್ಞಾನವಾನ್ ಅಪಿ.



ಲೋಕದ ಮತಗಳಲ್ಲಿ ಕೇವಲ 'ಮತ'ಗಳೂ, ಮತೀಯಾಂಶಗಳೂ, ಪುರಾಣಕಥೆಗಳೂ, ಪುರಾತನರ ಜೀವನಚರಿತ್ರೆಗಳೂ, ತತ್ವವಿಚಾರಗಳಲ್ಲಿ ವೈಶಿಷ್ಟ್ಯಗಳೂ, ಸಂಸ್ಕಾರ ಪ್ರಕ್ರಿಯೆಗಳೂ ಮುಂತಾದ ವಿಚಾರಗಳು ಸೇರಿರುತ್ತವೆ. ಇವುಗಳಲ್ಲಿ ಹಲವು ಸಮಾಜವನ್ನು ಒಡೆಯುತ್ತವೆ. ಬೇರೆ ಬೇರೆ ಗುಂಪುಗಳಾಗಿ ವಿಂಗಡಿಸುತ್ತವೆ. ಜ್ಞಾನದೃಷ್ಟಿಯಿಂದ ವಿಚಾರಮಾಡತಕ್ಕವನಿಗೆ, ತತ್ವಕಾಮನಿಗೆ ಇವೆಲ್ಲಾ ಬೇಕಾದ ಸಂಗತಿಗಳೇ. ಇವಕ್ಕೂ ಮೇಲಾಗಿ ಮಾನವನು ಮಾನವಕುಲಕ್ಕೆ ಹೊಂದಿಕೊಂಡು, ತನ್ನ ಆತ್ಮಶುದ್ಧಿಯನ್ನೂ ಎಲ್ಲರ ಪ್ರೇಮಸಂಬಂಧವನ್ನೂ ಬೆಳಸಿಕೊಂಡು "ಇಲ್ಲಿಯೂ ಅಲ್ಲಿಯೂ ಸಲ್ಲುವಂತೆ" ಬಾಳುವುದೇ ಮುಖ್ಯ ಗುರಿಯಾಗಿರಬೇಕು. ಆದುದರಿಂದಲೇ 'ಮತ'ಕ್ಕಿಂತಲೂ 'ಧರ್ಮ' ದೊಡ್ಡ ಮಾತು. ಮತ ಕಾದಿ ಮಡಿದರೆ, ಧರ್ಮ ಕೂಡಿಸಿ ಬದುಕಿಸುತ್ತದೆ.

—'ವಚನಧರ್ಮ ಸಾರ'ದ ಮುನ್ನುಡಿಯಿಂದ; 'ಶ್ರೀ ಸಾಹಿತ್ಯ'ದಲ್ಲಿ, ಪು. ೩೯೫

ಡಿ. ವಿ. ಜಿ.

# ಬಹುಮುಖ ಆಸಕ್ತಿ, ಅಪೂರ್ವ ಪ್ರತಿಭೆ*

ಬಿ. ಎಂ. ಶ್ರೀಕಂಠಯ್ಯನವರು ಶ್ರೀರಂಗಪಟ್ಟಣದ ತರುಣ ತಂಡದಲ್ಲಿ ಒಬ್ಬರು. ಆ ತಂಡಕ್ಕೆ ಸೇರಿದ ಇತರರಲ್ಲಿ ಪ್ರಸಿದ್ಧರಾದವರು ವೈಸ್‌ಛಾನ್ಸೆಲರ್ ಎನ್. ಎಸ್. ಸುಬ್ಬರಾಯರು, ಅಡ್ವೋಕೇಟ್ ಎಂ. ಜಿ. ವರದಾಚಾರ್ಯರು, ಪ್ರೊಫೆಸರ್ ಅಣ್ಣಾಜಿ ರಾಯರು, ಇಂಜನಿಯರ್ ವೆಂಕಟಸುಬ್ಬರಾಯರು, ಫಾರೆಸ್ಟ್ ಕನ್ಸರ್ವೇಟರ್ ನರಸಿಂಹಯ್ಯನವರು.

ಈ ತಂಡದಲ್ಲಿ ಎರಡು ದೊಡ್ಡ ಗುಣಗಳು : (೧) ಪರಸ್ಪರ ಸ್ನೇಹ (೨) ತಂಡಕ್ಕೆ ಹೊರಗಿನವರು ತಂಡದ ಒಳಗಿನವರನ್ನು ಯಾರನ್ನು ಆಕ್ಷೇಪಿಸಿದರೂ ಅವರನ್ನು ಪ್ರತಿಭಟಿಸತಕ್ಕದ್ದು.

ಅಣ್ಣಾಜಿ : "ಏನು ಸೊಗಸಾಗಿ ಬರೀತಾನಯ್ಯ ನಮ್ಮ ಸುಬ್ಬು ! "

ಸುಬ್ಬು : "ಶ್ರೀಕಂಠಯ್ಯನ ಮುಂದೆ ನನ್ನದೇನಿದೆ ! "

ಶ್ರೀಕಂಠಯ್ಯ : "ಎಲೊಕ್ವೆನ್ಸ್ ಎಂದರೆ ಎಂ. ಜಿ. ಎಂಥ ಸೊಗಸಾದ ಶೈಲಿ !"

ಎಂ. ಜಿ. : "ಎಲೊಕ್ವೆನ್ಸಿನಲ್ಲೇನಿದೆ ? ಸ್ಕಾಲರ್‌ಷಿಪ್ ದೊಡ್ಡದು. ನೋಡು ಅಣ್ಣಾಜಿಯನ್ನು....

ಹೀಗೆ ಒಬ್ಬರನ್ನೊಬ್ಬರು ಬಿಟ್ಟುಕೊಡುತ್ತಿರಲಿಲ್ಲ. ಈ ಕಾರಣದಿಂದ ಆ ತಂಡಕ್ಕೆ Mutual Admiration Society (ಪರಸ್ಪರ ಪ್ರಶಂಸಾ ಸಂಘ) ಎಂಬ ಹೆಸರು ಬಂದಿತ್ತು. ಇದು ನಂಜನಗೂಡಿನವರೂ ಬೆಂಗಳೂರಿನವರೂ ಕೊಟ್ಟ ಹೆಸರು. ಶ್ರೀರಂಗಪಟ್ಟಣದ ತಂಡ ಅದರಿಂದ ಒಡೆಯಲಿಲ್ಲ.

ಆದರೆ ಬಹು ವರ್ಷ ನಡೆಯಲಿಲ್ಲ. ಕಾಲಕ್ರಮದಲ್ಲಿ ಬಿರುಕುಗಳು ಹುಟ್ಟಿಕೊಂಡವು. ಮರದಲ್ಲಿ ಆಗುವುದು ಹಾಗೆ ತಾನೆ ? ಮೊದಲು ಒಂದೇ ಒಂದು ಕಾಂಡ. ಆಮೇಲೆ ಕೊಂಬೆಗಳು, ಕವಲುಗಳು, ಬಿಳಲುಗಳು. ಎಂದರೆ, ಶ್ರೀರಂಗಪಟ್ಟಣವು ಮನುಷ್ಯಸ್ವಭಾವವನ್ನು ಬದಲಾಯಿಸಲು ಸಮರ್ಥವಾಗಲಿಲ್ಲ. ವ್ಯಕ್ತಿ ವ್ಯಕ್ತಿಗೂ

---

* 'ಸಾಹಿತ್ಯೋಪಾಸಕರು', ಜ್ಞಾಪಕ ಚಿತ್ರಶಾಲೆ, ಸಂ. ೩.

ವಯಸ್ಸಾದಂತೆ ಹೊಸ ಹೊಸ ಆಕರ್ಷಣೆತ್ತರಗಳು ಪ್ರಬಲಿಸಿ ಒಬ್ಬೊಬ್ಬನನ್ನು ಒಂದೊಂದು ದಾರಿಗೆ ಸೆಳೆಯುತ್ತವೆ.

*　　*　　*

## ಸಾಹಿತ್ಯ ಶ್ರದ್ಧೆ

ಶ್ರೀಕಂಠಯ್ಯನವರಲ್ಲಿ ಮೊದಲಿನಿಂದ ಕಡೆಯುವರೆಗೂ ಸಂತತವಾಗಿ ಏಕ ಪ್ರಕಾರವಾಗಿ ನಿಂತು ಬಲಿತ ಗುಣ ಸಾಹಿತ್ಯ ಶ್ರದ್ಧೆ.

ಒಂದು ಸಾರಿ ಶ್ರೀರಂಗಪಟ್ಟಣಕ್ಕೆ ಪ್ಲೇಗ್ ಬಂದಾಗ ಶ್ರೀಕಂಠಯ್ಯನವರು ಬಿ.ಎ. ಮುಗಿಸಿ ಎಂ.ಎ.ಗೆ ಓದುತ್ತಿದ್ದರು. ಅವರಿಗೆ ವರ್ಡ್ಸ್‌ವರ್ತ್ ಕವಿಯ ಮೇಲೆ ತುಂಬ ಪ್ರೇಮ. ಆದರೆ ಆ ಕವಿಯ ಎರಡು ಕಾವ್ಯಗಳನ್ನು ಓದುವುದು ಕಷ್ಟದ ಕೆಲಸ. ಆ ಕಾವ್ಯಗಳು 'ಪ್ರೆಲ್ಯೂಡ್' (Prelude), 'ಎಕ್ಸ್‌ಕರ್ಷನ್' (Excursion) ಎಂಬವು; ಆ ಕಷ್ಟಕ್ಕೆ ಕಾರಣ ಅವುಗಳ ಉದ್ದ—ಮತ್ತು ಜೊಳ್ಳುಹುಲ್ಲಿನ ಹಗ್ಗದ ಉದ್ದ. ಕಾವ್ಯದಲ್ಲಿ ಘಟನೆಗಳು ಕಡಮೆ. ಕವಿಯ ಆಲೋಚನಾತರಂಗಗಳು ಮೇಲಿಂದ ಮೇಲೆ ಬರುತ್ತವೆ ಮತ್ತು ಮಾತುಗಳು ವಿಪುಲವಾಗಿವೆ. ಸಾಮಾನ್ಯವಾಗಿ ಈ ಕಾವ್ಯಗಳನ್ನು ಪಠ್ಯಪುಸ್ತಕಗಳಾಗಿ ಯಾವ ವಿಶ್ವವಿದ್ಯಾನಿಲಯವೂ ನೇಮಕಮಾಡುವುದಿಲ್ಲ. ಆದರೆ ಅವು ಪ್ರಖ್ಯಾತ ಕವಿಯ ಪ್ರಖ್ಯಾತ ಕಾವ್ಯಗಳು. ಅವುಗಳನ್ನು ಓದಿಯೇ ತೀರಬೇಕೆಂದು ಶ್ರೀಕಂಠಯ್ಯನವರು ಪ್ರತಿಜ್ಞೆಮಾಡಿದರು. ಮನೆಯ ವಾತಾವರಣ ಅಂಥ ವ್ಯಾಸಂಗಕ್ಕೆ ಅನುಕೂಲಿಸದೆಂದು ಅವರು ಬಗೆದು ಪ್ರತಿದಿನವೂ ಪುಸ್ತಕ ಹಿಡಿದು ಫ್ರೆಂಚ್‌ರಾಕ್ಸಿಗೆ ಬಂದು ಹಿರೋಡೆ ಜಿಟ್ಟದ ಒಂದು ಬಂಡೆಯ ಮೇಲೆ ಕುಳಿತು ಭೋಜನದ ವೇಳೆಯವರೆಗೂ ಓದಿ ಹಿಂದಿರುಗುತ್ತಿದ್ದರು. ಹೀಗೆ ಮಾಡಿ ಒಂದು ತಿಂಗಳೊಳಗಾಗಿ ತಮ್ಮ ಹಠವನ್ನು ತೀರಿಸಿಕೊಂಡರು.

ಮೇಲಿನ ಸಂಗತಿ ನಾನು ಕೇಳಿದ್ದು. ನನ್ನ ಸ್ವಂತ ಅನುಭವವೊಂದನ್ನು ಈಗ ಉದಾಹರಿಸುತ್ತೇನೆ.

ಶ್ರೀಕಂಠಯ್ಯನವರು ಬೆಂಗಳೂರಿನಲ್ಲಿ ಇದ್ದಷ್ಟು ದಿವಸವೂ ಅವರೂ ನಾನೂ ದಿನಕ್ಕೊಂದು ಸಾರಿಯಾದರೂ ಸೇರದೆ ಇದ್ದದ್ದು ಅಪರೂಪ. ಇಬ್ಬರೂ ಸೇರಿ ವಾಕಿಂಗ್ ಹೋಗುತ್ತಿದ್ದೆವು. ನನ್ನ ಮನೆಗೆ ಅವರು ಬಾರದಿದ್ದರೆ ನಾನು ಅವರ ಮನೆಗೆ ಹೋಗುತ್ತಿದ್ದೆ. ಒಂದು ದಿನ ಬೆಳಗ್ಗೆ ಸುಮಾರು ಏಳು-ಏಳೂವರೆ ಘಂಟೆಯ ಹೊತ್ತಿಗೆ ಅವರ ಮನೆಗೆ ಹೋದೆ. ಮೊಗಸಾಲೆಯಲ್ಲಿ ನಿಂತು ಅವರ ರೂಮಿನ ಕದವನ್ನು ತಟ್ಟಿದೆ. ಉತ್ತರ ಬರಲಿಲ್ಲ. ಆಲಿಸಿ ಕೇಳಿದೆ. ಏನೋ ಹಾಡಿನ ಧ್ವನಿ ಕೇಳಿಬರುತ್ತಿತ್ತು.

ಮತ್ತೊಮ್ಮೆ ಬಾಗಿಲು ತಟ್ಟಿದೆ. ತೆರೆಯಲಿಲ್ಲ. ಮೂರನೆಯ ಸಾರಿ ಗಟ್ಟಿಯಾಗಿ ಡಬ ಡಬ ಎಂದು ಕಟ್ಟಿಗೆಯಿಂದ ಬಾಗಿಲ ಮೇಲೆ ಬಾರಿಸಿದೆ. ( ನನ್ನ ಇಂಥ ಚೇಷ್ಟೆಗಳು ಅವರಿಗೆ ಅಭ್ಯಾಸವಾಗಿದ್ದವು.) ಆಗ ಬಾಗಿಲು ತೆರೆದರು. ನಾನು ಮೊದಲ ಎರಡು ಸಲ ಮಾಡಿದ್ದ ಸದ್ದು ಅವರ ಕಿವಿಗೆ ಸೋಕಿರಲಿಲ್ಲ. ಅವರು ಮಾಡುತ್ತಿದ್ದದ್ದೇನು ? ಡಾಂಟೆ ( Dante ) ಕವಿಯ ' ಡಿವೈನ್ ಕಾಮೆಡಿ ' (Divine Comedy) ಕಾವ್ಯವನ್ನು ಸಣ್ಣ ಮೇಜಿನ ಮೇಲೆ ತೆರೆದಿಟ್ಟು ಅದರ ವಾಕ್ಯಗಳನ್ನೋದಿ ಬಾಯಿಗೆ ಗಟ್ಟಿ ಮಾಡಬೇಕೆಂದು ಅದರ ವಾಕ್ಯಗಳನ್ನು ನುಡಿಯುತ್ತಾ ಮುಂದಿನ ಕೋಣೆಯಿಂದ ಅದರ ಹಿಂದಿನ ಕೋಣೆಯ ಗೋಡೆಯವರೆಗೂ ಶತಪಥ ತುಳಿಯುತ್ತಿದ್ದರು. ಆ ವೇಳೆಗೆ ಶ್ರೀಕಂಠಯ್ಯನವರ ವಯಸ್ಸು ಐವತ್ತು ಮೀರಿತ್ತು. ಪೆನ್ಷನ್ ದಿನ ಹತ್ತಿರ ಹತ್ತಿರ ಬಂದಿತ್ತು.

ಇದು ಹುಟ್ಟು ವಿದ್ವಾಂಸನ ಲಕ್ಷಣ.

ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ |
ತದ್ಧಿ ತಪಸ್ತದ್ಧಿ ತಪಃ ||

ಅಂಥಾದ್ದು ಶ್ರೀಕಂಠಯ್ಯನವರ ತಪಸ್ಸು.

* * *

ಬೆಂಗಳೂರಿಗೆ ಬರುವುದಕ್ಕೆ ಮುಂಚೆ ರಿಜಿಸ್ಟ್ರಾರ್ ಆಗಿದ್ದಾಗ ಶ್ರೀಕಂಠಯ್ಯನವರು ತಿಂಗಳಿಗೊಂದು ಸಾರಿಯಾದರೂ ತಮ್ಮ ಅಧಿಕಾರ ಕಾರ್ಯಕ್ಕಾಗಿ ಬೆಂಗಳೂರಿಗೆ ಬರಬೇಕಾಗಿತ್ತು. ತಮ್ಮ ಮೋಟಾರ್‌ಕಾರಿನಲ್ಲಿ ಬರುತ್ತಿದ್ದರು. ಬೆಂಗಳೂರು ಸೇರುವ ಹೊತ್ತನ್ನು ಮುಂಚಿತವಾಗಿ ನನಗೆ ತಿಳಿಸುತ್ತಿದ್ದರು. ಮೈಸೂರಿನಿಂದ ನೇರವಾಗಿ ನನ್ನ ಕೋಣೆಗೆ ಬರುತ್ತಿದ್ದರು. ಅಲ್ಲಿ ಕೊಂಚ ಉಪಾಹಾರವಾದ ಬಳಿಕ ಅವರೂ ನಾನೂ "ಆರ್ಣಿ ಕ್ಯಾಸಲ್" (ಜಯಮಹಲ್) ಆವರಣದೊಳಗಿನ ಅವರ ಬಿಡದಿಗೆ ಹೋಗುತ್ತಿದ್ದೆವು. ಅಲ್ಲಿ ನಾನು ಅವರಿಗಾಗಿ ಸಂಸ್ಕೃತ ಮಹಾಭಾರತದ ದ್ರೋಣಪರ್ವ, ಶಲ್ಯಪರ್ವ, ಕರ್ಣಪರ್ವ, ಸೌಪ್ತಿಕಪರ್ವ — ಇವುಗಳ ಭಾಗಗಳನ್ನು ಓದುತ್ತಿದ್ದೆ. ಅವರು ನಡುನಡುವೆ ಟಿಪ್ಪಣಿಮಾಡುವರು. ಗುರುತುಮಾಡಿಟ್ಟುಕೊಳ್ಳುವರು. ಇದು ಅವರ ಪ್ರಸಿದ್ಧ ಕೃತಿಯಾದ 'ಅಶ್ವತ್ಥಾಮನ್' ನಾಟಕದ ರಚನೆಗೆ ಅವರು ಮಾಡಿಕೊಂಡ ಸಿದ್ಧತೆ.

ಅವರೂ ನಾನೂ ಸಂಗಡಿಗರಾಗಿ ವಾಕಿಂಗ್ ಹೋಗುತ್ತಿದ್ದೆವೆಂದು ಹೇಳಿವೆ. ಸಾಹಿತ್ಯ ಸಮ್ಮೇಳನಗಳಿಗೂ ನಾವು ಜೊತೆಯಲ್ಲಿ ಹೋಗುತ್ತಿದ್ದೆವು. ನಮ್ಮಿಬ್ಬರದೂ ಒಂದೇ ಕೊಠಡಿಯಲ್ಲಿ ಬಿಡಾರ. ನಡುರಾತ್ರಿಯ ಆಚೆನವರೆಗೂ ಮಾತುಕಥೆಗಳು.

ಅವರಲ್ಲಿ ಬಹುಭಾಗ ಸಾಹಿತ್ಯಕ್ಕೆ ಸೇರಿದ್ದು. ರಾಮಾಯಣ ಕವಿಯೂ ಹೋಮರ್ ಕವಿಯೂ ಒಬ್ಬರಿಂದೊಬ್ಬರು ಯಾಕೆ ವಿಷಯ ಕದ್ದಿರಬಾರದು ? ಅವರಲ್ಲಿ ಕದ್ದವರು ಯಾರು ? ಕೀಟ್ಸ್ ಕವಿಯು "Truth is Beauty" ಎಂದಾಗ ಅವನ ಮನಸ್ಸಿನಲ್ಲಿದ್ದದ್ದೇನು ? ಇಂಗ್ಲಿಷಿನ 'Rare' ಎಂಬುದಕ್ಕೆ ನಾವು 'ವಿರಳ' ಎಂದು ಪ್ರತಿಪದ ಮಾಡಿಕೊಳ್ಳಬೇಕೆ, 'ಅಪರೂಪ' ಎಂಬ ಮಾತನ್ನು ಉಳಿಸಬೇಕೆ ? ಇಂಥ ಪ್ರಶ್ನೆಗಳು ಎಷ್ಟೋ ಬರುತ್ತಿದ್ದವು. ಎಷ್ಟೋ ಸಮಯಗಳಲ್ಲಿ ಹಾಸ್ಯಪ್ರಸಂಗಗಳೂ, ಆಭಾಸ ಪ್ರಸಂಗಗಳೂ ಬರುತ್ತಿದ್ದವು. ಅವರು ಸೂತ್ರಗಳನ್ನೂ ಧಾತುಪಾಠಗಳನ್ನೂ ಹೇಳುತ್ತಿದ್ದರು.

* * *

## ಪುಂಡಾ ಮಾಮಾ

ನಮ್ಮ ಜನರಲ್ಲಿ ನಾಯಕ ಪೂಜೆಯು, ಗುರು ಪೂಜೆಯು ಅವಾಂತರ ಹೆಚ್ಚು. ರಾಜಕೀಯದಲ್ಲಿ ಮುಖಂಡರಾದವರನ್ನೂ ಮತಾಚಾರದಲ್ಲಿ ಆಚಾರ್ಯಪಟ್ಟ ಹೊತ್ತವರನ್ನೂ ಗೌರವಿಸುವ ಅಭ್ಯಾಸ ಅತಿಯಾಗಿದೆ — ಎಂದರೆ, ಎಷ್ಟು ಇರುವುದು ಉಚಿತವೋ ಅಷ್ಟಕ್ಕಿಂತ ಬಹಳ ಹೆಚ್ಚಾಗಿದೆ. ಈ ನಾಯಕಪೂಜೆ ಹೆಚ್ಚಿದಷ್ಟೂ ಸ್ವತಂತ್ರ ವಿವೇಕ ಕಡಮೆಯಾಗುತ್ತದೆ. ಜನದಲ್ಲಿ ಭಕ್ತಿ, ಶ್ರದ್ಧೆಗಳ ಜತೆಗೆ ಸ್ವತಂತ್ರ ವಿಚಾರಪ್ರವೃತ್ತಿಯೂ ಬೆಳೆಯಬೇಕು. ಹೀಗೆಂಬ ಮಾತುಕಥೆ ನಡೆಯುತ್ತಿದ್ದಾಗ ಬಿ. ಎಂ. ಶ್ರೀಕಂಠಯ್ಯನವರು ತಮ್ಮ ಚಿಕ್ಕಂದಿನ ಒಂದು ಕಥೆಯನ್ನು ಹೇಳಿದರು.

ಅವರಿಗೆ ಎಂಟು ಹತ್ತು ವರ್ಷಗಳ ಬಾಲ್ಯ. ಅದೇ ವಯಸ್ಸಿನ ಹುಡುಗರು ನಾಲ್ಕೈದು ಜನ ಒಂದು ಗುಂಪು. ಆ ಗುಂಪಿಗೆ ಅವರಿಗಿಂತ ಒಂದೆರಡು ವರ್ಷ ದೊಡ್ಡವನಾದ ಹುಡುಗ ಒಬ್ಬ ಬಂದು ಸೇರಿದ. ಅವನು ಆಕಾರದಲ್ಲಿ ಮಿಕ್ಕವರಿಗಿಂತ ಉದ್ದವಾಗಿ ದಪ್ಪವಾಗಿದ್ದ, ನಡವಳಿಕೆಯಲ್ಲಿಯೂ ಸಾಹಸಿಯಾಗಿದ್ದ. ಅವನ ಗುಣ ಚೇಷ್ಟೆಗಳಿಗೆ ತಕ್ಕಂತೆ ಊರ ಜನ ಅವನಿಗೆ 'ಪುಂಡಾ ಮಾಮಾ' ಎಂದು ಹೆಸರಿಟ್ಟಿದ್ದರು. ಅವನ ನಿಜವಾದ ಹೆಸರು ಯಾರಿಗೂ ಗೊತ್ತಿರಲಿಲ್ಲ. ಶ್ರೀಕಂಠಯ್ಯನವರ ಬಾಲ ಗೋಷ್ಠಿಯು ಪುಂಡಾ ಮಾಮನನ್ನು ನಾಯಕನನ್ನಾಗಿ ಅಂಗೀಕರಿಸಿತು. ಅವನು ಎಲ್ಲಿ ಹೋದರೂ ಅವನೇ ಮುಂದಾಳು. ಏನು ಮಾಡಿದರೂ ಅವನೇ ಯಜಮಾನ.

ಹೀಗಿರುವಾಗ ಒಂದು ದಿನ ಆತ ತನ್ನ ಶಿಷ್ಯರನ್ನು ಕುರಿತು ಹೇಳಿದ :

"ಎಲೋ ಈ ಹೊತ್ತು ದೇವರ ಪೂಜೆ ಮಾಡೋಣ."

"ಓಹೋ, ಮಾಡಬೇಕು ಸಾರ್, ನೀವೇ ನಮ್ಮ ದೇವರು."

ಆ ಏರ್ಪಾಟಿನ ವಿವರಗಳೆಲ್ಲ ತೀರ್ಮಾನವಾದ ಮೇಲೆ ಪುಂಡಾ ಮಾಮನೇ ದೇವರ ವಿಗ್ರಹನಾಗತಕ್ಕದ್ದೆಂದು ಗೊತ್ತಾಯಿತು. ಅದರ ಮೇರೆಗೆ ಶ್ರೀರಂಗಪಟ್ಟಣದ ಕೋರ್ಟುಗಳ ಆವರಣದಲ್ಲಿ ಒಂದು ಜಾಗವನ್ನು ಪ್ರಶಸ್ತವೆಂದು ಗೊತ್ತುಮಾಡಿಕೊಂಡರು. ಅಲ್ಲಿ ಮಳೆಯಿಂದಲೋ ಏನೋ ಹಳ್ಳವಾಗಿದ್ದ ಜಾಗದಲ್ಲಿ ಕೊಂಚ ತೋಡಿ ಆ ಹಳ್ಳದಲ್ಲಿ ಪುಂಡಾ ಮಾಮನನ್ನು ಕೂಡಿಸಿದರು. ಅನಂತರ ಅವನ ಸುತ್ತ ಮಣ್ಣು ತುಂಬಿ ಹಳ್ಳವನ್ನು ಭರ್ತಿಮಾಡಿ ನೆಲಸಮಕ್ಕೆ ತಂದರು. ಪುಂಡಾ ಮಾಮನ ಮುಖ ಮಾತ್ರ ಮೇಲ್ಗಡೆಗೆ ಕಾಣುತ್ತಿತ್ತು. ಕೊರಳವರೆಗೂ ಮಣ್ಣು ಭರ್ತಿ. ಹೀಗೆ ಮಾಡಿದ ಮೇಲೆ ದೇವರ ಪೂಜೆಗಾಗಿ ಹೂವು ಹಣ್ಣು ಕಾಯಿಗಳನ್ನು ತರಬೇಕೆಂದು ಬಾಲಭಕ್ತರು ಪೇಟೆಗೆ ಹೊರಟುಹೋದರು. ಪುಂಡಾ ಮಾಮನು ಕಣ್ಣುಬಿಟ್ಟುಕೊಂಡು ಗುಣಿಯಲ್ಲಿ ಉಳಿದ.

ಅಷ್ಟು ಹೊತ್ತಿಗೆ ಒಂಭತ್ತೂವರೆ–ಹತ್ತು ಘಂಟೆ. ಕೋರ್ಟಿನ ಕಕ್ಷಿಗಾರರೂ ಉದ್ಯೋಗಸ್ಥರೂ ಬರಲಾರಂಭವಾಯಿತು. ಅವರ ಪೈಕಿ ಯಾರೋ ಒಬ್ಬರು ಪುಂಡಾ ಮಾಮನ ರುಂಡವನ್ನು ನೋಡಿ ಭಯಪಟ್ಟರು. ಹತ್ತಿರ ಹೋಗಿ ನೋಡಿದರು. ಕಣ್ಣುರೆಪ್ಪೆ ಯಾಡಿಸುವುದು ಕಷ್ಟವಾಗಿತ್ತು, ಉಸಿರಾಡುವುದೂ ಕಷ್ಟವಾಗಿತ್ತು. ನೋಡಿದ ಮನುಷ್ಯ ಅದು ಏನೆಂದು ಅರ್ಥವಾಗದೆ ತನ್ನ ಸ್ನೇಹಿತನನ್ನು ಕರೆದ. ಅವರೆಲ್ಲ ಸೇರಿ ಇದನ್ನು ಪರೀಕ್ಷೆಮಾಡಬೇಕೆಂದು ಪುಂಡಾಮಾಮನ ಸುತ್ತ ಇದ್ದ ಮಣ್ಣನ್ನು ಅಗೆದರು. ಅವನ ಮೈಯನ್ನು ನೋಡಿದರು "ಯಾರೋ ಸಣ್ಣ ಹುಡುಗ. ಇವನಿಗೆ ಯಾರೋ ಏನೋ ಮಾಡಿರಬೇಕು" ಎಂದುಕೊಂಡು ಡಾಕ್ಟರನ್ನು ಅಲ್ಲಿಗೆ ಕರೆತಂದರು. ಡಾಕ್ಟರು ಪುಂಡಾ ಮಾಮನನ್ನು ಮರದ ನೆರಳಿನಲ್ಲಿ ಮಲಗಿಸಿ ಶ್ವಾಸಭರ್ತಿ ಮಾಡುತ್ತಿದ್ದರು.

ಈ ವೇಳೆಗೆ ಬಾಲ ಶಿಷ್ಯರು ಹೂವು ಹಣ್ಣುಗಳ ಸಮೇತ ಅಲ್ಲಿಗೆ ಬಂದರು. ತಮ್ಮ ಗುರುವಿನ ಸ್ಥಿತಿಯನ್ನು ನೋಡಿ ಅಳುವುದಕ್ಕೆ ಮೊದಲುಮಾಡಿದರು. ಅಲ್ಲಿದ್ದ ಜನ ತಮ್ಮ ಗುರುವನ್ನು ಹೀಗೆ ಮಾಡಿದರೆಂದು ದೂರಿಟ್ಟು ಗೋಳಾಡಿದರು.

ಆಗ ಆ ಜನ ಏನು ಮಾಡಬೇಕು ? ಹುಡುಗರನ್ನು ಸಮಾಧಾನಪಡಿಸುವುದೇ ಅಥವಾ ಪುಂಡಾ ಮಾಮನ ಉಪಚಾರವನ್ನು ನೋಡಿಕೊಳ್ಳುವುದೇ ?

ಈ ಎರಡು ರಂಪುಗಳ ಮಧ್ಯೆ ಜನ ತಬ್ಬಿಬ್ಬಾಗಿ ನಿಂತರು. ಆಗ ಡಾಕ್ಟರವರ ಸಾಮರ್ಥ್ಯ ಎಲ್ಲರನ್ನೂ ಸಮಾಧಾನಕ್ಕೆ ತಂದಿತು. ಪುಂಡಾ ಮಾಮ ಚೇತರಿಸಿಕೊಂಡ. ಹುಡುಗರು ಸಂತೋಷಪಟ್ಟು ತಾವು ತಂದಿದ್ದ ಹಣ್ಣುಗಳನ್ನು ತಾವೇ ತಿಂದರು. ಜನ ನಗುತ್ತಾ ಅವರವರ ಕೆಲಸಕ್ಕೆ ಹೋದರು. ಇದು ಶ್ರೀಕಂಠಯ್ಯನವರೇ ನನಗೆ ಹೇಳಿದ ಕಥೆ.

* * *

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

## ಇಂಗ್ಲಿಷ್ ಗೀತಗಳು

ಶ್ರೀಕಂಠಯ್ಯನವರ ಇಂಗ್ಲಿಷ್ ಗೀತಗಳಲ್ಲಿಯ ಕೆಲವು ಕವನಗಳು ಮೊದಲು 'ಕರ್ಣಾಟಕ ಗ್ರಂಥಮಾಲೆ' ಎಂಬ ಮಾಸ ಪತ್ರಿಕೆಯಲ್ಲಿ ಆಗಾಗ ಪ್ರಕಟವಾಗಿದ್ದವು. ಎನ್. ಎಸ್. ಸುಬ್ಬರಾಯರವರು ಅವುಗಳನ್ನು ನೋಡಿ ಮೆಚ್ಚಿಕೊಂಡು ನಮಗೆ ಹೇಳಿದರು. ಅವರು ಆ ಕವನಗಳನ್ನು ಸಂಗ್ರಹಮಾಡಿಟ್ಟು ಅಂದವಾಗಿ ಚಿನ್ನದ ಗಿಲ್ಟ್ ತಲೆಬರಹ ಹಾಕಿಸಿ ಬೈಂಡು ಮಾಡಿಸಿಟ್ಟುಕೊಂಡಿದ್ದರು. ಬೈಂಡಿನ ಮೇಲೆ ಸುಂದರವಾದ ಚಿನ್ನದ ಬಣ್ಣದ ಅಕ್ಷರಗಳಲ್ಲಿ ಹೆಸರು ಬರೆಯಿಸಿದ್ದರು. ಅದನ್ನು ನೋಡಿ ನನಗೆ ತುಂಬಾ ಹಿಗ್ಗಾಯಿತು.

ಕರ್ಣಾಟಕ ಗ್ರಂಥಮಾಲೆಯ ಸಂಪಾದಕರಾದ ಬಾಪು ಸುಬ್ಬರಾಯರನ್ನು ನಾನು ಕಂಡು ನನಗೆ ಒಂದು ಸೆಟ್ ಅನುಗ್ರಹಿಸಬೇಕೆಂದು ಬೇಡಿದೆ. ಬಾಪು ಸುಬ್ಬರಾಯರು ಮಹಾರಾಜ ಕಾಲೇಜಿನ ಹೈಸ್ಕೂಲ್ ತರಗತಿಯಲ್ಲಿ ನನಗೆ ಉಪಾಧ್ಯಾಯರಾಗಿದ್ದರು. ಆದರೆ ಅವರಿಗೆ ನನ್ನಲ್ಲಿದ್ದ ಅಭಿಮಾನ ನನ್ನ ವಿದ್ಯಾರ್ಥಿತ್ವದಿಂದುಂಟಾದದ್ದಲ್ಲ. ಅವರು ನೈಜವಾಗಿ ಮೃದುಹೃದಯಿಗಳು, ವಿಶ್ವಾಸಪರರು. ಅವರು ದಯಮಾಡಿ ನನಗೆ 'ವಿದ್ಯಾದಾಯಿನಿ' ಪತ್ರಿಕೆಯ ಸಮಗ್ರ ಸಂಪುಟಗಳನ್ನೂ 'ಕರ್ಣಾಟಕ ಗ್ರಂಥಮಾಲೆ'ಯ ಸಮಗ್ರ ಸಂಪುಟಗಳನ್ನೂ ಕೊಟ್ಟರು. ನಾನೂ ಅವನ್ನೆಲ್ಲ ಬೈಂಡು ಮಾಡಿಸಿಟ್ಟುಕೊಂಡಿದ್ದೆ. ಆದರೆ ಆ ಕಾಲದಲ್ಲಿ ಬಿ. ಎಂ. ಶ್ರೀಕಂಠಯ್ಯನವರ ಇಂಗ್ಲಿಷ್ ಗೀತಗಳ ಪ್ರಭಾವ ಎಷ್ಟು ದೂರ ಹೋದೀತೆಂಬುದರ ಕಲ್ಪನೆ ನನಗೆ ಬಂದಿರಲಿಲ್ಲ. ಅದು ಒಂದು ಒಳ್ಳೆಯ ಎಕ್ಸ್‌ಪೆರಿಮೆಂಟ್ (ಪ್ರಯೋಗ ಪರೀಕ್ಷೆ) ಎಂದು ಭಾವಿಸಿದ್ದೆ.

ಇಂಗ್ಲಿಷ್ ಗೀತಗಳನ್ನು ಸಮಗ್ರ ಆಕಾರದಲ್ಲಿ ಮೊದಲು ಪ್ರಕಟಮಾಡಿದ ಕೀರ್ತಿ ಬೆಂಗಳೂರು ಕರ್ಣಾಟಕ ಸಂಘದ್ದು. ಅದು ಮುಖ್ಯವಾಗಿ ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿ — ಇವರಿಬ್ಬರ ಕೆಲಸ. ಅವರಿಬ್ಬರೂ ಶ್ರೀಕಂಠಯ್ಯನವರ ಶಿಷ್ಯರು. ಇಬ್ಬರೂ ಸಾಹಿತ್ಯ ನಿಷ್ಣಾತರಾಗಿದ್ದುದರಿಂದ ಇಂಗ್ಲಿಷ್ ಗೀತಗಳ ಮೌಲ್ಯವು ಸಾಹಿತ್ಯದೃಷ್ಟಿಯಿಂದ ಉತ್ಕೃಷ್ಟವಾದದ್ದೆಂದು ಅವರು ಉತ್ಸಾಹಪಟ್ಟು ಗುರುಗಳ ಒಪ್ಪಿಗೆಯನ್ನು ಪಡೆದರು. ಪುಸ್ತಕ ಮುದ್ರಿತವಾಗಿ ಬಂದಮೇಲೆ ಸೆಂಟ್ರಲ್ ಕಾಲೇಜಿನಲ್ಲಿ ಒಂದು ಸಂತೋಷಕೂಟವನ್ನು ಏರ್ಪಡಿಸಿದ್ದರು. ನಾನು ಅದಕ್ಕೆ ಹೋಗಿದ್ದೆ ಆ ಸಮಾರಂಭ ಸೆಂಟ್ರಲ್ ಕಾಲೇಜಿನ ಎದುರಿನ ಡಿಸ್ಟ್ರಿಕ್ಟ್ ಆಫೀಸ್ ಆವರಣದಲ್ಲಿರುವ ಹೊಸ ಕಟ್ಟಡದ ಮಹಡಿಯ ಮೇಲೆ ಎಂದು ನನ್ನ ಜ್ಞಾಪಕ. ಆ ಹೊತ್ತಿನ ತಿಂಡಿಗಳು ಕೃಷ್ಣಶಾಸ್ತ್ರಿಗಳ ದರ್ಜೆಯನ್ನು ಮೀರಿಸುವಂತಿದ್ದವು. ಹಣ್ಣುಗಳು, ಕಾಫಿ, ಲೆಮನೇಡ್—ಎಲ್ಲ ಇದ್ದವು. ಸಭಿಕರು ಕೋರಿದಂತೆ ಶ್ರೀಕಂಠಯ್ಯನವರು ಕೆಲವು ಗೀತಗಳನ್ನು ಓದಿದರು.

ಜೇಟಕಾರ ಬಂದ ನೂದ

ಹಹಹ ! ಏನು ಜೇಟವೋ !

(ಜೇಟ ಎಂದರೆ ಪ್ರಣಯ). ಇದನ್ನು ಓದಿದಾಗ ನಾನು ಒಂದು ಬಗೆಯಾಗಿ ಕಣ್ಣು ಮೊನಚುಮಾಡಿ ಶ್ರೀಕಂಠಯ್ಯನವರ ಕಡೆ ನೋಡಿದೆ. ಅವರು ನನ್ನ ಕಡೆ ನೋಡಿ ನಕ್ಕು "ಇದರಲ್ಲಿ ಸ್ವಾನುಭವವೇನೂ ಇಲ್ಲ" ಎಂದರು. ನಾನು "ಹಾಗಾದರೆ ನಿಮಗೆ ಯಾಕೆ ಉಳುಕು ?" ಎಂದೆ. ಆ ಹೊತ್ತು ನಗುವೇ ನಮ್ಮ ಭಾಷೆ.

ಅದಾದ ಮೇಲೆ ನಾನು ಮೆಲ್ಲಗೆ

ಊಟಗಾರ ಗುಂಡ ಬಂದ

ಆಹಾ ! ಏನು ಊಟವೋ !

—ಇಂಥ ಮೂರು ನಾಲ್ಕು ಪಂಕ್ತಿಗಳನ್ನು ಸೇರಿಸಿದೆ. ಅವರಿಗೆ ಕೋಪ ಬಂತು.

"ಹೀಗೆ ಅಣಕಿಸುವುದಕ್ಕೆ ಶುರುಮಾಡಿದರೆ ನೀವು ಯಾವುದನ್ನು ಬಿಡುತ್ತೀರಿ ? What is safe ?"

"ಹಾಗಲ್ಲ ಸಾರ್. ಕನ್ನಡದಲ್ಲಿ ಪ್ರಾಸ ಸಂಪತ್ತು ಎಷ್ಟು ಹುಲುಸಾಗಿದೆ ಎಂಬುದನ್ನು ತೋರಿಸುವುದಕ್ಕೆ ಹೊರಟೆ."

ಅವರೂ ನಕ್ಕರು.

'ಹುಲುಸು' ಎಂಬುದು ಶ್ರೀಕಂಠಯ್ಯನವರಿಗೆ ಪದೇ ಪದೇ ಬರುತ್ತಿದ್ದ ಮಾತು.

ಇಂಗ್ಲಿಷ್ ಗೀತಗಳ ಮುಖಪತ್ರದ ಮೇಲೆ "ಬೆಳೆಯೇನೋ ಜೇಕಾದ ಹಾಗಿದೆ. ಕುಯ್ಯುವವರು ಕಡಮೆ" ಎಂಬ ಮಾತುಗಳಿಂದ ಒಂದು ಬೈಬಲಿನ ಸೂಕ್ತಿಯನ್ನು ಕೊಟ್ಟಿದ್ದರು. ಇದನ್ನು 'ಕೊರವಂಜಿ' ಮಹಾಶಯರು "ಕೊರಳೇನೋ ಉದ್ದವಾಗಿದೆ, ಕುಯ್ಯುವವರು ಕಡಮೆ" ಎಂದು ಅಣಕಿಸಿದರು.

ಮೇಲಿನ ನನ್ನ ಅಣಕದಿಂದ ಇನ್ನೂ ಹೆಚ್ಚು ಕೋಪಗೊಂಡವರು ವೆಂಕಣ್ಣಯ್ಯ. ಅವರ ಗುರುಭಕ್ತಿ ಮಿತಿಯಿಲ್ಲದ್ದು. ಅವರನ್ನು ಸಮಜಾಯಿಷಿ ಮಾಡುವುದು ನನಗೆ ಅಸಾಧ್ಯವಾದ ಕೆಲಸವಾಗಿರಲಿಲ್ಲ.

ಬಿ. ಎಂ. ಶ್ರೀಕಂಠಯ್ಯನವರ ಇಂಗ್ಲಿಷ್ ಗೀತಗಳ ಪೀಠಿಕೆ ('ಕಾಣಿಕೆ')ಯಲ್ಲಿ

ಹೀಗೆ ನನಗೆ ಹಬ್ಬವಾಗಿ,
ಇನಿಯರಿಬ್ಬರನ್ನು ತೂಗಿ,
ಇವಳ ಸೊಬಗನವಳು ತೊಟ್ಟು ನೋಡ ಬಯಸಿದೆ;
ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸಿದೆ.

—ಎಂದಿತ್ತಷ್ಟೆ ? ಇದನ್ನು ಕುರಿತು ನಾನು "ಇದು ಬಹಳ ಚೆನ್ನಾಗಿದೆ ಸಾರ್,

ಒಳ್ಳೆಯ ಏರ್ಪಾಟು. ನಮ್ಮ ಜನದ ಟೇಸ್ಟ್ (ಅಭಿರುಚಿ) ತಿದ್ದಬೇಕು ಸಾರ್"— ಎಂದೆ. ಅವರು "ಏನು, ಕುಚೋದ್ಯ ಮಾಡುತ್ತೀಯೇನಪ್ಪ?" ಎಂದು ಮುನಿಸಿನ ಧ್ವನಿಯಲ್ಲಿ ಕೇಳಿದರು. ನಾನು: "ಉಂಟೆ? ವಿಷಯ ಚೆನ್ನಾಗಿ ಗೊತ್ತುಮಾಡಿ ಕೊಳ್ಳೋಣವೆಂದು ಕೇಳಿದೆ. ನೀವು ಉಡಿಸಿದ್ದಕ್ಕೆ ಅವರು ಒಪ್ಪಿಕೊಂಡರೋ?" ಶ್ರೀ: "ಒಪ್ಪಿಕೊಳ್ಳದೆ ಏನು ಮಾಡುತ್ತಾರೆ?"

ನಾನು ಹೇಳಿದೆ: "ಅದು ಹೇಗೆ ಹೇಳುವುದು ಸಾರ್? ಮುಖ ಗಂಟಿಕ್ಕಿ ಬುಸು ಗುಟ್ಟುತ್ತಾ ನಿಂತರೆ ನೋಡುವುದಕ್ಕಾಗುತ್ತದೆಯೆ? ನಮ್ಮ ಸ್ನೇಹಿತರು ಶ್ರೀ ಅಬಕಡ ರಾಯರು ತಮ್ಮ ಹೆಂಡತಿಗೆ ಪರಂಗಿ ಫ್ಯಾಷನ್ನಿನ ಎತ್ತು ಹಿಮ್ಮಡಿ (High heeled shoe) ಜೋಡನ್ನು ತೊಡಿಸಿ ಡಾಗ್‌ಕಾರ್ಟ್ ಬಂಡಿಯಲ್ಲಿ ಕರೆತಂದು ಲಾಲ್‌ಬಾಗಿನ ಗ್ಲಾಸ್‌ಹೌಸಿನ ಮುಂದೆ ಇಳಿಸಿ ಅಲ್ಲಿ ನಡೆದಾಡಬೇಕೆಂದರು. ಆಕೆ 'ನಾನು ಹಳೆಯ ಕಾಲದವಳು, ಇದೆಲ್ಲ ನನ್ನಿಂದ ಆಗತಕ್ಕದ್ದಲ್ಲ. ಇದಕ್ಕೆಲ್ಲ ಬೇಕಾದರೆ ಹೊಸದೊಂದನ್ನು ಮಾಡಿಕೊಳ್ಳಿ' — ಎಂದುಬಿಟ್ಟಳು. ನಾವು ಮೂರು ನಾಲ್ಕು ಮಂದಿ ಸ್ನೇಹಿತರು ಅಲ್ಲಿ ಬೆಂಚಿನ ಮೇಲೆ ಕುಳಿತಿದ್ದೆವು. ನಮಗೆ ಆ ಸಂಭಾಷಣೆ ಕೊಂಚ ಕೊಂಚ ಕೇಳಿಸಿತು. ಆಮೇಲೆ ನಾನು ಅಬಕಡನನ್ನು ಕರೆದು 'ಏನೋ ಜೆಪ್ಪತಕ್ಕಡಿ, ನಿನಗೇಕೋ ಈ ಜೇಷ್ಟೆಯೆಲ್ಲ?' ಎಂದು ಕೇಳಿದೆ. ಆತನೂ ನಕ್ಕುಬಿಟ್ಟ. ಹೀಗೆ ಹೆಂಗಸರು ಮುನಿದರೆ ತಮ್ಮ ಉಪಾಯವೇನೋ, ಅಪ್ಪಣೆಯಾಗಬೇಕು."

ನಗುವಿನಲ್ಲಿ ಸಂಭಾಷಣೆ ಪರ್ಯವಸಾನವಾಯಿತು.

* * *

## ಹಾಸ್ಯ ಪ್ರಸಂಗಗಳು

ಬಿ. ಎಂ. ಶ್ರೀಕಂಠಯ್ಯನವರಿಗೂ ನನಗೂ ನಡೆಯುತ್ತಿದ್ದ ಹಾಸ್ಯಪ್ರಸಂಗಗಳಲ್ಲಿ ಒಂದು ಅವರ ಕುಲಪ್ರಭೇದದ ಹೆಸರನ್ನು ಕುರಿತದ್ದು. ಅವರು ಬಬ್ಬೂರ ಕಮ್ಮೆಗಳು.

ನಾನು 'ಬಬ್ಬೂರ್' ಎಂಬ ಶಬ್ದ ಮೂಲದಲ್ಲಿ 'ಬರ್ಬರ'; ಬರ್ಬರರು, ಯವನರು, ಮ್ಲೇಚ್ಛರು — ಇವರೆಲ್ಲ ಕಾಮಧೇನು ವಿಶ್ವಾಮಿತ್ರರ ಮೇಲೆ ಆಗ್ರಹಮಾಡಿ ಮ್ಯೆ ಕೊಡಹಿದಾಗ ಅವರ ಪುಚ್ಛಸ್ಥಾನದಿಂದ ಹುಟ್ಟಿದವರು. ಪುಚ್ಛಸ್ಥಾನದಿಂದ ಬರಬರ ಶಬ್ದ ಹೊರಟಿತು. ಆದ್ದರಿಂದ ಅವರು ಬರ್ಬರರೆನಿಸಿಕೊಂಡರು. ಬ್ರಾಹ್ಮಣ ಶಬ್ದವೂ ಹಾಗೆಯೇ ಎನ್ನುವವರುಂಟು. ನಂದಿಕೇಶ್ವರನು ಬರ್ ಎಂದು ಶಬ್ದಮಾಡಿದನಂತೆ. ಭೃಂಗಿಯು ಮಣ ಮಣ ಶಬ್ದಮಾಡಿದನಂತೆ. ಹಾಗೆ ಬ್ರಾಮಣ ಶಬ್ದ ಹುಟ್ಟಿತು. ಇದೇ ಹೋಲಿಕೆಯ ಮೇಲೆ ಬರ್ಬರ ಶಬ್ದ ಹುಟ್ಟಿತು.

ಬರ್ಬರ ಎಂದರೆ ವಾಯು. ಏಕೆಂದರೆ ಅದು ಭರ್ರೆಂದು ಬೀಸುತ್ತದೆ. ಹೀಗೆ ವಾಯುವಿನಿಂದ ಉತ್ಪನ್ನವಾದ ಶಬ್ದಕ್ಕೆ ಪ್ರತೀಕವಾಗಿ ಬರ್ಬರಧಾನ್ಯವಿರುತ್ತದೆ. ಅದನ್ನೇ ನಿಷ್ಪಾವಕ ಎಂದೂ ಹೇಳುತ್ತಾರೆ. ಎಂದರೆ ಜೋರಾಗಿ ಬೀಸುವುದು— ಎಂದರ್ಥ. ಬರ್ಬರಧಾನ್ಯವಾದರೋ ಅಂಗಾರಕ ಗ್ರಹಕ್ಕೆ ಪ್ರಿಯವಾದದ್ದು.

ಬರ್ಬರಾಸ್ಸರ್ವಜಂತೂನಾಂ ಬಲಪುಷ್ಟಿವಿವರ್ಧನಮ್ ||

ಅಂಗಾರಕನಾದರೋ ಕ್ಷೌರಕನಿಗೆ ಅಭಿಮಾನದೇವತೆ. ಈ ಕಾರಣದಿಂದಲೇ ಇಂಗ್ಲಿಷಿನಲ್ಲಿ ಅವನನ್ನು ಬಾರ್ಬರ್ ಎಂದು ಕರೆಯುವುದು.

ಹೀಗೆ ಬಬ್ಬೂರಕಮ್ಮೆಗಳ ಆನುಪೂರ್ವಿ— ಎಂದು ನಾನು ಅಸಂಬದ್ಧವಾಗಿ ಪ್ರತಿಪಾದನೆ ಮಾಡೋಣ ; ಶ್ರೀಕಂಠಯ್ಯನವರು "ಏನಪ್ಪಾ— ನಮ್ಮನ್ನು ಅಲ್ಲಿಗಿಳಿಸಿಬಿಟ್ಟಿದ್ದೀರಿ" ಎಂದೂ "ಒಳ್ಳೆಯ ಫೈಲಾಲಜಿ ನಿಮ್ಮದು" ಎಂದೂ ಹೇಳಿ ನಗುತ್ತಿದ್ದರು.

ಒಂದು ದಿನ ಸೆನೇಟ್ ಸಭೆ ನಡೆಯುತ್ತಿದೆ. ಬ್ರಜೇಂದ್ರನಾಥ ಸೀಲ್‌ರವರು ವೈಸ್‌ಚಾನ್ಸೆಲರು, ಮತ್ತು ಸಭಾಧ್ಯಕ್ಷರು. ಅವರ ಪಕ್ಕದಲ್ಲಿ ಶ್ರೀಕಂಠಯ್ಯನವರು ರಿಜಿಸ್ಟ್ರಾರರಾಗಿ ಗಂಭೀರ ಮುದ್ರೆಯಿಂದ ಕುಳಿತಿದ್ದಾರೆ. ಸಭಿಕರೊಬ್ಬರು ಕಟುಕಟುವಾದ ಪ್ರಶ್ನೆಗಳನ್ನು ಹಾಕುತ್ತಿದ್ದಾರೆ— ಒಬ್ಬಿಬ್ಬರು ದೊಡ್ಡ ಮನುಷ್ಯರನ್ನು ಕುರಿತು. ನನಗೆ ಆ ಪ್ರಶ್ನೆಗಳ ಧ್ವನಿ ನ್ಯಾಯವೆನ್ನಿಸಲಿಲ್ಲ. ಒಂದು ಸಣ್ಣ ಚೀಟಿಯಲ್ಲಿ ಒಂದೆರಡು ಪಂಕ್ತಿ ಬರೆದು ಅದನ್ನು ಲಕ್ಕೋಟೆಯಲ್ಲಿ ಭದ್ರಪಡಿಸಿ ಆಳಿನ ಕೈಯಿಂದ ಶ್ರೀಕಂಠಯ್ಯನವರಿಗೆ ಕಳಿಸಿದೆ. ಅವರು ಲಕ್ಕೋಟೆಯೊಡೆದು ನೋಡಿಕೊಂಡರು. ಮುಖ ಅರಳಿತು. ನನ್ನ ಕಡೆ ನೋಡಿ ಕೈಸನ್ನೆಮಾಡಿದರು. ನಾನು ಎದ್ದು ಹಿಂದುಗಡೆಯ ಕೋಣೆಗೆ ಹೋದೆ. ಅವರೂ ಅಲ್ಲಿಗೆ ಬಂದರು. ನನ್ನ ಚೀಟಿಯನ್ನು ನನಗೆ ತೋರಿಸಿ "ತೋಡಿ ರಾಗದಲ್ಲಿ ಹಾಡತಕ್ಕದ್ದು ಎಂದು ನೇಮಕ ಮಾಡಿದ್ದೀರಲ್ಲಾ— ನನಗೆ ತೋಡಿ ರಾಗ ಬರುವುದಿಲ್ಲ. ಕೊಂಚ ಅಪ್ಪಣೆಯಾಗಲಿ" ನಗುನಗುತ್ತಾ ಕೇಳಿದರು. ನಾನು ಬರೆದಿದ್ದದ್ದು ಹೀಗಿತ್ತು :

ಗೋಳಂ ಪೊಯ್ಕೊಳ್ಳುವನೀ |
....ಳಿಯುವುಗನೇತಕಿಂತು ಸುಜನರನಕಟಾ ||
ಕೋಳಿಯ ಕೂಗೇಂ ಗ್ರಂಥಂ !
ಬೋಳಿಯ ತಲೆಯೊಂದು ರಾತ್ರಿಯೊಳ್ ತುರುಬಹುದೇಂ ||

ಇದನ್ನು ಕೇಳಿ ಹೊರಟ ನಗು ಸಭಿಕರಲ್ಲಿ ಕೆಲವರ ಕಿವಿಯನ್ನು ಮುಟ್ಟಿತು. ಅವರೂ ಬಂದು ನಮ್ಮ ನಗುವಿನಲ್ಲಿ ಕಲೆತರು.

* * *

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

## ತಕರಾರುಗಳು

ಬಿ. ಎಂ. ಶ್ರೀಕಂಠಯ್ಯನವರಿಗೂ ನನಗೂ ಅಭಿಪ್ರಾಯಭೇದ ಅಪರೂಪವೇನೂ ಅಲ್ಲ. ಎಷ್ಟೋ ವಿಷಯಗಳಲ್ಲಿ ತಕರಾರುಗಳು. ವ್ಯಾಕರಣ ವಿಷಯದಲ್ಲಿ, ಶಬ್ದ ಸೌಷ್ಠವದ ವಿಷಯದಲ್ಲಿ, ಅಕ್ಷರಪರಿಷ್ಕರಣದ ವಿಷಯದಲ್ಲಿ, ಅನ್ಯಭಾಷಾಸ್ವೀಕಾರ ವಿಷಯದಲ್ಲಿ, ಸಾಹಿತ್ಯದಲ್ಲಿ ಮೌಲ್ಯ ತಾರತಮ್ಯ ವಿಷಯದಲ್ಲಿ ಚರ್ಚೆಗಳು ಬರುತ್ತಿದ್ದುವು. ಪರಿಷತ್ತಿನ ಸಮ್ಮೇಳನಕ್ಕೆ ಹೋದಾಗಲೋ ಬೇರೆ ಯಾವ ಸಂದರ್ಭದಲ್ಲಿಯೋ ನಾವಿಬ್ಬರು ಒಂದು ಘಂಟೆಯ ಕಾಲ ಕುಳಿತು ಮಾತನಾಡುವ ಅವಕಾಶ ದೊರೆತಾಗ ಯಾವುದೋ ಒಂದು ಚರ್ಚಾಘಟ್ಟ ತಲೆಯೆತ್ತುತ್ತಿತ್ತು. ಸಮ್ಮೇಳನಗಳಿಗೆ ಹೋದಾಗ ನಾವಿಬ್ಬರೂ ಬಹುಮಟ್ಟಿಗೆ ಒಂದೇ ಕೋಣೆಯಲ್ಲಿ ಬಿಡಾರ ಮಾಡುತ್ತಿದ್ದೆವಷ್ಟೆ. ಅದರಲ್ಲಿ ಕಾದಾಟದ ಆಕರ್ಷಣೆಯೂ ಒಂದು. ರಾತ್ರಿ ಹನ್ನೆರಡು–ಒಂದು ಘಂಟೆಯವರೆಗೂ ನಡೆಯುತ್ತಿತ್ತು ಚರ್ಚೆ.

"ರಾಮಾಯಣದ ಕವಿಯು ಇಲಿಯಡ್‌ನಿಂದ ಕದ್ದಿಲ್ಲವೆಂದು ಹೇಗೆ ಖಂಡಿತ ಪಡಿಸುತ್ತೀರಿ ?"

"ಹೋಮರ್ ಕವಿಯು ರಾಮಾಯಣದಿಂದ ಪ್ರಭಾವಿತನಾಗಿಲ್ಲವೆಂದು ನೀವು ಹೇಗೆ ಸಿದ್ಧಾಂತಮಾಡುತ್ತೀರಿ ?"

"ಎಜಾಕ್ಸನನ್ನು ಅಶ್ವತ್ಥಾಮನನ್ನಾಗಿ ಏಕೆ ಪರಿವರ್ತಿಸಬೇಕು ? ಎಜಾಕ್ಸ್ ಆಗಿಯೇ ಏಕೆ ಉಳಿಯಬಾರದು ?"

"ಪ್ರೊಮೀಥಿಯಸ್ಸನನ್ನು ಮಾತರಿಶ್ವನೆಂದು ಏಕೆ ಹೇಳಬೇಕು ? ಉಷರ್ಬುಧನೆಂದು ಏಕೆ ಕರೆಯಬಾರದು ?"

—ಇಂಥವು ಪ್ರಶ್ನೆಗಳು : ಮುರಿದದ್ದಲ್ಲ ಹರಿದದ್ದಲ್ಲ ವಾಗ್ವಾದ. "ಇವಳ ತೊಡಿಗೆಯವಳಿಗುಡಿಸಿ" ನೋಡುವ ಪ್ರಕರಣಗಳು. ಅದರಲ್ಲಿ ಉಪಕಥೆಗಳೂ ಕುಚೋದ್ಯಗಳೂ ಬರುತ್ತಿದ್ದುವು.

* * *

## ಕೆಲವು ಪದಪ್ರಯೋಗಗಳು

ಬಿ. ಎಂ. ಶ್ರೀಕಂಠಯ್ಯನವರಿಗೂ ನನಗೂ ನಡೆದ ತರ್ಕ ಪ್ರಸಂಗಗಳಲ್ಲಿ ನನ್ನ ದೃಷ್ಟಿಯಿಂದ ಅತಿ ಮುಖ್ಯವಾದದ್ದು ಕನ್ನಡ ವ್ಯಾಕರಣವನ್ನು ಕುರಿತದ್ದು. ನಾವಿಬ್ಬರೂ ಬಹು ಚರ್ಚೆಮಾಡಿ ಒಟ್ಟಿಗೆ ಒಂದು ನಿರ್ಧಾರಕ್ಕೆ ಬಂದೆವು.

(೧) ನಡಸು, ನಡೆಸು, ನಡೆಯಿಸು, ನಡಿಸು ಇತ್ಯಾದ್ಯನೇಕ ರೂಪಗಳಲ್ಲಿ ನಾವಿಬ್ಬರೂ 'ನಡಸು' ಎಂಬ ರೂಪವನ್ನೇ ಬಳಸತಕ್ಕದ್ದು. ಮಿಕ್ಕ ಪ್ರಯೋಗಗಳು ತಪ್ಪೆಂದಲ್ಲ. ಕೆಲವು ಕಾರಣಗಳಿಂದ 'ನಡಸು' ಅನುಕೂಲ.

(೨) ಹಾಗೆಯೇ ಬರೆಯಿಸು, ಬರಿಸು, ಬರೆಸು ಮೊದಲಾದ ರೂಪಗಳಲ್ಲಿ ನಾವು 'ಬರಸು' ಎಂಬುದನ್ನೇ ಬಳಸತಕ್ಕದ್ದು. ಇದೂ ಅನುಕೂಲದೃಷ್ಟಿಯಿಂದ.

(೩) 'ಕಡಮೆ' ಎಂಬ ರೂಪವನ್ನೇ ಬಳಸತಕ್ಕದ್ದು. ಕಡಿಮೆ ಎಂಬ ರೂಪಕ್ಕೆ ಸಮರ್ಥನೆ ಹೇಳಬಹುದು. ಆದರೆ ಕಡಮೆ ('ಕಡ' ಎಂಬುದರಿಂದ) ಹೆಚ್ಚು ಅನುಕೂಲ.

(೪) ಇಂಗ್ಲಿಷ್ ಭಾಷೆಯ ಪದಗಳನ್ನು ಉರ್ದು ಮೊದಲಾದ ಪದಗಳನು ಉಪಯೋಗಿಸುವಂತೆ ನಿರಾತಂಕವಾಗಿ ಉಪಯೋಗಿಸಬಹುದು.

(೫) ಇಂಗ್ಲಿಷಿನಿಂದ ಬಂದ ಪಾರಿಭಾಷಿಕ (ಟೆಕ್ನಿಕಲ್) ಪದಗಳನ್ನು ಹಾಗೆ ಹಾಗೆಯೇ— ಅವು ಸಂಕೇತನಾಮಗಳಾಗಿದ್ದರೆ ಹೇಗೋ ಹಾಗೆ— ಬಳಸಬಹುದು. ಕೋರ್ಟು ಎಂಬುದಕ್ಕೆ ಕೋರ್ಟು ; ಎಲೆಕ್ಟ್ರಿಸಿಟಿ ಎಂಬುದಕ್ಕೆ ಎಲೆಕ್ಟ್ರಿಸಿಟಿ ; ಹೆಲಿಕಾಪ್ಟರ್ ಎಂಬುದಕ್ಕೆ ಹೆಲಿಕಾಪ್ಟರ್; — ಲಂಡನ್ನಿಗೆ ಲಂಡನ್ ಎನ್ನುವಂತೆ. ಪಾರಿಭಾಷಿಕ ಪದಕ್ಕೆ ಕನ್ನಡದಲ್ಲಿಯೋ ಸಂಸ್ಕೃತದಲ್ಲಿಯೋ ಪ್ರತಿಪದವನ್ನು ತಯಾರು ಮಾಡಿ ಉಪಯೋಗಿಸುವೆವೆಂದರೆ ಅದಕ್ಕೆ ನಮ್ಮ ಆಕ್ಷೇಪಣೆಯಿಲ್ಲ. ಇದು ಐಚ್ಛಿಕ ವಿಷಯ. ನಮಗೆ ಮುಖ್ಯವಾದ ಗುಣವು ಸೌಲಭ್ಯ— ಅರ್ಥದ ಸುಲಭತೆ, ಉಚ್ಚಾರಣೆಯ ಸುಲಭತೆ, ಲಿಪಿಯ ಸುಲಭತೆ.

(೬) ಕನ್ನಡದಲ್ಲಿ ಎಷ್ಟೋ ಪದಪ್ರಯೋಗಗಳು ವ್ಯಾಕರಣಶಾಸ್ತ್ರದ ದೃಷ್ಟಿಯಿಂದ ತಪ್ಪೆನಿಸಿದರೂ ಬಹುಕಾಲದ ಜನರೂಢಿಯಿಂದ ಅವಸರದ ಉಪಯೋಗಕ್ಕೆ ಅನುಕೂಲವಾಗಿವೆ. ಇಂಥ ಅಸಾಧು ಪ್ರಯೋಗಗಳು ಇಂಗ್ಲಿಷಿನಲ್ಲಿಯೂ ಹೇರಳವಾಗಿವೆ. ಆದರೆ ಇಂಗ್ಲಿಷ್ ವೈಯಾಕರಣರು ಅವುಗಳನ್ನು "Sturdy Indefensibles"— ಬಲಿಷ್ಠವಾದ ಅಕ್ಷಮ್ಯಗಳು— ಎಂದು ಅಂಗೀಕರಿಸಿಕೊಂಡಿದ್ದಾರೆ. ಈ ತತ್ತ್ವ ಕನ್ನಡಿಗರಿಗೂ ಅನುಕರಣೀಯವಾಗಿದೆ.

(೭) ನಾವು ಕೂಡಿದಮಟ್ಟಿಗೂ ಶಬ್ದಸಂಪತ್ತನ್ನು ವೃದ್ಧಿಮಾಡಿಕೊಳ್ಳಬೇಕೇ ಹೊರತು ಕಡಮೆ ಮಾಡಬಾರದು. ಇದು ತಪ್ಪು, ಅದು ಅಶುದ್ಧ, ಇದು ಗ್ರಾಮ್ಯ, ಅದು ಅನ್ಯದೇಶೀಯ ಎಂದು ಮಾತುಗಳನ್ನು ತಳ್ಳಿಹಾಕುತ್ತಾ ಹೋದರೆ ಕಡೆಗೆ ಉಳಿಯುವುದು ನಮ್ಮ ಇಂದಿನ ಕೆಲಸಕ್ಕೆ ಹೇಗೆ ಸಾಕಾದೀತು ? ಭಾಷಾವಿಷಯದಲ್ಲಿಯೂ ಉದಾರದೃಷ್ಟಿ ಅವಶ್ಯ.

ಶ್ರೀಕಂಠಯ್ಯನವರ ' ಕನ್ನಡ ಮಾತು ತಲೆಯೆತ್ತುವ ಬಗೆ ' ಎಂಬ ಉಪನ್ಯಾಸ ಇಂದಿಗೂ ಉಪಯುಕ್ತವಾಗಿದೆ. ಕನ್ನಡದ ಉತ್ಸಾಹಿಗಳು ಅದರಲ್ಲಿ ವಿಚಾರಾರ್ಹವಾದ ಅಂಶಗಳನ್ನು ಗಮನಿಸಬೇಕೆಂದು ಬೇಡುತ್ತೇನೆ.

* * *

## ಹೊಂಗನಸುಗಳು

'ಹೊಂಗನಸುಗಳು' ಎಂಬ ಚಿಕ್ಕ ಕವನ ಸಂಗ್ರಹವು ಪ್ರಕಟವಾದಾಗ ನಾನು ಶ್ರೀಕಂಠಯ್ಯನವರಿಗೆ ಪತ್ರ ಬರೆದದ್ದು ಜ್ಞಾಪಕವಿದೆ. ಆಗ ಅವರು ಎಲ್ಲಿಯೋ ದೂರ ದಲ್ಲಿದ್ದರು. ನನ್ನ ಮಾತುಗಳಿಂದ ತಮಗೆ ಸಂತೋಷವಾಯಿತೆಂದು ಅವರು ಹೇಳಿದರು. ನಾನು ಏನು ಬರೆದಿದ್ದೆನೋ ಆ ಮಾತುಗಳು ಈಗ ಜ್ಞಾಪಕವಿಲ್ಲ. ಆದರೆ ಅಭಿಪ್ರಾಯ ಹೀಗೆ : " ನೀವು ಅನೇಕ ಹೊಸ ಪ್ರಯೋಗಗಳನ್ನು ಮಾಡಿದ್ದೀರಿ. ನಿಮ್ಮ ಪಾಂಡಿತ್ಯ ದಿಂದಲೂ ಔಚಿತ್ಯ ವಿಚಕ್ಷಣೆಯಿಂದಲೂ ನಿಮ್ಮ ಪದ್ಯಗಳಿಗೆ ಓಜಸ್ಸೂ ಕಾಂತಿಯೂ ಬಂದಿವೆ. ಆದರೆ ಅವು ಸುಲಭವಾಗಿರುವ ಕಾರಣದಿಂದ ಹಾಗೆ ಬರೆಯುವುದು ಸುಲಭ ವೆಂದು ಅಸಂಸ್ಕೃತರು ಭ್ರಮಿಸಿ ಮೋಸಹೋದಾರು. ನೀವು ಕೆಲವು ರೂಢಿಯಾದ ನಿಯಮಗಳನ್ನು ಒತ್ತಟ್ಟಿಗಿಟ್ಟಿದ್ದೀರಿ. ನಿಮ್ಮಂತೆ ಪೂರ್ವಸಾಹಿತ್ಯ ಪರಿಜ್ಞಾನವಿರುವ ವರು ಮಾತ್ರ ಹಾಗೆ ಮಾಡಬಹುದು. ಇತರರು ನಿಯಮೋಲ್ಲಂಘನೆ ಮಾಡುತ್ತಾ ಹೋದರೆ ಸಾಹಿತ್ಯಕ್ಕೆ ಹಾನಿಯಾದೀತು. ನಾವು ಹಳೆಯ ನಿಯಮಕ್ಕೆ ಗುಲಾಮ ರಾಗಿರಬೇಕಾದದ್ದಿಲ್ಲ. ಹೊಸ ಭಾವನೆಗಳಿಗೂ ಹೊಸ ವಿಚಾರಗಳಿಗೂ ಹೊಂದುವಂತೆ ಹೊಸ ನುಡಿಗಟ್ಟು ಬೇಕೇಬೇಕಾಗುತ್ತದೆ. ಆದರೆ ಅದನ್ನು ಮಾಡುವವರು ಭಾಷಾ ಮರ್ಮಜ್ಞರಾಗಿ ವಿಚಾರವಂತರಾಗಿರಬೇಕು. ಛಂದಸ್ಸಿನ ವಿಷಯಕ್ಕೂ ಈ ನನ್ನ ಮಾತು ಅನ್ವಯಿಸಬೇಕಾದದ್ದು. ನಿಮ್ಮಂತೆ ಹಳೆಗನ್ನಡದ ಗ್ರಂಥಗಳನ್ನೂ ಶಾಸನ ಸಾಹಿತ್ಯವನ್ನೂ ನಾನಾ ಪ್ರಾಂತಗಳ ಭಾಷಾ ರೂಢಿಯನ್ನೂ ಪರಾಮರ್ಶೆಮಾಡಿ ಇಂಗ್ಲಿಷ್ ಸಾಹಿತ್ಯದ ಧೋರಣೆಯನ್ನು ಸ್ವಾಧೀನಪಡಿಸಿಕೊಂಡಿರುವವರು ನಿಜವಾದ ಮಾರ್ಗದರ್ಶಕರು. ಅವರನ್ನನುಕರಣೆ ಮಾಡಹೊರಡುವವರು ಆ ವಿಧವಾದ ಸಂಸ್ಕಾರ ಯೋಗ್ಯತೆಯನ್ನು ಸಂಪಾದಿಸಿಕೊಳ್ಳದೆ ಬರೆಯಹೊರಟರೆ ಆ ಬರವಣಿಗೆಗೆ 'ಹೊಂಗನಸು' ಗಳ ಕಳೆ ಬರಲಾರದು."

ಇದು ಈಹೊತ್ತಿಗೂ ನನ್ನ ಅಭಿಪ್ರಾಯ.

* * *

## ಲಿಪಿ ಸುಧಾರಣೆ

ಬಿ. ಎಂ. ಶ್ರೀಕಂಠಯ್ಯನವರಿಗೂ ನನಗೂ ಅಭಿಪ್ರಾಯ ಭೇದ ಕಾಣಿಸಿದ ಇನ್ನೊಂದು ಸಂದರ್ಭ ಲಿಪಿಸುಧಾರಣೆಯದು. ಕನ್ನಡ ಅಕ್ಷರಮಾಲೆಯಲ್ಲಿ ರೂಢಿಯಾಗಿ ಬಂದಿರುವ ಕೆಲವು ಸಂಕೇತಗಳು ಅನಾವಶ್ಯಕವೆಂದೂ ಅವುಗಳನ್ನು ಬಿಟ್ಟುಬಿಟ್ಟರೆ ಅಥವಾ ಸುಧಾರಿಸಿದರೆ ಟೈಪ್‌ರೈಟರಿಗೂ ಮುದ್ರಣಸಾಧನಗಳಿಗೂ ಅನುಕೂಲವಾಗುವುವೆಂದೂ ಅವರ ವಾದ. ಅವರ ಸುಧಾರಣೆಯನ್ನು 'ಕನ್ನಡ ಬಾವುಟ'ದ ಒಂದು ಪುಟದಲ್ಲಿ ಸೂಚಿಸಿದರು: "ಎೀರಿಸಿ ಹೇರಿಸಿ ಕನ್‌ನಡದ ಬೀವ್‌ಉಟ" ಇತ್ಯಾದಿ.

ಇದು ಅನಾವಶ್ಯಕ ಮಾತ್ರವೇ ಅಲ್ಲದೆ ಅನನುಕೂಲವೆಂದು ನನ್ನ ಪ್ರತಿವಾದ. ಬಹುಕಾಲದ ಅಭ್ಯಾಸವೇ ಒಂದು ಸೌಲಭ್ಯ. ಅದನ್ನು ತಪ್ಪಿಸಿ ಬೇರೆ ಹೊಸದೊಂದು ಅಭ್ಯಾಸವನ್ನು ಮಾಡಿಸುವುದು ಸುಲಭದ ಕೆಲಸವಲ್ಲ. ಹಳೆಯದರಿಂದ ಹೊಸದಕ್ಕೆ ಹೊಂದಿಕೊಳ್ಳುವುದು ಬೇಸರದ ಪ್ರಯತ್ನ. ಆ ಬೇಸರದಲ್ಲಿ ವ್ಯಾಸಂಗಿಯ ಉತ್ಸಾಹ ಕುಂದಿಹೋಗಬಹುದು. ಹೊಸ ತೀರಿನ ಬರವಣಿಗೆಯಲ್ಲಿ ಅಚ್ಚಾದ ಪುಸ್ತಕವನ್ನು ಓದಲು ಕಾಲ ಹೆಚ್ಚು ಹಿಡಿಯುತ್ತದೆ. ಅಂಥ ಕಾಲವ್ಯಯಕ್ಕೆ ತಕ್ಕ ಪ್ರತಿಫಲವಾದರೂ ಉಂಟೆ? ಟೈಪ್‌ರೈಟರ್, ಮಾನೋಟೈಪ್ ಮೊದಲಾದ ಯಂತ್ರಗಳಾದರೋ ಇಂಗ್ಲಿಷ್ ಶಿಲ್ಪಿಗಳಿಂದ ಅವರ ಭಾಷೆಗಳಿಗಾಗಿ ತಯಾರಾದವು. ಅಂಥ ಯಂತ್ರಶಿಲ್ಪಿಗಳು ಕನ್ನಡಿಗರಲ್ಲಿ ಹುಟ್ಟಿ ತಮ್ಮ ಚತುರತೆಯನ್ನು ಕನ್ನಡಕ್ಕಾಗಿ ಉಪಯೋಗಿಸಿದರೆ ರೂಢಿಯಲ್ಲಿರುವ ಕನ್ನಡ ಅಕ್ಷರರೂಪಗಳಿಗೆ ತಕ್ಕ ಯಂತ್ರಗಳನ್ನು ಅವರು ಅಳವಡಿಸಿಯಾರು.

ಇದು ನನ್ನ ಪ್ರತಿವಾದ.

ಕಳೆದ ಮೂವತ್ತು ವರ್ಷಗಳಲ್ಲಿ ಇಂಥ ಮುದ್ರಣಯಂತ್ರ ಸುಧಾರಣೆ ನಡೆದಿದೆ. ಕನ್ನಡದಂತೆಯೇ ಜಟಿಲವೂ ಕಷ್ಟವೂ ಆದ ಅಕ್ಷರರೂಪಗಳುಳ್ಳ ಅರಬ್ಬಿ, ದೇವನಾಗರಿ, ತಮಿಳು, ತೆಲುಗು — ಇನ್ನೂ ಕಷ್ಟರೂಪಗಳಾದ ಚೀಣೀಯ ಜಪಾನೀಯ ಭಾಷೆಗಳಲ್ಲಿ ಟೈಪ್‌ರೈಟರ್, ಮಾನೋಟೈಪ್ ಯಂತ್ರಗಳು ತಯಾರಾಗಿವೆ. ಕನ್ನಡದಲ್ಲಿಯೇ ಈ ಯಂತ್ರಗಳು ತಯಾರಾಗಿ ಅನೇಕ ವೃತ್ತಪತ್ರಿಕೆಗಳು ಈಗ ಮಾನೋಟೈಪ್ ಮೊದಲಾದವುಗಳನ್ನು ಬಳಸುತ್ತಿವೆ. ಹೀಗೆ ಬಿ. ಎಂ. ಶ್ರೀಕಂಠಯ್ಯನವರ ಲಿಪಿಸಂಸ್ಕರಣ ಪ್ರಯತ್ನ ಅಷ್ಟಕ್ಕೇ ನಿಲ್ಲಬೇಕಾಯಿತು.

* * *



## ಸಾಂಪ್ರದಾಯಿಕ ಪಂಡಿತರ ಸ್ಥಾನ

ಬಿ. ಎಂ. ಶ್ರೀಕಂಠಯ್ಯನವರಿಗೂ ನನಗೂ ಎಷ್ಟೋ ತಕರಾರುಗಳು ಕಡೆಗೂ ತೀರ್ಮಾನಕ್ಕೆ ಬರದೆ ಉಳಿದುಕೊಂಡಿದ್ದವು. ಅವುಗಳ ಪೈಕಿ ಸಂಪ್ರದಾಯ ಕ್ರಮದಿಂದ ಬಂದಿರುವ ಸಂಸ್ಕೃತ-ಕನ್ನಡ ಪಂಡಿತರುಗಳಿಗೆ ಸಲ್ಲಬೇಕಾದ ಸ್ಥಾನಮಾನಗಳ ಪ್ರಶ್ನೆ ಒಂದು.

ಶ್ರೀಕಂಠಯ್ಯನವರ ವಾದ ಹೀಗೆ: ಎರಡು ಬೇರೆ ಬೇರೆ ಪಂಡಿತವರ್ಗಗಳು (Classes) ಇರಬೇಕಾದದ್ದಿಲ್ಲ. ಅದು ಅನನುಕೂಲ. ಎರಡು ವರ್ಗಗಳು ಅಂದರೆ ಸಾಂಪ್ರದಾಯಿಕ ಪಂಡಿತರದು ಒಂದು; ವಿಶ್ವವಿದ್ಯಾನಿಲಯದಿಂದ ತಯಾರಾದವರದು ಇನ್ನೊಂದು. ನಮ್ಮ ವಿದ್ಯಾ ಇಲಾಖೆಯೂ ವಿಶ್ವವಿದ್ಯಾನಿಲಯವೂ ಹೊಸ ರೀತಿಯ ಎಂ. ಎ. ಮೊದಲಾದ ಪಂಡಿತರನ್ನು ಪ್ರೋತ್ಸಾಹಿಸಬೇಕು. ಸಾಂಪ್ರದಾಯಿಕ ಪಂಡಿತರನ್ನು ವಿಶ್ವವಿದ್ಯಾನಿಲಯವು ಹೆಚ್ಚಾಗಿ ಪ್ರೋತ್ಸಾಹಿಸಬೇಕಾಗಿಲ್ಲ. ಏಕೆಂದರೆ ವಿಶ್ವವಿದ್ಯಾನಿಲಯದ ಎಂ. ಎ. ಗಳು ಕನ್ನಡವನ್ನೂ ಸಂಸ್ಕೃತವನ್ನೂ ವಿಶೇಷವಾಗಿ ( Special ) ಅಧ್ಯಯನ ಮಾಡಿರುತ್ತಾರೆ. ಪಿಎಚ್.ಡಿ.ಗಳೂ ಡಿ.ಲಿಟ್‌ಗಳೂ ಕನ್ನಡ ಸಂಸ್ಕೃತಗಳಲ್ಲಿ ಹೆಚ್ಚು ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುತ್ತಾರೆ. ಇಂಥವರನ್ನು ಹೈಸ್ಕೂಲುಗಳಲ್ಲಿಯೂ ಕಾಲೇಜುಗಳಲ್ಲಿಯೂ ಬೋಧಕರನ್ನಾಗಿ ನಿಯಮಿಸಿಕೊಳ್ಳುವುದರಿಂದ ಹೆಚ್ಚು ಪ್ರಯೋಜನ. ಇವರು ಕನ್ನಡ ಸಂಸ್ಕೃತಗಳನ್ನು ಹೇಳಿಕೊಡುವುದರಲ್ಲಿ ಇಂಗ್ಲಿಷ್ ಸಾಹಿತ್ಯದ ಸ್ವತಂತ್ರ ವಿಚಾರಧೋರಣೆಯನ್ನೂ ಅನುಸರಿಸಿ ಪಾಠ ಹೇಳಲಾಗುತ್ತದೆ. ನಮ್ಮ ಪ್ರಾಚೀನ ಪಂಡಿತರಿಂದ ಈ ಕೆಲಸ ನಡೆಯಲಾರದು. ಅವರು ಬರಿಯ ಮಾತಿನ ಅಧಿಕಾರಿಗಳು. ಆಡಂಬರದ ಶಬ್ದರಚನೆಯನ್ನೂ ವ್ಯಾಕರಣವನ್ನೂ ಅವರು ಹೇಳಿಕೊಟ್ಟಾರು. ಆದರೆ ಇಂಗ್ಲಿಷಿನಿಂದಲೂ ವಿಜ್ಞಾನಗ್ರಂಥಗಳಿಂದಲೂ ಕನ್ನಡಕ್ಕೆ ವಾಕ್ಯ ಪರಿವರ್ತನೆ ಮಾಡಿಸುವುದಕ್ಕೂ ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರ ಮಾಡಿಸುವುದಕ್ಕೂ ಪ್ರಾಚೀನ ಪಂಡಿತರು ಸಮರ್ಥರಲ್ಲ; ಅವರಿಗೆ ಇಂಗ್ಲಿಷ್ ತಿಳಿಯದಿರುವ ಕಾರಣದಿಂದ. ಪ್ರಾಚೀನ ಪಂಡಿತರೂ ಇದ್ದುಕೊಳ್ಳಲಿ; ಅವರ ಜೊತೆಗೆ ಎಂ.ಎ. ಪಿಎಚ್.ಡಿ.ಗಳೂ ಇದ್ದುಕೊಳ್ಳಲಿ; ಎರಡು ವರ್ಗಗಳಿಗೂ ಉದ್ಯೋಗ ಕಲ್ಪಿಸೋಣ— ಎಂಬುದಾದರೆ ಅದು ಕಾರ್ಯಸಾಧ್ಯವಾದ ಯೋಚನೆಯಲ್ಲ. ಹಣ ಹೆಚ್ಚಾಗಿ ಬೇಕಾಗುತ್ತದೆ; ಮತ್ತು ಎರಡು ವರ್ಗಗಳಿಗೂ ಘರ್ಷಣೆ ಹುಟ್ಟುತ್ತದೆ. ಹೀಗೆ ನೋಡಿದರೆ ಸ್ಕೂಲು ಕಾಲೇಜುಗಳ ಉದ್ಯೋಗದ ಬಗೆಗೆ ಒಂದೇ ಪಂಡಿತ ವರ್ಗವನ್ನು ಇರಿಸಿಕೊಳ್ಳುವುದು ಒಳ್ಳೆಯದು. ಆ ವರ್ಗ ಎಂ.ಎ., ಪಿಎಚ್.ಡಿ.ಗಳದು.

ಈ ವಾದಕ್ಕೆ ವಿರೋಧಿ ನಾನು. ನನ್ನ ವಾದ ಹೀಗೆ : ನಮ್ಮ ಭಾಷೆಯ ಬುಡ ಬೇರುಗಳಿರುವುದು ಪ್ರಾಚೀನ ಸಾಹಿತ್ಯದಲ್ಲಿ. ಅದರ ಅಚ್ಚುಕಟ್ಟಿರುವುದು ಪೂರ್ವ ವ್ಯಾಕರಣದಲ್ಲಿ. ಪ್ರಾಚೀನ ಸಾಹಿತ್ಯವನ್ನೂ ವ್ಯಾಕರಣವನ್ನೂ ಆಮೂಲಾಗ್ರವಾಗಿ ಪರಿಶೀಲಿಸದಿರುವವರು ಕನ್ನಡ ಸಂಸ್ಕೃತ ಪಾಠವನ್ನೂ ತೃಪ್ತಿಕರವಾಗಿ ನಡಸಲಾರರು. ನಮ್ಮ ಎಂ. ಎ., ಪಿಎಚ್.ಡಿ.ಗಳ ಪಾಂಡಿತ್ಯ ಸಾಂಪ್ರದಾಯಿಕ ಪಾಂಡಿತ್ಯಕ್ಕೆ ಸಮಾನ ವಾಗುವುದು ಸುಲಭವಲ್ಲ. (ಎಲ್ಲ ಎಂ.ಎ., ಪಿಎಚ್.ಡಿ.ಗಳೂ ಟಿ. ಎನ್. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್ಯರಲ್ಲ). ಪ್ರೊಫೆಸರ್ ಹಿರಿಯಣ್ಣನವರಂಥವರು ಕೂಡ ಸಾಂಪ್ರದಾಯಿಕ ಪಾಂಡಿತ್ಯವು ಅನಿವಾರ್ಯವಾದದ್ದೆಂಬುದನ್ನು ಅಂಗೀಕರಿಸಿದ್ದಾರೆ. ಸಾಮಾನ್ಯವಾಗಿ ಬಿ. ಎ. ಪ್ಯಾಸ್ ಮಾಡಿದಾತನಿಗೆ ಇಂಗ್ಲಿಷಿನ ಸಾಹಿತ್ಯ ಪರಿಚಯ ಎಷ್ಟು ಆಳವಾಗಿರುತ್ತದೆಯೋ ಆತನಿಗಿರುವ ಕನ್ನಡ ಪಾಂಡಿತ್ಯವೂ ಅಷ್ಟುಮಟ್ಟಿನ ದಾಗಿಯೇ ಇರುತ್ತದೆ. ಅದೂ ಅಪರೂಪವೇ. ಎಂ.ಎ., ಪಿಎಚ್.ಡಿ.ಗಳ ವಿಚಾರವೂ ಅಷ್ಟೇ. ಕನ್ನಡ ಸಂಸ್ಕೃತಗಳು ಬಹು ಪ್ರಾಚೀನಗಳಾದ ಭಾಷೆಗಳು. ಅವುಗಳ ವ್ಯಾಕರಣಗಳಂತೂ ಸಂತತವಾದ ಆಲೋಡನೆಯಿಲ್ಲದವರಿಗೆ ಬಹು ಕಷ್ಟವಾದವು. ನಮ್ಮ ಸಾಂಪ್ರದಾಯಿಕ ಪಂಡಿತರು — ಎಂದರೆ ಅದರಲ್ಲಿ ನಿಜವಾದ ಯೋಗ್ಯತೆಯುಳ್ಳ ವರು—( Specialist ) ಎಂಬ ವಿಶೇಷಜ್ಞರ ದರ್ಜೆಗೆ ಸೇರಬೇಕಾದವರು — ವಿಶೇಷಾಧಿ ಕಾರಿಗಳು. ಆದದ್ದರಿಂದ ಆ ಪ್ರಾಚೀನವರ್ಗವನ್ನು ಸರ್ವಪ್ರಯತ್ನಗಳಿಂದಲೂ ಉಳಿಸಿ ಕಾಪಾಡುವುದು ಆವಶ್ಯಕ. ಹೈಸ್ಕೂಲು ಕಾಲೇಜುಗಳಲ್ಲಿ ಉದ್ಯೋಗ ಮಾಡುವ ಪಂಡಿತರಿಗೆ ಮೆಟ್ರಿಕ್ಯುಲೇಷನ್ ಮಟ್ಟದ ಇಂಗ್ಲಿಷ್ ಪರಿಚಯವಿರಬೇಕೆಂದು ವಿಧಿಸ ಬಹುದು. ಅಷ್ಟುಮಟ್ಟಿನ ಇಂಗ್ಲಿಷ್ ಪಾಂಡಿತ್ಯವನ್ನು ಸಂಪಾದಿಸುವುದು ಅವರಿಗೆ ಶ್ರಮವಲ್ಲ. ಆಗ ಅವರು ಭಾಷಾಂತರೀಕರಣ ಪಾಠ ಕಲಿಸುವುದಕ್ಕೂ ಸಮರ್ಥ ರಾಗುತ್ತಾರೆ. ನಮಗೆ ಮುಖ್ಯವಾಗಿ ಬೇಕಾದದ್ದು ಭಾಷೆ ಸಾಹಿತ್ಯಗಳ ಸಂಪ್ರದಾಯದ ಪರಿಜ್ಞಾನ. ಇದು ಸಾಂಪ್ರದಾಯಿಕ ಪಂಡಿತರಲ್ಲಿರುತ್ತದೆ. ಎಂ.ಎ., ಪಿಎಚ್.ಡಿ.ಗಳಲ್ಲಿ ಅದು ಇದ್ದರೆ ಅವರಿಗೂ ಉದ್ಯೋಗ ದೊರೆಯಲಿ. ಆದರೆ ಎರಡು ವರ್ಗಗಳಿಗೂ ಪರಸ್ಪರ ಪ್ರತಿಸ್ಪರ್ಧೆ ಅವಶ್ಯವಿಲ್ಲ.

ಈ ತಕರಾರು ಹಾಗೆಯೇ ಉಳಿದುಕೊಂಡಿತು. ಏತನ್ಮಧ್ಯೆ ಸಾಂಪ್ರದಾಯಿಕ ಪಾಂಡಿತ್ಯ ಕ್ಷೀಣಿಸುತ್ತಾ ಬಂತು. ಈಹೊತ್ತು ಪ್ರಾಚೀನ ಕನ್ನಡ ಪಂಡಿತರೆಂದು ಹೇಳಿ ಕೊಳ್ಳಲು ಅರ್ಹರಾದವರು ಕನ್ನಡ ದೇಶದಲ್ಲಿ ಎಷ್ಟು ಮಂದಿ ಇರಬಹುದು ? ಈ ವಿಷಯದಲ್ಲಿ ಶ್ರದ್ಧಾಸಕ್ತಿಗಳುಳ್ಳವರು ಅವರು ಅಧಿಕಾರಸ್ಥರಾಗಿರುವ ಪಕ್ಷದಲ್ಲಿ ವಿಚಾರ ಮಾಡಲಿ.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಎಲ್ಲ ವಿಷಯಗಳಲ್ಲೂ ಪರಮ ನಿರ್ಣಾಯಕವಾದದ್ದು ಕಾಲ. ವಾದಗ್ರಸ್ತವಾದ ವಿಷಯಗಳಲ್ಲಿ ಗುಣ ಯಾವ ಪಕ್ಷದಲ್ಲಿದೆ, ಸತ್ಯ ಯಾವ ಪಕ್ಷದಲ್ಲಿದೆ— ಎಂಬುದನ್ನು ಕಾಲವು ಪ್ರತ್ಯಕ್ಷಪಡಿಸುತ್ತದೆ. ಒಂದು ಕ್ಷಣದ ತೀರ್ಮಾನ, ಒಂದು ದಿನದ ತೀರ್ಮಾನ, ಒಂದು ವರ್ಷದ ತೀರ್ಮಾನ ಸರ್ವಕಾಲಕ್ಕೂ ಅನ್ವಯಿಸುವ ತೀರ್ಮಾನವಾಗಲಾರದು. ಲೋಕಕ್ಕೆ ಅನುಭವವಾದಂತೆಲ್ಲ ಯುಕ್ತಾಯುಕ್ತಗಳ ಸ್ವರೂಪ ತಾನಾಗಿ ಹೊರಗೆ ಬರುತ್ತದೆ. ಈಹೊತ್ತು ನಮ್ಮ ಪೂರ್ವಭಾಷಾ ಸಾಹಿತ್ಯ ಪಾಂಡಿತ್ಯ ಹಾಗೆ ರುಜು ವಾತಿಗೆ ಬರುತ್ತಿದೆ.

* * *

## ಸಂಸ್ಕೃತ ದ್ವೇಷವಲ್ಲ

ಬಿ. ಎಂ. ಶ್ರೀಕಂಠಯ್ಯನವರು ಸಂಸ್ಕೃತದ ವಿಷಯದಲ್ಲಿ ಅಭಿಮಾನವಿಲ್ಲದ ವರೆಂದೂ ದ್ವೇಷವುಳ್ಳವರೆಂದೂ ಕೆಲವು ಕಾಲ ಅಪಪ್ರಚಾರ ನಡೆದಿತ್ತು. ಇದಕ್ಕೆ ಕಾರಣ ಕೊಂಚವೂ ಇರಲಿಲ್ಲವೆಂದು ನಾನು ಹೇಳಲಾರೆ. ನಮ್ಮ ಕೆಲವು ಹಿಂದಿನ ಪೂರ್ವಕವಿಗಳ ಶೈಲಿಯಲ್ಲಿ ಅತಿ ಸಂಸ್ಕೃತವೆದ್ದು ಕಾಣುತ್ತದೆ. ರುದ್ರಭಟ್ಟನಲ್ಲಿ, ಷಡಕ್ಷರಿಯಲ್ಲಿ ಇದು ಚೆನ್ನಾಗಿ ನಿದರ್ಶನಕ್ಕೆ ಬರುತ್ತದೆ. " ಶ್ರೀ ಶೈಲಾದಿ .... " ಪದ್ಯದಲ್ಲಿ ' ವಾಳ್ಕೆ ' ಎಂಬುದೊಂದೇ ಕನ್ನಡ ಪದ. "ಶ್ರೀಮನ್ ನಾಗೇಂದ್ರ......","ಅರಿ ರೌದ್ರಂಕರ......" ಮೊದಲಾದವೂ ಹಾಗೆಯೇ. ಇಂಥ ಶೈಲಿಯನ್ನು ಕುರಿತು ಟೀಕಿಸುವಾಗ ಶ್ರೀಕಂಠಯ್ಯ ನವರ ಧೋರಣೆ ಸ್ವಲ್ಪ ಕಹಿಯಾಗುತ್ತಿತ್ತು, ಉಗ್ರವಾಗುತ್ತಿತ್ತು. ಆ ಧೋರಣೆ ಸಂಸ್ಕೃತದ್ವೇಷದಿಂದ ಬಂದದ್ದು—ಎಂದು ಸಂಸ್ಕೃತದ ಅತ್ಯಭಿಮಾನಿಗಳಿಗೆ ತೋರಿದ್ದಿದ್ದರೆ ಅದು ಆಶ್ಚರ್ಯವಲ್ಲ. ಆದರೆ ಒಂದು ಭಾಷಣದ ಆವೇಶ ಕ್ಷಣದ ಮಾತನ್ನು, ಆಲೋಚಿಸಿ ಆಡಿದ ಮಾತೆಂದು ಗ್ರಹಿಸುವುದು ತಪ್ಪಾದೀತು.

ಒಂದು ದಿನ ಮಧ್ಯಾಹ್ನ ಸುಮಾರು ಮೂರು ಘಂಟೆಯ ವೇಳೆಗೆ ನಾನು ಒಬ್ಬ ಮಿತ್ರರ ಮನೆಗೆ ಹೋದೆ. ಆ ಮಿತ್ರರು ಶ್ರೀವೈಷ್ಣವರು. ಅದು ಆತನ ಮಗಳ ಮದುವೆಯಾದ ಮೂರನೆಯ ದಿನ. ಆ ದಿನವೂ ಸಂಪ್ರದಾಯದ ಕ್ರಮದಲ್ಲಿ ಕೆಲವು ಶಾಸ್ತ್ರಕ್ರಿಯೆಗಳು ನಡೆಯಬೇಕಾಗಿತ್ತು. ಅದಕ್ಕಾಗಿ ವೈದಿಕ ಮಂಡಲಿ ಸೇರಿತ್ತು. ನಾನು ಆ ಮನೆಯ ಮೊಗಸಾಲೆಯ ಮೆಟ್ಟಿಲುಗಳನ್ನು ಹತ್ತಿ ಹೊಸ್ತಿಲು ದಾಟುವ ವೇಳೆಗೆ ಒಬ್ಬಾನೊಬ್ಬ ವೈದಿಕರು ತಮಿಳಿನಲ್ಲಿ "ಆ ಶ್ರೀಕಂಠಯ್ಯನವರಿಗೆ ಸಂಸ್ಕೃತ ಎಂದರೆ ಆಗದಂತೆ"—ಎಂದು ಹೇಳಿದ್ದು ನನಗೆ ಕೇಳಿಸಿತು. ನಾನು ಒಳಗೆ ಹೋಗಿ ಕುಳಿತಮೇಲೆ ಆ ವೈದಿಕರನ್ನು ಕುರಿತು " ನೀವು ಹೇಳಿದ್ದು ಯಾರೋ ಹೇಳಿದ ಚಾಡಿಯಿಂದ ಬಂದ

ದ್ದಲ್ಲವೆ ?   ಅದು ಅನ್ಯಾಯವಾದ ಅಪವಾದ"—ಎಂದು ಹೇಳಿದೆ.   ಆ ಶ್ರೀವೈಷ್ಣವ ವಿದ್ವಾಂಸರು ನನಗೆ ಚೆನ್ನಾಗಿ ತಿಳಿದಿದ್ದವರು; ವಾಸ್ತವವಾಗಿ ಒಳ್ಳೆಯವರು. ತಿಳಿದು ತಿಳಿದು ಅನ್ಯಾಯ ಮಾಡತಕ್ಕವರಲ್ಲ. ಇರುವ ಸಂದರ್ಭವನ್ನು ನಾನು ವಿವರಿಸಿ ಹೇಳಿದ ಮೇಲೆ ಅವರು ತಮ್ಮ ಮಾತನ್ನು ಹಿಂದಕ್ಕೆ ತೆಗೆದುಕೊಂಡು, ಅಪಚಾರವಾಯಿತೆಂದು ಕ್ಷಮೆ ಕೇಳಿದರು. ಇದು ತೋರಿಸುತ್ತದೆ ಅಪಪ್ರಚಾರ ಎಷ್ಟು ದೂರ ಸಾಗಿತ್ತೆಂಬುದನ್ನು.

*   *   *

1928ರಲ್ಲಿ ನಾನು ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಲ್ಲಿ 'ಸಾಹಿತ್ಯ ಮತ್ತು ವಿಜ್ಞಾನ' ಎಂಬ ವಿಷಯವಾಗಿ ಒಂದು ದಿನ ಉಪನ್ಯಾಸ ಮಾಡಿದೆ. ನನ್ನಲ್ಲಿ ತುಂಬಾ ಅಭಿಮಾನವಿಟ್ಟಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳವರು ಅದನ್ನು ಬರೆದು 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯಲ್ಲಿ ಪ್ರಕಟಪಡಿಸಿದರು. ಅದರಲ್ಲಿ ನಾನು ಷೆಲ್ಲಿ ಕವಿಯ 'ಪ್ರೊಮಿಥಿಯಸ್ ಅನ್‌ಬೌಂಡ್' ಎಂಬ ಮಹಾಕಾವ್ಯದಿಂದ ಕೆಲವು ಪಂಕ್ತಿಗಳನ್ನು ಉದಾಹರಣೆಯಾಗಿ ಕೊಟ್ಟಿದ್ದೆ. ಇಂಗ್ಲಿಷಿನಲ್ಲಿ ವಾಕ್ಯಗಳನ್ನು ಹೇಳಿದ ಬಳಿಕ ಆ ಕ್ಷಣ ಅಲ್ಲಿ ನನ್ನ ಮನಸ್ಸಿಗೆ ಹೊಳೆದಂತೆ ಕನ್ನಡದ ತರ್ಜುಮೆಯನ್ನು ಹೇಳಿದ್ದೆ. ಇದರಲ್ಲಿ ಸಂಸ್ಕೃತ ಮಾತುಗಳು ಹೆಚ್ಚಾಗಿದ್ದುವು.

ಕೆಲವು ಕಾಲದ ತರುವಾಯ, ಬಹುಶಃ 1932ರಲ್ಲಿ, ನನ್ನ 'ಜೀವನಸೌಂದರ್ಯ ಮತ್ತು ಸಾಹಿತ್ಯ' ಎಂಬ ಉಪನ್ಯಾಸ ಸಂಗ್ರಹದ ಪುಸ್ತಕದಲ್ಲಿ ಮೇಲಿನ ಉಪನ್ಯಾಸ ವನ್ನು ಸೇರಿಸಿತ್ತು. ಆದರೆ ಇದರಲ್ಲಿ ಷೆಲ್ಲಿಯ ವಾಕ್ಯಗಳ ಭಾಷಾಂತರವನ್ನು ಬದಲಾಯಿಸಿದ್ದೆ. ಈಗ ಸಂಸ್ಕೃತಕ್ಕೆ ಬದಲಾಗಿ ಕನ್ನಡ ಮಾತುಗಳನ್ನು ಹೆಚ್ಚಾಗಿ ಒಳಸಿದ್ದೆ.

ಈ ಗ್ರಂಥದ ಅಚ್ಚು ಕರಡು (ಪ್ರೂಫ್)ಗಳನ್ನು ಓದಿದವರು ಕೃಷ್ಣಶಾಸ್ತ್ರಿಗಳವರು. ಅವರು ನಾನು ಮಾಡಿದ್ದ ಬದಲಾವಣೆಗಳನ್ನು ಒಪ್ಪಲಿಲ್ಲ. ಮೊದಲಿನ ಸಂಸ್ಕೃತ ಭೂಯಿಷ್ಠವಾದ ಅನುವಾದವೇ ಸೊಗಸೆಂದರು. ಅವರಿಗೂ ನನಗೂ ಕೊಂಚ ವಾಗ್ವಾದ ನಡೆಯಿತು. ಕೊನೆಗೆ ನಾವಿಬ್ಬರೂ, ಈ ತಕರಾರನ್ನು ಬಿ. ಎಂ. ಶ್ರೀಕಂಠಯ್ಯನವರಿ ಗೊಪ್ಪಿಸಿ ಅವರ ತೀರ್ಮಾನವನ್ನು ಅಂಗೀಕರಿಸತಕ್ಕದ್ದೆಂದು ನಿಶ್ಚಯಿಸಿಕೊಂಡೆವು.

ಶ್ರೀಕಂಠಯ್ಯನವರು ನಮ್ಮಿಬ್ಬರ ವಾದಗಳನ್ನೂ ಕೇಳಿದರು. ಬಳಿಕ ಮನೆ ಯೊಳಗಿನಿಂದ ಫಲಾಹಾರ ಸಾಮಗ್ರಿಗಳನ್ನು ತರಿಸಿ, "ನೀವಿಬ್ಬರೂ ಇದನ್ನು ಸೇವಿಸೋಣ ವಾಗಲಿ. ನಾನು ಏಕಾಂತದಲ್ಲಿ ಆಲೋಚನೆ ಮಾಡಿ ಬರುತ್ತೇನೆ" ಎಂದು ಹೇಳಿ

ಪ್ರೂಫಿನೊಡನೆ ತಮ್ಮ ಮಲಗುವ ಕೋಣೆಯೊಳಕ್ಕೆ ಹೋದರು. ಹದಿನೈದು ಇಪ್ಪತ್ತು ನಿಮಿಷವಾದ ಮೇಲೆ ಸಾವಿದ್ದ ಕಡೆಗೆ ಬಂದು ತೀರ್ಮಾನ ಹೇಳಿದರು. ಅದು ಕೃಷ್ಣ ಶಾಸ್ತ್ರಿಗಳ ಪರವಾಗಿ. "ಷೆಲ್ಲಿಯ ವಾಕ್ಯಗಳಲ್ಲಿ ತೇಜಸ್ಸೂ, ಓಜಸ್ಸೂ ಪೂರ್ಣವಾಗಿದೆ. ಅವುಗಳನ್ನು ನಮ್ಮ ಭಾಷೆಗೆ ತರಬೇಕಾದರೆ ಸಂಸ್ಕೃತವಿಲ್ಲದೆ ಸಾಧ್ಯವಿಲ್ಲ."

ಆದರಂತೆಯೇ ಈಗ ಆ ವಾಕ್ಯ ನಿಂತಿದೆ.*

ಶ್ರೀಕಂಠಯ್ಯನವರಿಗೆ ಸಂಸ್ಕೃತದಲ್ಲಿ ಪೂರ್ಣ ಅಭಿಮಾನವಿತ್ತು. ಅವರು ಅನೇಕ ಪದ್ಯಭಾಗಗಳನ್ನೂ ನನ್ನಿಂದ ಓದಿಸಿ ಆ ಸಾಹಿತ್ಯದ ಹಿರಿಮೆಯನ್ನು ಬಾಯಿ ತುಂಬಾ ಕೊಂಡಾಡಿದ್ದಾರೆ.

* * *

## ವಾಗ್ಮಿತೆ

ಮೊದಮೊದಲು ಕನ್ನಡದಲ್ಲಿ ಭಾಷಣ ಮಾಡಲೊಲ್ಲೆನೆಂದು, ಭಾಷಣ ಮಾಡ ಲಾರೆನೆಂದು ಹೇಳಿ ವೆಂಕಟನಾರಣಪ್ಪನವರೊಡನೆ ನಿಷ್ಠುರ ಕಟ್ಟಿಕೊಂಡ ಬಿ. ಎಂ. ಶ್ರೀಕಂಠಯ್ಯನವರು ಬರಬರುತ್ತಾ ಕನ್ನಡದ ಅಭಿಮಾನದ ಆವೇಶದಿಂದ ಎರಡು ಮೂರು ಘಂಟೆಗಳ ಕಾಲ ಕನ್ನಡದಲ್ಲಿ ಅವಿಚ್ಛಿನ್ನವಾಗಿ ಮಾತನಾಡಿ ಎಸ್. ಎಸ್. ಸುಬ್ಬರಾವ್ ಮೊದಲಾದ ಸ್ನೇಹಿತರುಗಳಿಂದ ಹರಿಕಥಾ ಕಾಲಕ್ಷೇಪವೆಂದು ಹಾಸ್ಯ ಮಾಡಿಸಿಕೊಂಡರು. ಕಡೆಗೆ ಐದು ಘಂಟೆಗಳಷ್ಟು ದೀರ್ಘಕಾಲ ಪ್ರವಾಹಧೋರಣೆಯಿಂದ ಭಾಷಣಮಾಡುವವರಾದರು. ರಾಯಚೂರಿನಲ್ಲಿ ಅವರ ಭಾಷಣವನ್ನು ಮುಕ್ಕಾಲು ಘಂಟೆ ಕೇಳಿದಮೇಲೆ ನಾನೂ ಒಬ್ಬ ಸ್ನೇಹಿತರೂ ಉಪಾಹಾರಕ್ಕೆಂದು ಹೊರಕ್ಕೆ ಬಂದು ಮುಗಿಸಿಕೊಂಡು ಒಳಗೆ ಹೋಗಿ ಇನ್ನೂ ಭಾಷಣ ನಡೆಯುತ್ತಿದ್ದದ್ದನ್ನು ನೋಡಿ ಮತ್ತೆ ಉಪಾಹಾರಕ್ಕಾಗಿ ಹೋಗಿ ಇನ್ನೊಂದು ಘಂಟೆಯಾದ ಮೇಲೆ ಸಭೆಗೆ ಹಿಂದಿರುಗಿದೆವು. ಭಾಷಣ ನಡೆಯುತ್ತಲೇ ಇತ್ತು. ವಿಷಯ ಹರಿಹರನ ರಗಳೆ.

ಬಿ. ಎಂ. ಶ್ರೀಕಂಠಯ್ಯನವರು ಕನ್ನಡದಲ್ಲಿ ಒಳ್ಳೆಯ ವಾಗ್ಮಿ. ನನ್ನ ಸ್ವಂತ ಅಭಿಪ್ರಾಯದಲ್ಲಿ ಅವರ ಇಂಗ್ಲಿಷ್ ಭಾಷಣ ಇನ್ನೂ ಗಂಭೀರವಾದದ್ದಾಗಿ ರಸವತ್ತಾಗಿ ರುತ್ತಿತ್ತು. ಇಂಗ್ಲಿಷ್ ಭಾಷೆಯಲ್ಲಿಯ ಪದಗಳ ಮರ್ಜಿ ಅವರಿಗೆ ಸಹಜವಾದದ್ದೋ

---

* 'ಜೀವನಸೌಂದರ್ಯ ಮತ್ತು ಸಾಹಿತ್ಯ', ಮೂರನೆಯ ಮುದ್ರಣ, ಕಾವ್ಯಾಲಯ, ೧೯೬೨, ಪು. ೭೯. ಈಗಿನದು ಐದನೆಯ ಮುದ್ರಣ ಅಚ್ಚಿನಲ್ಲಿದೆ.

ಎನ್ನಿಸುವಂತೆ ಸ್ವಾಧೀನವಾಗಿತ್ತು. ಪದಗಳ ಮತ್ತು ಪದಪ್ರಯೋಗಗಳ ನವರುಗಳನ್ನು ತಿಳಿದು ವಾಕ್ಯರಚನೆಮಾಡುತ್ತಿದ್ದರು. ಅವರು ಲಾ ವ್ಯಾಸಂಗ ಮಾಡಿದ್ದದ್ದರಿಂದ ಆ ಶಾಸ್ತ್ರದ ಲ್ಯಾಟಿನ್ ಪರಿಭಾಷೆ ಅವರಿಗೆ ಚೆನ್ನಾಗಿ ತಿಳಿದಿತ್ತು. ಒಂದು ಸಾರಿ,— ರಾಯಚೂರಿನ ಸಾಹಿತ್ಯ ಸಮ್ಮೇಳನದಲ್ಲಿ ಎಂದು ನನ್ನ ಜ್ಞಾಪಕ — ಅಲ್ಟ್ರಾ ವೈರಿಸ್ (Ultra vires) ಎಂಬ ಮಾತನ್ನು ಒಬ್ಬ ಸದಸ್ಯರು ಉಪಯೋಗಿಸಿದರು. ಅದು ಅಪ ಪ್ರಯೋಗವೆಂಬುದನ್ನು ಶ್ರೀಕಂಠಯ್ಯನವರು ಒಂದು ವ್ಯಾಖ್ಯಾನದಲ್ಲಿ ತೋರಿಸಿ ಕೊಟ್ಟರು. ಇಂಗ್ಲಿಷ್-ಕನ್ನಡ ನಿಘಂಟುವಿನ ಕೆಲಸದಲ್ಲಿ ನಾವು ಸಭೆ ಸೇರುತ್ತಿದ್ದಾಗ ಅವರ ಗ್ರೀಕ್, ಲ್ಯಾಟಿನ್ ಸಾಹಿತ್ಯಗಳ ಪರಿಚಯ ನಮಗೆ ಚೆನ್ನಾಗಿ ಗೋಚರ ವಾಗುತ್ತಿತ್ತು. ಹಾಗೆಯೇ ಅವರ ತಮಿಳು ತೆಲುಗುಗಳ ಪರಿಚಯ. ಕನ್ನಡ ವಿದ್ಯಾರ್ಥಿ ಗಳು ಮೇಲ್ತರಗತಿಗಳಲ್ಲಿ ತಮಿಳನ್ನು ಕಲಿಯಬೇಕೆಂದು ಒತ್ತಾಯಪಡಿಸುತ್ತಿದ್ದವರಲ್ಲಿ ಅವರು ಮುಖ್ಯರು.

ಒಂದು ಸಾರಿ ಅವರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಆಶ್ರಯದಲ್ಲಿ ತಮಿಳು ಮಹಾಕವಿ ತಿರುವಳ್ಳುವರ್ ಅವರನ್ನು ಕುರಿತು ಬಹು ಸೊಗಸಾದ ಉಪನ್ಯಾಸ ಮಾಡಿದರು. ನಾನು ಅವಕ್ಕೆ ಮನಸೋತು ಆ ಭಾಷಣದ ಗುರುತಿಗಾಗಿ ನನ್ನ ಪಾಕೆಟ್ ಬುಕ್ಕಿನಲ್ಲಿ ಒಂದು ಪಂಕ್ತಿಯನ್ನು ಬರೆಯಿಸಿಕೊಂಡೆ. ಒಂದು ಸೊಗಸಾದ ತಿರುವಳ್ಳುವರ ಪದ್ಯವನ್ನು ಬರೆದುಕೊಟ್ಟರು.

ಶ್ರೀಕಂಠಯ್ಯನವರ ಇಂಗ್ಲಿಷ್ ವಾಗ್ಮಿತೆಯನ್ನು ಕುರಿತು ಹೇಳಹೊರಟೆನಷ್ಟೆ ? ಒಂದು ಸಾರಿ ಅವರು ಮಿಥಿಕ್ ಸೊಸೈಟಿಯ ಡಾಲಿ ಮೆಮೊರಿಯಲ್ ಹಾಲ್‌ನಲ್ಲಿ "The burden of the prophets" (ದೈವಪ್ರವಾದಿಗಳ ಪಲ್ಲವಿ) ಎಂಬ ಶೀರ್ಷಿಕೆ ಯಲ್ಲಿ ನಾಲ್ಕೈದು ಉಪನ್ಯಾಸಗಳನ್ನು ಕೊಟ್ಟರು, ಎಲ್ಲ ಇಂಗ್ಲಿಷಿನಲ್ಲಿ. ಅವುಗಳಲ್ಲಿ ಅದ್ಭುತವಾದ ವಾಕ್ಯಸೌಂದರ್ಯವಿತ್ತು. ಯೆಹೂದ್ಯರ, ಕ್ರಿಶ್ಚಿಯನ್ನರ, ಮುಸಲ್ಮಾನರ, ಹಿಂದುಗಳ ಮತಬೋಧಕರು ಹೇಳಿರುವ ಅತಿ ಮುಖ್ಯ ತತ್ತ್ವಗಳನ್ನು ಈ ಉಪನ್ಯಾಸ ಮಾಲೆಯಲ್ಲಿ ಅವರು ವಿಮರ್ಶೆಮಾಡಿ ಹಾಗೆಯೇ ಇತರ ಮತಪ್ರಕ್ರಿಯೆಗಳನ್ನು ಸಂಗ್ರಹ ವಾಗಿ ಪ್ರಸ್ತಾಪಮಾಡಿ, ಅವುಗಳ ಜೊತೆಗೆ ವರ್ಡ್ಸ್‌ವರ್ತ್, ಟೆನ್ನಿಸನ್, ಬ್ರೌನಿಂಗ್, ರುಪರ್ಟ್, ಬ್ರೂಕ್ ಮೊದಲಾದ ಆಧುನಿಕ ಕವಿಗಳವರೆಗೂ ಭಗವದ್ವಿಷಯದಲ್ಲಿಯೂ ಜೀವಭವಿಷ್ಯದ ವಿಷಯದಲ್ಲಿಯೂ ಇರುವ ತತ್ತ್ವಪ್ರತಿಪಾದನೆಗಳನ್ನು ಸಂಗ್ರಹಿಸಿ, ಮನುಷ್ಯಜೀವನದ ಉದಾತ್ತ ಸ್ವರೂಪವನ್ನು ನಿದರ್ಶನ ಮಾಡಿಕೊಟ್ಟರು. ಆ ಉಪನ್ಯಾಸಗಳ ಇಂಗ್ಲಿಷ್ ವಾಗ್ಧೋರಣೆ, ಶೈಲಿಯ ಗಾಂಭೀರ್ಯ ಮತ್ತು ಆ ವಿಮರ್ಶನ ದೃಷ್ಟಿಯ ಉದಾರತೆ — ಇವು ವಿಸ್ಮಯಾನಂದಕರಗಳಾಗಿದ್ದವು.

* * *

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

## ನೀತಿಗುಣ

ಶ್ರೀಕಂಠಯ್ಯನವರ ಜೀವನ ಕರುಣಪ್ರಚೋದಕ ಸಂದರ್ಭಗಳಿಂದ ತುಂಬಿದ್ದು. ಅವರ ನಡುವಯಸ್ಸಿನ ಸುಮಾರಿನಲ್ಲಿ ವಿಪತ್ತುಗಳು ಒಂದರ ಹಿಂದೊಂದು ಬಂದು ಆ ಮನೆಯನ್ನು ದುಃಖಾವೃತವಾಗಿ ಮಾಡಿದ್ದವು. ಶ್ರೀಕಂಠಯ್ಯನವರು ಆ ವಿಪತ್ತುಗಳನ್ನು ಧೈರ್ಯದಿಂದಲೂ, ತಾಳ್ಮೆಯಿಂದಲೂ ಸಹಿಸಿಕೊಂಡದ್ದು ಅವರ ಸಾಹಿತ್ಯ ಭಕ್ತಿಗೆ ಕಿರೀಟಪ್ರಾಯವಾದದ್ದು. ಅವರು ಗ್ರೀಕ್ ಸಾಹಿತ್ಯದ ರುದ್ರನಾಟಕಗಳಿಗೆ ಮನಸೋತಿದ್ದವರು. ವಿಧಿವಿಲಾಸ, ವಿಧಿಯ ವೈಕಟ್ಯ ಎಷ್ಟು ಬಗೆಯದೆಂಬುದನ್ನು ಅವರು ಸಾಹಿತ್ಯದಲ್ಲಿ ಕಂಡು ತಮ್ಮ ಮನಸ್ಸಿನಲ್ಲಿ ಚಿಂತಿಸಿದ್ದವರು. ಕಷ್ಟಾನುಭವವು ಅವರ ಚಿತ್ತಸ್ಥೈರ್ಯವನ್ನೂ ಸಮತೆಯನ್ನೂ ಕೆಡಿಸಿರಲಿಲ್ಲ, ಅವರ ಮನಸ್ಸನ್ನು ವಿಸಾರಪಡಿಸಿರಲಿಲ್ಲ. ಅವರು ತಮ್ಮ ದುಃಖವನ್ನು ನುಂಗಿಕೊಂಡು ಕರ್ತವ್ಯನಿಷ್ಠೆಯಲ್ಲಿ ಅವನ್ನು ಮರೆತಿದ್ದರು. ಇದೇ ನನ್ನ ದೃಷ್ಟಿಯಲ್ಲಿ ನೀತಿಗುಣದ ಪರಾಕಾಷ್ಠೆ.

ಶ್ರೀಕಂಠಯ್ಯನವರು ಸ್ವಾಭಾವಿಕವಾಗಿ ಸರಳರು, ನಿಷ್ಕಲ್ಮಷರು, ಉದಾರಿಗಳು. ಇತರರಿಗೆ ಸಹಾಯವಾಗುವುದರಲ್ಲಿ ಅವರಿಗೆ ಸಂತೋಷವಾಗುತ್ತಿತ್ತು. ಅವರು ಕಡೆ ಕಡೆಯ ದಿನಗಳಲ್ಲಿ ಅವರ ಆಗಿನ ಅನಾರೋಗ್ಯ ಸ್ಥಿತಿಯಲ್ಲಿ ಪರಸ್ಥಳ ಹೋದದ್ದು ನಮ್ಮಲ್ಲೇ ಕೆಲವರಿಗೆ ಇಷ್ಟವಾಗಲಿಲ್ಲ. ಕನ್ನಡಿಗರ ದುರ್ದೈವ ಅವರನ್ನು ಬೇರೆ ಕಡೆಗೆ ಎಳೆಯಿತು.

ವಿ. ಸೀ.

# ಹೊಸಗನ್ನಡ ಸಾಹಿತ್ಯದ ಪುಣ್ಯ*

ವ್ಯಕ್ತಿಯಾಗಿ, ಉಪಾಧ್ಯಾಯರಾಗಿ, ಸಾಹಿತ್ಯದಲ್ಲಿ ವಾಗ್ಮಿತೆಯಲ್ಲಿ ಒಂದು ಶಕ್ತಿಯಾಗಿ 'ಶ್ರೀ'ಯವರು ಕನ್ನಡ ನಾಡಿನಲ್ಲಿ ದೊಡ್ಡವರಾದವರು. ಅವರು ಒದುಕಿದ ಒದುಕು, ಅವರನ್ನು ನಡೆಸಿದ ದರ್ಶನ, ಉತ್ಸಾಹ—ಅವೂ ಹಾಗೆಯೇ—ದೊಡ್ಡವು. ಅದಕ್ಕಾಗಿ ಅವರು ಒಂದು ತಪಸ್ಯೆಯನ್ನೇ ಮಾಡಿದರೆನ್ನಬೇಕು. ಸುತ್ತಲ ನೂರಾರು ಜನರಿಗೆ ಅದು ಏಕೆ ಬರಲಿಲ್ಲವೋ, ಅವರಿಗೆ ಹೇಗೆ ಬಂದಿತೋ ಅರಿಯುವ ಹಾಗಿಲ್ಲ. ಮದರಾಸಿನಲ್ಲಿ ಅವರು ಓದುತ್ತಿದ್ದಾಗ ಕನ್ನಡದ ವಿಷಯವಾಗಿ ಅವರೂ ಅವರ ಸ್ನೇಹಿತರು ಎಂ. ಎನ್. ಶ್ರೀನಿವಾಸರಾಯರೆಂಬುವರೂ ಕನ್ನಡಕ್ಕಾಗಿ ಯೋಚನೆಮಾಡಿದ್ದುಂಟು. ಇಬ್ಬರೂ ಈ ಶತಮಾನದ ಮೊದಲ ವರ್ಷಗಳಲ್ಲಿಯೇ ಕಡಲಕರೆಯ ಮಳಲ ಒಟ್ಟಿಲಲ್ಲಿ ಕುಳಿತು ಕನ್ನಡ ಭಾಷೆ ಸಾಹಿತ್ಯಗಳನ್ನು ಹೊಸ ದಿಕ್ಕಿಗೆ ತಿರುಗಿಸುವ ಬಗೆ ಹೇಗೆ?—ಎಂಬ ಯೋಚನೆಗಳನ್ನು ಮಾಡುತ್ತಿದ್ದರಂತೆ. ಒಂದು ನೆಲೆಗೆ ಅವರಿಬ್ಬರೂ ನಿಂತ ಮೇಲೆ ಆ ಬಗೆಗೆ ದುಡಿಯತಕ್ಕದ್ದೆಂದೂ ಮಾತನಾಡಿರಬೇಕು.

ಚಾಮರಾಜ ಒಡೆಯರ ಕಾಲದ ಹೊತ್ತಿಗೇ ಕನ್ನಡದ ಅಭಿಮಾನ ಮೈಸೂರಿನಲ್ಲಿ ಒಂದು ಉತ್ಸಾಹವಾಗಿ ಕಟ್ಟಿಬಂತು. ಇಂಗ್ಲಿಷಿನಿಂದ ಸಂಸ್ಕೃತದಿಂದ ಭಾಷಾಂತರಗಳಾದವು. ಕ್ರಿಶ್ಚಿಯನ್ ಮತಪಂಥದವರ ಕಾರ್ಯಗಳಿಂದಲೂ, ಹೊಸ ವಿದ್ಯಾಪದ್ಧತಿಯ ಪ್ರಾಚುರ್ಯದಿಂದಲೂ ನಮ್ಮ ಸಾಹಿತ್ಯದ ರೀತಿ ನೀತಿ ಸಂಪ್ರದಾಯಗಳಿಗೆ ಬೇರೆಯಾದ ಇನ್ನೊಂದು ಸಂಪ್ರದಾಯದ ವ್ಯಾಸಂಗ ಆರಂಭವಾಗಿತ್ತು. ಹಳೆಯ ನಮ್ಮದು, ನಿಂತ ನೀರಿನಂತೆ ಕೊಳಚೆ-ಪಾಚಿ ಕಟ್ಟಿತ್ತು. ಹೊಸತರ ಮೂಲಕ ಕಂಡ ಒಂದು ಸ್ವಾತಂತ್ರ್ಯದ ವಿಲಾಸ ರಚನೆಗೂ ವಿಷಯಕ್ಕೂ ಆ ಕಾಲದವರನ್ನು ಒಲಿಸಿತು. ಇಂಗ್ಲಿಷ್ ಸಾಹಿತ್ಯದಲ್ಲಿ ತನಿಯಾಗಿ ಆಳವಾಗಿ ಅಭ್ಯಾಸಮಾಡಿದವರಿಗಂತೂ ಅದು ಮೋಹಕವೂ ಮಾದಕವೂ ಆಯಿತು. ಅಂಥ ಚೆಲುವೂ ಬೆಳಕೂ ಶಕ್ತಿಯೂ ನಮ್ಮ ಸಾಹಿತ್ಯಕ್ಕೆ ಬರಬೇಕು, ಹೊಸ ದವಸದಿಂದ ನಮ್ಮ ಕಣಜ ತುಂಬಬೇಕು ಎಂಬ

---

* ಮಹನೀಯರು, ಪು. 26-43

ಉತ್ಸಾಹ ಹುಟ್ಟಿ ಶ್ರದ್ಧಾಳುಗಳಾದ 'ಶ್ರೀ'ಯಂಥವರಿಗೆ ಅದು ಮನಸ್ಸಿನ ಸಂತತ ಒತ್ತಡವಾಯಿತು. ಒಟ್ಟು ೧೯ನೆಯ ಶತಮಾನದ ಇಂಗ್ಲಿಷ್ ಸಾಹಿತ್ಯ ಹುಟ್ಟಿ ಬೆಳೆದು ಧಾತುಗೆಟ್ಟು, ಈ ಶತಮಾನ ತೆರೆಯುವ ಹೊತ್ತಿಗೆ ೨-೩ ಬೇರೆ ಜಾಡುಗಳನ್ನು ಹಿಡಿಯುತ್ತಿರುವ ಅನುಭವ ಅವರಿಗೆ ಕಾಣಿಸಿತ್ತು. 'ರೋಮ್ಯಾಂಟಿಕ್ ಮೂವ್‌ಮೆಂಟ್' ಎಂಬುದು ಅಲ್ಲಿ ಹೇಗೆ ಹುಟ್ಟಿ, ಬೆಳೆದು ಪ್ರಬಲಿಸಿತೊ, ಎಂಥ ಸತ್ಫಲಗಳನ್ನು ಸಾಹಿತ್ಯಕ್ಕೆ ಕೊಟ್ಟಿತೊ ಅದನ್ನು ಆಳವಾಗಿ ಅಭ್ಯಾಸಮಾಡಿದವರು 'ಶ್ರೀ'ಯವರ ಕಾಲದಲ್ಲಿ ದೇಶದ ಬೇರೆ ಬೇರೆ ಭಾಷೆಗಳಲ್ಲಿ ಅನೇಕರಿದ್ದರು. ಕನ್ನಡ ದೇಶದಲ್ಲಿ ಹಾಗೆ ಸ್ಫೂರ್ತಿಗೊಂಡವರಿಲ್ಲ ಕನ್ನಡಕ್ಕೆ ದುಡಿಯಬೇಕೆಂದು ಮನಸ್ಸು ಮಾಡಲಿಲ್ಲ ಮಾತ್ರ. ಲಾಯರಾಗಬಹುದಾಗಿದ್ದು, ಅದಕ್ಕಾಗಿ ಬಿ. ಎಲ್. ಪಾಸುಮಾಡಿದ್ದ ಇವರು ಕರ್ಮ ಧರ್ಮ ಸಂಯೋಗದಿಂದ ಉಪಾಧ್ಯಾಯವೃತ್ತಿಗೆ ಬಂದುದು ಹೊಸ ಕನ್ನಡ ಸಾಹಿತ್ಯದ ಒಂದು ಪುಣ್ಯವಾಯಿತು. ಈ ಶತಮಾನದ ಮೊದಲ ದಶಕದಲ್ಲಿಯೇ ಬಹುತರ ಅದಕ್ಕೆ ಸಂಬಂಧಿಸಿದ ವ್ಯಾಸಂಗಗಳನ್ನು ಅವರು ಮುಗಿಸಿದ್ದರು. ಇಂಗ್ಲಿಷ್ ಐಚ್ಛಿಕವಾಗಿ ವ್ಯಾಸಂಗಗಳನ್ನು ಅವರು ಮುಗಿಸಿದ್ದರು. ಇಂಗ್ಲಿಷ್ ಐಚ್ಛಿಕವಾಗಿ ಓದಿದ್ದೂ ಇವರು ಉಪಾಧ್ಯಾಯವೃತ್ತಿಗೆ ಅತಿಶಯವಾದ ಅಭ್ಯಾಸವನ್ನು ಬೇಡಿತು. ಇದರ ಉತ್ಸಾಹವನ್ನು ಕಾರ್ಯರೂಪಕ್ಕೆ ತರಬೇಕಾದರೆ ಇದಕ್ಕೆ ಸಂಬಂಧಿಸಿದ ಪ್ರಭಾವಗಳನ್ನೆಲ್ಲ ಅರಿಯಬೇಕು — ಎಂದವರೇ ಖಾಸಗಿಯಾಗಿ ಗ್ರೀಕ್ ಅಭ್ಯಾಸಮಾಡಿದರು. ಇಂಗ್ಲಿಷ್ ಸಾಹಿತ್ಯ ಚರಿತ್ರೆಗೆ ಒದಗುವ ಫ್ರೆಂಚ್, ಜರ್ಮನ್, ಇಟಾಲಿಯನ್ ಸಾಹಿತ್ಯ ಸಂಪತ್ತನ್ನು ಭಾಷಾಂತರಗಳ ಮೂಲಕ ಸಂಗ್ರಹಿಸಿದರು. ಇತ್ತ ನಮ್ಮ ಮೂಲ ಸಂಪ್ರದಾಯದ ಶಕ್ತಿಯಾದ ಸಂಸ್ಕೃತದ ಭಾಷಾ ಸಾಹಿತ್ಯಗಳ ವ್ಯಾಸಂಗ ಅಗತ್ಯವಾಗಿ ತೋರಿ ಪ್ರಾಚೀನ ಕಾವ್ಯಮಾರ್ಗವನ್ನೂ, ಅದಕ್ಕೆ ಆಸರೆಯಾದ ಮತ-ಧರ್ಮ, ತತ್ವಶಾಸ್ತ್ರ, ಸಾಹಿತ್ಯದ ಉಪಾಂಗಗಳಾದ ವ್ಯಾಕರಣ, ಛಂದಸ್ಸು, ಅಲಂಕಾರಗ್ರಂಥಗಳನ್ನು ಓದಿದರು. ಕನ್ನಡ ಸಂಸ್ಕೃತಜನ್ಯವಲ್ಲ. ಇದು ಬೇರೆ ಭಾಷಾವರ್ಗಕ್ಕೆ ಸೇರಿದ್ದು; 'ದ್ರಾವಿಡ'ವರ್ಗದ್ದು; ಅದರ ಅತಿ ಪ್ರಾಚೀನ ಸಾಹಿತ್ಯದ ಉಳಿಕೆ ತಮಿಳಲ್ಲಿದೆ — ಎಂದು ಕಂಡು ತಮಿಳಿನ ವ್ಯಾಸಂಗ ಮಾಡಿದರು. ಈ ಪೂರ್ವ ಸಿದ್ಧತೆ ಇಲ್ಲವಿದ್ದರೆ ಅವರ ಕೆಲಸಕ್ಕೆ ಶಕ್ತಿ, ಸಂಪತ್ತಿ ಬರುತ್ತಿರಲಿಲ್ಲ. ಅವರ ಕಾರ್ಯಕ್ಕೆ ಬಂದ ಅಡ್ಡಿ ಆತಂಕ ಅಡಚಣೆಗಳನ್ನು ನಿವಾರಿಸುವುದಕ್ಕೆ ವಿದ್ವತ್ತು ಸಾಕಾಗುತ್ತಿರಲಿಲ್ಲ. ಜೊತೆಗೆ ಅವರ ಮನಸ್ಸು, ಕವಿಮನಸ್ಸು; ನಿರ್ಮಾಣಕ್ರಿಯೆಗೆ ಹಾತೊರೆಯುತ್ತಿದ್ದುದು. ಅವರು ಪೂರ್ತಿಯಾಗಿ ಈ ಸಿದ್ಧತೆಮಾಡಿಕೊಳ್ಳುವವರೆಗೂ ಅವರು ನುಗ್ಗಿ ಪ್ರಕಟವಾಗಿ ಹೊಸ ಕನ್ನಡ ಸಾಹಿತ್ಯದ ರೂಪಣಕ್ಕೆ ಕೈ ಹಾಕಲಿಲ್ಲ. ಆಗಾಗ ನಾಲ್ಕಾರು ಇಂಗ್ಲಿಷ್ ಗೀತಗಳನ್ನು ಕನ್ನಡಿಸಿ, ಒಂದು ಪತ್ರಿಕೆಯಲ್ಲಿ

ಪ್ರಕಟಿಸಿದ್ದರು. ಧಾರವಾಡದ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ನುಡಿಯ ಬೆಳವಣಿಗೆಯನ್ನು ಕುರಿತು ೨-೩ ಭಾಷಣಗಳನ್ನು ಮಾಡಿದ್ದರು. ಅಷ್ಟೇ ಅಲ್ಲದೆ, ಇವರಲ್ಲಿ ಆ ಬೆಂಕಿ ಇತ್ತು. ಇವರ ಆಕಾಂಕ್ಷೆ ಎಷ್ಟು ದೊಡ್ಡದು ಎಂಬುದರ ಅರಿವೇ ಸಾಮಾನ್ಯವಾಗಿ ಇರಲಿಲ್ಲ. ಗಯಟೆ ಹೇಳಿದಂತೆ ನಿಪುಣತೆ ಅಭ್ಯಾಸದಿಂದ ಬೆಳೆಯಬಲ್ಲದಾದರೂ ಶೀಲ ಬೆಳೆಯಲು ಏಕಾಂತ ಬೇಕು. ಅಂಥ ಏಕಾಂತದಲ್ಲಿ ಅವರ ಶೀಲ-ಶಕ್ತಿ ಬೆಳೆದವು.

ಇವರು ಮಹಾರಾಜಾ ಕಾಲೇಜಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕ್ರಮಕ್ಕೆ ಬೇಕಾದಂತೆ ಇಂಗ್ಲಿಷ್ ಪಾಠಗಳನ್ನು ಮಾಡಬೇಕಾಗಿರುವಾಗ 'Rhetoric' ಎಂಬ ಪಾಠಭಾಗ ಇತ್ತಂತೆ. ಅದಕ್ಕಾಗಿ ಪಠ್ಯಪುಸ್ತಕದಂತಹ ಸಣ್ಣ ಪುಸ್ತಕವನ್ನು ಅಚ್ಚು ಮಾಡಿದರು. ನಾವು ಕಾಲೇಜಿಗೆ ಹೋಗುವ ಮುಂಚೆಯೇ ಅದು ದೊರಕದಾಗಿತ್ತು. 'Notes on Rhetoric' ಎಂಬ ಪುಸ್ತಕದ ಪ್ರತಿಗಳು ಈಗ ಸಿಕ್ಕಿದರೆ ಎಷ್ಟು ವ್ಯಾಸಂಗ ಆ ಹಿಂದೆ ಅವರದಾಗಿ ಇತ್ತು ಎಂಬುದರ ಅರಿವಾಗುತ್ತದೆ. ಸುಮಾರು ೧೯೨೮-೨೯ರ ಸಮಯಕ್ಕೆ ನಾವು ಮಂಗಳೂರಿಗೆ ಹೋದಾಗ ಒಂದು ದಿನ ಸ್ಟೆಂಟ್ ಅಲೋಷಿಯಸ್ ಕಾಲೇಜಿನಲ್ಲಿ ಅಲ್ಲಿನ ಪ್ರಿನ್ಸಿಪಾಲರಾಗಿದ್ದ ರೆವರೆಂಡ್ ಫ್ರಾನ್ಸಿಸ್‌ಪಿಯೊ ಎಂಬವರು ಇವರ ಷೇಕ್ಸ್‌ಪಿಯರ್ ಭಾಷಣಕ್ಕೆ ಅಧ್ಯಕ್ಷರಾಗಿದ್ದರು. ಆರಂಭದಲ್ಲಿ ತಾನೂ ಪರೋಕ್ಷವಾಗಿ ಈ ವಿದ್ವಾಂಸರ ಒಂದು ಬಗೆಯ ಶಿಷ್ಯನೇ ಎಂದು ಹೇಳಿ, ಆ 'Rhetoric' ಪುಸ್ತಕದಿಂದ ತಾನು ತುಂಬಾ ಪ್ರಯೋಜನ ಪಡೆದೆನೆಂದು ಹೇಳಿದರು. ನಾವು ಕಾಲೇಜ್ ಪ್ರವೇಶಮಾಡುವುದಕ್ಕೆ ಮುಂಚಿತವಾಗಿಯೇ, ಅವರದು ಅದ್ಭುತ ಪಾಂಡಿತ್ಯ, ಅವರನ್ನು ಎದುರಿಸಿ ಮಾತನಾಡುವವರು ಯಾರೂ ಇಲ್ಲ; ಬಹು ಕಟ್ಟುನಿಟ್ಟು, ಸುಳ್ಳುಪೊಳ್ಳು ಹೇಳಿ ಅವರಿಂದ ತಪ್ಪಿಸಿಕೊಳ್ಳುವುದು ಅಸಾಧ್ಯ; ಯಾರ ತಲೆಹೋಕತನವನ್ನೂ ಒಂದು ಮಾತಿನಲ್ಲಿ ಮುರಿದುಬಿಡುತ್ತಾರೆ; ಪರೀಕ್ಷೆಗಳಲ್ಲಿ ಸೊನ್ನೆ ಹಾಕಿಬಿಡುತ್ತಾರೆ — ಎಂಬ ಸುದ್ದಿ ಇದ್ದುದರಿಂದ ಭಯದಿಂದಲೇ ಅವರ ಕ್ಲಾಸನ್ನು ಪ್ರವೇಶಮಾಡುತ್ತಿದ್ದೆವು. ಅವರು ಬಿಗಿಯೇ; ಕೋಟು ಬಿಗಿ, ರುಮಾಲ್ ಬಿಗಿ, ಕುತ್ತಿಗೆ ಬಿಗಿ, ಕೋಟ್ ಕತ್ತುಪಟ್ಟಿ ಬಿಗಿ, ಮಾತೂ—ನಡವಳಿಕೆಯೂ ಹಾಗೆಯೇ. ಅವರು ಮಾತನಾಡುವಾಗ ಕ್ಲಾಸಿನಲ್ಲಿ ಯಾರೂ ಕಮಕ್-ಕಿಮಕ್ ಎನ್ನುವ ಹಾಗಿಲ್ಲ. ಒಂದು ನಿಮಿಷ ಪೋಲು ಮಾಡದೆ ತಮ್ಮ ಪಾಠ ಮಾಡಿಕೊಂಡು ಪೂರ್ವದಲ್ಲಿ ಹುಟ್ಟಿದ ಸೂರ್ಯ ಪೂರ್ವದಲ್ಲಿ ಮುಳುಗುವಂತೆ ಬಂದ ಬಾಗಿಲಲ್ಲಿ ಹಿಂದಕ್ಕೆ ಹೊರಟುಹೋಗುತ್ತಿದ್ದರು. ಪ್ರಶ್ನೆ ಕೇಳುವ ಹಾಗಿಲ್ಲ; ಅಧಿಕಪ್ರಸಂಗವೆಂಬಂತೆ ಮಾತೆತ್ತಿದರೆ ಕೆಲವೇಳೆ ಮುಖಮುರಿಯುವಂತೆ ಕೂಡ, ಒಂದು-ಎರಡು ಮಾತಲ್ಲಿ ಉತ್ತರಕೊಟ್ಟು ಮುಗಿಸಿ

ಬಿಡುತ್ತಿದ್ದುದರಿಂದ ಆ ಗೋಜಿಗೆ ಯಾರೂ ಹೋಗುತ್ತಿರಲಿಲ್ಲ. ನಮ್ಮ ತರಗತಿಯಲ್ಲಿದ್ದ ಅವರ ತಮ್ಮ ಕೃಷ್ಣಸ್ವಾಮಿಗೆ ಕೂಡ ಅದೇ ಭಾವನೆ, ಅನುಭವ.

ಆ ಕಾಲದಲ್ಲಿ ಇಂಗ್ಲಿಷನ್ನು ಇಂಗ್ಲಿಷ್ ಪ್ರೊಫೆಸರುಗಳೇ ಹೇಳಬೇಕು. ಶಂಖದಿಂದ ಬಂದರೆಯೇ ತೀರ್ಥ ಎಂಬುದಿದ್ದರೂ 'ಶ್ರೀ'ಯವರ ಶಕ್ತಿ ಸಾಮರ್ಥ್ಯಗಳನ್ನು ಕುರಿತು ನಮ್ಮಲ್ಲಿನ ಇಂಗ್ಲಿಷ್ ಪ್ರೊಫೆಸರುಗಳಿಗೆ ಅವರಲ್ಲಿ ತುಂಬಾ ಗೌರವವಿತ್ತು. ಒಮ್ಮೆ ಪ್ರೊ. ಮೆಕಿಂಟಾಷ್ 'ನಿಮ್ಮ ದೇಶದ ನಂಬಿಕೆಗಳು ನಿಜವಾದರೆ ಪ್ರೊ. ಶ್ರೀಕಂಠಯ್ಯ ನವರು ಇಂಗ್ಲೆಂಡಿನಲ್ಲಿ Oxbridge ಪ್ರಾಧ್ಯಾಪಕರಾಗಿ ಇದ್ದಿರಬೇಕು ಹಿಂದಿನ ಜನ್ಮದಲ್ಲಿ' ಎಂದರು. ಅವರಿಗೆ ಆ ಸಂಸ್ಕಾರವೂ Scottish University ಗಳ ಅನುಭವವೂ ಇದ್ದುದರಿಂದಲೂ ಅವರು ಎಂದೇ ಆಗಲಿ, ಅತ್ಯುಕ್ತಿ ಆಡಿದವರಲ್ಲದರಿಂದಲೂ ಪ್ರಾಮಾಣಿಕರಾದುದರಿಂದಲೂ ಆ ಮಾತಿಗೆ ಬೆಲೆಯಿತ್ತು. ಅದು ಬರಿಯ ಉಪಚಾರವಲ್ಲ. ತಾವು ಓದಿದ್ದುದನ್ನು ಪರಿಷ್ಕಾರವಾಗಿ ಓದಿದ್ದರು. ಮೂಲಗ್ರಂಥ, ಅದರ ಮೇಲೆ ಬಂದ ವ್ಯಾಖ್ಯಾನ ಹುಟ್ಟಿದ ಚರ್ಚೆ—ಎಲ್ಲದರ ಅರಿವುಳ್ಳವರು; ಸ್ವಂತವಾಗಿ ಯೋಚನೆಮಾಡ ಬಲ್ಲವರು. ಮೂಲವನ್ನು ಹಿಡಿದು ನಮ್ಮ ಸಾಹಿತ್ಯಕ್ಕೆ ಸಾರವನ್ನು ತಂದುಕೊಳ್ಳ ಬೇಕೆಂಬ ಉತ್ಸಾಹವಿದ್ದವರು. ಆದುದರಿಂದ ಅವರ ತಿಳಿವಳಿಕೆ ನಿಷ್ಕೃಷ್ಟವಾಗಿತ್ತು. ಒಂದು ದಿನ ಅವರು ಇಂಥ ವಿಮರ್ಶಕನು ಹೀಗೆ ಹೇಳುತ್ತಾನೆ ಎಂದು ಯಾರದೊ ಹೆಸರು ಹೇಳಿದರು ನೆನಪು ನನಗಿಲ್ಲ. ಅವರ ಗುರುಗಳಾದ ಟೇಯ್ಟ್ ಅವರು 'ಇಂಥವರು ಹೇಳುತ್ತಾರಲ್ಲವೆ ?'—ಎಂದು ಯಾರಾದರೂ ಪ್ರಶ್ನೆಮಾಡಿದರೆ, 'ಪುಸ್ತಕ ಓದಿ, ನಿಮಗೆ ಏನು ಅನ್ನಿಸುತ್ತದೆ ಹೇಳಿ' ಎನ್ನುತ್ತಿದ್ದರಂತೆ. ಮೊದಲನೆಯ ಅಂಕದಲ್ಲಿ ಅಥವಾ ನಾಲ್ಕನೆಯ ಪ್ರಕರಣದಲ್ಲಿ ಒಂದು ವಾಕ್ಯಕ್ಕೆ ಅರ್ಥ ಮಾಡುವಾಗ, ಇದರ ಅರ್ಥ ವ್ಯಾಪ್ತಿಯೊ ಮಾರ್ಪಾಡೊ ಮುಂದೆ ಹೇಗಾದೀತೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡೇ ಪಾಠ ಹೇಳುವವನು ಅರ್ಥ ಹೇಳಬೇಕಾದ್ದರಿಂದ ಮೂರನೆಯ ಅಂಕವನ್ನೋ ನಾಲ್ಕನೆಯ ಅಂಕವನ್ನೋ ಓದಿ; ಕಾದಂಬರಿಯಲ್ಲಿ ೧೫ನೆಯ ಪ್ರಕರಣವನ್ನು ನೋಡಿ, ಈ ಸಾಲು ಈ ಪುಟದಲ್ಲಿ — ಈ ಅಂಶದಲ್ಲಿ — ಇನ್ನೇನು ಹೇಳುತ್ತದೆಯೋ ಗೊತ್ತಾಗುತ್ತದೆ. ನೋಡಿ ಎಂಬಂತೆ ಅವರು ಪಾಠ ಹೇಳುತ್ತಿದ್ದರಂತೆ. ಆ ಬಗೆಯ ಅಭ್ಯಾಸ ಅವರ ಮನಸ್ಸನ್ನು ತಿದ್ದಿತ್ತು. ತಮ್ಮ ತುಂಬು ತಿಳಿವಳಿಕೆಯಿಂದ ಗ್ರಂಥದ ಪ್ರಸ್ತಾವನೆಯನ್ನು ಮುಗಿಸಿ, ಪಠ್ಯಪುಸ್ತಕವನ್ನು ಬಿಡಿಸಿ ಬಿಡಿಸಿ ಓದುತ್ತಿರುವಾಗ ಅವರ ಓದಿನಲ್ಲಿಯೇ ಅರ್ಥ ಸ್ಫುಟವಾಗುವಂತೆ ಪಾಠ ನಡೆಯುತ್ತಿತ್ತು. ಅಲ್ಲೊಂದು ಟಿಪ್ಪಣಿಯ ಮಾತು, ಇಲ್ಲೊಂದು ವಿಸ್ತರಣ, ಅಥವಾ ಸಂಬಂಧಿಸಿದ ವಿಷಯ, ಯಾವುದೊ ಹೋಲಿಕೆ ತಿಳಿಸಿ ಬಿಟ್ಟರೆ ಆ ಗ್ರಂಥದ ಜೀವಂತ ಪರಿಚಯ ನಮಗಾಗುತ್ತಿತ್ತು. ನಡುವೆ ಘಟ್ಟಗಳಾಗಿ

ಗ್ರಂಥದ ವಿಷಯುವನ್ನು ವಿಂಗಡಿಸಿಕೊಂಡು ಈ ಗೋಡೆಯಿಂದ ಆ ಗೋಡೆಯುವರೆಗೂ ನೆಲಸಿದ್ದ ಬೋರ್ಡಿನ ಮೇಲೆ ಪೂರ್ತಿ ವಿಶ್ಲೇಷಣೆಯನ್ನು ಬರೆದು ವಿಷಯಗಳನ್ನು ತೂಗಿ, ನಿರ್ದೇಶಿಸಿ, ಸಂಬಂಧ ಕಲ್ಪನೆಮಾಡಿ, ಗುಣಗಳನ್ನೂ ಬೆಲೆಗಳನ್ನೂ ಎತ್ತಿ ಕಾಣಿಸಿ, ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ ಬಾಣಗಳನ್ನು ಬಿಟ್ಟು, ಇನ್ನು ಇದರ ಸುತ್ತಲೂ ಒಂದು ಸುತ್ತು ವರ್ತುಲ ನಿರ್ಮಿಸಿ — ಆಯಾ ದಿನದ ಪಾಠಗಳನ್ನು ನಿರ್ವಹಿಸುತ್ತಿದ್ದರಾಗಿ, ಅದನ್ನು ನೋಡುವ, ಕೇಳುವ, ಮನನ ಮಾಡುವ ಒಟ್ಟು ಪಾಠದ ವಿಷಯವನ್ನು ಗ್ರಹಿಸುವ ಕಾರ್ಯ ಒಂದು ಮಾತ್ರ ವಿದ್ಯಾರ್ಥಿಗಳ ಪಾಲಿಗೆ ಇರುತ್ತಿತ್ತು. ಇದನ್ನು ಬೇರೊಂದು ಕಡೆ ಪ್ರಸ್ತಾಪಿಸಿದ್ದೇನಾಗಿ* ವಿವರಕ್ಕೆ ಹೋಗುವುದಿಲ್ಲ.

ಅವರು ಬಹುಕಾಲ ಅಸಿಸ್ಟೆಂಟ್ ಪ್ರೊಫೆಸರರಾಗಿಯೇ ಇರಬೇಕಾಗಿತ್ತು. ಇದ್ದ ಎರಡು ಪ್ರೊಫೆಸರ್ ಸ್ಥಾನಗಳೂ ಇಬ್ಬರು ಬ್ರಿಟಿಷರಿಂದ ಅಲಂಕೃತವಾಗಿತ್ತು. ಅವರು ರಿಜಿಸ್ಟ್ರಾರ್ ಆಗಿ, ಆ ಸ್ಥಿತಿಯಿಂದ ದಾಟಿ, ಸೀನಿಯರ್ ಪ್ರೊಫೆಸರ್ ಪದವಿಯನ್ನು ಪಡೆಯಬೇಕಾಗಲು ಮೈಸೂರಿಂದ ವರ್ಗವಾಗಿ ಬೆಂಗಳೂರಿಗೆ ಬರಬೇಕಾಯಿತು. ಕಾಲೇಜಿನ ಪ್ರೊಫೆಸರ್ ಕನ್ನಡದಲ್ಲಿಯಾಗಲಿ, ಇನ್ನಾವ ದೇಶಭಾಷೆಯಲ್ಲಾಗಲಿ ಮಾತನಾಡುವುದು ಮರ್ಯಾದೆಗೆ ಕಡಮೆ ಎಂದಿದ್ದ ಕಾಲ ಅದು. ಮೇಲಿನವರ ದೃಷ್ಟಿಯಲ್ಲಿ ಅಯೋಗ್ಯತೆ. ಇಂಗ್ಲಿಷ್ ಪ್ರೊಫೆಸರುಗಳ ಎಣಿಕೆಯಲ್ಲಂತೂ ಅದು ಒಂದು ಚ್ಯುತಿ,— ವೃತ್ತಿಯದು, ಶೀಲದ್ದು, ಪದವಿಯದು— ಎಂಬ ಭಾವನೆ. ಗ್ರಹಚಾರ ಕಡಮೆಯಾಗಿ ಒಂದು ಕನ್ನಡ ಮಾತಾಡಬೇಕಾದರೆ ನಾಚುತ್ತ, ಸಂಕೋಚಗೊಳ್ಳುತ್ತ ಕನ್ನಡದಲ್ಲಿ ಹೀಗೆ ಹೇಳುತ್ತೇವಲ್ಲವೆ ಎನ್ನಬೇಕು ! ಎಲ್ಲ ಪ್ರಾಧ್ಯಾಪಕರೂ ಹಾಗೆಯೇ. ಜೊತೆಗೆ ಇವರು ಇಂಗ್ಲಿಷನ್ನು ಇಂಗ್ಲಂಡಿಗೆ ಹೋಗಿ Oxford–Cambridge ಗಳಲ್ಲಿಯೊ ಲಂಡನ್ನಿನಲ್ಲಿಯೊ—ಇನ್ನೂ ಆಗ ಅಮೇರಿಕ ವರೆಗೂ ಈ ವ್ಯಾಪಾರ ಹಬ್ಬಿರಲಿಲ್ಲ; ಅಮೇರಿಕಕ್ಕೆ ಇಂಗ್ಲಂಡಿಗಿಂತ ಕಡಿಮೆಯ ತೂಕವೇ ಬೆಲೆಯೇ ಇತ್ತು — ಕಲಿಯಲಿಲ್ಲ, ಅಲ್ಲಿನ ಪದವಿಗಳನ್ನು ಪಡೆದಿರಲಿಲ್ಲ— ಎಂಬುದು ಇವರಿಗೆ ಬಡ್ತಿಯನ್ನೂ ಮೇಲು ಪದವಿಯನ್ನೂ ತರಲು ಅಡ್ಡಿಯಾಯಿತು. ವಿಶ್ವೇಶ್ವರಯ್ಯನವರಂಥ ದಿವಾನರಿಗಂತೂ ಇಂಗ್ಲಿಷ್ ಅಧ್ಯಾಪಕರಾಗಿ ಇಂಗ್ಲಂಡಿಗೆ ಹೋಗಿ ಬಾರದಿದ್ದುದು ಒಂದು ಲೋಪವಾಗಿ ದೋಷವಾಗಿಯೇ ಇದ್ದುದರಿಂದ ಶ್ರೀಕಂಠಯ್ಯನವರ ಸ್ಥಾನದಲ್ಲಿ ಉತ್ಕರ್ಷೆಗೆ ಅವಕಾಶವೇ ಇರಲಿಲ್ಲ.

---

* ಕಾಲೇಜ್ ದಿನಗಳು

ಅವರು ರಿಜಿಸ್ಟ್ರಾರ್ ಆಗಿದ್ದದ್ದು ಸ್ಥಾನ ಅಧಿಕಾರಗಳ ಬಲದಿಂದ ಕೆಲವು ಮಾರ್ಪಾಡುಗಳನ್ನು ಮಾಡಲು ಅನುಕೂಲ ದೊರಕಿತು. ಜೊತೆಗೆ ಬಂಗಾಳಿಯಾಗಿದ್ದ ಬ್ರಜೇಂದ್ರನಾಥಶೀಲರು ಉಪಕುಲಪತಿಯಾಗಿದ್ದ ಸಮಯ ಅದಾದ್ದರಿಂದ ಅವರಿಗೆ ದೇಶ ಭಾಷೆಯ ಸಾಹಿತ್ಯದ ಕ್ರಿಯಾಕಲಾಪದಲ್ಲಿ ಪ್ರೀತಿ, ಪಕ್ಷಪಾತಗಳು ಇರುವುದು ಸಿದ್ಧವಾಗಿ ಇವರು ಹೆಚ್ಚು ಧಾರಾಳದಿಂದ ಹೊಸ ಕನ್ನಡ ಸಾಹಿತ್ಯ ನಿರ್ಮಾಣ ಕಾರ್ಯಕ್ಕೂ ಪ್ರಸಾರ ಕಾರ್ಯಕ್ಕೂ ಪ್ರವೇಶಮಾಡಲು ಅವಕಾಶ ಉಂಟಾಯಿತು. ಕೆಲವು ಜನ ಅವರನ್ನು ಆಕ್ಷೇಪಿಸಿರುವುದುಂಟು; ಕಾಲೇಜಿನ ಕರ್ಣಾಟಕ ಸಂಘಕ್ಕೆ ಭಾಷಣಕಾರರಾಗಿ ಕರೆಯಲು ಮೊದಮೊದಲು ಒಪ್ಪದೆಯೇ ಇದ್ದು ಕನ್ನಡವನ್ನು ಕುರಿತು ಇಂಗ್ಲಿಷಲ್ಲಿ ಭಾಷಣ ಮಾಡುತ್ತೇನೆಂದಾಗ ಅದಕ್ಕೆ ಒಪ್ಪದೆ ಅವರ ಮನಸ್ಸು ಕ್ಷುಬ್ಧವಾಯಿತಂತೆ. ಅದನ್ನೆತ್ತಿ ಇಂಥ ವ್ಯಕ್ತಿ ಕನ್ನಡದ ಹುರಿಯಾಳಾದುದು, ನಾಯಕರಾದುದು ಸೋಜಿಗ— ಎಂದು ಅಣಕಿಸಿರುವುದುಂಟು. ಈಗಲೂ ಆ ಮಾತಾಡುವವರಿದ್ದಾರೆ. ಆ ಕಾಲದ ಸನ್ನಿವೇಶವನ್ನೂ ಪರಿಸ್ಥಿತಿಯನ್ನೂ ಅರ್ಥ ಮಾಡಿಕೊಳ್ಳದಿದ್ದರೆ ಅವರಿಗೆ ಅನ್ಯಾಯ ಮಾಡಿದ ಹಾಗಾಗುತ್ತದೆ.

ವಿದ್ಯಾರ್ಥಿಗಳೊಡನೆಯೂ ಮೊದಮೊದಲು ಹೆಚ್ಚಾಗಿ ಅವರು ಬೆರೆಯುತ್ತಿರಲಿಲ್ಲ. ಕೆಲವರಲ್ಲಿ ಅಪರೂಪಕ್ಕೆ ನಾಲ್ಕು ಮಾತು ಆಡುತ್ತಿದ್ದರು : ಮುಟ್ಟುವಂತೆ, ಮುಟ್ಟದಂತೆ ಮಾತು; ಎಲ್ಲದರಲ್ಲಿಯೂ ಒಡಿತ. ಆಡಿದ ಮಾತಿಗಿಂತ ನುಂಗಿದ ಮಾತು, ಅಡಗಿಸಿದ ಮಾತು ಹೆಚ್ಚು. ಕೆಲವು ಮಾತು ವ್ಯಂಗ್ಯದಂತೆ ಚುಚ್ಚಿನಂತೆ ಜನರಿಗೆ ಬೋಧೆಯಾದ್ದೂ ಉಂಟು. ಇವೆಲ್ಲ ಅವರ ಸ್ವರಕ್ಷಣ ವ್ಯಾಪಾರ; ಒಂದು ಬಗೆಯ ಗುಪ್ತಿ. ಇದರಿಂದ ಕೆಲವರು ಅವರನ್ನು ಅನ್ಯಥಾ ಭಾವಿಸುವುದು ಸುಲಭವಾಗಿತ್ತು. ಆದರೆ ಜನರೇನೆಂದುಕೊಳ್ಳುತ್ತಾರೆಂಬುದನ್ನು ಅವರು ಲಕ್ಷಿಸಿದವರಲ್ಲ. ಅಂಥ ಮಾತನ್ನು ಕೇಳಿದರೆ ಅವರ ಬಿಗು, ಸೆಡಪು ಇನ್ನಷ್ಟು ಹೆಚ್ಚುತ್ತಿತ್ತೇ ವಿನಾ ಕಡಮೆಯಾಗುತ್ತಿರಲಿಲ್ಲ.

ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ ಅವರ ‘ಇಂಗ್ಲಿಷ್ ಗೀತೆ’ಗಳನ್ನು ಅಚ್ಚುಮಾಡುವ ಹೊತ್ತಿಗೆ ಆಗಲೇ ಗುಂಡಪ್ಪನವರು ಅವರ ಇತರ ಕೆಲವು ಭಾಷಾಂತರಗಳನ್ನು ತಮ್ಮ ಕರ್ಣಾಟಕ ಜನಜೀವನ —ಅರ್ಥಸಾಧಕ ಪತ್ರಿಕೆಯಲ್ಲಿ ಪ್ರಕಟಿಸಿ ಜನದ ತಿಳಿವಳಿಕೆಗೆ ತಂದಿದ್ದರೂ ವಿದ್ಯಾ ಇಲಾಖೆಗಾಗಿ ಪರಿಷತ್ತಿನಲ್ಲಿ ಸಿದ್ಧವಾಗುತ್ತಿದ್ದ ‘ಪಂಪ ಭಾರತ’ ಸಂಪುಟದಲ್ಲಿ ಹುಟ್ಟಿದ ಸಂದೇಹಗಳನ್ನು ನಿವಾರಿಸುವುದರಲ್ಲಿಯೂ ಅವರ ನಿಘಂಟನ್ನು ನಿರ್ಮಾಣ ಮಾಡುವುದರಲ್ಲಿಯೂ ಹೆಚ್ಚೇನು, ಪಾಠ ನಿರ್ಣಯದ ಸಮಸ್ತಾಂಶಗಳಲ್ಲಿಯೂ ಅವರಿಂದ ದೊರಕಿದ ಸಲಹೆಗಳಿಗೆ ಮೊದಮೊದಲು ಅವರಲ್ಲಿ ಅವಿಶ್ವಾಸವಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಗೆ ಅವರಲ್ಲಿ ಗೌರವ ಉಂಟಾಗಿತ್ತು.

ಕೃಷ್ಣಶಾಸ್ತ್ರಿಗಳೂ, ವೆಂಕಣ್ಣಯ್ಯನವರೂ ಅವರಲ್ಲಿ ಕನ್ನಡದ ಭಾಷಾಚರಿತ್ರೆಯನ್ನೂ ಸಾಹಿತ್ಯಚರಿತ್ರೆಯನ್ನೂ ಕಲಿತವರಾದ್ದರಿಂದಲೂ, ಮಾಸ್ತಿಯವರಿಗೆ ಶ್ರೀಕಂಠಯ್ಯನವರು ಸಾಹಿತ್ಯ ಕಲಿಸಿದ ಗುರುಗಳಾಗಿದ್ದುದರಿಂದಲೂ ಅವರು ಕನ್ನಡ ಪ್ರಪಂಚದಲ್ಲಿ ಮಾಡಿದ ಪ್ರವೇಶ ಮಹಾಪ್ರಭಾವವಾಯಿತು. ೧೯೨೭-೨೮ರಲ್ಲಿ ಅವರು ಕೆಲವು ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ ಇಂಗ್ಲಿಷ್ ಗೀತೆಗಳಲ್ಲಿ ಕೆಲವನ್ನು ಓದಿ, ಕನ್ನಡ ಛಂದಸ್ಸು ವ್ಯಾಕರಣ ಗಳಿಗೆ ಸಂಬಂಧಿಸಿದ ಕೆಲವು ವಿಶೇಷೋಪನ್ಯಾಸಗಳನ್ನು ಖಾಸಗಿಯಾಗಿ ಮಾಡಿದುದೂ ಅವರಲ್ಲಿ ಭಕ್ತಿ ಗೌರವ ಹರಡುವಂತೆ ಆಯಿತು. ನಿಜವಾಗಿ ಕನ್ನಡ ಸಾಹಿತ್ಯಕ್ಕೆ ಎಷ್ಟು ಬಗೆಯಾಗಿ ದುಡಿದಿದ್ದರು ಎಂಬುದರ ಅರಿವು ಕೆಲವರಿಗೆ ಆಗ ಉಂಟಾಯಿತು. 'ಗದಾಯುದ್ಧ ನಾಟಕ'ದ ಪ್ರಯೋಗ 'ಅಶ್ವತ್ಥಾಮನ್ ಪ್ರಕಟಣೆ' ಮುಂತಾದವುಗಳು ಒಂದು ಹೊಸ ಯುಗವನ್ನೇ ತೊಡಗಿದವು. ಹೊಸ ಕನ್ನಡ ಮಾತನ್ನೂ ರೂಪಗಳನ್ನೂ ಮಾನ್ಯ ಮಾಡಿ ಇಂಗ್ಲಿಷ್ ಗೀತೆಗಳನ್ನು ಬರೆದರೆ, ಹಳಗನ್ನಡದ ಪೂರ್ವರೂಪಗಳನ್ನು ಬಳಸಿ, ಅತಿ ಕಡಿಮೆ ಸಂಸ್ಕೃತ ಮಾತುಗಳ ಬಳಕೆಯಿಂದ ಅಚ್ಚಕನ್ನಡ ಶಬ್ದಗಳ ಪ್ರಯೋಗ ದಿಂದಲೇ 'ಅಶ್ವತ್ಥಾಮನ್' ಅನ್ನು ಸಾಧಿಸಿದ ಅದ್ಭುತಕ್ಕೆ ಎಲ್ಲರೂ ಬೆರಗಾದರು. ಅಲ್ಲಿಂದ ಮುಂದಿನ ಕಾಲ ಅವರು ಮೈಸೂರಿನ ಒಳಗೂ ಹೊರಗೂ ಸಂಚಾರಮಾಡಿ ಕನ್ನಡದ ಉತ್ಸಾಹವನ್ನು ಬೆಳಸಿದುದು. ಇಂಗ್ಲಿಷ್ ಪಾಠಗಳಿಗೆ ಮಾತ್ರ, ಕಾಲೇಜ್ ವ್ಯಾಸಂಗ ಅವರಲ್ಲಿ ಮಾಡಿದವರಿಗೆ ಮಾತ್ರ ಇದ್ದ ಫಲ ಪ್ರಯೋಜನ ನಾಡಿನವರಿಗೆಲ್ಲ ದೊರೆಯುವಂತೆ ಆಯಿತು.

ಯಾವದನ್ನು ಕುರಿತು ಮಾತನಾಡಿದರೂ ಇಂಗ್ಲಿಷಲ್ಲಿ ಹೇಗೆ ಧಾರಾಳವಾಗಿ ವಿದ್ವತ್ಪೂರ್ಣವಾಗಿ ಮಾತನಾಡಬಲ್ಲವರಾಗಿದ್ದರೊ ಕನ್ನಡದಲ್ಲಿಯೂ ಹಾಗೇ— ಇನ್ನಷ್ಟು ಸರಸವಾಗಿ, ನುಣುಪಾಗಿ, ನಿರರ್ಗಳವಾಗಿ, ನುಡಿಯಬಲ್ಲವರಾಗಿದ್ದರು. ಅವರ ಕನ್ನಡದ ಭಾಷಣವನ್ನು ಕೇಳುವುದು ಒಂದು ದೊಡ್ಡ ಭಾಗ್ಯ. ಹಬ್ಬ. ಇಂಗ್ಲಿಷ್ ಭಾಷಣದಲ್ಲಿ ವರ್ಡ್ಸ್‌ವರ್ತ್, ಷೇಕ್ಸ್‌ಪಿಯರ್, ಕಾರ್ಲೈಲ್, ಬ್ರೌನಿಂಗ್ — ಇವರ ವಿಷಯದಲ್ಲಾಗಲಿ, 'The Burden of the Prophets' ಎಂಬುದರಲ್ಲಾಗಲಿ ಅವರ ವಾಗ್ವೈಭವವನ್ನು ಕೇಳಿ ತಲೆದೂಗಿದ್ದ ವಿದ್ವಾಂಸವರ್ಗದ ಸಮಕ್ಷ ಅವರು ಪಂಪನ ಆದಿಪುರಾಣ, ಯಶೋಧರ ಚರಿತೆ, ಪಂಪ ರಾಮಾಯಣಗಳನ್ನು ಕುರಿತು ಆಡಿದ ಮಾತು ಗಳ ವೈಭವ ತೂಗುತ್ತಿತ್ತು. ನಮ್ಮ ದುರ್ದೈವದಿಂದ ಆ ಭಾಷಣಗಳ ಧ್ವನಿಮುದ್ರಿಕೆ ಇಲ್ಲವಾಗಿದೆ. ಶ್ರೀಕಂಠಯ್ಯನವರ 'ಕಂಠಶ್ರೀ' ಎಂಬ ಮಾತು ಬರಿಯ ಚಮತ್ಕಾರದ ಮಾತಲ್ಲ : ಅದು ಶ್ರೀಯೇ.

ಕನ್ನಡಕ್ಕೆ ಹೊಸ ಕಳೆಯು ಸಾಹಿತ್ಯ ಬರಬೇಕೆಂದು ಅನೇಕ ಯುವಕರಲ್ಲಿ ಉತ್ಸಾಹ ತುಂಬಿದರು. ನಾಡಿನ ಮೇಲೆಲ್ಲ ಸಂಚಾರಮಾಡಿ, ಆ ಕಡೆಗೆ ಜನ ಒಲಿಯುವಂತೆ ಮಾಡಿದರು. ಸಭೆ, ಸಮ್ಮೇಳನ, ಸಮಾರಂಭಗಳಲ್ಲಿ ಹಲವಾರು ವಿಷಯಗಳನ್ನು ಕುರಿತು ಭಾಷಣ ಮಾಡಿದುದಲ್ಲದೆ, ಅನೇಕ ಸಂಘ ಸಂಸ್ಥೆಗಳು ಹುಟ್ಟಿಕೊಳ್ಳುವಂತೆ ಪ್ರಚೋದನೆ ಮಾಡಿದರು. ಕಡೆಗೆ ೧೯–೨೦ ರಾಜಕೀಯ ಆಡಳಿತಗಳಲ್ಲಿ ಸಿಕ್ಕಿ ಉಸಿರು ಕಟ್ಟಿಕೊಂಡಿದ್ದ ಕನ್ನಡ ಜನತೆ ಒಂದಾಗಿ, ಕನ್ನಡ ನಾಡು ಒಂದು ರಾಜ್ಯಾಂಗವಾಗಬೇಕು ಎಂದು ಅವರು ಮಾಡಿದ ದುಡಿತ ಅಸಾಧಾರಣವಾದುದು. ಈ ಕಾರ್ಯ ಕೈಕೊಳ್ಳಲೆಂದೇ ಶ್ರೀ ಕೃಷ್ಣಸ್ವಾಮಿ ಅಯ್ಯಂಗಾರ ಅವರು ಪರಿಷತ್ತಿನ ಉಪಾಧ್ಯಕ್ಷರಾಗಿ ಬಹುಬಗೆಯ ಕಾರ್ಯಕಲಾಪಗಳನ್ನು ಕೈಗೊಂಡರು. ಇದು ಪ್ರಚಾರಕಾರ್ಯದ ಒಂದು ಮಾರ್ಗವಾದರೆ ನಿರ್ಮಾಣಕ್ರಿಯೆಗೆ ಚಿಕ್ಕವರನ್ನು ಉತ್ತೇಜನಗೊಳಿಸಿದರೆ ಕೆಲಸದ ಒಂದು ಮುಖ ಕಾಣಿಸೀತು; ಇದರ ಹಿಂದೆ ಒಂದು ವಿದ್ವಾಂಸ ವರ್ಗ ಬೆಳೆಯಬೇಕು — ಎಂಬ ಕಡೆಗೆ ಗಮನ ಕೊಡುತ್ತ ಈವರೆಗೆ ಸ್ಥಾನಮಾನವಿಲ್ಲದಿದ್ದ ಕನ್ನಡಕ್ಕೆ ಇತರ ವ್ಯಾಸಂಗ ಭಾಗಗಳಿಗೆ ಇರುವಂಥ ಒಂದು ಇಲಾಖೆಯನ್ನು ಕಟ್ಟಿಕೊಟ್ಟು, ವಿಶ್ವವಿದ್ಯಾನಿಲಯದಲ್ಲಿ ಎಂ. ಎ. ಪದವಿಯ ವ್ಯಾಸಂಗಕ್ಕೆ ವ್ಯವಸ್ಥೆಮಾಡಿದರು. ಅವರಿಗೂ ಆನರ್ಸ್ ವಿದ್ಯಾರ್ಥಿಗಳಿಗೂ ತಾವೇ ಪ್ರತಿ ವರ್ಷವೂ ವರ್ಷದ ಕಡೆಯಲ್ಲಿ ೬–೮ ಉಪನ್ಯಾಸಗಳನ್ನು ಕೊಟ್ಟು ಒಂದು ಹೊಸ ದೃಷ್ಟಿಯನ್ನೂ ವ್ಯಾಸಂಗಕ್ರಮವನ್ನೂ ಕನ್ನಡದವರಿಗೆ ಪರಿಚಯ ಮಾಡಿಕೊಟ್ಟರು. ಅವರ ಪಾಠವನ್ನು ಕೇಳಿದ ಮೇಲೆ ಇನ್ನೊಬ್ಬರ ಪಾಠದ ಮುಖ ಕೆಡುತ್ತದೆ. ಅಲ್ಲಿನ ವಿದ್ವತ್ತೆ, Creative-Seminal ಸೃಷ್ಟಿಕೃತ್ — ವೀರ್ಯ ಧಾತುವಿನದು. ಹೇಳಿದ ನಾಲ್ಕು ಮಾತುಗಳ ಹಿಂದೆ ೪೦ ವಿಷಯಗಳ ಚಿಂತನೆಗೆ ಆಶ್ರಯ, ಹದಿ ಇರುತ್ತಿತ್ತಾಗಿ ಬಜ್ಜೊಬ್ಬರು ಒಂದೊಂದಕ್ಕೆ ಮಿಡಿದು, ಅವರು ಆ ಕಡೆ ಗಮನ ಹರಿಸಲು ಎಡೆಯಾಗುತ್ತಿತ್ತು. ನಮ್ಮ ಪ್ರಾಚ್ಯಕೋಶಾಗಾರದಲ್ಲಿ, ಮದರಾಸಿನಲ್ಲಿ, ಹಳಗನ್ನಡದ ಎಲ್ಲ ಹಸ್ತಪ್ರತಿಗಳನ್ನೂ ನೋಡಿ, ಅವುಗಳ ಯೋಗ್ಯತೆಗಳನ್ನು ಮನಸ್ಸಿನಲ್ಲಿ ನಿರ್ಣಯಿಸಿಕೊಂಡು, ತಮ್ಮ ಒಲವನ್ನೂ ಬೆಲೆಗಾಣ್ಕೆಯನ್ನೂ ಮನಸ್ಸಿನಲ್ಲಿ ಇಟ್ಟುಕೊಂಡು, ಯಾವುದು ಮೊದಲು ಹೊರಕ್ಕೆ ಬರಬೇಕು ಎಂದು ನಿರ್ಣಯಿಸಿ, ಅವುಗಳ ಪ್ರಕಟನೆಗೆ ನೆರವಾದರು. ಎಣಿಸಿದುದೆಲ್ಲ ನೇರವೇರದಿದ್ದರೂ ಮೈಸೂರು ವಿಶ್ವವಿದ್ಯಾನಿಲಯದ ಒಂದು ಗ್ರಂಥಮಾಲೆಯನ್ನು ಏರ್ಪಡಿಸಿ, ಅದರಲ್ಲಿ ನಮ್ಮ ಚರಿತ್ರೆಯಲ್ಲಿ ಮುಖ್ಯವಾದ ಕಾವ್ಯಗಳೆಲ್ಲ ಸಂಗ್ರಹವಾಗಿ ಪ್ರಕಟವಾಗಬೇಕು — ಎಂಬ ಏರ್ಪಾಡನ್ನು ಮಾಡಿದರು. ಹಿಂದೆ ಶಾಲೆ ಕಾಲೇಜುಗಳಲ್ಲಿ ಗ್ರಂಥಗಳ ಕೆಲವು ಆಶ್ವಾಸಗಳ ವ್ಯಾಸಂಗ ಮಾತ್ರ ಆಗಿ ಮುಗಿಯುತ್ತಿತ್ತು. ಪರೀಕ್ಷೆಗಳಿಗೆ ಎಷ್ಟು ಬೇಕೋ ಅಷ್ಟು ಓದಿ ಉಳಿದುದರ

ಪರಿಜ್ಞಾನವಿಲ್ಲದೆ ವಿದ್ಯಾರ್ಥಿಗಳು ಅಷ್ಟಕ್ಕೆ ತಮ್ಮ ಜ್ಞಾನವನ್ನು ವಿಿತಗೊಳಿಸಿಕೊಳ್ಳು ತ್ತಿದ್ದುದು ವಾಡಿಕೆ. ಇದು ಆ ಕಾವ್ಯಗಳಿಗೆ ಅಪಚಾರ. ಒಂದು ಗ್ರಂಥ ಒಟ್ಟು ಹೇಗಿದೆ ಎನ್ನುವುದರ ತಿಳಿವಳಿಕೆ ಇಲ್ಲದೆ ಸಾಹಿತ್ಯ ಕೃತಿಯನ್ನು ವ್ಯಾಸಂಗಮಾಡಬಾರದು. ಒಟ್ಟು ಕವಿ ಮಾಡಬೇಕೆಂದದು ಏನು ?—ಎಂಬುದು ಎಲ್ಲರಿಗೂ ಮುಂದಟ್ಟಾಗುವಂತೆ ಈ ಸಂಗ್ರಹಕಾರ್ಯ ನಡೆಯಲಿ ಎಂದು ವಿಶೇಷ ವರ್ಣನೆ, ವಿದ್ವತ್ತಿನ ತೊಳಲುಗಳು, ಅನಗತ್ಯ ಪ್ರಸಂಗಗಳು, ಉಪಕಥಾಭಾಗ ಇವುಗಳನ್ನು ಬಿಟ್ಟು ಕಾವ್ಯದ ಪ್ರಧಾನ ಆಕೃತಿ ಕಾಣುವಂತೆ ಸಂಗ್ರಹಿಸಬೇಕೆಂದು ಸಲಹೆ ಕೊಟ್ಟು ಪ್ರತಿಯೊಂದು ಕೃತಿಗೂ ಸಂಬಂಧಿಸಿದಂತೆ ಕವಿ–ಕಾಲ–ಕೃತಿ ಇವುಗಳಿಗೆ ಸಂಬಂಧಿಸಿದಂತೆ ಒಂದು ಪ್ರಸ್ತಾವನೆ ಇರಬೇಕೆಂದೂ, ತಾರತಮ್ಯ ವಿವೇಕ ಹೊಳೆದು ವಿಮರ್ಶೆ ಬೆಳಗುವಂತೆ ಈ ಪ್ರಸ್ತಾವನ ದಲ್ಲಿ ಅಡಕವಾಗಿ ತಿಳಿವಳಿಕೆ ಕೊಡಬೇಕೆಂದೂ, ಸಂಗ್ರಹದ ಕೊನೆಯಲ್ಲಿ ಕ್ಲಿಷ್ಟಪದಗಳ ಅರ್ಥಸೂಚಿ ಇರಬೇಕೆಂದೂ ಮಾಡಿದರು. ಇವುಗಳನ್ನು ಪಠ್ಯಪುಸ್ತಕಗಳನ್ನಾಗಿಟ್ಟು ವಿದ್ಯಾರ್ಥಿಗಳಿಗೆ ಅನುಕೂಲ ಕಲ್ಪಿಸಿದರು. ಖಾಸಗಿ ಸಾಹಿತ್ಯಪ್ರಿಯರಿಗೂ ಕೃತಿಗಳು ದೊರಕುವಂತೆ ಆಯಿತು. ಈ ಕಾವ್ಯಸಂಗ್ರಹಗಳ ಜೊತೆಗೆ ನಾನಾ ವಿಷಯಗಳನ್ನು ಕುರಿತ ಅಧಿಕಾರಿಕವಾದ ಸ್ವರೂಪ ಪ್ರತಿಪಾದನೆ ಮಾಡುವ ಜ್ಞಾನ ವಿಜ್ಞಾನ, ಸಂಸ್ಕೃತಿ ಪ್ರಪಂಚದ ಪರಿಚಾಯಕ ಗ್ರಂಥಗಳನ್ನು ಕನ್ನಡದಲ್ಲಿ ಬರಸಿದರು. ಕನ್ನಡದ ಜನ ಬಡವ ರಾದ್ದರಿಂದ ಇವೆಲ್ಲವನ್ನೂ ಒಂದೊಂದಕ್ಕೆ ೧೨ ಆಣೆಗೆ ಮೀರದಂತೆ ಬೆಲೆಗೆ ಮಾರ ತಕ್ಕದೆಂದು ಗೊತ್ತುಮಾಡಿದರು. ೩೦೦-೪೦೦ ಪುಟಗಳ ಪುಸ್ತಕ ಹೀಗೆ ಆ ಕಾಲಕ್ಕೆ ೧೨ ಆಣೆಗೆ ದೊರೆಯುವಂತಾಗಿತ್ತು.

ಇಂಗ್ಲಿಷ್–ಕನ್ನಡ ನಿಘಂಟು ಒಂದು ತಯಾರಾಗಬೇಕಾದಾಗ ಆ ಮಂಡಲಿಯಲ್ಲಿ ಶ್ರೀಕಂಠಯ್ಯನವರು ಸಲ್ಲಿಸಿದ ಸೇವೆ ಅಲ್ಲಿ ಕೆಲಸ ಮಾಡಿದನುಗೆಲ್ಲ ಗೊತ್ತು. ಈಗಲೂ ಸ್ವಲ್ಪ ಹೆಚ್ಚು ಕಡಮೆ ಇಂಥ ಪ್ರತಿಪದಗಳನು ಅವರು ಹೇಳಿರಬೇಕು ಎಂಬಷ್ಟು ಖಚಿತ ವಾದ ಗುರುತು ಅಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಕನ್ನಡದ ವ್ಯಾಕರಣಗಳು ಮುಖ್ಯವಾಗಿ ಮೂರು. ಆ ಮೂರನ್ನೂ ಅಳಿದು, ಕನ್ನಡದ ವ್ಯಾಕರಣವನ್ನು ತಿಳಿಯಾಗಿ, ಆದರೆ ನೆಲಗಟ್ಟು ಸ್ಪಷ್ಟವಾಗಿ ಗೊತ್ತಾಗುವಂತೆ, ಅಲ್ಲಿನ ಅತಿಗಳೂ, ಕಾರ್ಪಣ್ಯಗಳೂ, ಅಬ್ಬರ ಗಳೂ, ತಿರಿಚುಗಳೂ ಹೊರಬೀಳುವಂತೆ ವ್ಯಾಕರಣವನ್ನು ರಚಿಸಬೇಕೆಂಬುದು ಅವರ ಆಸೆ. 'ಶಬ್ದಮಣಿದರ್ಪಣ'ದ ಪಾಠ ಅವರು ಮಾಡಿದುದನ್ನು ಕೇಳಿದ್ದರೆ ಆ ಮನಸ್ಸು ಹೇಗೆ ತುಯ್ಯುತ್ತಿತ್ತು, ಎಷ್ಟು ತಲಸ್ಪರ್ಶಿಯಾದ ಜ್ಞಾನ ಅವರದು ಎಂದು ಗೊತ್ತಾಗು ತ್ತಿತ್ತು. ಸಂಸ್ಕೃತ ಪ್ರಕ್ರಿಯೆಗಳನ್ನೆಲ್ಲ ಕನ್ನಡದ ಮೇಲೆ ಹೊರಿಸಿ ಸಹಜ ಲಲಿತವಾದ ದೇಶಭಾಷೆಯ ವ್ಯಾಕರಣಗಳಲ್ಲಿ ಗಾಸಿಯನ್ನು ಉಂಟು ಮಾಡಿರುವ ಪ್ರಸಂಗಗಳ ಕಡೆ

ಅವರಿಗೆ ಅಸಹನೆ ಇತ್ತು. ಮಾಧ್ಯಮಿಕ ಶಾಲೆಗಳಲ್ಲಿ ಬಳಸುತ್ತಿದ್ದ 'ಶಬ್ದಾದರ್ಶ'ಕ್ಕೆ ಒಂದು ಪರಿಷ್ಕರಣದ ಅಗತ್ಯ ಬಂದಾಗ ಸೇರಿಸಿದ ಒಂದು ಭಾಗ ಎಷ್ಟು ತಿಳಿಯಾಗಿದೆ ಎಂಬುದು ಕಾಣುತ್ತದೆ. ಅವರು ತಿರುಪತಿಯಲ್ಲಿ ಮಾಡಿದ ಓರಿಯಂಟಲ್ ಕಾನ್-ಫರೆನ್ಸಿನ ಕನ್ನಡ ಶಾಖೆಯ ಅಧ್ಯಕ್ಷ ಭಾಷಣವನ್ನು ವಿಸ್ತರಿಸಿದರೆ ಆ ಪ್ರಪಂಚ ಎಷ್ಟು ತಿಳಿಯಾಗುತ್ತವೆಂಬುದು ವೇದ್ಯವಾದೀತು. ತಮಿಳಿನ ಮೂರು ಮುಖ್ಯ ವ್ಯಾಕರಣಗಳನ್ನೂ ಹೋಲಿಸಿ ಅವರ ವ್ಯಾಕರಣ ಪದ್ಧತಿಯನ್ನೂ ತೀರ್ಮಾನಗಳನ್ನೂ ತೂಗಿ ನಮ್ಮ ವ್ಯಾಕರಣವನ್ನು ಪರಿಶೀಲಿಸುವುದಕ್ಕೆ ಅಲ್ಲಿನ ಬೆಳಕು ಹೇಗೆ ಬೀಳುವುದೆಂಬುದನ್ನು ತೋರಿಸಬೇಕೆಂಬುದಿತ್ತು—ಅವರ ಮನಸ್ಸಿನಲ್ಲಿ. ಇನ್ನೇನು ಬರೆಯುತ್ತಾರೆ ಎನ್ನುವಷ್ಟರಲ್ಲಿ ಏನೇನೋ ಅಡ್ಡಿ ಬಂದವು; ಸೆಡೆತುಕೊಂಡರು. ಇನ್ನೊಮ್ಮೆ ಯಾರದೋ ಒಂದು ಮಾತು ಅವರ ಮನಸ್ಸನ್ನು ಮುರಿಯಿತು. ಅರ್ಧಮಾಡಿದ್ದ ಕೆಲಸ ಹಾಗೆಯೇ ನಿಂತು, ಸಿದ್ಧ ಮಾಡಿದ್ದ ಪ್ರಯತ್ನಗಳೆಲ್ಲ ನಷ್ಟವಾದವು.

ತಮಿಳಿನ 'ಕುಱಳ್' ಅನ್ನು ಪೂರ್ತಿಯಾಗಿ ಭಾಷಾಂತರ ಮಾಡಿದ್ದರು. ಮಾತಿಗೆ ಮಾತು, ಲಯಕ್ಕೆ ಲಯ ಕೂಡಿ ಬರುವಂತೆ ಅಲ್ಲಿನ ಏಳು ಗಣಕ್ಕೆ ಸಮನಾದ ಇಲ್ಲಿನ ಏಳು ಗಣಗಳಲ್ಲಿ 'ಕುಱಳ್' ಕಾವ್ಯವನ್ನು ಅವರು ಕನ್ನಡಿಸಿದ್ದರು. ಒಂದು ಸಲ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಲ್ಲಿ ತಮಿಳಿನ ಮುಖ್ಯ ಅಧ್ಯಾಪಕರಾದ ಚೆಂಗಲ್ವರಾಯನ್ ಅವರೊ ರುದ್ರಪತಿಯವರೊ ಭಾಷಣ ಮಾಡಿಯಾದ ಮೇಲೆ ಅಧ್ಯಕ್ಷಭಾಷಣ ಮಾಡುತ್ತ ೪೦-೫೦ ಕುಱಳ್‌ಗಳ ಕನ್ನಡ ರೂಪಗಳನ್ನು ನುಡಿದು ಬರೆದು ತೋರಿಸಿ, ಈ ಎರಡು ಭಾಷೆಗಳ ಸಮತೆ ಬಾಂಧವ್ಯ ಹಾಯುವಂತೆ ಆ ದಿನದ ಕಾರ್ಯವನ್ನು ನೆರವೇರಿಸಿದ್ದು, ಆ ದಿನ ಇದ್ದವರೆಲ್ಲರೂ ಕಂಡ ಸಂಗತಿ. ಅದನ್ನು ಅಚ್ಚು ಮಾಡಿರೆಂದರೆ ಯಾವುದೊ ನಿರ್ಬಂಧ, ಸಂಕೋಚ ಅವರನ್ನು ಕಟ್ಟಿತ್ತು. ಆರ್. ನರಸಿಂಹಾಚಾರ್ಯರವರು 'ನೀತಿಮಂಜರಿ' ಎಂಬ ಹೆಸರಿನಲ್ಲಿ 'ಕುಱಳ್'ಅನ್ನು ಕಂದ ಪದ್ಯಗಳಲ್ಲಿ ಕನ್ನಡಿಸಿ ಪ್ರಚಾರದಲ್ಲಿ ತಂದಿರುವಾಗ ಇವರು ಈ ಬಗೆಯ ಭಾಷಾಂತರವನ್ನು ಪ್ರಕಟಿಸಿದರೆ ಆಚಾರ್ಯರು ನೊಂದುಕೊಂಡಾರು, ಇವರು ಸ್ಪರ್ಧೆ ಮಾಡುತ್ತಿದ್ದಾರೆಂದು ಅಪಾರ್ಥ ಬಂದೀತು ಎಂದು ಹಿಡಿದಿಟ್ಟರು ಅದನ್ನು. 'ಶಿಲಪ್ಪದಿಕಾರಂ', 'ಮಣಿಮೇಖಲೈ' ಇವನ್ನೂ ಕನ್ನಡಿಸಿದ್ದರು. ಅಲ್ಲಿನ ಕೆಲವು ಹಾಡುಗಳನ್ನು ಅವರು ಕೆಲವು ಸಭೆಗಳಲ್ಲಿ ನುಡಿದು ತೋರಿಸಿದ್ದುಂಟು. ಅದನ್ನು ಹೀಗೆ ಮಾಡಿದರೆ ಎಷ್ಟು ಚೆನ್ನಾಗಿರುತ್ತದೆ ಎಂದು ಆಡಿದುದುಂಟು. ಅವೆಲ್ಲ ಹೋಯಿತು. ಈಗ ನಮಗೆ ಏನೂ ದೊರಕದು. ತಮಿಳು ಛಂದಸ್ಸು ಕನ್ನಡ ಛಂದೋರಚನೆಯ ಮೇಲೆ ಬೆಳಕು ಹಾಯಿಸುತ್ತದೆ. ಮೂಲ ದ್ರಾವಿಡ ಛಂದಸ್ಸಿನ ಓಟ ಎಂಥದೆಂದು ತಿಳಿಸಲು ಛಂದಸ್ಸಿನ ಇತಿಹಾಸ, ಅವುಗಳ

ಉದಾಹರಣೆ, ವಿವರಣೆಗಳನ್ನು ಕೊಟ್ಟರು. ನಾಲ್ಕು ಕಡೆ ನೋಡುವ ಮನಸ್ಸು ಹೇಗೆ ವಿಷಯ ಪ್ರಪಂಚವನ್ನು ದೀಪ್ತವಾಗಿ ಕಾಣಿಸಬಲ್ಲದು ಎಂಬುದಕ್ಕೆ ಅವರ ಒಂದೊಂದು ಭಾಷಣವೂ ಕೃತಿಯೂ ನಿದರ್ಶನವಾಗುತ್ತಿತ್ತು. ಷೇಕ್ಸ್‌ಪಿಯರ್ ನಾಟಕಗಳನ್ನು ಕನ್ನಡಕ್ಕೆ ಮಾರ್ಪಡಿಸುವಾಗ ಯಾವ ವಿಧಾನವನ್ನು ಅನುಸರಿಸಬೇಕು ಎಂದು ಅವರು ನಿರಂತರವಾಗಿ ಚಿಂತಿಸುತ್ತಿದ್ದರು. ಖಾಸಗಿಯಾಗಿ ಮಾತನಾಡುವ ನಾಲ್ಕಾರು ಸಂದರ್ಭಗಳಲ್ಲಿ 'ಆಂಟೊನಿ-ಕ್ಲಿಯೋಪಾಟ್ರಾ', 'ಮಿಡ್‌ಸಮರ್ ನೈಟ್ಸ್ ಡ್ರೀಮ್', 'ಹ್ಯಾಮ್ಲೆಟ್','ಲಿಯರ್' ಮುಂತಾದ ನಾಟಕಗಳ ಕೆಲವು ಭಾಗಗಳಲ್ಲಿನ ಸಂಭಾಷಣೆಯ ೨೦-೩೦ ಸಾಲುಗಳಷ್ಟು ನಿಡುಖಂಡಗಳನ್ನು ಮನಸ್ಸಿನಲ್ಲಿಯೇ ಭಾಷಾಂತರ ಮಾಡಿಕೊಂಡಿದ್ದು ಅಚ್ಚುಮಾಡದೆ ಇಟ್ಟುಕೊಂಡುದನ್ನು ನಾನು ಬಲ್ಲೆ. ಸಣ್ಣ ವಯಸ್ಸಿನಲ್ಲಿಯೇ ತೀರಿಕೊಂಡ ಅವರ ಮೊದಲ ಅಳಿಯಂದಿರು ಎಸ್. ಆರ್. ಗುಂಡಪ್ಪನವರು 'ನಮ್ಮ ಮಾವ ಏನೇನೊ ಬರೆದುಹಾಕಿಕೊಂಡಿದ್ದಾನೆ—ಇಂಗ್ಲಿಷಲ್ಲಿ, ಕನ್ನಡದಲ್ಲಿ 'ರಾಸಿ ರಾಸಿ, ಎಂದು ಹೇಳುತ್ತಿದ್ದರು. ಆ ಯಾವುವೂ ಉಳಿಯಲಿಲ್ಲ. ಇದಲ್ಲದೆ ಪ್ರೊಮಿಥಿಯಸ್ ವಿಷಯವನ್ನು ಕುರಿತು ಒಂದು ನಾಟಕವನ್ನು ಬರೆಯಬೇಕೆಂಬುದು ಅವರ ಮನಸ್ಸಿನಲ್ಲಿತ್ತು. ಚ್ಯವನ, ಹಿರಣ್ಯಕಶಿಪು, ಬಲಿ, ಕಾಶ್ಯಪ, ಮಾರ್ಕಂಡೇಯ—ಮುಂತಾದ ಹೆಸರಿನ ನಾಟಕಗಳ ಪಾತ್ರರಚನೆಗೆ ಒಂದೊಂದು ಹೆಸರಿನ ಕೆಳಗೂ ಪಾತ್ರಗಳ ಪಟ್ಟಿಯನ್ನು ಮಾಡಿಕೊಂಡಿದ್ದುದು ಅವರ ಹಳೆಯ ಕಾಗದಗಳಲ್ಲಿದೆ. ಅವರು ಅವುಗಳನ್ನು ಮಾಡಿದ್ದರೆ ಅವುಗಳ ಶಕ್ತಿ ದೊಡ್ಡದಾಗುತ್ತಿತ್ತು.

'ಅಶ್ವತ್ಥಾಮನ್' ಪ್ರಕಟವಾದಾಗ ಎದ್ದ ಕೋಲಾಹಲ ಅವರಿಗೆ ಅಪಕೀರ್ತಿ ತಂದಿತು. ಭಾರತದ ಚಿರಂಜೀವಿಗಳಲ್ಲಿ ಒಬ್ಬನಾದ ಅಶ್ವತ್ಥಾಮನನ್ನು ಸ್ವಹಸ್ತದಿಂದ ಸಾಯುವಂತೆ ಮಾಡಿದ್ದೂ ಅವನಿಗೆ ಒಬ್ಬ ಹೆಂಡತಿ ಒಬ್ಬ ಮಗನನ್ನು ಕೊಟ್ಟದ್ದೂ ನಮ್ಮ ಜನಕ್ಕೆ ತೀವ್ರ ಅಸಮಾಧಾನ ಉಂಟಾಯಿತು. ಆದರೆ ಮಹಾಭಾರತದಲ್ಲೆಲ್ಲ ಹುಡುಕಿದರೂ ಅವನು ಮಾಡಿದ ಒಂದು ಹಿರಿಮೆಯ ಕೃತಿ, ಆಡಿದ ಹಿರಿಮೆಯ ನುಡಿ, ನಿಂತ ಒಂದು ಹಿರಿ ನಿಲವು ಕಾಣದು. ಇಲ್ಲಿ ಆತನು ಕಾಣಿಸುವ ನಿಚ್ಚಳ ಸ್ವಾಮಿಭಕ್ತಿ 'ಮಹಾಭಾರತ'ದಲ್ಲೆಲ್ಲಿಯೂ ಕಾಣದು. ಅಂಧಶ್ರದ್ಧೆಯಲ್ಲಿ ಉಳಿದಿರುವ ಗುಣಕ್ಕಿಂತ ಈ ಜೀವದ ಹಿರಿಮೆ ಹೆಚ್ಚಿನದೇ ಹೊರತು ಕಡಮೆಯದಲ್ಲ ಎಂಬುದನ್ನು ಜನ ಅರಿಯಬೇಡವೆ ? ಸಾಹಿತ್ಯಕೃತಿಯಲ್ಲಿ ಮಾರ್ಪಾಡು ಮಾಡಿಕೊಳ್ಳಬೇಕಾದ ಸ್ವಾತಂತ್ರ್ಯ ಬೇಕು —ಉತ್ತಮವಾದ ಸಾಧನೆಗಳನ್ನು ಮಾಡಬೇಕಾದರೆ—ಎಂಬುದು ಅವರ ಮನಸ್ಸು.

ಇದಕ್ಕೆ ಮುಂಚೆ ಅವರು ಯೂರಿಪಿಡೀಸ್ ಕೃತಿಯಾದ 'ಬಾಕ್ಕೆ'ಯನ್ನು ಕೃಷ್ಣ ಕಥೆಗೆ ಹೊಂದಿಸಿ ಕೃತಿ ಮಾಡಬೇಕೆಂದಿದ್ದರು. ಆದರೆ ಕೃಷ್ಣನ ಪಾತ್ರ ದೇವಪಾತ್ರ.

ಅವನು ಪೂರ್ಣಾವತಾರ. ದೇವರಿಗೆ ಭಕ್ತಿ, ಕೃಷ್ಣಪೂಜೆ ಬಹಳನಾಗಿರುವ ನಮ್ಮ ನಾಡಿನಲ್ಲಿ ಅವು ಜನಕ್ಕೆ ನೋವನ್ನುಂಟುಮಾಡಬಹುದು ಎಂದುಕೊಂಡೇ 'ಅಯಾಸ್' ನಾಟಕವನ್ನಾರಿಸಿಕೊಂಡು ಅಶ್ವತ್ಥಾಮನ ಕತೆಗೂ ಈ 'ಅಶ್ವತ್ಥಾಮನ್'ಗೂ ತಿರುಗಿದುದು. ಅವರ ಮನಸ್ಸು ಕರುಣೆ, ಮಾನವತೆ, ಉದಾರ ಸಹನೆ, ಮನುಷ್ಯನ ಅಭಿಮಾನವನ್ನು ಸೂಚಿಸುವ ಪ್ರಸಂಗ ಮತ್ತು ಯಾವ ಯಾವ ವ್ಯಕ್ತಿಗುಣವನ್ನೂ ಅಧಿಕಾರದ ದರ್ಪಕ್ಕೆ ಬಲಕ್ಕೆ ಪ್ರತಿಭಟಿಸಿ ನಿಲ್ಲುವುದೊ, ಯಾವುದರಿಂದ ಮಾನವನ ಗುಣ, ಬೆಲೆ, ಗೌರವದಲ್ಲಿ ಅತಿಶಯವಾಗಿ ಪ್ರಭಾವಗೊಂಡು ಬೆಳೆಯುವುದೊ ಅಂಥವಕ್ಕೆ ಪಕ್ಷಪಾತ ಉಳ್ಳದಾಗಿತ್ತು. 'ಯಶೋಧರ ಚರಿತೆ'ಯ ಕರುಣಾವಿಲಾಸವನ್ನು ತೋರಿಸುವಾಗ ಅವರ ಚಿತ್ತವೃತ್ತಿಯನ್ನು ನೋಡಬೇಕಿತ್ತು. 'ಹಿಂಸಾರಭಸಮತಿ' ಎಂದು ನುಡಿಯುವಾಗ ಅವರ ಮುಖವನ್ನು ನೋಡಬೇಕಿತ್ತು.

ಅವರು ಒಂದು ಇಂಗ್ಲಿಷ್ ಸೆಮಿನಾರ್ ನಡೆಸುತ್ತಿದ್ದರು. ಕ್ರಮವಾಗಿ ಗೊತ್ತಾದ ದಿನಗಳನ್ನು ಯಾವುದಾದರೂ ಒಂದು ಮಹಾಗ್ರಂಥದ ಪರಿಶೀಲನೆಗೆ ವಿನಿಯೋಗಿಸಿ ಆ ದಿನ ವಿದ್ಯಾರ್ಥಿಗಳೂ ಉಪಾಧ್ಯಾಯರೂ ಅವುಗಳನ್ನು ಕುರಿತು ಒಬ್ಬೊಬ್ಬರು ವಿಷಯದ ಒಂದೊಂದು ಮುಖವನ್ನು ಕುರಿತು ಮಾತನಾಡಬೇಕೆಂದು ಏರ್ಪಡಿಸಿದ್ದರು. ಮೊದಲು ನಾಲ್ಕು ಮಾತುಗಳನ್ನಾಡಿ ಆ ದಿನದ ಪರಿಶೀಲನೆಗೆ ತೊಡಗುವರು. ಅದು ಪ್ರಸ್ತಾವನೆ; ಎಲ್ಲರ ಎಲ್ಲ ಭಾಷಣಗಳೂ ಮುಗಿದ ಮೇಲೆ ತಾವು ಸಮಾರೋಪ ಭಾಷಣ ಮಾಡುತ್ತಿದ್ದರು. ಆ ಸಮಾರೋಪಗಳ ವೈಭವ ನಾನು ಈವರೆಗೂ ಎಲ್ಲಿಯೂ ಕಾಣದ್ದು. ಎಷ್ಟು ಸಂಗತಿಗಳು, ಒಂದು ದೃಷ್ಟಿಯ ಮಹಾಪ್ರಸರ ಆ ಪರಿಶೀಲನೆಗೆ ಇದ್ದ ಗ್ರಂಥದ ಬೆಲೆ ನಿರ್ಣಯಕ್ಕೆ ಬರುತ್ತಿತ್ತೆಂಬುದನ್ನು ಆಗ ಸೇರುತ್ತಿದ್ದ ಎಲ್ಲರೂ ಬಲ್ಲವರೇ. ಆರಿಸಿಕೊಳ್ಳುತ್ತಿದ್ದ ವಿಷಯಗಳೂ ಹಾಗೆಯೇ. ಕಾಲೇಜಲ್ಲಿ ಪಾಠಗಳು ನಡೆಯುವ ಪದ್ಯ ಗದ್ಯ ನಾಟಕಗಳನ್ನು ಅಲ್ಲಿ ಚರ್ಚೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಬೈಬಲ್‌ನಲ್ಲಿ ಸೈಂಟ್‌ಮಾರ್ಕ್, ಜೋಬ್, ಕನ್‌ಫ್ಯೂಸಿಯಸ್, 'ಮಹಾಭಾರತ'ದ ನಳ-ದಮಯಂತಿ, ಸಾವಿತ್ರೀ ಪ್ರಸಂಗ, 'ಧಮ್ಮಪದ', 'ಶಾಕುಂತಲ', 'ಕುರಾನ್,', 'ಭಗವದ್ಗೀತೆ,' 'ಕಠೋಪನಿಷತ್', Ecclesiastes, Mein Kampf, Nehru's Auto-biography, ಮಹಾತ್ಮಾಗಾಂಧಿಯವರ 'ಹಿಂದ್ ಸ್ವರಾಜ್', ಜಾರ್ಜ್ ಎಲಿಯಟರ 'ರೊಮೋಲಾ', ಟಾಲ್‌ಸ್ಟಾಯ್‌ರ War and Peace, ರಸ್ಕಿನ್‌ರ Unto this Last ಮತ್ತು Latter-day Pamphlets, 'ಸೆಸೆಮಿ ಅಂಡ್‌ಲಿಲ್ಲೀಸ್,' ಈಡಿಪಸ್ ಆರೆಸ್ಟಿಯಾ, ಆರ್ನಾಲ್ಡರ Culture and Anarchy, ಡಾಂಟೆಯ 'ಡಿವೈನ್ ಕಾಮಿಡಿ', ಗಯಟೆಯವರ 'ಫೌಸ್ಟ್' ಮುಂತಾದವು. ಒಮ್ಮೆ

'ರೊಮೋಲ'ವನ್ನು ಕುರಿತು ಮಾತನಾಡುತ್ತ ಒಬ್ಬ ಗ್ರೀಕ್ ಸಂಸ್ಕಾರಗೊಂಡ ಹಿರಿಯ, ಅವನ ಮಗಳು, ಅವರ ಶುಚಿ ಉನ್ನತಿಗೂ, ಸವನರೋಲ ಪಾತ್ರದ ಕೆಂಡ ಕಿಡಿ ಹೊಗೆಗಳಿಗೂ ಇದ್ದ ವ್ಯತ್ಯಾಸವನ್ನು ಚಿತ್ರಿಸಿದ ರೀತಿ ಭವ್ಯವಾಗಿತ್ತು. 'A light that was never on land or sea' ಎಂಬಂತಹ ಬೆಳಕು, ಅಪೂರ್ವ ತೇಜಸ್ಸಿನದು— ಇದ್ದದ್ದು —ಆ ಸಮಾರೋಪ ಭಾಷಣಗಳಲ್ಲಿ.

ಅವರ ಭಾಷಣಗಳು ತುಂಬಾ ನಿಡಿದಾಗುತ್ತಿದ್ದವೆಂದೂ, ಹರಿಕಥೆಗಳಾದರೂ ಎರಡು ಗಂಟೆಯಲ್ಲಿ ಮುಗಿಯುತ್ತವೆ, ಇವರು ೩-೫ ಗಂಟೆ ಮಾತನಾಡುತ್ತಾರೆ ಎಂದೂ ಅನೇಕರಿಗೆ ಅಸಮಾಧಾನವಿತ್ತು. ನಿಜ. ಒಂದು ನಾಟಕ, ಹರಿಕಥೆ ಎಂದರೆ ಜನ ಹೋಗಿ ಕುಳಿತು ಬೇಸರವಿಲ್ಲದೆ ಕೇಳುವುದಿಲ್ಲವೆ? ಒಂದು ದೊಡ್ಡ ಪ್ರಪಂಚದ ಅನುಭವವನ್ನು ಪಡೆಯಬೇಕಾದರೆ ಒಂದು ನಿಡುಕೂಡಿನಲ್ಲಿ (Sitting), ಒಂದು ಉಸಿರಲ್ಲಿ, ಹದದಲ್ಲಿ ಮಾಡಿಕೊಡಬೇಕಾದಾಗ ಹೆಚ್ಚು ಪ್ರಯೋಜನವಾದೀತು. ಕೇಳುವವರು ಆಯಾಸಪಡುತ್ತಾರೆ ಎಂದರೆ ಹೇಳುವವರಿಗೂ ಆಯಾಸವಲ್ಲವೆ? ಅಷ್ಟು ವ್ಯವಧಾನ ಕೊಡುವುದನ್ನು ಅಭ್ಯಾಸಮಾಡಬೇಕು. ಇಷ್ಟವಿಲ್ಲದಿದ್ದವರು ಹೋಗಲಿ—ಎಂಬುದು ಅವರ ಮಾತು. ಇಂಥ ನಿಲುವುಗಳಲ್ಲಿ ರಾಜಿ ಶಕ್ಯವಿಲ್ಲ. ಅದು ಅವರ ದಾರಿ, ಅಷ್ಟೇ. ಸಾವಿರ ಜನ ಕೇಳಬೇಕು ಎಂಬುದೂ ಅವರ ಇಚ್ಛೆಯಲ್ಲ. ಕೇಳುವವರು ನಾಲ್ವರಿದ್ದರೂ ಆಯಿತು. ಶ್ರೀ ಅವರಿಗೆ ಸಕ್ಕರೆಯ ರೋಗವಿದ್ದು ಉಪನ್ಯಾಸ ಮುಗಿದ ಮೇಲೆ ಕಾಲು ತತ್ತರಿಸಿ ಬಿದ್ದುದುಂಟು. ಆದರೆ ನಿಂತು ನುಡಿಯುವಾಗ ಲೋಕದ ಇನ್ನೇತರ ಪರಿವೆಯೂ ಇರುತ್ತಿರಲಿಲ್ಲ. ಮನಸ್ಸು, ಮಾತು ಅಷ್ಟು ತದೇಕನಿಷ್ಠ.

ತಾವು ಓದುವಾಗಲೂ ಅಷ್ಟೆ. ೬೦ ವರ್ಷದ ಶಾಂತಿ ಮುಗಿದುಹೋಗಿತ್ತು. ಒಂದು ದಿನ ಮನೆಗೆ ಹೋದರೆ ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದು ಬಂದರು; ಚೆನ್ನಾಗಿ ಅಚ್ಚಾಗಿ ಮೃದುವಾಗಿ ಮೊರಾಕೊ ಬೈಂಡಾಗಿ ಬಂಗಾರದ ಅಕ್ಷರದ ವಿಲಾಸವುಳ್ಳದ್ದು. ಅವರದೇ ಕೈಯಲ್ಲಿ ಒಂದು ಕೆಂಪು ಸೀಸದ ಪೆನ್ಸಿಲ್. ಪುಸ್ತಕ ಜೇನ್ ಆಸ್ಟೆನ್ ಬರೆದ Emma. ಕನಿಷ್ಠಪಕ್ಷ ೪೦ ವರ್ಷಗಳ ಪರಿಚಯ ಜೇನ್ ಆಸ್ಟೆನ್ ಕಾದಂಬರಿಗಳದು; ಎಷ್ಟು ಸಲ ಓದಿದ್ದರೊ; ಇನ್ನೆಷ್ಟು ಸಲ ಪಾಠ ಹೇಳಿದ್ದರೊ. ಪ್ರೊಫೆಸರ್ ವೃತ್ತಿಯಿಂದ ನಿವೃತ್ತರಾದ ಮೇಲೆ ಈ ವಯಸ್ಸಿನಲ್ಲಿ ಪುನಃ ಅದನ್ನು ಎತ್ತಿಕೊಂಡು ಪೆನ್ಸಿಲ್ ಹಿಡಿದು ಗುರುತು ಮಾಡುತ್ತ 'ಇವಳ ಬರವಣಿಗೆ ನೋಡಿ; ಈ ಸ್ನಿಗ್ಧವಾದ, ಆಪ್ತವಾದ ಬರವಣಿಗೆ ಇನ್ನೆಲ್ಲಿದೆ ನಿಮಗೆ ಇಂಗ್ಲಿಷ್ ಸಾಹಿತ್ಯದಲ್ಲಿಯೇ'—ಎಂದು ಯಾವುದೊ ಒಂದು ಪ್ಯಾರಾ ಓದಿದರು. ಅವರು ಓದಿದ ಯಾವ ಪುಸ್ತಕವನ್ನು ತೆಗೆದುಕೊಂಡರೂ ಯಾವುದನ್ನೂ ಅಲ್ಪವಾಗಿ ಗುರುತು ಮಾಡುವರು. ಅಭಿಪ್ರಾಯ ತಮಗೆ

ಪ್ರತಿಕ್ರಿಯೆ ಉಂಟುಮಾಡಿದ್ದರೆ ಒಂದು ಚಿಹ್ನೆ ಹಾಕಿ ಪ್ರತಿಕ್ರಿಯೆಯನ್ನು ೨-೩ ಮಾತುಗಳಲ್ಲಿ ಬರೆಯುತ್ತಿದ್ದರು. ಕನ್ನಡ ಪುಸ್ತಕಗಳನ್ನು ಓದಿದಾಗ ಅಲ್ಲಿನ ಪಾಠ ಅಡಿಟಿಪ್ಪಣಿಗಳಲ್ಲಿ ಪಾಠಾಂತರವಿದ್ದರೆ ಮೇಲಿನದನ್ನು ಹೊಡೆದು ಹಾಕಿ ಕೆಳಗಿನ ಯಾವುದೋ ಒಂದು ಪಾಠಕ್ಕೆ '√' ಗುರುತು ಹಾಕುತ್ತಿದ್ದರು ಅಥವಾ ಒಂದು ಸಮೀಪದ ತಮಿಳಿನ ಜ್ಞಾತಿಮಾತನ್ನು ಬರೆಯುತ್ತಿದ್ದರು. ರ—ಱ ಪ್ರಯೋಗಗಳ ಮತ್ತು ವ್ಯಾಕರಣ ಪ್ರಕ್ರಿಯೆಗಳ ವಿಶೇಷ, 'ಎನ್' ಎಂಬ ಆಖ್ಯಾತ ಪ್ರತ್ಯಯದ ವಿಚಾರ, ವಿಭಕ್ತಿ ಪ್ರತ್ಯಯಗಳ ಪಲ್ಲಟ—ಅದು ನಿಜವಾದ ನುಡಿಗಟ್ಟು—ಎಸೆ, ಉಳ್, ಅಂಗೈ, ಗೋಡೆ—ಎಂದುದರ ಅರ್ಥ ಬೆಳೆದ ರೀತಿ, 'ಒಲ್' ಎಂಬುದರ ರೀತಿ ೩-೪ ಮಾತುಗಳಲ್ಲಿ ಒಂದರ ಸಂಬಂಧ ಇನ್ನೊಂದಕ್ಕೆ ತಿಳಿಯುವಂತೆ ಗುರುತು ಮಾಡುತ್ತಿದ್ದರು—ಒಂದು ಸಂಪ್ರದಾಯದ ರೀತಿಗೂ ಇನ್ನೊಂದಕ್ಕೂ ಇರುವ ವ್ಯತ್ಯಾಸವನ್ನು ಕಾಣಿಸುವಂತೆ. ಉದಾ : ಜೈನ, ವೈದಿಕ, ಪುರಾಣಲಕ್ಷಣ ; ಮೋಕ್ಷಸ್ವರೂಪ ಇತ್ಯಾದಿ ಸೀಸದ ಕಡ್ಡಿಯಿಂದ ಬರೆಯುತ್ತಿದ್ದರು. ಅನೇಕ ಟಿಪ್ಪಣಿಗಳು ಭಾಷಣಗಳ ಮೂಲ ರೇಖೆಗಳೂ ಅವರು ಬರೆದಿಡುತ್ತಿದ್ದುದು ಹರಿದು ಹಾಕುವ ಕ್ಯಾಲೆಂಡರ್ ಹಾಳೆಗಳ ಮೇಲೆ. ಅವೆಲ್ಲ ಸೇರಿಸಿದ್ದರೆ ಅವರ ಮನಸ್ಸು ಹೇಗೆ ಆಡುತ್ತಿತ್ತು ಎಂಬುದರ ನೆಲೆಗಟ್ಟು ಚೆನ್ನಾಗಿ ಕಾಣುತ್ತಿತ್ತು. ಕನ್ನಡ ವ್ಯಾಕರಣ ಮತ್ತು ಭಾಷಾ ಚರಿತ್ರೆಯ 'ನೋಟ್ಸನ್ನು' ಕೃಷ್ಣಶಾಸ್ತ್ರಿ, ವೆಂಕಣ್ಣಯ್ಯನವರ ವ್ಯಾಸಂಗ ಕಾಲದಲ್ಲಿ ಕೊಟ್ಟುದನ್ನು ತರಿಸಿಕೊಂಡು, ಅದನ್ನು ಅಲ್ಲಲ್ಲಿ ತಿದ್ದಿ ಕಡೆಗೆ ಇನ್ನಷ್ಟು ಭಾಗವನ್ನು ಸೇರಿಸಿರುವ ಒಂದೆರಡು ನೋಟ್ ಬುಕ್ಕುಗಳಿವೆ. ೧೯೧೨ರ ಸುಮಾರಿಗೆ 'Notes on Prosody' ಯನ್ನು ಬರೆದಿದ್ದ ಒಂದು ಸಣ್ಣ ಕೈಪುಸ್ತಕದಲ್ಲಿನ ಹಲವು ಭಾಗಗಳನ್ನು 'ಕನ್ನಡ ಛಂದಸ್ಸಿ'ನ ಇತಿಹಾಸದಲ್ಲಿ ಸೇರಿಸಿದ್ದರೂ ಅಲ್ಲಿ ಸೇರಿಸಬಹುದಾಗಿದ್ದ ಇನ್ನಷ್ಟು ಪುಟಗಳು ಉಳಿದುಕೊಂಡಿವೆ.

ಎಲ್ಲಕ್ಕಿಂತ ಹೆಚ್ಚಾಗಿ ಅವರು ತಾವು ಮೆಚ್ಚಿದ ನಿಲವುಗಳಲ್ಲಿ ನಿಂತ, ತಾವು ಆಸೆಪಟ್ಟ ಹಾರೈಸಿದ ದಾರಿಯಲ್ಲಿ ನಡೆಯುವರೆಂದು ಕಂಡ ವಿದ್ಯಾರ್ಥಿಗಳಿಗೆ ಲೇಖಕರಿಗೆ ಕೊಡುತ್ತಿದ್ದ ಬೆನ್ನುತಟ್ಟು ವಿಶೇಷ ಪ್ರೀತಿಯದು. ಪುಟ್ಟಪ್ಪನವರ ಕವಿತೆಯನ್ನು ನೋಡಿ ಹಿಗ್ಗಿದುದು, ತಮ್ಮ ಕೊರಲಿಗೆ ಹಾಕಿದ್ದ ಹಾರವನ್ನು ಅವರಿಗೆ ಹಾಕಿದ್ದು, ಚೆನ್ನಾಗಿ ಮಾತನಾಡಿದ ವಿದ್ಯಾರ್ಥಿಗಳನ್ನು ತಬ್ಬಿಕೊಂಡದ್ದು ಇದಕ್ಕೆ ನಿದರ್ಶನ. ಸಂಕೋಚವಾದರೂ ನನಗೆ ಸಂಬಂಧಿಸಿದ ಒಂದು ಪ್ರಸಂಗವನ್ನು ಇಲ್ಲಿ ನೆನೆಯಬಹುದು. ೧೯೩೧ರ ಕಾರವಾರ ಕವಿಸಮ್ಮೇಳನದಲ್ಲಿ ಸಭೆಯ ಒತ್ತಾಯದಂತೆ ಪಕ್ಕದಲ್ಲಿ ಕುಳಿತಿದ್ದ ಇವರ ಅಪ್ಪಣೆಗೆ ಕಟ್ಟುಬಿದ್ದು ನನ್ನ ರೂಢಿಯನ್ನು ಮುರಿದು 'ಕಸ್ಮೈ ದೇವಾಯ'

ಪದ್ಯವನ್ನು ಓದಬೇಕಾಯಿತು. ಇನ್ನೊಂದು ಪಕ್ಕದಲ್ಲಿ ಕುಳಿತಿದ್ದ ಹಿರಿಯ ಮೇಧಾವಿ ರಾವ್‌ಸಾಹೇಬ ಮುಡಕಟ್ಟೆಯವರು ತುಂಬಾ ಅಶಾಂತರಾದರು. ಸಮ್ಮೇಳನಾಧ್ಯಕ್ಷರಂತಹ ಪದವಿಯಲ್ಲಿ ಇರುವವರು ಇಂಥ ಪದ್ಯಗಳನ್ನು ಓದುವುದೂ ಪ್ರಚಾರ ಮಾಡುವುದೂ ಅನ್ಯಾಯವೆಂದರು. ಅವರು ಕನ್ನಡಕ್ಕೆ 'ಜ್ಞಾನೇಶ್ವರಿ'ಯನ್ನು ಭಾಷಾಂತರ ಮಾಡಿದ್ದ ಹಿರಿಯರು. ಶ್ರೀಯವರೆದ್ದು ಅವರಿಗೆ ತಕ್ಷಣದ ಸಮಾಧಾನವನ್ನು ಮಾಡಿ, ಆ ಮಾತಿಗೆ ಬೇಸರಪಡದಂತೆ ನನಗೂ ಹೇಳಿದರು. ಆ ದಿನ ಸಂಜೆ ಶ್ರೀಯವರು ಭಾಷಣ ಮಾಡಬೇಕಿತ್ತು. ಅವರು ಬಹುವೇಳೆ ಮಾತಾಡಿದ್ದ 'The Burden of true Prophets' ( ಪ್ರವಾದಿಗಳ ಪಲ್ಲವಿ ) ಎಂಬ ವಿಷಯವನ್ನೇ ಅಂದೂ ಎತ್ತಿಕೊಂಡು 'ದೇವರು' ಎಂಬ ಕಲ್ಪನೆ ನಾಡು ನಾಡಿನಲ್ಲಿ ಹೇಗೆ ಬೆಳೆದು ಮಾರ್ಪಟ್ಟಿದೆ, ಪ್ರವಾದಿಗಳು ಬೇರೆ ಬೇರೆ ದೇಶಕಾಲಗಳವರಾದರೂ ಅವರ ಬೋಧನೆಯಲ್ಲಿರುವ ಸಮಾನ ಸಾರ ಎಂಥದು ಎಂಬುದನ್ನು ವಿವರಿಸಿ ಮಾಡಿದ ಸವಿಸ್ತಾರ ಭಾಷಣ ಮುಡಕಟ್ಟೆಯವರಿಗೆ ಹಿಡಿಸಿತು. ಅವರು ಆ ದಿನ ಬೆಳಿಗ್ಗೆ ತಾವು ವ್ಯಗ್ರರಾದುದಕ್ಕೆ ಅನುತಾಪ ಸೂಚಿಸಿದರು. ಶ್ರೀಯವರ ರೀತಿ ಹಾಗೆ.

ನಾವು ಕಾಲೇಜಿಗೆ ವಿದ್ಯಾರ್ಥಿಗಳಾಗಿ ಹೋಗುವ (೧೯೧೭) ಬಹು ಹಿಂದೆಯೇ ಮನೆಯಲ್ಲಿ ಅವರ ಪ್ರೀತಿಯ ಮಡದಿ ತೀರಿಕೊಂಡಿದ್ದರು. ಇದ್ದ ಒಬ್ಬ ಮಗ ದುರದೃಷ್ಟಕರ ಸಂದರ್ಭದಲ್ಲಿ ಕಣ್ಣು ಕಳೆದುಕೊಂಡಿದ್ದರು. ಆಜೀವಕಾಲವೂ ಶ್ರೀ ಅವರು ಮೌನವಾಗಿ ಅದನ್ನು ನೋಡುತ್ತಿರಬೇಕಾಯಿತು. ಪ್ರೀತಿಯ ಹಿರಿಯ ಮಗಳಿಗೆ ಚಿಕ್ಕ ವಯಸ್ಸಿನಲ್ಲಿಯೇ ಪತಿವಿಯೋಗವಾಗಿ ಆ ದುಃಖವನ್ನು ಕಾಣಬೇಕಾಯಿತು. ಎರಡನೆಯ ಮಗಳು ಗಂಡನೊಡನೆ ಹೊರಗಡೆ ಹೋದ ಮೇಲೆ ದೊಡ್ಡ ಮಗಳೇ ತಮ್ಮನ್ನು ಹೆತ್ತ ತಾಯಂತೆ, ಮಗಳಂತೆ ನೋಡಿಕೊಂಡರು. ಮಗಳಿಗಾಗಿ ಅವರ ಕೃತಜ್ಞತೆ ಮೇರೆಯಿಲ್ಲದ್ದು. ಅವರು ಕೆಲಸ ನಿರ್ವಹಿಸುವುದರಲ್ಲಿಯೂ ತುಂಬ ನಿಷ್ಠುರು; ಅವರ ಚಿಕ್ಕ ತಮ್ಮ ಬಿ.ಎಂ. ಕೃಷ್ಣಸ್ವಾಮಿ ನಮ್ಮ ಜೊತೆಯಲ್ಲಿ ಬಿ.ಎ. ಓದಿದರು. ಯಾರೊ ಏನೊ ಒಂದು ಮಾತನಾಡಿದಾಗ "ಇಂಥ ವಿಷಯಗಳಲ್ಲಿ ನಮ್ಮ ಅಣ್ಣ ನಿನಗೂ ಒಂದೇ, ನನಗೂ ಒಂದೇ" ಎಂದರು. ಅವರ ರೂಮಿಗೆ ಧಾರಾಳವಾಗಿ ಯಾರೂ ಹೋಗುವುದಿಲ್ಲ. ಪರೀಕ್ಷೆ ಪೇಪರುಗಳು ಬಂದಾಗ ದೊಡ್ಡ ಪೆಟ್ಟಿಗೆಯಲ್ಲಿ ಅವನ್ನು ಹಾಕಿ, ಎರಡು ಬೀಗ ಬಿಗಿದು ಹೊರಗೆ ಹೋಗುವಾಗೆಲ್ಲ ರೂಮಿನ ಹೊರಬಾಲಿಗೆ ಬೀಗ ಹಾಕಿಕೊಳ್ಳುತ್ತಾರೆ ಎನ್ನುತ್ತಿದ್ದರು. ಯಾರೊಡನೆಯೂ ತಾವು ಇಷ್ಟಪಟ್ಟು ಅವಕಾಶ ಕೊಟ್ಟಿಲ್ಲದೆ ಹೆಚ್ಚು ಮಾತಿಗೆ ಅವಕಾಶವಿರುತ್ತಿರಲಿಲ್ಲ. ಮಾತಿನ ಸಮಯ ಮುಗಿಯಿತೆಂದರೆ ಕೈಯಲ್ಲಿದ್ದ ಪುಸ್ತಕವನ್ನೊ, ನೋಟ್‌ಬುಕ್ಕನ್ನೊ ಹಿಡಿದು ನಿಂತು ಬಾಗಿಲ ಕಡೆ ನಡೆದರೆಂದರೆ ಭೇಟಿ ಮುಗಿ

ಯಿತು. ಸಾಧಾರಣವಾಗಿ ಸಾಹಿತ್ಯವನ್ನು, ವಿಮರ್ಶೆಯನ್ನು ಕುರಿತು ದಿನದ ಸಂಭಾಷಣೆಗಳಲ್ಲಿ ಮಾತಿರುತ್ತಿರಲಿಲ್ಲ. ಪಾಠ ಹೇಳುವಾಗಲೂ ಅಲಂಕಾರ ಪ್ರಕರಣವನ್ನು ಮುಟ್ಟುತ್ತಿರಲಿಲ್ಲ. ಅಪರೂಪವಾಗಿ ಛಂದಸ್ಸಿನ ಯಾವುದೊ ಸೂಕ್ಷ್ಮವನ್ನು ಎತ್ತಿ ತೋರಿಸುತ್ತಿದ್ದರು. ಅವರು ಹೇಳಿದ ಪಾಠಗಳಲ್ಲಿ ಕೂಡ ಅವಕ್ಕೆ ಅತೀವ ಪ್ರಾಶಸ್ತ್ಯ ದೊರೆಯುತ್ತಿರಲಿಲ್ಲ. ಅವರಿಗೆ ಹಿಡಿದ ಭೂತ ಒಂದೇ—ಸಾಹಿತ್ಯದ ಹೃದಯದಲ್ಲಿ ಅಡಗಿದ್ದ ಮಾನವ ಗುಣದ ಹಿರಿಮೆ, ದರ್ಶನ, ಸತ್ವ, ಉನ್ನತಿ–ಔದಾರ್ಯ—ಯಾವುದನ್ನು ಈ ಕಾಲದಲ್ಲಿ Values, ಮೌಲ್ಯಗಳು ಎನ್ನುತ್ತೇವೊ ಅವು—ಅವನ್ನು ಎಷ್ಟು ವಿಧವಾಗಿ ವಿಸ್ತರಿಸಿದರೂ ಬೆಳಗಿದರೂ ಅವರಿಗೆ ತೃಪ್ತಿಯಿಲ್ಲ. ಸ್ವಂತ ಜೀವನಕ್ಕೆ ಸಂಬಂಧಿಸಿದ ಯಾವ ಮಾತನ್ನೂ ಅವರು ಆಡರು. ಒಳಗೆ ಆಳದಲ್ಲಿ ತಾವು ಒಂದು ಕಾಲೇಜಿನ ಪ್ರಿನ್ಸಿಪಾಲ್ ಕೂಡ ಆಗಲಿಲ್ಲ ಎಂಬ ಲೋಪದ ಸುಳುವಿನ ನೆಳಲು ಹಾದದ್ದುಂಟು. ಅವರಿಗೆ ಬರಬಹುದಾಗಿದ್ದ ದೇಶದ ವಿದ್ಯಾ ಇಲಾಖಾ ಡೈರೆಕ್ಟರ್ ಪದವಿಯನ್ನು ಅವರಿಗೆ ಕೊಟ್ಟಿದ್ದರೆ ತುಂಬಾ ಸಂತೋಷಪಟ್ಟು ಕನ್ನಡದ ಕೆಲಸವನ್ನು ಹೊಸ ವಿಚಕ್ಷಣೆಯಲ್ಲಿ ವ್ಯವಸ್ಥೆ ಮಾಡಬೇಕೆಂದು ಅವರ ಮನಸ್ಸಿನಲ್ಲಿತ್ತು. ಅದು ನೆರವೇರಲಿಲ್ಲ. ಆದರೆ ಕನ್ನಡಕ್ಕೆ ತಾವು ಸಲ್ಲಿಸಬೇಕೆಂದಿದ್ದ ಸೇವೆ ಸ್ವಲ್ಪಮಟ್ಟಿಗಾದರೂ ನೆರವೇರಿದುದನ್ನು ಕಂಡು ಸಂತುಷ್ಟರಾಗಿದ್ದರು. ಹೊಸ ಕವಿತೆ ಬಂದು ಹೊಸ ದೃಷ್ಟಿ ಬಂತು; ಹಿಂದಿಲ್ಲದಿದ್ದ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡವು; ನೂರಾರು ಜನ ತರುಣ ಸಾಹಿತಿಗಳು ನಾಡಿನ ಮೇಲೆಲ್ಲ ಈ ಕಾಲಕ್ಕೆ ಮೆಚ್ಚುವ ರೀತಿಯಲ್ಲಿ ಕೃತಿ ನಿರ್ಮಾಣ ಮಾಡುತ್ತಿರುವುದನ್ನು ಕಂಡು ಆನಂದವಾಗಿತ್ತು. ವಿದ್ಯಾರ್ಥಿಗಳ ಪ್ರೋತ್ಸಾಹನಕ್ಕಾಗಿ ಒಂದೆರಡು ದತ್ತಿಗಳನ್ನೂ ಸ್ಕಾಲರ್‌ಶಿಪ್‌ಗಳನ್ನೂ ಕೊಟ್ಟರು. ಪರಿಷತ್ತಿಗೆ ಸ್ವಂತವಾಗಿ ಒಂದು ಅಚ್ಚುಕೂಟವಿರಬೇಕೆಂದು ೫–೬ ಸಾವಿರ ರೂಪಾಯಿ ದಾನ ಮಾಡಿದರು. ಆ ಬಗ್ಗೆ ಸ್ವಲ್ಪ ಕಾಲ ಅವರ ಕೈ ತಡೆದಾಗ ಅವರು ಆಡಿದ ಮಾತು ಇದು: ನನ್ನಲ್ಲಿ ಇಷ್ಟು ಹಣ ಇದೆ. ಪರಿಷತ್ತಿನ ಕೆಲಸ ಮಾಡಿಕೊಳ್ಳುವುದಕ್ಕೆ ಹೊರಗಿನವರ ಕೈ ಕಾಯುವುದಕ್ಕಿಂತ ನಾವೇ ಮಾಡಿಕೊಳ್ಳುವುದು ಮೇಲು. ಇದನ್ನು ಸ್ವೀಕರಿಸಿ. ವ್ಯವಸ್ಥೆಯಲ್ಲಿ ಬೇಕಾದ ಸಂದರ್ಭಗಳನ್ನು ವಿಧಿಸಿ ಅದನ್ನು ಯಾರೂ ದುರುಪಯೋಗಪಡಿಸಿಕೊಳ್ಳಲಾಗದಂತೆ, ನಷ್ಟವಾಗದಂತೆ ಮಾಡೋಣ. ಈ ಕೊಡುಗೆಯನ್ನು ಒಪ್ಪಿಕೊಳ್ಳಿ—ಎಂಬುದು.

ಎರಡು ಸಂಗತಿಗಳು ಅವರನ್ನು ಮೇಲಾಗಿ ಒತ್ತುತ್ತಿದ್ದವು. ಒಂದು: ಪೌರ್ವಾತ್ಯ ಪಾಶ್ಚಿಮಾತ್ಯ ದೃಷ್ಟಿಗಳೂ ಅನ್ವೇಷಣ ಮಾರ್ಗಗಳೂ ಸ್ವತಂತ್ರವಾದ ಕಲ್ಪನಾ ಸಾಮರ್ಥ್ಯವೂ ಸೇರಿ ಬೆಳೆದ ಹೊರತು ಸಾಹಿತ್ಯಕೃತಿ ದೊಡ್ಡದಾಗಲಾರದು,

ಲೋಕಸಂಸ್ಕೃತಿ ಹಿಗ್ಗದು. ಪೂರ್ವಪಶ್ಚಿಮ ಈ ಎರಡೂ ಒಂದೇ ಗೋಳದ ಎರಡು ಅಂಗಗಳು. ಇವು ಒಟ್ಟಿಗೆ ಸೇರಿ ದುಡಿದಲ್ಲದೆ ನಾಳೆಗೆ ಮುಂದಿನ ಹೆಜ್ಜೆ ಇಲ್ಲ—ಎಲ್ಲಿಯೂ, ಎಂಬುದು ಆ ದೃಷ್ಟಿ. ಅದನ್ನು ಪ್ರಚಾರಮಾಡಿ ಬೆಳೆಸಲು ಯತ್ನಿಸಿದರು. ಇಂಗ್ಲಿಷ್ ಗೀತಗಳನ್ನು ತಮ್ಮ ವಿದ್ಯಾರ್ಥಿಗಳಿಗೆ ಮಾಡಿದ ಅರ್ಪಣದಲ್ಲಿ ಈ ಆಕಾಂಕ್ಷೆ ಇರುವುದನ್ನು ಕಾಣಬಹುದು. ಮೈಸೂರಿನ ಈ ಕಡೆ ಹೇಗೊ ಧಾರವಾಡದ ಕಡೆಯೂ ಈ ದೃಷ್ಟಿ ರೀತಿ ಬೆಳೆಯಲೆಂದೇ ಅವರು ಅಲ್ಲಿನ ಒಂದು ಕಾಲೇಜಿನ ಪ್ರಿನ್ಸಿಪಾಲರಾಗಿ ಹೋಗಲು ಒಪ್ಪಿಕೊಂಡದ್ದು. ತುಂಗಭದ್ರೆಯ ಎರಡೂ ಕಡೆ ಸಾಹಿತ್ಯ ಮೌಲ್ಯಗಳ ವಿವೇಚನೆ, ವ್ಯಾಸಂಗದ ಹೃದಯ ಒಂದು ರಸದಲ್ಲಿ ಪುಷ್ಟವಾಗಲೆಂಬುದೇ ಅವರು ಅಲ್ಲಿಗೆ ಹೋಗಲು ಇಲ್ಲಿನ ಕೆಲವರು ಒಪ್ಪುವಂತೆ ಮಾಡಿದ್ದು.

ಕನ್ನಡ ನಾಡಿನ ಏಕೀಕರಣ: ಎರಡನೆಯ ಸಂಗತಿ. ಗದಗಿನಲ್ಲಿ ಒಂದು ಕಾರ್ಯಕ್ರಮವನ್ನು ಮುಗಿಸಿಕೊಂಡು, ಅವರು, ರಾಜರತ್ನಂ, ನಾನು ಟ್ರೈಲಲ್ಲಿ ಕುಳಿತು ಮುಂದೆ ಸಂಚಾರ ಮಾಡುವುದಿತ್ತು. ಬಾಗಿಲಕೋಟೆಯಲ್ಲಿ ಅವರು ರಾಜರತ್ನಂ ಇಳಿದರು. ನಾನು ಮುಂದೆ ಬಿಜಾಪುರಕ್ಕೆ ಹೋಗುವವನಿದ್ದೆ. ಹೋಗುವ ಮುಂಚೆ ಆ ದಿನ ನಮ್ಮೆಲ್ಲರಿಗೂ ಗದಗಿನವರು ಬೇಕಾದಷ್ಟು ಮೋಸುಂಬಿ, ಚಿಕ್ಕು, ಬೇರೆ ಬೇರೆಯಾಗಿ ಕೊಟ್ಟಿದ್ದರೂ ತಮ್ಮ ಬೊಗಸೆಯಲ್ಲಿ ಒಂದಿಷ್ಟು ಹಣ್ಣನ್ನು ತೆಗೆದುಕೊಂಡು ನನಗೆ ಕೊಟ್ಟರು. ಅವರ ಶಿಷ್ಯರಲ್ಲಿ ಹೆಚ್ಚು ಜನ ಮೈಸೂರಿನವರು— ಅಖಿಲ ಕರ್ಣಾಟಕದ ಏಕೀಕರಣಕ್ಕೆ ಸಂಚಾರಮಾಡಿ ದುಡಿಯುತ್ತಿರಲಿಲ್ಲವೆಂಬ ಕೊರತೆ ಅವರಿಗೆ ಇತ್ತು. ಯಾರು ಮಾಡಲಿ ಬಿಡಲಿ — ನನಗೆ ನಿಮ್ಮ ಅನನುಕೂಲಗಳು ಎಷ್ಟೆಂಬುದು ಗೊತ್ತು — ಈ ಕಾರ್ಯವನ್ನು ಮಾತ್ರ ನಾವು ಮುಂದುವರಿಸೋಣ. 'We shall be the living bridges across the Tungabhadra' — ತುಂಗಭದ್ರೆಯನ್ನು ಸೇರಿಸಲು ನಾವು ಜೀವಂತ ಮನುಷ್ಯ ಸೇತುವಾಗೋಣ — ಎಂದರು. ಇದೇ ನಾನು ಅವರ ಬಾಯಿಂದ ಕೇಳಿದ ಕಡೆಯ ಮಾತು. ಅವರು ಎಲ್ಲಿದ್ದರಲ್ಲಿ Living Bridge.

'ಶ್ರೀ'ಯಂಥವರು ಲೋಕದಲ್ಲಿ ಅಪರೂಪ. ತುಂಬು ಮುಖ, ಆಳವಾದ, ಶಾಂತವಾದ, ತಂಪಾದ ಕಣ್ಣುಹೊಳಪು, ಯಾವುದೊ ಲೋಕೋತ್ತರವಾದ ಒಂದು ಮಹಾ ಶ್ರದ್ಧೆಯನ್ನು ರೂಪಿಸುತ್ತಿದ್ದವು. ಅವರು ಸರ್ವದಾ ನುಡಿಯುತ್ತಿದ್ದುದು: 'Culture and Light' ಎಂಬ ಮಾತುಗಳು: Sweetness ಸವಿ ಹೇಗೆ? ಗರುಡನ ಕೂಗಲ್ಲಿ ಯಾವ ಸವಿಯಿದೆ? — ಹೆಚ್ಚು ಬೆಳಕು ಬೇಕು; ಹೆಚ್ಚು ಸ್ವಚ್ಛವಾದ ಗಾಳಿ ಬೇಕು; ಅವಕ್ಕಾಗಿ ಹೃದಯ, ಮನಸ್ಸು, ಸರ್ವದಾ ತೆರೆದಿರಬೇಕು. ಹೊರಗಿನ ಗಾಳಿ

ಬೆಳಕು ಬಿಸಿಲು ಬರುವಂತೆ — ನಮ್ಮ ಮನಸ್ಸಿನ ಮನೆ ಕಿಟಕಿ ಬಾಗಿಲು ನಿರಂತರವಾಗಿ ತೆರೆದಿರಬೇಕು. ಆ ಬೆಲೆ ಕೊಟ್ಟಲ್ಲದೆ ಯಾವ ನಾಡಿನ ಸಂಸ್ಕೃತಿಯೂ ಬೆಳೆಯದು. ಯಾವುದೂ ಹೊಚ್ಚಹೊಸದಾಗಿ ಉಳಿಯದು. ಭಾರತ ಪ್ರಪಂಚ ಒಂದು : ಕನ್ನಡ ಪ್ರಪಂಚದ ವಿಶಾಲತೆಗೆ ಯಾವ ಸಂಗತಿಯೂ ಅಡ್ಡಿ ನಿರ್ಬಂಧ ಆಗಬಾರದು. ಆ ಜೀವದ ಕಾಣ್ಕೆ, ಆ ಒಬ್ಬರ ಪ್ರಭಾವ ಒಟ್ಟು ಒಂದು ವಿಶ್ವವಿದ್ಯಾನಿಲಯದ ಪ್ರಭಾವಕ್ಕೆ ಸಮವಾಗಿತ್ತು.

ಎ. ಆರ್. ಕೃಷ್ಣಶಾಸ್ತ್ರೀ

# ಅವರ ಪ್ರೋತ್ಸಾಹವಿಲ್ಲದಿದ್ದರೆ*

ಈಗ್ಗೆ ಐವತ್ತು ವರ್ಷಗಳ ಹಿಂದೆ....... ಇಂಗ್ಲಿಷಿಗೆ, ಇಂಗ್ಲಿಷ್ ಉಪಾಧ್ಯಾಯರಿಗೆ, ಅಗ್ರಸ್ಥಾನ; ಅದನ್ನು ಪಾಠ ಹೇಳಲು ಇಂಗ್ಲಿಷರೇ ಆಗಬೇಕೆಂದು ನಮ್ಮ ಜನರು ವಾದಿಸುತ್ತಿದ್ದರು. ಆ ಭ್ರಮೆ ನಿರ್ಮೂಲವಾದದ್ದೆಂದು ಮೊದಲು ತೋರಿಸಿದವರು ದಿ|| ಬಿ. ಎಂ. ಶ್ರೀಕಂಠಯ್ಯನವರು. ಯೂರೋಪಿಯನ್ ಉಪಾಧ್ಯಾಯರ ತರಗತಿಯನ್ನು ಬಿಟ್ಟು ಅವರನ್ನು ಕೇಳಿಯೋ ಕದ್ದೋ, ಶ್ರೀಯವರ ತರಗತಿಗೆ ಹುಡುಗರು ಬಂದು ತುಂಬುತ್ತಿದ್ದುದನ್ನು ನಾನು ನೋಡಿದ್ದೇನೆ. ಇಂಗ್ಲಿಷನ್ನು ಬಿಟ್ಟರೆ ಸಂಸ್ಕೃತ. ಸಂಸ್ಕೃತಕ್ಕೆ ಮಹಾರಾಜಾ ಕಾಲೇಜಿನಲ್ಲಿಯೂ, ಸೆಂಟ್ರಲ್ ಕಾಲೇಜಿನಲ್ಲಿಯೂ ಎಂ. ಎ. ಪ್ಯಾಸು ಮಾಡಿದ ಒಬ್ಬೊಬ್ಬ ೧೫೦–೨೦೦ ರೂಪಾಯಿನ ಉಪಾಧ್ಯಾಯರಿದ್ದರು ; ಆಗ್ಗೆ ಅವರು ಪ್ರಾಧ್ಯಾಪಕರಿಗೆ ಸಮಾನ. ಕನ್ನಡಕ್ಕೆ ಒಬ್ಬರೋ ಇಬ್ಬರೋ ೫೦–೬೦ ರೂಪಾಯಿನ ಪಂಡಿತರು ! 'ಮುನಷಿಗಳು'! ಅವರನ್ನು ಹುಡುಗರು ವಿದೂಷಕರಂತೆ ಆಡಿಸುತ್ತಿದ್ದರು. ಮದರಾಸಿನಲ್ಲಿ ಸಂಸ್ಕೃತಕ್ಕೆ ೭೦೦-೮೦೦ ರೂ ತಲಬಿನ ಒಬ್ಬ ಪ್ರೊಫೆಸರೇ ಇದ್ದರು. ಕನ್ನಡದ ಪ್ರೋತ್ಸಾಹಕ್ಕೆಂದೇ ಆರಂಭವಾದ ಮೈಸೂರು ವಿಶ್ವವಿದ್ಯಾನಿಲಯ ಹುಟ್ಟಿ ಎಷ್ಟೋ ವರ್ಷಗಳಾದ ಮೇಲೂ ಕನ್ನಡದ ಸ್ಥಿತಿ ಉತ್ತಮವಾಗಿರಲಿಲ್ಲ. ಕನ್ನಡಿಗ ವೈಸ್‌ಛಾನ್ಸಲರೇ ಸಂಸ್ಕೃತದ ಉಪಾಧ್ಯಾಯ ಪಂಡಿತರಿಗೆ ೮೦ ರೂ. ಸಂಬಳ ಕೊಟ್ಟು, ಕನ್ನಡದಲ್ಲಿ ಮೊದಲನೆಯ ತರಗತಿಯಲ್ಲಿ ಎಂ. ಎ. ಪ್ಯಾಸು ಮಾಡಿದವರಿಗೆ ೪೦ ರೂ. ಕೊಟ್ಟರು. ನಾನು ೫೦ ರೂ. ಸಂಬಳಕ್ಕೆ ಸೆಂಟ್ರಲ್ ಕಾಲೇಜಿನಲ್ಲಿ ಕೆಲಸಕ್ಕೆ ಸೇರಿದೆ. ನನ್ನನ್ನು ಅಲ್ಲಿ ಸೇರಿಸಿದವರು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ; ಅವರ ಹೃದಯ ಒಳ್ಳೆಯದು. ಅವರು ಕೊಡಿಸಿದ ೫೦ ರೂ. ಕಾಲಕ್ರಮದಲ್ಲಿ ೫೦೦ ರೂ. ಆಯಿತು. ಅಂಥ ಅದೃಷ್ಟ ನನಗೊಬ್ಬನಿಗೇ ಲಭಿಸಿದ್ದು. ಅಂಥ ಅಭಿಮಾನ ಅವರೊಬ್ಬರಿಗೇ ಇದ್ದದ್ದು. ಈ ಸಂದರ್ಭದಲ್ಲಿ ಕನ್ನಡಿಗರಿಗಿಂತ ಹೆಚ್ಚಾಗಿ ಮಿ|| ಟೇಟ್ ಮತ್ತು ವಿಯರ್ ಇಬ್ಬರೂ ನನ್ನಲ್ಲಿಯೂ

---

* 'ಭಾಷಣಗಳು ಮತ್ತು ಲೇಖನಗಳು', ಪು. ೨೯೫–೩೦೫ (ಆಯ್ದ ಭಾಗಗಳು)

ಬಿ. ಎಂ. ಶ್ರೀಯವರಲ್ಲಿಯೂ ತೋರಿಸಿದ ವಿಶ್ವಾಸವನ್ನು ನೆನೆಯಬೇಕಾದದ್ದು ನನ್ನ ಧರ್ಮ—ಇದನ್ನು ನಾನು ಈಗಾಗಲೇ ಅನೇಕ ಮಿತ್ರರಲ್ಲಿ ಹೇಳಿದ್ದೇನೆ.

ವಿಯರ್ ಸಾಹೇಬರಿಗೆ ಕನ್ನಡ ಬರದು ; ಆದರೆ ಟೇಟ್ ಸಾಹೇಬರಿಗೆ ಕನ್ನಡವೂ ಸಂಸ್ಕೃತವೂ ಸ್ವಲ್ಪಸ್ವಲ್ಪ ಬರುತ್ತಿತ್ತು ; ಶ್ರೀಕಂಠಯ್ಯನವರನ್ನು ಕಂಡರೆ ಆತನಿಗೆ ತುಂಬ ಪ್ರೀತಿ; ಅವರು ಧಾರವಾಡದಲ್ಲಿ ಕೊಟ್ಟಿದ್ದ ' ಕನ್ನಡ ಮಾತು ತಲೆಯೆತ್ತುವ ಬಗೆ ' ಎಂಬ ಉಪನ್ಯಾಸವನ್ನೂ ' ಕನ್ನಡಕ್ಕೆ ಒಂದು ಕಟ್ಟು ' ಎಂಬ ಪ್ರಬಂಧವನ್ನೂ ಸೇರಿಸಿ ' ಕನ್ನಡ ಭಾಷೆಯ ವಿಚಾರಗಳು ' ಎಂದು ಆತ ಅಚ್ಚು ಮಾಡಿಸಿದ್ದರು. ಆತ ವಿಶ್ರಾಂತನಾಗಿ ಸೀಮೆಗೆ ಹೋಗುವಾಗ, ನನ್ನನ್ನು ಕರೆದು, ಸುಮಾರು ಅದರ ನೂರು ಪ್ರತಿಗಳನ್ನು ಕೊಟ್ಟು ' ಇದನ್ನು ಸರಿಯಾಗಿ ಉಪಯೋಗಿಸಿಕೋ ' ಎಂದು ಹೇಳಿದರು. ವಿಯರ್, ಟೇಟ್ ಇಬ್ಬರೂ ವಿದೇಶೀಯರಾದರೂ, ಕನ್ನಡ ಮುಂದಕ್ಕೆ ಬರಬೇಕಾದರೆ, ಅದರ ಓದು ಫಲಕಾರಿಯಾಗಬೇಕಾದರೆ, ಅದಕ್ಕೆ ಇಂಗ್ಲಿಷಿನ ಸಹಾಯ ಬೇಕೆಂದೂ, ಇಂಗ್ಲಿಷ್ ತಿಳಿದವರ ಪಾಠ ಅವಶ್ಯವೆಂದೂ ನಂಬಿದ್ದರು. ಆದ್ದರಿಂದ ವಿಯರ್ ಅವರು ಬಿ. ಎಂ. ಶ್ರೀಯವರನ್ನು ಮಹಾರಾಜಾ ಕಾಲೇಜಿನಲ್ಲಿ ಕನ್ನಡವನ್ನೂ ಇಂಗ್ಲಿಷನ್ನೂ ಬೋಧಿಸುವಂತೆ ಏರ್ಪಡಿಸಿದರು. ಅನಂತರ ಅವರು ನನಗೆ ಇಂಟರ್, ಬಿ. ಎ. ತರಗತಿಗಳಲ್ಲಿ ಕನ್ನಡದ ಉಪಾಧ್ಯಾಯರಾಗಿದ್ದರು; ಅವರ ಇಂಗ್ಲಿಷ್ ಪಾಠ ಎಷ್ಟು ಸಾರವತ್ತಾಗಿರುತ್ತಿತ್ತೋ, ಕನ್ನಡ ಪಾಠವೂ ಅಷ್ಟೇ ಸಾರವತ್ತಾಗಿರುತ್ತಿತ್ತು.

ಟೇಟ್ ಸಾಹೇಬರಿಗೆ, ನನ್ನ ಯೋಗ್ಯತೆ ಏನೇ ಇರಲಿ, ಬಿ. ಎಂ. ಶ್ರೀಕಂಠಯ್ಯನವರು ಕಳುಹಿಸಿದವನೆಂದು ನನ್ನ ಮೇಲೆ ತುಂಬ ಅಭಿಮಾನ. 50-4-70 ರ ಗ್ರೇಡಿನಲ್ಲಿ 70 ರೂಪಾಯಿ ಕೊಡಿಸಬೇಕೆಂದು ಅವರ ಇಷ್ಟ. ಆದರೆ ಅದು ಮಹಾ ಹಿಡಿತದ ಕಾಲ. ಒಟ್ಟಿಗೆ ಅಷ್ಟೊಂದು ಕೊಟ್ಟುಬಿಡುವುದಕ್ಕೆ ಸರ್ಕಾರ ಒಪ್ಪುವ ಪಾಪವುಂಟೇ ? ಆದ್ದರಿಂದ ಮತ್ತಾವ ವಿಧದಲ್ಲಿಯಾದರೂ ಸಹಾಯಮಾಡಬಹುದೋ ಎಂದು ಅವರು ಯೋಚಿಸುತ್ತಲೇ ಇದ್ದರು. ಆ ವರ್ಷ ಪರೀಕ್ಷಕರನ್ನು ತೆಗೆದುಕೊಳ್ಳುವ ಸಂದರ್ಭ ಬಂತು. ' ಕನ್ನಡಕ್ಕೆ ನನ್ನ ಕಾಲೇಜಿನಲ್ಲಿ ಒಬ್ಬ ಉಪಾಧ್ಯಾಯನಿದ್ದಾನೆ' ಎಂದರು ಅವರು. ' ಅವನಿಗೆ ಸಂಬಳವೆಷ್ಟು ? ' ' ಐವತ್ತು ರೂಪಾಯಿ.' ' ಅದು ತುಂಬ ಕಮ್ಮಿ ಸಂಬಳ; ಅಂಥವನಿಗೆ ಹೇಗೆ ಕೊಡುವುದು ?' ' ಹೆಚ್ಚು ಸಂಬಳ ಕೊಡಿ, ಪರೀಕ್ಷಕನನ್ನಾಗಿ ನೇಮಿಸಿ.' ಅದು ಅವರ ಕೈಯಲ್ಲಿರಲಿಲ್ಲ; ಇದ್ದರೆ ಮಾಡಿಬಿಡುತ್ತಿದ್ದರು. (ಆಮೇಲೆ ಸಂಬಳವೂ ಹೆಚ್ಚಾಯಿತು, ಪರೀಕ್ಷಕನಾಗೆಂದರೆ ಬೇಡವೆನ್ನುವ ಕಾಲವೂ ಬಂತು ! ) ಅದಕ್ಕೆ ನಿದರ್ಶನ ಮತ್ತೊಂದು ಸಂಗತಿ. ಬಿ. ಎ. ಪರೀಕ್ಷೆಯಾದ ಮೇಲೆ ನಾನು, ಆ ಕಾಲದಲ್ಲಿಯೂ, ಸುಮಾರು ಎಂಟು ಹತ್ತು ತಿಂಗಳು ಕೆಲಸವಿಲ್ಲದೆ ಅಲೆದು

ಡಿಸ್ಟ್ರಿಕ್ಟ್ ಆಫೀಸಿನಲ್ಲಿ ಮೂವತ್ತೈದು ರೂಪಾಯಿನ ಗುಮಾಸ್ತೆ ಕೆಲಸಕ್ಕೆ ಸೇರಿದ್ದೆ. ಟೇಟ್ ಸಾಹೇಬರು ಶ್ರೀಕಂಠಯ್ಯನವರನ್ನು ಕೇಳಿ ಇನ್‌ಸ್ಪೆಕ್ಟರ್ ಜನರಲ್ ಆಗಿದ್ದ ಶಾಮರಾಯರಿಗೆ ಒಂದು ಪತ್ರ ಬರೆದು ಅವರ ಒಪ್ಪಿಗೆ ತೆಗೆದುಕೊಂಡು ನನ್ನನ್ನು ಕರೆಸಿಕೊಂಡರು. ಅದು ಆರು ತಿಂಗಳ ಹಂಗಾಮಿ ಕೆಲಸ. ಆದರೆ ಆ ಆರು ತಿಂಗಳೂ ಸರ್ಕಾರಿ ಹುಕುಂ ಬರಲಿಲ್ಲ; ಆದ್ದರಿಂದ ಸಂಬಳವಿಲ್ಲ. ನಾನು ಒಂದು ತಿಂಗಳು ನೋಡಿದೆ, ಎರಡು ತಿಂಗಳು ನೋಡಿದೆ; ಕೊನೆಗೆ ಸಂಕೋಚದಿಂದ ಅವರ ಹತ್ತಿರ ಹೋಗಿ ಸರ್ಕಾರಕ್ಕೆ ಒಂದು ತಗಾದೆ ಕೊಡಬೇಕೆಂದು ಸೂಚಿಸಿದೆ. ಅವರು ಅದರಿಂದ ಏನೂ ಪ್ರಯೋಜನವಾಗುವುದಿಲ್ಲ ಎಂದು, ತಮ್ಮ ಕೈಯಿಂದ ನನಗೆ ಆಗ್ಗೆ ಅವಶ್ಯವಾಗಿದ್ದಷ್ಟು ದುಡ್ಡು ಕೊಟ್ಟರು; ಮುಂದಿನ ತಿಂಗಳೂ ಅದೇ ಕಥೆ; ಹೀಗೆ ಆರು ತಿಂಗಳ ಕೊನೆಯಲ್ಲಿ ಸರ್ಕಾರದ ಹುಕುಂ ಬಂತು. ಸಂಬಳ ಬಂತು; ಸಾಲವನ್ನೆಲ್ಲಾ — ಬಡ್ಡಿ ಕೊಡದೆ — ತೀರಿಸಿದೆ. ವಿಯರ್, ಟೇಟ್, ಇವರು ತೋರಿಸಿದ ವಿಶ್ವಾಸವನ್ನೇ ಮುಂದೆ ಬಂದ ಮ್ಯಾಕಿಂಟಾಷ್, ಮೆಕಾಲ್ಪೈನ್ ಅವರೂ ತೋರಿಸಿದರು. ನಾನು ಹೆಚ್ಚು ರಗಳೆ ಇಲ್ಲದೆ ಪ್ರಾಧ್ಯಾಪಕನಾಗುವುದಕ್ಕೂ ಎಷ್ಟೋ ದಿನಗಳ ಅನಂತರವಾದರೂ ಬಡ್ತಿ ಪಡೆಯುವುದಕ್ಕೂ ಅವರು ಸಹಾಯವಾದರು.

ಇಂದು ಕನ್ನಡ ಪಡೆದಿರುವ ಗೌರವಸ್ಥಾನಕ್ಕೆ ಬಿ. ಎಂ. ಶ್ರೀಯವರು ಹಲವು ವಿಧಗಳಲ್ಲಿ ಕಾರಣರು. ಅದು ಅನೇಕರಿಗೆ ತಿಳಿದಿರಲಾರದು. ನಲವತ್ತೊಂದು ವರ್ಷಗಳ ಕೆಳಗೆ ಅವರು ನನ್ನನ್ನು ಸೆಂಟ್ರಲ್ ಕಾಲೇಜಿಗೆ ಕಳುಹಿಸಿದ್ದನ್ನು ಹೇಳಿದ್ದೇನೆ. ಈಗ್ಗೆ ೩೦ ವರ್ಷಗಳ ಹಿಂದೆ ಅವರು ರಿಜಿಸ್ಟ್ರಾರರೂ, ಅವರಷ್ಟೇ ದೇಶಭಾಷಾಭಿಮಾನಿಗಳಾಗಿದ್ದ ಬ್ರಜೇಂದ್ರನಾಥ ಶೀಲರು ವೈಸ್-ಛಾನ್ಸೆಲರೂ ಆಗಿದ್ದಾಗ ಅವರೊಡನೆ ಪರ್ಯಾಲೋಚಿಸಿ ಕನ್ನಡದಲ್ಲಿ ಎಂ. ಎ. ತರಗತಿಯನ್ನು ತೆರೆಯಬೇಕೆಂದು ನಿರ್ಧರಿಸಿದರು. ಆಗ ಅದು ನಿರುಪಯೋಗವೆಂದೂ ಅದಕ್ಕೆ ವ್ಯರ್ಥವಾದ ಖರ್ಚಾಗುವುದೆಂದೂ ಜನರಲ್ಲಿ ತುಂಬ ವಿರೋಧವಿತ್ತು ; ಆದ್ದರಿಂದ ನಾನು ಏನೇನು ಮಾಡಬೇಕೆಂದು ತಿಳಿಸಿ, ಪ್ರೊ. ಹಿರಿಯಣ್ಣನವರೊಡನೆ ಮಾತನಾಡಿ ಒಂದು ಸಲಹೆಯನ್ನು ಬರೆದು ಕಳುಹಿಸುವಂತೆ ಮಾಡಿದರು—“ ಹೆಚ್ಚು ಖರ್ಚು ತೋರಿಸಬೇಡ—ಈಗ ಇರುವ ಒಬ್ಬ ಅಸಿಸ್ಟೆಂಟ್ ಪ್ರೊಫೆಸರೇ ಇರಲಿ ” ಎಂದು ಹೇಳಿದರು. (ಈ ಅಸಿಸ್ಟೆಂಟ್ ಪ್ರೊಫೆಸರರ ಕೆಲಸ ಬಹಳ ದಿನ ಖಾಲಿ ಬಿದ್ದಿತ್ತು !) ಕನ್ನಡಕ್ಕೆ ಸಂಸ್ಕೃತದ ಸಹಾಯ ಬೇಕೆಂದು ವ್ಯಾಸಂಗದಲ್ಲಿ ಅದನ್ನು ಕನ್ನಡದ ಭಾಗವಾಗಿ ಸೇರಿಸಿದವರು ಅವರು; ಅವರು ಸಂಸ್ಕೃತಕ್ಕೆ ವಿರೋಧಿಗಳಾಗಿದ್ದರೆಂಬುದು ಅನೇಕರ ಭಾವನೆ ; ಅವರದು ಸಂಸ್ಕೃತದ ವಿರೋಧವಲ್ಲ, ಕನ್ನಡದ ಅಭಿಮಾನ. ಹಿರಿಯಣ್ಣನವರು ವ್ಯಾಸಂಗಕ್ರಮವನ್ನೆಲ್ಲಾ ಒಪ್ಪಿದರು.

ಆವರೆ, 'ಕನ್ನಡದ ಪ್ರಧಾನೋಪಾಧ್ಯಾಯರು, ಎಂ. ಎ. ತರಗತಿಗೆ ಪಾಠ ಹೇಳುವವರು, ಅಸಿಸ್ಟೆಂಟ್ ಪ್ರೊಫೆಸರಾಗಿರುವುದೆಂದರೇನು, ಅವರು ಪ್ರೊಫೆಸರೇ ಆಗಿರಬೇಕು' ಎಂದು ಹಠ ಹಿಡಿದರು. ಅದು ಅವರ ಮಾತೃಭಾಷಾಭಿಮಾನಕ್ಕೂ ಉದಾರಬುದ್ಧಿಗೂ ನ್ಯಾಯ ಪರತೆಗೂ ಸಾಕ್ಷಿ! ಕನ್ನಡದ ಪ್ರಾಧ್ಯಾಪಕರಾಗಿದ್ದ, ಆಗಿರುವ, ವೆಂಕಣ್ಣಯ್ಯನವರೂ ನಾನೂ ಪುಟ್ಟಪ್ಪನವರೂ, ತೀ. ನಂ. ಶ್ರೀಕಂಠಯ್ಯನವರೂ, ನರಸಿಂಹಾಚಾರ್ಯರೂ, ಎಲ್ಲರೂ ಹಿರಿಯಣ್ಣನವರಿಗೆ ಕೃತಜ್ಞರಾಗಿರಬೇಕು, ಬಿ. ಎಂ. ಶ್ರೀಯವರಿಗೆ ಕೃತಜ್ಞ ರಾಗಿರಬೇಕು. ಅವರು ಕನ್ನಡವನ್ನು ಎತ್ತದೆ ಇದ್ದಿದ್ದರೆ ಇಂದೂ ಕನ್ನಡಕ್ಕೆ ಒಬ್ಬರೋ ಇಬ್ಬರೋ, ಪಂಡಿತರು ಮಾತ್ರ ಇರುತ್ತಿದ್ದರೋ ಏನೋ! ಬಿ. ಎಂ. ಶ್ರೀಯವರು ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರೂ, ರಿಜಿಸ್ಟ್ರಾರರಾಗಿದ್ದರೂ, ಕಾಲೇಜಿನಲ್ಲಿ ಕನ್ನಡದ ಪಾಠವನ್ನಿಟ್ಟುಕೊಂಡಿದ್ದರು; ಅವರಿಗೆ ವಿದ್ಯಾರ್ಥಿದಶೆಯಲ್ಲಿ ಪ್ರೌಢ ಕನ್ನಡ ಪಠ್ಯವಾಗಿ ಲ್ಲದಿದ್ದರೂ ಅಷ್ಟು ಪಾಂಡಿತ್ಯವನ್ನು ಅವರು ಹೇಗೆ ಸಂಪಾದಿಸಿದರೋ! ಭಾಷೆ, ಸಾಹಿತ್ಯ, ವ್ಯಾಕರಣ, ಛಂದಸ್ಸು, ಭಾಷಾಶಾಸ್ತ್ರ, ಇವೆಲ್ಲವನ್ನೂ ಸ್ವಂತ ವ್ಯಾಸಂಗದಿಂದ ಕರ ತಲಾಮಲಕ ಮಾಡಿಕೊಂಡಿದ್ದರು. ಆಗಲೇ ಅವರಿಗೆ ತಮಿಳು ಚೆನ್ನಾಗಿ ಬರುತ್ತಿತ್ತು. ತಮಿಳನ್ನು ನನಗೆ ಹೇಳಿಕೊಟ್ಟವರು ಅವರು. ಅವರು ಗ್ರಂಥಪ್ರಕಟಣೆಗಾಗಿ ಒಂದು ಯೋಜನೆ ಏರ್ಪಡಿಸಿ ಅದಕ್ಕಾಗಿ ಎಷ್ಟು ದುಡಿದರೆಂಬುದು ಅದನ್ನು ನೋಡಿದವರಿಗೆ ಮಾತ್ರ ಗೊತ್ತು; ಅವರ ಕಾಲದಲ್ಲಿ ಸಿದ್ಧವಾದ ಗ್ರಂಥಗಳು ಇನ್ನೂ ಕೆಲವು ಅಚ್ಚಾ ಗದೇ ಹಾಗೇ ಉಳಿದಿವೆಯೋ ಏನೋ! ಇದೂ, ಅವರು ಕಾಲೇಜಿನ ಹೊರಗೆ ಪರಿಷತ್ತು ಮುಂತಾದೆಡೆಗಳಲ್ಲಿ, ಅಖಂಡ ಕರ್ಣಾಟಕದಲ್ಲಿ ಕನ್ನಡಕ್ಕೆ ದುಡಿದದ್ದೂ ನಮ್ಮೆಲ್ಲರಿಗೂ ಗೊತ್ತಿದೆ.

ಕನ್ನಡಕ್ಕೆ ನನ್ನನ್ನು ಸೇರಿಸಿದವರು ಅವರು. ಧೈರ್ಯ ಹೇಳಿ ಪ್ರೋತ್ಸಾಹ ಕೊಟ್ಟು ಕೆಲಸ ಮಾಡಿಸಿದವರು ಅವರು. ಇಂದು ನಾನು ಬರೆದಿರುವ ಬಹುಭಾಗದ ಬರವಣಿಗೆ ಅವರ ನಿರ್ಬಂಧವಿಲ್ಲದಿದ್ದರೆ ಬರುತ್ತಿತ್ತೋ ಇಲ್ಲವೋ! ಮನುಷ್ಯನು ಸ್ವಭಾವದಿಂದ ಜಡ. ಇಲ್ಲಿ ನನ್ನ ಪೂರ್ವಚರಿತ್ರೆಯನ್ನು ಕುರಿತು ಒಂದೆರಡು ಮಾತನಾಡಿದರೆ ಕ್ಷಮಿಸುವಿ ರೆಂದು ನಂಬುತ್ತೇನೆ. ಈ ಮಹನೀಯರ ಜೊತೆಯಲ್ಲಿ ಹೂವಿನೊಂದಿಗೆ ಸೇರಿದ ನಾರಿ ನಂತೆ, ನಾನೂ ಬಂದರೆ ಅದು ಕ್ಷಮ್ಯ, ಅನಿವಾರ್ಯ ಅಲ್ಲವೇ? ನಾನು ಮೊದಲು ಆರಂಭಮಾಡಿದ್ದು ಸಂಸ್ಕೃತ. ನನ್ನ ತೀರ್ಥರೂಪರವರು ನನಗೆ ಶೈಶವದಲ್ಲಿಯೇ ಸಂಸ್ಕೃತ ಶ್ಲೋಕ ಅಮರ ಪಾಣಿನಿ ಸೂತ್ರಗಳನ್ನು ಬಾಯಿಪಾಠ ಮಾಡಿಸಿದರು. ಕನ್ನಡ ಹೇಳಿಕೊಟ್ಟರು. ಆವರೆ ತಮ್ಮ ಹಿಂದೆ—ನಾಲ್ಕೈದು ವರ್ಷದ ಹುಡುಗನನ್ನೇ—ನಿತ್ಯವೂ ಸಂಸ್ಕೃತ ಪಾಠಶಾಲೆಗೆ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿ ರಘುವಂಶ,

ಕುಮಾರಸಂಭವ, ಮೊದಲಾದ ಕಾವ್ಯಗಳನ್ನು ಓದಿ, ಚಂಪೂರಾಮಾಯಣದ ತರಗತಿಗೆ ಬಂದೆ. ಬಾಲಕಾಂಡದಲ್ಲಿ ಸ್ವಲ್ಪ ಭಾಗ ಪಾಠವಾಗಿತ್ತು. ಆಗ ನಮ್ಮ ತಾಯಿ ಸ್ವರ್ಗಸ್ಥರಾದರು. ತಬ್ಬಲಿಯಾಗಿ ಎಲ್ಲೋ ಹಳ್ಳಿಯಲ್ಲಿ ಕೆಲವು ಕಾಲ ಅಜ್ಞಾತವಾಸ ಮಾಡಿದೆ. ಆಮೇಲೆ ತಂದೆಯೇ ತಾಯಿಯೂ ಆದರು; ನನ್ನನ್ನು ಸಂಸ್ಕೃತದಿಂದ ಬಿಡಿಸಿ ಕನ್ನಡಕ್ಕೆ ಹಾಕಿದರು. ಅದು ೫೬ ವರ್ಷದ ಹಿಂದಿನ ಮಾತು. ಅಲ್ಲಿಂದ ಮುಂದೆ ಲೌಕಿಕ ವಿದ್ಯೆ. ಮೆಟ್ರಿಕ್ಯುಲೇಷನ್ ಆದಮೇಲೆ ಇಂಟರ್‌ಮೀಡಿಯೆಟ್; ಅಗ್ಗ ಅದು ಹೊಸದು; ಅದೇ ವರ್ಷ ಬಂದಿತ್ತು. ನನಗೆ ವಿಜ್ಞಾನದಲ್ಲಿ ತುಂಬ ಆಸಕ್ತಿ. ಅದರಲ್ಲಿ ಹೈಸ್ಕೂಲಿನಲ್ಲಿದ್ದಾಗ ಅಂಕಗಳು ಹೆಚ್ಚಾಗಿ ಬರುತ್ತಿದ್ದುವು. ಅಲ್ಲದೆ, ಚಿಕ್ಕ ವಯಸ್ಸಿನಲ್ಲಿಯೇ ಸಾಹಿತ್ಯ ಸುಳ್ಳಿನ ಮೇಲೆ ಕಟ್ಟಿದ ಗಾಳಿಗೋಪುರ, ವಿಜ್ಞಾನ ಸತ್ಯದ ಮೇಲೆ ಕಟ್ಟಿದ ಸೌಧ' ಎಂದು ವಿಜ್ಞಾನದ ಮೇಲೆ ಒಂದು ಪಕ್ಷಪಾತ ಬಂದುಬಿಟ್ಟಿತ್ತು. ಆದ್ದರಿಂದ ಬೆಂಗಳೂರಿಗೆ ಹೋಗಿ, ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನವನ್ನು ಓದ ಬೇಕೆಂಬುದು ನನ್ನ ತೀವ್ರಾಭಿಲಾಷೆಯಾಗಿತ್ತು. ಆದರೆ ಒಂದೇ ಮಾತಿನಲ್ಲಿ ನಮ್ಮ ತಂದೆ ' ಅಯ್ಯೋ ! ಅದಕ್ಕೆಲ್ಲಾ ನಮಗೆ ಅನುಕೂಲವೆಲ್ಲಿದೆಯಪ್ಪ !' ಎಂದು ಬಿಟ್ಟರು. ನಾನು ಮೈಸೂರಿನಲ್ಲಿ ನಿಂತು ಮಹಾರಾಜಾ ಕಾಲೇಜಿನ ಕಡೆಗೆ ನೋಡಬೇಕಾಯಿತು.

ಆದರೆ ಸೆಂಟ್ರಲ್ ಕಾಲೇಜಿಗೂ, ವಿಜ್ಞಾನಕ್ಕೂ ನನಗೂ ಋಣಾನುಬಂಧ ಬಲ ವಾಗಿತ್ತು ; ವಿದ್ಯಾರ್ಥಿಯಾಗಿ ಹೋಗಲಾಗದಿದ್ದೆಡೆಗೆ ಉಪಾಧ್ಯಾಯನಾಗಿ ಹೋದೆ ; ನಾನು ಕೆಲಸದಲ್ಲಿದ್ದ ಮೂವತ್ತು ವರ್ಷಗಳಲ್ಲಿ ಹದಿನೇಳು ವರ್ಷ ಅಲ್ಲಿ ಇದ್ದೆ; ಮಹಾ ರಾಜಾ ಕಾಲೇಜಿಗಿಂತ ಅದೇ ನನಗೆ ಹೆಚ್ಚಿನ ಕಾರ್ಯಕ್ಷೇತ್ರವಾಯಿತು ; ಕರ್ಣಾಟಕ ಸಂಘ ಪ್ರಬುದ್ಧ ಕರ್ಣಾಟಕಗಳು ಹುಟ್ಟಿದ್ದು ಅಲ್ಲಿ. ಅಲ್ಲಿ ವಿಜ್ಞಾನದ ಮೇಲಣ ಉಪ ನ್ಯಾಸಗಳನ್ನು ಕೇಳಿದಷ್ಟು ನಾನು ಮೈಸೂರಲ್ಲಿ ಸಾಹಿತ್ಯದ ಮೇಲೂ ಉಪನ್ಯಾಸ ಗಳನ್ನು ಕೇಳಿಲ್ಲ. ಅಲ್ಲಿನ ವಿದ್ಯಾರ್ಥಿಗಳಲ್ಲಿ ಗಳಿಸಿದಷ್ಟು ವಿಶ್ವಾಸವನ್ನು ಮೈಸೂರಿನಲ್ಲಿ ಗಳಿಸಲಿಲ್ಲ ಎಂದು ಹೇಳಿದರೆ ಯಾರೂ ತಪ್ಪು ತಿಳಿದುಕೊಳ್ಳಬಾರದು ....ಮಹಾ ರಾಜಾ ಕಾಲೇಜಿನಲ್ಲಿ ನನ್ನ ಸ್ನೇಹಿತರೆಲ್ಲರೂ ನುಗ್ಗಿದಂತೆ ನಾನೂ ಇಂಟರ್ ತರಗತಿಯ ಚರಿತ್ರೆ ಅರ್ಥಶಾಸ್ತ್ರ ತರ್ಕಗಳ ವಿಭಾಗಕ್ಕೆ ಸೇರಿದೆ. ರೋಮನ್, ಗ್ರೀಕ್, ಇಂಗ್ಲಿಷ್ ಮೂರು ಚರಿತ್ರೆ ಗ್ರಂಥಗಳಿಗೆ ಮುವ್ವತ್ತು ರೂಪಾಯಿ ಕೊಟ್ಟು ಕೊಂಡುಕೊಳ್ಳಬೇಕಾ ಗಿತ್ತು. ನಮ್ಮ ತಂದೆ ' ಅಷ್ಟೆಲ್ಲಾ ದುಡ್ಡು ಎಲ್ಲಿ ತರುವುದು ! ಬೇಕಾದರೆ ಕನ್ನಡವೋ ಸಂಸ್ಕೃತವೋ ಓದು ; ಮನೆಯಲ್ಲಿರುವ ಪುಸ್ತಕ ಕೊಡುತ್ತೇನೆ ' ಎಂದರು. ಆದ್ದರಿಂದ ಚರಿತ್ರೆಯನ್ನು ಬಿಟ್ಟು ಐಚ್ಛಿಕ ಕನ್ನಡ ಸಂಸ್ಕೃತಗಳ ತರಗತಿಗೆ ಸೇರಬೇಕೆಂದು ನಿರ್ಧರಿಸಿದೆ.

ಪಠ್ಯವಾಗಿಟ್ಟಿದ್ದ ಪುಸ್ತಕಗಳನ್ನು ಕೇಳಿ ಕನ್ನಡ ಪಂಡಿತರು ಹೆದರಿದರು, ಹೆದರಿಸಿದರು. ನಾನು ಶ್ರೀಕಂಠಯ್ಯನವರನ್ನು ಕಂಡೆ, ಕೇಳಿದೆ. ಅವರು 'ಅಗತ್ಯವಾಗಿ ಈ ವಿಭಾಗಕ್ಕೆ ಸೇರಿಕೋ!' ಎಂದರು. ನಾನು 'ಶಬ್ದಮಣಿದರ್ಪಣ' ಇಟ್ಟಿದ್ದಾರಲ್ಲ. ಅದು ತುಂಬ ಕಷ್ಟವಂತಲ್ಲ. ಸೂತ್ರ ವೃತ್ತಿಗಳನ್ನೆಲ್ಲಾ ಉರುಹಚ್ಚಬೇಕಂತಲ್ಲ!' ಎಂದು ಕೇಳಿದೆ. ಅವರು 'ಹೆದರಬೇಡ ಬಾ! ನಾನು ಎಲ್ಲಾ ಸುಲಭಮಾಡಿಕೊಡುತ್ತೇನೆ' ಎಂದು ಧೈರ್ಯ ಹೇಳಿದರು. ಅವರ ಈ ಧೈರ್ಯ ಪ್ರೋತ್ಸಾಹಗಳು ನನಗೆ ಅವರಿರುವವರೆಗೂ ಇದ್ದುವು.

ನಾನು ಬಿ. ಎ. ತರಗತಿಯಲ್ಲಿದ್ದಾಗಲೂ ಆಮೇಲೂ ಬರವಣಿಗೆಗೆ ಪ್ರೋತ್ಸಾಹ ಕೊಟ್ಟವರು ದಿ|| ಹಿರಿಯಣ್ಣನವರು ಮತ್ತು ಬಿ. ಎಂ. ಶ್ರೀಯವರು. ಹಿರಿಯಣ್ಣನವರು ಆಗಾಗ್ಗೆ 'ಏನು ಬರೆಯುತ್ತಿದ್ದೀಯೆ?' ಎಂದು ಕೇಳುತ್ತಿದ್ದರು. ಅವರಾಗಲಿ ಶ್ರೀಯವರಾಗಲಿ ಅದುವರೆಗೆ ಹೆಚ್ಚೇನೂ ಬರೆದಿರಲಿಲ್ಲ. ಹಿರಿಯಣ್ಣನವರಾದರೂ ನಾರ್ಮಲ್ ಸ್ಕೂಲಿನಲ್ಲಿದ್ದಾಗ ಬೋಧನಕ್ರಮದ ಮೇಲೆ ಒಂದು ಸಣ್ಣ ಪುಸ್ತಕ ಬರೆದಿದ್ದರು. ಶ್ರೀಯವರು 'ಕನ್ನಡ ಭಾಷೆಯ ವಿಚಾರಗಳು' ಹೊರತು ಏನೂ ಬರೆದಿರಲಿಲ್ಲ. ಆಗ ಪತ್ರಿಕೆಗಳಿದ್ದದ್ದೂ ಅಷ್ಟಷ್ಟೇ—ಕರ್ನಾಟಕ ಗ್ರಂಥಮಾಲೆ, ಕಾವ್ಯ ಮಂಜರಿಯಂಥ ಕೆಲವು ಮಾತ್ರ. ಆದರೆ ಹಿರಿಯಣ್ಣನವರು ಆಗಿನ ಸ್ಥಿತಿಯನ್ನು ಗ್ರಹಿಸಿ 'ನೋಡಪ್ಪ ನಮ್ಮ ಕಾಲ ಬೇರೆ, ಈಗಿನ ಕಾಲ ಬೇರೆ! ನಮ್ಮ ಕಾಲದಲ್ಲಿ ಉಪಾಧ್ಯಾಯನ ಕೆಲಸ ಪಾಠ ಹೇಳುವುದು ಮಾತ್ರ ಎಂದು ಎಲ್ಲರೂ ಭಾವಿಸಿದ್ದರು. ಈಗ ಹಾಗಲ್ಲ; ಏನು ಬರೆದಿದ್ದೀಯೆ, ಏನು ಕೆಲಸ ಮಾಡಿದ್ದೀಯೆ ಎಂದು ಕೇಳುತ್ತಾರೆ; ನೀನೂ ಏನಾದರೂ ಬರೆಯಬೇಕಪ್ಪ' ಎಂದು ಹೇಳುತ್ತಿದ್ದರು. 'ಪತ್ರಿಕೆಗಳನ್ನು ಓದುತ್ತಿರಬೇಕು, ಆಗ ಏನಾದರೂ ಹೊಸ ವಿಷಯ ಹೊಳೆಯುತ್ತದೆ. ಅದರ ಮೇಲೆ ಬರೆಯಬಹುದು' ಎಂದು ಪತ್ರಿಕಾ ಪ್ರಪಂಚಕ್ಕೆ ಪ್ರವೇಶ ಕೊಡಿಸಿದವರು ಅವರು. ........ಅಂದಿನಿಂದ ನನಗೆ ಅದು ಅಭ್ಯಾಸವಾಯಿತು. ೧೯೧೦-೧೧ ರಲ್ಲಿ ಭಾಸನ ನಾಟಕಗಳು ಸಿಕ್ಕಿ ಅವುಗಳ ವಿಚಾರ ನಾನಾ ಪತ್ರಿಕೆಗಳಲ್ಲಿ ಬರಲು ಮೊದಲಾಯಿತು. ನನಗೆ ಪ್ರಾಚ್ಯವಿಚಾರ ಪತ್ರಿಕೆಗಳನ್ನು ಓದುವ ಹುಚ್ಚು ಹಿಡಿಯಿತು. ಯಾವ ವಿಷಯವನ್ನೂ ಆಮೂಲಾಗ್ರವಾಗಿ ವ್ಯಾಸಂಗಮಾಡದೆ, ವಿಮರ್ಶಿಸದೆ ಬರೆಯುವುದಕ್ಕೆ ಮನಸ್ಸು ಬಾರದಂತಾಯಿತು. ನಾನು 'ಭಾಸಕವಿ' 'ಸಂಸ್ಕೃತನಾಟಕ' 'ವಚನ ಭಾರತ'ಗಳನ್ನು ಬರೆದು ಅವರಿಗೆ ಸಮರ್ಪಿಸಿದಾಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ; ಒಂದು ಮಾತನ್ನೂ ಹೆಚ್ಚಾಗಿ ಆಡದಿದ್ದ ಅವರು ಬಾಯಿತುಂಬ ಹೊಗಳಿ ಆಶೀರ್ವದಿಸಿದರು.

ಬಿ. ಎಂ. ಶ್ರೀಕಂಠಯ್ಯನವರಂಥ ಒಬ್ಬ ಸಮರ್ಥರಾದ ವ್ಯಕ್ತಿ ಸರಿಯಾದ ಸ್ಥಾನಕ್ಕೆ ಬಂದಿದ್ದರಿಂದ ಐವತ್ತು ವರ್ಷ ನಾವು ಅದರ ಸತ್ಫಲವನ್ನು ಅನುಭವಿಸಿದ್ದೇವೆ. ಮುಂದೆ ಇನ್ನು ಐವತ್ತು ವರ್ಷವಾದರೂ ಆ ಫಲ ದೊರಕುತ್ತಿರುತ್ತದೆ. ಯಾವದೋ ದೃಷ್ಟಿಯಿಂದ, ಅದರಲ್ಲಿಯೂ ಪ್ರೌಢ ವಿದ್ಯಾಸ್ಥಾನಗಳಲ್ಲಿ ಯಾರು ಯಾರನ್ನೋ ತಂದು ತುಂಬಿದರೆ, ಕಳೆಯೇ ಹೆಚ್ಚಾಗಿ ಬೆಳೆ ಇಲ್ಲದೆ ಹೋಗಬಹುದು. ವಿಶ್ವವಿದ್ಯಾನಿಲಯವು ಧರ್ಮಸತ್ರವಲ್ಲ, ಜ್ಞಾನಕ್ಷೇತ್ರ. ಜ್ಞಾನ ಬೆಳೆಯಬೇಕಾದದ್ದು ಅದರಲ್ಲಿ ಆಸಕ್ತಿ ಅಭಿರುಚಿ ಗಳಿರುವ ಮೇಧಾವಿಗಳಿಂದ ; ಅವರಿಗೆ ಒದಗುವ ಸೌಕರ್ಯಗಳಿಂದ.




ಸತ್ಯ, ಸೌಂದರ್ಯ, ಸ್ವಾತಂತ್ರ್ಯ, ಸಹಾನುಭೂತಿ, ಸರ್ವಸಮತೆ — ಇವೆಲ್ಲಾ ಸದ್ಧರ್ಮದ ಲಕ್ಷಣಗಳು. ಚಿನ್ನದೊಡನೆ ಕೂಡುವುದು ಚಿನ್ನ — ಹಿತ್ತಾಳೆಯಲ್ಲ; ಪಾದರಸದೊಡನೆ ಹೊಂದಿಕೊಳ್ಳುವುದು ಪಾದರಸ, ಕಸವಲ್ಲ. ತೂರಬೇಕು, ಸೋಸಬೇಕು, ಒರೆಗಲ್ಲಿಗೆ ತೀಡಬೇಕು, ನೋಡಬೇಕು. ಎಲ್ಲ ಕಡೆಯಿಂದಲೂ ಒಳ್ಳೆಯದನ್ನು ತುಂಬಿಕೊಳ್ಳಬೇಕು.

—'ವಚನ ಧರ್ಮಸಾರ'ದ ಮುನ್ನುಡಿಯಿಂದ; 'ಶ್ರೀ ಸಾಹಿತ್ಯ'ದಲ್ಲಿ, ಪು. ೩೯೫

ಬಿ. ಜಿ. ಎಲ್. ಸ್ವಾಮಿ



# ಶ್ರೀಯವರೊಡನೆ ಒಂದೂವರೆ ದಿನ*

'ಮರ್ಚೆಂಟ್ ಆಫ್ ವೆನಿಸ್' ನಾಟಕವನ್ನು ನಮಗೆ ಪಾಠ ಹೇಳುತ್ತಿದ್ದವರು ಬಿ. ಎಂ. ಶ್ರೀಕಂಠಯ್ಯನವರು. ಆ ತರಗತಿಯಲ್ಲಿದ್ದವರು ೨೦೦ ಮಂದಿ ವಿದ್ಯಾರ್ಥಿಗಳು ಸಾಧಾರಣವಾಗಿ ನಿಶ್ಯಬ್ದವಾಗಿಯೇ ಇರುತ್ತಿದ್ದರಾದರೂ ಕೆಲವು ಸಲ ಸ್ವಲ್ಪ ಗೊಂದಲ ಕೈಡೆಗೊಡುತ್ತಿದ್ದರು. ಶ್ರೀಯವರು ಆಂಟೋನಿಯೊ ಪಾತ್ರ ವಿಮರ್ಶೆಯನ್ನು ತೆಗೆದುಕೊಂಡ ಸಂದರ್ಭಗಳಲ್ಲಿ ಗುಸು ಗುಂಪಲು ಆರಂಭವಾಗಿ ಪಾಠ ಭಂಗವಾಗು ತ್ತಿತ್ತು. ಹಿಂಬದಿಯ ಬೆಂಚುಗಳಿಂದ ಈ ಅಲೆ ಏಳುತ್ತಿತ್ತು. ಆ ಬೆಂಚುಗಳಲ್ಲಿ ಕುಳಿತುಕೊಳ್ಳುತ್ತಿದ್ದವರೆಲ್ಲ ಸಾಮಾನ್ಯವಾಗಿ ಎರಡು ಮೂರು 'ಢುಂಕಿ' ಹೊಡೆದ ಅನುಭವಸ್ಥರು, ಮತ್ತು ಸಯನ್ಸ್ ಆನರ್ಸ್ ತರಗತಿಗಳವರು. ನಿಜ ಹೇಳಬಹು ದಾದರೆ, ಅಲೆಯೆಬ್ಬಿಸುವುದಕ್ಕೆ ಕಾರಣರಾದವರು 'ಢುಂಕಿ' ಹೊಡೆದವರು ; ಆನರ್ಸ್ ವಿದ್ಯಾರ್ಥಿಗಳಲ್ಲ. (ನಾನೂ ಇವರ ಪೈಕಿಯೇ.)

ಆನರ್ಸ್ ತರಗತಿಯವರು ಹಿಂಬದಿಯ ಬೆಂಚುಗಳಲ್ಲಿ ಕುಳಿತುಕೊಳ್ಳುವುದಕ್ಕೆ ಅನಿವಾರ್ಯವಾದ ಕಾರಣವೊಂದಿತ್ತು. ತಮ್ಮ ತಮ್ಮ ಡಿಪಾರ್ಟ್‌ಮೆಂಟುಗಳಲ್ಲಿ ವಿಹಿತವಾಗಿದ್ದ ಪೀರಿಯಡ್‌ಗಳನ್ನು ಮುಗಿಸಿಕೊಂಡು ಗಣಿತಶಾಸ್ತ್ರ ಭವನದಲ್ಲಿ ನಡೆಯು ತ್ತಿದ್ದ ಇಂಗ್ಲಿಷ್ ತರಗತಿಗೆ ಹೋಗಬೇಕಾಗಿತ್ತು. ಅಲ್ಲಿಗೆ ತಲುಪುವ ವೇಳೆಗೆ ಬಿ.ಎಸ್‌ಸಿ. ತರಗತಿಯ ೧೫೦—೬೦ ಮಂದಿ ಮುಂದಿನ ಬೆಂಚುಗಳಲ್ಲಿ ಕೂತುಬಿಟ್ಟಿರುತ್ತಿದ್ದರು ; ನಿರ್ವಾಹವಿಲ್ಲದೆ ನಾವು ಹಿಂಬದಿಯ ಬೆಂಚುಗಳನ್ನು ಆಕ್ರಮಿಸಿಕೊಳ್ಳಬೇಕಾಗುತ್ತಿತ್ತು. ನಮಗಿಂತಲೂ ಸ್ವಲ್ಪ ಮುಂಚೆ ಬರುತ್ತಿದ್ದ 'ಢುಂಕಿ' ತಂಡದವರು ಹಿಂಬದಿಯ ಬೆಂಚು ಗಳನ್ನೇ ಹಿಡಿಯುತ್ತಿದ್ದರಾದ ಕಾರಣದಿಂದ, ಇವರೂ ಬಿಟ್ಟ ಜಾಗ ಮಾತ್ರ ನಮಗೆ ಸಿಕ್ಕುತ್ತಿತ್ತು. ಒಂದೊಂದು ಸಲ ನಾವು ತರಗತಿಯೊಳಕ್ಕೆ ಕಾಲಿಡುವ ಹೊತ್ತಿಗಾಗಲೇ ಪಾಠ ಪ್ರಾರಂಭವಾಗಿದ್ದದ್ದೂ ಉಂಟು. ಶ್ರೀಯವರು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಆನರ್ಸ್ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಕಟುವಾಗಿಯೇ

* 'ಪಂಚಕಲಶಗೋಪುರ', ಪು. 64–79

ಟೀಕಿಸುತ್ತಿದ್ದರು; "ಹೊತ್ತಾಗಿ ಬರುವುದಾದರೆ ತರಗತಿಗೆ ಬರುವುದೇ ಬೇಡ" ಎಂದೂ ಹೇಳಿದ್ದರು. ಒಟ್ಟಿನಲ್ಲಿ ಸಯನ್ಸ್ ಆನರ್ಸ್ ವಿದ್ಯಾರ್ಥಿಗಳನ್ನು ಕಂಡರೆ ಸ್ವಲ್ಪ "ಹಾಗೆ ಹಾಗೆಯೇ". ಅನೇಕ ಸಲ ನಮ್ಮನ್ನು ತರಗತಿಯಲ್ಲಿ 'Well! You are the picked intelligentsia of this College!" ಎಂದು ವ್ಯಂಗ್ಯವಾಗಿ ನುಡಿಯುತ್ತಿದ್ದರು.

ಆಂಟೊನಿಯೊ ಪಾತ್ರವಿಶ್ಲೇಷಣೆಯಲ್ಲಿ ಶ್ರೀಯವರು ವಾದಮಾಡುತ್ತಿದ್ದದ್ದು ಹೀಗೆ: "ಈತ ಜಂಟಲ್‌ಮನ್, ಸುಸಂಸ್ಕೃತ, ಕುಲೀನ, ಸಂಪನ್ನ, ವಿನಯಶೀಲ, ಯಾರಿಗೂ ಅಪಚಾರ ಮಾಡಿದವನಲ್ಲ, ಕಟುಮಾತುಗಳನ್ನಾಡಿದವನಲ್ಲ," ಇತ್ಯಾದಿ. ಈ ತೆರನಾದ ಅಭಿಪ್ರಾಯ ನಮ್ಮಲ್ಲಿ ಅನೇಕರಿಗೆ ಒಪ್ಪಿಗೆಯಾಯಿತೆನ್ನುವುದರಲ್ಲಿ ಸಂದೇಹವಿಲ್ಲ. ಬೇರೆ ಯಾರ ಬಾಯಿಂದಲೂ ನಾವು ಈ ನಾಟಕವನ್ನು ಅಭ್ಯಾಸ ಮಾಡದೆ ಇದ್ದದ್ದರಿಂದ ನಮಗೆ ಭಿನ್ನಾಭಿಪ್ರಾಯದ ಹಂತಗಳು ತಿಳಿದಿರಲಿಲ್ಲ. 'ಧುಂಕಿ' ಹೊಡೆದವರಿಗೆ ಹಾಗಲ್ಲ. ಬೇರೆ ಬೇರೆ ಕಾಲೇಜುಗಳ ತೀರ್ಥಗಳಲ್ಲಿ ಮಿಂದು, ವಿವಿಧ ಕ್ಷೈವಾಡಗಳ ಊಟಗಳನ್ನು ಉಂಡು, ಆದರೂ ವಿಶ್ವವಿದ್ಯಾಲಯದ ಸ್ವರ್ಗದ್ವಾರವನ್ನು ದಾಟುವುದಕ್ಕೆ ಬೇಕಾದ ಅರ್ಹತೆಯನ್ನು ಪಡೆಯದೆ ಪುನರ್ಜನ್ಮವೆತ್ತಿ, ಸೆಂಟ್ರಲ್ ಕಾಲೇಜಿನೊಂದಿಗಿದ್ದ ಋಣಾನುಬಂಧವನ್ನೂ ತೀರಿಸಿಕೊಳ್ಳುವ ಸಲುವಾಗಿ ಬಂದಿದ್ದ ಯಾತ್ರಿಕರಿಗೆ ಶ್ರೀಯವರ ವಾದಸರಣಿ ರುಚಿಸಲಿಲ್ಲ. ಷೈಲಾಕಿನ ಹೀನ ನಡವಳಿಕೆಗಳಿಗೆ ಆಂಟೋನಿಯೋವೇ ಕಾರಣನೆಂದೂ, ಆಂಟೊನಿಯೋ ಅನೇಕವೇಳೆ ಷೈಲಾಕಿನೊಂದಿಗೆ ನಯದಿಂದ ನಡೆದುಕೊಳ್ಳಲಿಲ್ಲವೆಂದೂ, ಸಾಲಿಗನು ಹಣ ಕೇಳಿದಾಗ ಸಾಲಗಾರನಾದವನು "ನಿನಗೆ ಉಗಿಯುತ್ತೇನೆ" ಎಂದು ಮೊದಲಾಗಿ ನಿಂದನೆಗಳನ್ನಾಡುತ್ತಿದ್ದನೆಂದೂ, ಷೈಲಾಕ್ ಸ್ವಯಂ ತಪ್ಪಿತಸ್ಥನಾಗಿರುವುದಕ್ಕಿಂತಲೂ ತಪ್ಪಿತವನ್ನು ಹೊರಿಸಲ್ಪಟ್ಟವನಾಗಿರುವನೆಂದೂ 'ಧುಂಕಿ' ಹೊಡೆದವರಿಗೆ ಪಾಠವಾಗಿತ್ತಂತೆ. ಶ್ರೀಯವರು ಷೈಲಾಕನ್ನೋ ಆಂಟೊನಿಯೊವನ್ನೋ ಕುರಿತು ಮಾತನಾಡುವುದಕ್ಕೆ ಆರಂಭಿಸಿದಾಗೆಲ್ಲ ಈ ವಿದ್ಯಾರ್ಥಿಗಳು ಗುಸುಗುಸುತೆರೆಗಳನ್ನೆಬ್ಬಿಸುತ್ತಿದ್ದರು. ಈ ನಿಜಾಂಶವನ್ನು ಶ್ರೀಯವರು ಅರಿಯದೆ ಹೋದದ್ದು ನಮ್ಮ ದೌರ್ಭಾಗ್ಯ. ಒಂದು ಸಲ ನನ್ನನ್ನು ತಮ್ಮ ರೂಮಿಗೆ ಕರೆದು, ಒಂದರ್ಧ ಗಂಟೆ ಮಾತನಾಡಿದರು, ಎಂದರೆ ಕಠಿಣವಾಗಿ ದಂಡಿಸಿದರು—"ನಿನ್ನ ಸ್ನೇಹಿತರು ಯೋಗ್ಯವಾದ ದಾರಿಯಲ್ಲಿ ನಡೆಯುವಂತೆ ಮಾಡುವುದು ನಿನ್ನ ಭಾರ" ಎಂದುಬಿಟ್ಟರು. ನನಗೆ ನಿಜವಾಗಿಯೂ ಆಪತ್ತು ಬಂದಂತಾಯಿತು. ಸಂಕಟದಲ್ಲಿ ಸಿಕ್ಕಿಬಿದ್ದೆ.

ಅದೃಷ್ಟವಶಾತ್ ಮುಂದಿನ ಮೂರು ನಾಲ್ಕು ಪಾಠಗಳಲ್ಲಿ ಯಾವೊಂದು ಅಡಚಣೆಯೂ ಬರಲಿಲ್ಲ. ಪೋರ್ಷಿಯಾ ಪಾತ್ರ ವಿಶ್ಲೇಷಣೆ ನಡೆಯಿತು. ಈ ಪಾಠಗಳಲ್ಲಿ ಹಿಂಬದಿಯ ಬೆಂಚಿನವರಿಗೆ ಭಿನ್ನಾಭಿಪ್ರಾಯವಿರಲಿಲ್ಲವಾದದ್ದರಿಂದ ಗದ್ದಲವೇರ್ಪಡಲಿಲ್ಲ. ಒಂದು ಸಲ ಮಾತ್ರ ಆರ್ಮುಗಂ—ಚೇಪೇಕಾಯನ್ನು ಕಚ್ಚಿ ತಿನ್ನುತ್ತಿದ್ದವನು—ಹಾಗೆಯೇ ಎದ್ದು ನಿಂತುಕೊಂಡು, "ಹೆಂಗಸು ಗಂಡಸಿನ ವೇಷ ತೊಟ್ಟುಕೊಂಡು ನ್ಯಾಯಾಲಯದಲ್ಲಿ ವಾದಮಾಡಿದ್ದು ತಪ್ಪಲ್ಲವೆ? ಹೀಗೆ ಮಾಡಿದ್ದರಿಂದ ಪೋರ್ಷಿಯಾ ನ್ಯಾಯಕ್ಕೂ ನ್ಯಾಯಾಲಯಕ್ಕೂ ಮೋಸಮಾಡಿದಂತಾಗಲಿಲ್ಲವೆ? ಷೈಲಾಕನ್ನು ಮೋಸದಿಂದ ಗೆದ್ದಹಾಗಾಗಲಿಲ್ಲವೆ? ಅದೂ ಹೋಗಲಿ, ನಿಜವಾದ ಗಂಡಸಿಗೂ ಗಂಡು ವೇಷ ಧರಿಸಿದ ಹೆಂಗಸಿಗೂ ವ್ಯತ್ಯಾಸವರಿಯದೆ ಹೋದ ಆ ನ್ಯಾಯಾಧಿಪತಿ ಎಂಥ ಪೆದ್ದ? ನ್ಯಾಯಾನ್ಯಾಯಗಳನ್ನು ನಿರ್ಣಯಿಸುವುದಕ್ಕೆ ಇಂಥವನು ಯೋಗ್ಯನೆ? ಅದೂ ಹೋಗಲಿ. ಸಾಮಾನ್ಯ ನಿತ್ಯ ಜೀವನದಲ್ಲಿ ಹೆಂಗಸು ಗಂಡಸಿನ ವೇಷ ಹಾಕಿಕೊಂಡು ಸಾರ್ವಜನಿಕ ಕಾರ್ಯಗಳಲ್ಲಿ ಪಾಲುಗೊಳ್ಳುವುದು ಎಲ್ಲಿಯಾದರೂ ಕಂಡು ಬರುತ್ತದೆಯೆ? ಷೇಕ್ಸ್‌ಪಿಯರಿಗೆ ಜನತೆಯ ಜ್ಞಾನ ಸಾಲದೆಂಬುದಕ್ಕೆ ಇದೊಂದು ನಿದರ್ಶನವಲ್ಲವೆ?" ಎಂದು ಕೇಳಿಬಿಟ್ಟ. ಆರ್ಮುಗಂ ಹೀಗೆ ಮಾತನಾಡುತ್ತಿದ್ದಾಗ ಅಕ್ಕಪಕ್ಕಗಳಲ್ಲಿದ್ದವರು ಅವನ ಕೋಟನ್ನೆಳೆದು ಕುಳ್ಳಿರಿಸುವುದಕ್ಕೆ ಪಟ್ಟ ಪ್ರಯತ್ನವೆಲ್ಲ ವ್ಯರ್ಥವಾಯಿತು. ಶ್ರೀಯವರ ಮುಖಚರ್ಯೆ ಬದಲಾಯಿಸಿತು. "ತಿನ್ನುತ್ತಿರುವುದನ್ನು ತರಗತಿಯಿಂದ ಹೊರಗೆ ಹೋಗಿ ಪೂರ್ತಿ ತಿಂದು ಬನ್ನಿ. ಈಗ ದಯವಿಟ್ಟು ಹೊರಕ್ಕೆ ಹೋಗಿ ಬಿಡಿ" ಎಂದರು. ಆರ್ಮುಗಂ ಹಾಗೆಯೇ ಮಾಡಿದ; ಆದರೆ ಪುನಃ ತರಗತಿಯೊಳಕ್ಕೆ ಬರಲಿಲ್ಲ.

ಈ ಪ್ರಕರಣಕ್ಕೆ ನಾನು ಪರೋಕ್ಷವಾಗಿ ಆಸರೆ ಕೊಟ್ಟೆನೋ ಏನೋ ಎಂಬ ಅಳುಕು ನನ್ನನ್ನು ಆಗಾಗ ಬಾಧಿಸುತ್ತದೆ. ಯಾವುದೋ ಒಂದು ಸಮಯದಲ್ಲಿ ಕುಚೇಷ್ಟೆಗಾಗಿ ಆರ್ಮುಗಂ ಹೇಳಿದ ವಾದಸರಣಿಯನ್ನು ಕೆಲವು ಗೆಳೆಯರೆದುರಿಗೆ ಎತ್ತಿದ್ದೆ. ಇದು ಕೇವಲ ಹುಡುಗಾಟಕ್ಕಾಗಿ ಮಾಡಿದ ವಿತಂಡವಾದ. ಆರ್ಮುಗಂ ಅದನ್ನು ಹೀಗೆ ಈ ಸಂದರ್ಭದಲ್ಲಿ ಉಪಯೋಗಿಸಿಕೊಂಡದ್ದು ನನಗೆ ಆಶ್ಚರ್ಯ, ವ್ಯಾಕುಲ. ಶ್ರೀಯವರ ವಿಷಯದಲ್ಲಿ ನಮಗೆ ಗೌರವವಾಗಲಿ ಪೂಜ್ಯ ಭಾವವಾಗಲಿ ಇರಲಿಲ್ಲವೆಂದು ಯಾರೂ ತಿಳಿಯಬಾರದು. ಪಾಠದ ವೇಳೆಗಳಲ್ಲಿ ಸ್ವಲ್ಪ ಹುಡುಗುತನದ ಪ್ರದರ್ಶನ ಮಾಡುತ್ತಿದ್ದೆವೇ ಹೊರತು ಅವರ ಘನತೆಗೂ ವ್ಯಕ್ತಿತ್ವಕ್ಕೂ ಕುಂದು ಬರುವಂತೆ ಯಾವಾಗಲೂ ನಡೆದುಕೊಂಡದ್ದಿಲ್ಲ. ಇನ್ನೂ ಹೇಳಬಹುದಾದರೆ, ಶ್ರೀಯವರು ನಡೆಸುತ್ತಿದ್ದ 'ಸೆಮಿನಾರ್'ಗಳಿಗೆ ತಪ್ಪದೆ ಹೋಗಿ, ಅದರ ಎಲ್ಲ ಕಾರ್ಯಕಲಾಪ

ಗಳಲ್ಲಿಯೂ ಪೂರ್ಣವಾಗಿ ಭಾಗವಹಿಸುತ್ತಿದ್ದ ವಿದ್ಯಾರ್ಥಿಗಳೇ ನಾವು,—'ಘುಂಕಿ' ತಂಡದವರು, ಸಯನ್ಸ್ ಆನರ್ಸ್ ವಿದ್ಯಾರ್ಥಿಗಳು. ಸೆಂಟ್ರಲ್ ಕಾಲೇಜಿನಲ್ಲಿ ಆನರ್ಸ್ ವಿದ್ಯಾರ್ಥಿಗಳಾಗಿದ್ದಷ್ಟು ಕಾಲವೂ (ಮೂರು ವರ್ಷಗಳು) ಈ 'ಸೆಮಿನಾರ್'ಗಳಿಗೆ ಕಾರ್ಯದರ್ಶಿಯಾಗಿಯೋ, ಸಹಕಾರ್ಯದರ್ಶಿಯಾಗಿಯೋ, ಹಂಗಾಮಿ ಕಾರ್ಯದರ್ಶಿಯಾಗಿಯೋ, ಕೆಲಸ ನೋಡಿದವರೆಲ್ಲ ನಮ್ಮ ಗುಂಪಿನವರೇ. ಈ 'ಗುರುಕುಲ'ದ ವೇಳೆಗಳಲ್ಲಿ ಶ್ರೀಯವರ ಪಾಂಡಿತ್ಯವನ್ನೂ ವಾಗ್ಮಿತೆಯನ್ನೂ ಕಂಡು ಅವರ ದಾಸರಾಗಿಬಿಟ್ಟಿದ್ದೆವು. ಆದರೂ ನಮ್ಮಲ್ಲಿ ಕೆಲವರಿಗೆ ಅವರ ಮೃದುಸ್ವಭಾವವನ್ನು ಕೆಣಕಿ, ಅವರನ್ನು ಚೆನ್ನಾಗಿ ರೇಗಿಸಿ, ತನ್ಮೂಲಕ ಅವರ ಬಾಯಿಂದ ಹೊರಬರುವ ವಾಕ್ಝರಿಯನ್ನು ಕೇಳಬೇಕೆಂಬ ಕುತೂಹಲ ಬಲವಾಗಿತ್ತು. ಇದನ್ನು ಆಗಮಾಡಿಸುವುದಕ್ಕೆ 'ಸೆಮಿನಾರ್' ತಕ್ಕ ಸ್ಥಳವಲ್ಲವೆಂದೂ, ತರಗತಿಯೇ ಫಲವತ್ತಾದ ಜಾಗವೆಂದೂ ನಿರ್ಣಯಿಸಿಕೊಂಡಿದ್ದೆವು. ಆರ್ಮುಗಂ ಕಾರ್ಯೋನ್ಮುಖನಾದದ್ದು ಈ ಹಿನ್ನೆಲೆಯಿಂದ. ಕಾರ್ಯ ಸಾಧನೆಯಾಗದೆ ಹೋದದ್ದರಿಂದ ನಮಗೆಲ್ಲ ಕೊಂಚ ನಿರಾಶೆಯಾಯಿತೆಂದೇ ಹೇಳಬೇಕು.

ಕೆಲವು ದಿನಗಳ ತರುವಾಯ ಪಾಠದಲ್ಲಿ ಮರಳಿ ಆಂಟೊನಿಯೊ ಪ್ರಸ್ತಾಪ ಬಂತು. ಶ್ರೀಯವರು ತಮ್ಮ ಪದ್ಧತಿಯ ಪ್ರಕಾರ ಪಾತ್ರ ವಿಶ್ಲೇಷಣೆ ಮಾಡಲಾರಂಭಿಸಿದರು. 'ಘುಂಕಿ' ಹೊಡೆವ ಪಂಗಡದ ಮುಖ್ಯಸ್ಥನಾಗಿದ್ದ ರಂಗಪ್ಪ ನಡುವೆ ಎದ್ದುನಿಂತು ತನ್ನ ಕಕ್ಷಿಯನ್ನಾರಂಭಿಸಿಬಿಟ್ಟ. ಶ್ರೀಯವರ ಮುಖದ ಮೇಲೆ ನಸುನಗೆ ಮೂಡಿತೇ ಹೊರತು ಕೋಪ ಕಾಣಲಿಲ್ಲ. ಒಂದೆರಡು ಸಮಾಧಾನದ ಮಾತು ಹೇಳಿದರು. ರಂಗಪ್ಪ ಅದಕ್ಕೂ ವಿತಂಡದ ಕೋಟಿ ಹಾಕಿ ಮೊಂಡಾಟ ಮಾಡಿದ. ಶ್ರೀಯವರ ನಗೆ ಮಾಯವಾಗಿ ಹುಬ್ಬು ಸ್ವಲ್ಪ ಗಂಟಿಟ್ಟಿತು. ನಮ್ಮ ಕಾರ್ಯ ಕೈಗೂಡಿತೆಂದುಕೊಂಡೆವು. ಅದುವರೆಗೂ ಇಂಗ್ಲಿಷಿನಲ್ಲಿ ಮಾತನಾಡುತ್ತಿದ್ದ ಶ್ರೀಯವರು ಇದ್ದಕ್ಕಿದ್ದಂತೆಯೆ ಕನ್ನಡದಲ್ಲಿ, "ನಿಮಗೆ ಸೂಕ್ಷ್ಮ ವಿಚಾರಗಳು ತಿಳಿಯುವುದಿಲ್ಲ. ಅವನ್ನು ಅರ್ಥಮಾಡಿಕೊಳ್ಳುವುದಕ್ಕೆ ನೀವು ಇಷ್ಟಪಡುವುದೂ ಇಲ್ಲ. ನಿಮಗೆ ಬೇಕಾದಂತೆಯೇ ಇಟ್ಟುಕೊಂಡುಬಿಡಿ. ಆಂಟೋನಿಯೊ ನನ್ನ ಮಗನೇನೂ ಅಲ್ಲ, ತಮ್ಮನೂ ಅಲ್ಲ, ಅಳಿಯನೂ ಅಲ್ಲ!" ಎಂದುಬಿಟ್ಟು ಪಾಠವನ್ನು ಮುಂದುವರಿಸಿದರು. ಈ ಕೊನೆಯ ಮಾತುಗಳನ್ನು ಕೇಳಿ ತರಗತಿಯಲ್ಲಿದ್ದವರೆಲ್ಲ ಘೊಳ್ಳೆಂದು ನಕ್ಕುಬಿಟ್ಟರು. ಹಿಂಬದಿಯ ಬೆಂಚುಗಳಲ್ಲಿದ್ದ ನಮಗೆ ಇದರಿಂದ ಒಂದು ವಿಧದಲ್ಲಿ ಅವಮಾನವೂ ಆಯಿತು, ಉದ್ದೇಶಭಂಗದಿಂದ ನಿರಾಶೆಯೂ ಆಯಿತು. ಇಂಥ ಪ್ರಯತ್ನಗಳನ್ನು ಪುನಃ ಮಾಡಹೋಗಲಿಲ್ಲ.

ಶ್ರೀಯವರು ಆಗಾಗ 'ಕನ್ನಡದ ನಾಡುಗಳ ಸಿರಿಯ ನೋಡುತ್ತ, ತಾಯಡಿಯ ಹುಡಿಯ ತಲೆಗಾನುತ್ತ, ಹರಕೆಯ ಪವಿತ್ರಯಾತ್ರೆ' ಮಾಡಿ 'ಒಸಗೆನುಡಿ'ಯನ್ನು ತರುತ್ತಿದ್ದರು. ಇಂಥ ಯಾತ್ರೆಗಳಾದ ಬಳಿಕ ಕರ್ಣಾಟಕ ಸಂಘದಲ್ಲಿ ಶ್ರೀಯವರ ಒಂದು ಉಪನ್ಯಾಸವನ್ನು ಏರ್ಪಡಿಸುವುದು ವಾಡಿಕೆ. ಈ ಸಲ ಹೈದರಾಬಾದು ಕರ್ಣಾಟಕ, ಅಜಂತ, ಎಲ್ಲೋರಗಳನ್ನು ನೋಡಿ ಬಂದಿದ್ದರು. ಕೃಷ್ಣಶಾಸ್ತ್ರಿಗಳವರು 'ಹೋಗಿ ಕೇಳಿ, ಒಂದು ದಿನವನ್ನು ಗೊತ್ತು ಮಾಡಿಬಿಡು' ಎಂದರು.

"ಯಾವ ವಿಷಯವೆಂದು ಕೇಳಲಿ, ಸರ್ ?"

"ನೀನು ಏನನ್ನು ಕೇಳಬೇಕು ಅಂತೀಯ ?"

"ಈಗ ಕರ್ಣಾಟಕ ಏಕೀಕರಣ ಪ್ರಶ್ನೆ ಪ್ರಕೃತವಾಗಿದೆಯಲ್ಲ, ಸರ್. ಇದರ ವಿಷಯವನ್ನೆತ್ತಿಕೊಂಡು ಹೈದರಾಬಾದು ಕರ್ಣಾಟಕದ ಸ್ಥಾನಮಾನವನ್ನು ವಿಚಾರ ಮಾಡಿದರೆ...."

"ಸರಿಯೆ. ಆದರೆ ಅವರೇನು ಹೇಳುತ್ತಾರೋ ? ನೀನು ಹೇಳುವ ವಿಷಯಕ್ಕೆ ಸ್ವಲ್ಪ ಪೊಲಿಟಿಕಲ್ ಛಾಯೆ ಬರುತ್ತದೆ. ಅವರೇನೆನ್ನುವರೋ ?"

"ಹಾಗಿದ್ದರೆ ಅವರಿಗೇ ಬಿಟ್ಟುಬಿಡುತ್ತೇನೆ, ಸರ್."

ಮಾರನೆಯ ದಿನ ಶ್ರೀಯವರನ್ನು ಕಂಡು, ವಿಷಯ ಬಿನ್ನವಿಸಿಕೊಂಡೆ.

"ಕರ್ಣಾಟಕ ಸಂಘದ ಕಾರ್ಯದರ್ಶಿ ಬಂದು ಕೇಳಿದರೆ ಒಲ್ಲೆನೆನ್ನುತ್ತೇನೆಯೆ ? ಯಾವ ವಿಷಯ ಮಾತನಾಡಬೇಕು ?"

"ತಮ್ಮ ಈಚಿನ ಪ್ರವಾಸವನ್ನು ಕುರಿತು ಏನಾದರೂ ಹೇಳಬಹುದು, ಸರ್. ಇಲ್ಲವೆ, ಏಕೀಕರಣದಲ್ಲಿ ಹೈದರಾಬಾದು ಕರ್ಣಾಟಕ...."

ಸ್ವಲ್ಪ ಯೋಚನೆಮಾಡಿ, "ಈ ವಿಷಯವನ್ನು ಕುರಿತು ನಾಳೆ ಪರಿಷತ್ತಿನಲ್ಲಿ ಮಾತನಾಡುತ್ತೇನೆ. ಸಂಘದಲ್ಲಿಯೂ ಅದನ್ನೇ ಹೇಳಿದರೆ ಚರ್ವಿತಚರ್ವಣವಾಗುವುದಿಲ್ಲವೆ ?" ಎಂದರು.

ನಾನು ಏನನ್ನೂ ಹೇಳಲಿಲ್ಲ. ಬಳಿಕ ಅವರೇ "ಅಜಂತ ಗುಹೆಗಳ ಭಿತ್ತಿಚಿತ್ರಗಳನ್ನು ಕುರಿತು ಎರಡು ಮಾತು ಹೇಳುತ್ತೇನೆ. ನೀವಾರೂ ಇವುಗಳನ್ನು ನೋಡಿರಲಾರಿರಿ. ತಿಳಿದುಕೊಳ್ಳಬೇಕಾದ ವಿಷಯ ಇದು" ಎಂದರು.

ಇದನ್ನು ಕೇಳಿದೊಡನೆ ನನಗೆ ಒಂದು 'ಥರ' ಆಯಿತು. ಏನೋ ಮಾಡುವುದಕ್ಕೆ ಹೋಗಿ ಇನ್ನೇನೋ ಆಯಿತಲ್ಲ ಎಂದು ತಳಮಳಗೊಂಡಿತು. ಅಜಂತ ಚಿತ್ರಕಲೆಯ ಪರಿಚಯವನ್ನೂ ವಿಮರ್ಶೆಯನ್ನೂ ಮಾಡುವುದಕ್ಕೆ ಬೇರೆ ಜನರಿಲ್ಲವೆ ಎಂದೂ ಎನ್ನಿಸಿತು. ಆದರೆ ಮರುಮಾತನಾಡುವುದಕ್ಕೆ ಧೈರ್ಯವಿಲ್ಲದೆ ಒಪ್ಪಿಕೊಂಡು ಬಂದು

ಕೃಷ್ಣಶಾಸ್ತ್ರಿಗಳವರಿಗೆ ನಡೆದ ವಿಷಯವನ್ನೆಲ್ಲ ಹೇಳಿದೆ. "ಸರಿ, ಆದದ್ದಾಯಿತು. ನೋಟೀಸು ಪ್ರಿಂಟು ಮಾಡಿಸಿಬಿಡು" ಎಂದರು. ಅಧ್ಯಕ್ಷರೂ, ಉಪಾಧ್ಯಕ್ಷರೂ ಒಪ್ಪಿಯಾದ ಮೇಲೆ ಕಾರ್ಯ ನಡೆಸುವುದು ತಾನೆ ಕಾರ್ಯದರ್ಶಿಯ ಜವಾಬ್ದಾರಿ!

ಭಾಷಣ ಆರಂಭವಾದದ್ದು ಸಂಜೆ ಐದೂಕಾಲು ಗಂಟೆಗೆ, ಗಣಿತಶಾಸ್ತ್ರ ಭವನ ದಲ್ಲಿ. ಸಭಾಂಗಣ ಪ್ರೇಕ್ಷಕರಿಂದ ತುಂಬಿತ್ತು. ಇನ್ನೂ ಮುನ್ನುಡಿ ಮುಗಿದಿರಲಿಲ್ಲ. ಎಂಟು ಗಂಟೆಯಾಗಾಗತಾನೆ ಚಿತ್ರಗಳ ವಿಶದೀಕರಣ ಆರಂಭವಾಯಿತು. ಗ್ರಿಫಿತ್, ಹ್ಯಾರಿಂಗ್‌ಹ್ಯಾಮ್, ಯಜದಾನಿ ಮೊದಲಾದವರ ಪ್ರಕಟಣೆಗಳಿಂದ ಒಂದೊಂದು ಚಿತ್ರವನ್ನು ಎಪಿಡಿಯಾಸ್ಕೋಪಿನ ಮೂಲಕ ತೆರೆಯ ಮೇಲೆ ಕಾಣಿಸಿ, ಆಯಾ ಚಿತ್ರಗಳ ವಸ್ತುವಾಗಿದ್ದ ಜಾತಕ ಕಥೆ, ಬೌದ್ಧ ಧರ್ಮಸೂತ್ರಗಳ ವಿಶದೀಕರಣ, ಬುದ್ಧನ ಹಿರಿಮೆ ಮೊದಲಾದವುಗಳ ದೀರ್ಘ ಜಿಜ್ಞಾಸೆಗಳು ಬೆಳೆಯುತ್ತ ಒಂದವು. ಒಂಬತ್ತು ಗಂಟೆ ವೇಳೆಗೆ ಐದೋ ಆರೋ ಚಿತ್ರಗಳ ಪರಿಚಯ ಮುಗಿದಿತ್ತು; ಸಭಾಂಗಣ ಮುಕ್ಕಾಲುಪಾಲು ಖಾಲಿಯಾಗಿತ್ತು. ಶ್ರೀಯವರ ಹುಮ್ಮಸ್ಸು ಕುಗ್ಗಲಿಲ್ಲ. ಸಭೆಯಲ್ಲಿ ಉಳಿದಿದ್ದವರು ಬಹುಭಾಗ ಅವರ ಶಿಷ್ಯವರ್ಗಕ್ಕೆ ಸೇರಿದ್ದವರು, ಮತ್ತು ಸೆಂಟ್ರಲ್ ಕಾಲೇಜ್ ಹಾಸ್ಟಲ್‌ನಲ್ಲಿದ್ದವರು. ಹಾಸ್ಟಲಿನವರು ಗೊಣಗಲಾರಂಭಿಸಿದರು. ಒಂಬತ್ತೂವರೆ ಗಂಟೆಯೊಳಗಾಗಿ ಹಾಸ್ಟಲಿನಲ್ಲಿದ್ದವರಿಗೆ ಮಾತ್ರ ಊಟ; ಇದಕ್ಕಿಂತ ಹೊತ್ತಾಗಿ ಹೋದವರಿಗೆ ಉಪವಾಸ; ಹೀಗಿತ್ತು ಅಲ್ಲಿನ ನಿಯಮ. ಆದ್ದರಿಂದ ಇವರು "ಲೋ ಸ್ವಾಮಿ, ನಮ್ಮನ್ನು ಉಪವಾಸ ಹಾಕಿಸುವ ಪಾಪವನ್ನು ಬೇರೆ ಹೊತ್ತು ಕೊಳ್ಳುತ್ತೀಯಲ್ಲೊ! ನಿನ್ನನ್ನು ನೋಡಿದರೆ ನಮಗೆ ಅಯ್ಯೋ ಎನ್ನಿಸುತ್ತದೆ. ನೀನೂ ಬಾ, ಊಟಮಾಡಿಬಿಟ್ಟು ನಾವು ಬೆಚ್ಚಗೆ ಮಲಗಿಕೊಳ್ಳುತ್ತೇವೆ. ನೀನು ಬೇಕಾದರೆ ತಿರುಗಿ ಬರುವೆಯಂತೆ" ಎಂದು ಹೇಳಿ ಸಣ್ಣ ಸಣ್ಣ ಗುಂಪುಗಳಲ್ಲಿ ಹೊರಟುಹೋಗಲು ಮೊದಲು ಮಾಡಿದರು. ನಾನು ಎಷ್ಟೆಷ್ಟೋ ಗೋಗರೆದೆ—ಒಂದು ದಿನ ಹೇಗಾದರೂ ಇದ್ದುಬಿಡಿ ಎಂದು. ನನ್ನ ಹೊಟ್ಟೆಯೇ ಚೋಟ್ಟೆಯಿಡುತ್ತಿದ್ದಾಗ ಇತರರನ್ನು ಹೀಗೆ ಕೇಳಿಕೊಳ್ಳುವುದು ಸರಿಯೇ—ಎನ್ನಿಸಿತು. ನನ್ನೊಂದಿಗೆ ಸಹಕಾರ್ಯದರ್ಶಿಯಾಗಿದ್ದ ವಿಶ್ವೇಶ್ವರಯ್ಯ (ಹಾಸ್ಟಲಿನಲ್ಲಿಯೇ ಇದ್ದವರು) ಕೂಡ "ವಿಪರೀತ ಹಸಿವಾಗುತ್ತಿದೆ. ಹೊತ್ತೂ ಆಗಿದೆ. ಬನ್ನಿ, ಹಾಸ್ಟಲಿಗೆ ಹೋಗಿ ಊಟಮಾಡಿಕೊಂಡು ತಿರುಗಿ ಬರೋಣ. ಭಾಷಣ ಇನ್ನೂ ನಡೆಯುತ್ತಲೇ ಇರುತ್ತದೆ" ಎಂದು ಆಶಾವಾದಿಯಾದರು. ಊಟ ಮಾಡಿಕೊಂಡು ಬರುವ ವೇಳೆಗೆ ಒಂಬತ್ತೂ ಮುಕ್ಕಾಲು ಗಂಟೆಯಾಗಿತ್ತು. ಶ್ರೀಯವರ ಭಾಷಣ ಅದುವರೆಗೂ ನಡೆದು ಬಂದಿದ್ದ ರೀತಿಯಲ್ಲಿಯೇ ಇನ್ನೂ ನಡೆಯು ತ್ತಿತ್ತು. ಒಬ್ಬರ ಮುಖವನ್ನೊಬ್ಬರು ನೋಡಿಕೊಂಡೆವು. ಸಭಾಂಗಣವನ್ನು

ನೋಡಿದೆವು ; ಒಂದು ಹತ್ತು ಜನ ಮಾತ್ರ ಉಳಿದಿದ್ದರು. ಅವರಲ್ಲಿಬ್ಬರು ಕೂಕಿಡೆ ಯಲ್ಲಿಯೇ ತೂಕಡಿಸುತ್ತಿದ್ದರು. ಹತ್ತು ಗಂಟೆಯಾಯಿತು. ಅನಿರೀಕ್ಷಿತವಾಗಿ ಎಪಿಡಿಯಾಸ್ಕೋಪಿನ ಬೆಳಕು ನಂದಿ ಹೋಯಿತು. ರಿಪೇರಿಮಾಡುವ ಉದ್ದೇಶದಿಂದ ಸಭಾಂಗಣದ ದೀಪಗಳನ್ನು ಹೊತ್ತಿಸಿದೆವು. ಬಲ್ಬೇ 'ಬರ್ನ್' ಆಗಿತ್ತು. ಶ್ರೀಯವರಿಗೆ ತಿಳಿಸಿದೆವು. ಅವರು ಸಭಾಂಗಣವನ್ನು ಸಿಂಹಾವಲೋಕನಮಾಡಿ "ಎಲ್ಲರೂ ಹೋದಂತಿದೆ ?" ಎಂದರು. ನಾವು ಅರ್ಥಗರ್ಭಿತವಾಗಿ ಒಬ್ಬರನ್ನೊಬ್ಬರು ನೋಡಿ ಕೊಂಡೆವು. ಶ್ರೀಯವರು "ಹೇಳಬೇಕಾದದ್ದು ಇನ್ನೂ ಬೇಕಾದಷ್ಟಿದೆ. ಕಾರ್ಯದರ್ಶಿ ಗಳು ಸಭೆಯನ್ನು ಇನ್ನೊಂದು ದಿನಕ್ಕೆ ಮುಂದುವರಿಸಬಹುದು" ಎಂದರು. ಬೀಸುವ ದೊಣ್ಣೆ ತಪ್ಪಿತಲ್ಲ ! ವಿಶ್ವೇಶ್ವರಯ್ಯ ಧನ್ಯವಾದ ಸಮರ್ಪಣೆಗೆ ಎದ್ದು ನಿಂತರು. ಶ್ರೀಯವರು "ಈಗೇನಪ್ಪ ಅವಸರ, ಅರ್ಧದಲ್ಲಿ ? ಉತ್ತರಾರ್ಧದ ಕಾರ್ಯಕ್ರಮ ಮುಗಿದ ಮೇಲೆ ಮಾಡುವೆಯಂತೆ" ಎಂದುಬಿಟ್ಟರು.

ಈ ಕಾರ್ಯಕ್ರಮ ನಡೆದ ಮೇಲೆ ಸಂಘದ ಆಶ್ರಯದಲ್ಲಿ ಐದಾರು ಸಭೆಗಳು ನಡೆದವು. 'ಉತ್ತರಾರ್ಧ' ನಡೆಯುವ ಯೋಗ ಬರಲಿಲ್ಲ. ಅಪೂರ್ಣವಾಗಿ, ಧನ್ಯವಾದ ಸಮರ್ಪಣೆಯಿಲ್ಲದೆ ನಡೆದ ಕಾರ್ಯಕ್ರಮ ಸಂಘದ ಚರಿತ್ರೆಯಲ್ಲಿ ಇದೊಂದೇ ಎಂದು ನನ್ನ ಎಣಿಕೆ.

1937ರಲ್ಲಿ ವಿಜಯನಗರದ ಷಟ್‌ಶತಮಾನೋತ್ಸವ ನಡೆಯಿತು, ಹಂಪೆಯಲ್ಲಿ. ಕೃಷ್ಣಶಾಸ್ತ್ರಿಗಳವರು "ಸ್ವಾಮಿ, ಹಂಪೆ ನೋಡಿದ್ದೀಯ ?" ಎಂದರು. ತಲೆ ಅಲ್ಲಾಡಿ ಸಿದೆ. "ಸಂಘದ ಪರವಾಗಿ ಹೋಗಿ ಬರುತ್ತೀಯೋ ? ನಿನ್ನ ಪ್ರಯಾಣದ ವೆಚ್ಚ, ಅಲ್ಲೊಂದೆರಡು ಮೂರು ದಿನಗಳಿಗೆ ತಗಲುವ ವೆಚ್ಚ, ಸಂಘದಿಂದ ಕೊಡಿಸುತ್ತೇನೆ. ಹಾಗೆಯೇ ಸಂಘದ ಕಾಣಿಕೆಯಾಗಿ ಸ್ವಲ್ಪ ಹಣ ಕೊಡುತ್ತೇನೆ ; ಅದನ್ನೂ ಸಮಾರಂಭ ಸಮಯದಲ್ಲಿ ಸಂಘದ ಪರವಾಗಿ ಕೊಟ್ಟುಬಿಡುವಿಯಂತೆ" ಎಂದರು. ನನಗೆ ಸ್ವರ್ಗ ಸಿಕ್ಕಿದಂತಾಯಿತೆಂದು ಪ್ರತ್ಯೇಕವಾಗಿ ಹೇಳಬೇಕೇನು !

ಬೆಂಗಳೂರಿನಿಂದ ಹೊರಟ ರೈಲಿನಲ್ಲಿ ಸಂಘದ ಅಧ್ಯಕ್ಷರೂ ಪ್ರಯಾಣ ಮಾಡಿದರು. ರೈಲು ಹತ್ತುವ ಮುನ್ನ "ಹುಬ್ಬಳ್ಳಿಯಲ್ಲಿ ಇಳಿದುಬಿಡು, ಅಲ್ಲಿಂದ ನನ್ನ ಜತೆಗಿದ್ದುಬಿಡು. ಅಲ್ಲಿ ಒಂದೆರಡು ಸಣ್ಣ ಕೆಲಸಗಳಿವೆ. ಅವನ್ನು ಮುಗಿಸಿಕೊಂಡು ಗದಗು ಹೊಸಪೇಟೆಗಳ ಮಾರ್ಗವಾಗಿ ಹಂಪೆಗೆ ಹೋಗೋಣ" ಎಂದರು.

ಹುಬ್ಬಳ್ಳಿಯನ್ನು ಸೇರುವಷ್ಟು ಹೊತ್ತಿಗೆ ಮಧ್ಯಾಹ್ನ ಸುಮಾರು ಒಂದು ಗಂಟೆಯಾಯಿತು. ಶ್ರೀಯವರನ್ನು ಎದುರುಗೊಳ್ಳಲು ಮೂವತ್ತು ನಲವತ್ತು ಜನ ನಿಲ್ದಾಣಕ್ಕೆ ಬಂದಿದ್ದರು. ಅನೇಕರು ಹಾರ ತುರಾಯಿ ನಿಂಬೆಹಣ್ಣುಗಳನ್ನು ಶ್ರೀ

ಯವರಿಗೆ ಅರ್ಪಿಸಿದರು. ಶ್ರೀಯವರು ಬಂದಿದ್ದವರಿಗೆ "ನಮ್ಮ ಕಾಲೇಜು ಕರ್ಣಾಟಕ ಸಂಘದ ಕಾರ್ಯದರ್ಶಿ" ಎಂದು ನನ್ನ ಪರಿಚಯ ಹೇಳುತ್ತಿದ್ದರು. ನನ್ನ ತಲೆ ಭುಜದ ಮೇಲಿನಿಂದ ಎರಡಡಿ ಎತ್ತರದಲ್ಲಿ ಹಾರಾಡುವುದಕ್ಕೆ ಆರಂಭವಾಯಿತು. ಇನ್ನೂ ಹೇಳಲೆ ? ಈ ಪರಿಚಯದ ಮಾರ್ದನಿಯೆಂಬಂತೆ ನನ್ನ ಕೊರಳಿಗೂ ಹಾರ, ಕೈಗೆ ನಿಂಬೆಹಣ್ಣು ಬಿತ್ತು ! ಈ ಮರ್ಯಾದೆಯನ್ನು ಮಾಡಿಸಿಕೊಳ್ಳುವುದಕ್ಕೆ ನನಗೆ ನಿಜ ವಾಗಿಯೂ ನಾಚಿಕೆಯಾಯಿತು. ಮರುಸಲ "ಕ್ಷಮಿಸಬೇಕು, ನಾನೊಲ್ಲೆ" ಎಂದೆ. ಶ್ರೀಯವರು "ಮದುವೆಯಾಗುವುದಕ್ಕೆ ಇನ್ನೂ ಕೆಲವಾರು ವರ್ಷಗಳಾದರೂ ಇವೆ. ನೀನು ಈಗಲೇ ಹೀಗೆ ನಾಚಿಕೆಪಟ್ಟುಕೊಂಡರೆ ಹೇಗೆ ?" ಎಂದುಬಿಟ್ಟರು. ಹೂವಿನ ಜತೆಗೆ ನಾನು ನಾರಾಗಿ ಸೇರಿಕೊಂಡಿದ್ದೇನೆ ಎಂಬ ಅರಿವು ಸ್ಥಿರವಾಗಿ ನನ್ನಲ್ಲಿ ನೆಲೆಸಿತು.

ರೈಲ್ವೆ ನಿಲ್ದಾಣದಿಂದ ಯಾವುದೋ ಒಂದು ಛತ್ರವನ್ನೋ ಅಥವಾ ಯಾರದೋ ಮನೆಯನ್ನೋ (ಸರಿಯಾಗಿ ಜ್ಞಾಪಕವಿಲ್ಲ) ಸೇರಿ ಸ್ನಾನ ಊಟಗಳನ್ನು ಮುಗಿಸಿದೆವು. ಮಧ್ಯಾಹ್ನ ಮೂರು ಗಂಟೆಗೆ ಶ್ರೀಯವರ 'ಸಣ್ಣ' ಕೆಲಸಗಳು ಆರಂಭವಾದವು. ಮೂರೂವರೆಗಂಟೆಯಿಂದ ನಾಲ್ಕೂವರೆಯವರೆಗೂ ಅಲ್ಲಿಯ ಪ್ರೌಢಶಾಲೆಯಲ್ಲಿ ರಗಳೆಯ ಕವಿಗಳನ್ನು ಕುರಿತು ಕನ್ನಡದಲ್ಲಿ ಭಾಷಣಮಾಡಿದರು. ಐದರಿಂದ ಆರರವರೆಗೂ ಇನ್ನಾವುದೋ ಸಂಘದ ಆಶ್ರಯದಲ್ಲಿ ವರ್ಡ್ಸ್‌ವರ್ತ್ ಕವಿಯನ್ನು ಕುರಿತು ಇಂಗ್ಲಿಷಿನಲ್ಲಿ ಭಾಷಣಮಾಡಿದರು. ಆರೂಕಾಲರಿಂದ ಆರೂಮುಕ್ಕಾಲರವರೆಗೆ ಊರಿನ ಗಣ್ಯರೂ ಕನ್ನಡಾಭಿಮಾನಿಗಳೂ ಸೇರಿದ್ದ ಖಾಸಗಿ ಸಭೆಯಲ್ಲಿ ಕನ್ನಡದ ಏಳಿಗೆಯ ಬಗ್ಗೆ ಮಾತುಕತೆ ನಡೆಸಿದರು. ಸ್ವಲ್ಪ ಉಪಾಹಾರವಾಯಿತು. ಏಳೂವರೆ ಗಂಟೆಗೆ ಯಾವುದೋ ನಾಟಕಶಾಲೆಯಲ್ಲಿ ನಡೆಯುತ್ತಿದ್ದ ಯಾವುದೋ ಬಳಗದ ವಾರ್ಷಿಕೋತ್ಸವದಲ್ಲಿ ಭಾಗಿಯಾಗಿ, ಎಂಟೂವರೆ ಗಂಟೆಯವರೆಗೂ ಗ್ರೀಕ್ ರುದ್ರ ನಾಟಕಗಳ ಪರಿಚಯವನ್ನು ಕನ್ನಡದಲ್ಲಿ ಮಾಡಿದರು. ಎಂಟೂವರೆಯಿಂದ ಒಂಬತ್ತೂ ಕಾಲರವರೆಗೂ ಬಯಲೊಂದರಲ್ಲಿ ನೆರೆದಿದ್ದ ೧೦೦-೧೫೦ ಸಭಿಕರಿಗೆ ಕನ್ನಡಶತಾಯಿಯ ಗಾತ್ರ ವಿಸ್ತೀರ್ಣಗಳನ್ನು ಇಂಗ್ಲಿಷಿನಲ್ಲಿ ವರ್ಣಿಸಿದರು. ಒಂದರ್ಧಗಂಟೆಯೊಳಗಾಗಿ ಯಾರದೋ ಮನೆಯಲ್ಲಿ ಊಟಮಾಡಿ, ಇನ್ನಾರದೋ ಮನೆಯಲ್ಲಿ ನೆರೆದಿದ್ದ ಆಂಧ್ರ-ಕನ್ನಡಿಗರನ್ನು ಉದ್ದೇಶಿಸಿ ಆಂಧ್ರರಿಂದ ಕನ್ನಡಕ್ಕೆ ಆಗಬೇಕಾಗಿರುವುದು ಬಹಳವಿದೆ ಯೆಂದು ನಾಲ್ಕು ಮಾತನ್ನಾಡಿ, ಅವರನ್ನು ಅಟ್ಟಕ್ಕೇರಿಸಿದರು. ಇದರ ತತ್‌ಕ್ಷಣದ ಫಲ — ಸಭೆಯಿಂದ ಹೊರಬಂದೊಡನೆಯೆ ಹುಬ್ಬಳ್ಳಿಯ ಕನ್ನಡ ಮಹಾಜನರಿಗೂ ಆಂಧ್ರ-ಕನ್ನಡ ಮಹಾಜನರಿಗೂ ಮಾತುಕದನ ಹೊತ್ತಿಕೊಂಡಿತು. ಶ್ರೀಯವರೇ

ಇದನ್ನು ಆರಿಸಿದರು. ಇಷ್ಟರಲ್ಲಿ ವೀರಶೈವ ವಿದ್ಯಾರ್ಥಿ ನಿಲಯದ ಗುಂಪೊಂದು ಬಂದು ಶ್ರೀಯವರನ್ನು ಆಹ್ವಾನಿಸಿದರು. ಒಡನೆಯೆ ಒಪ್ಪಿಕೊಂಡು ಅಲ್ಲಿಗೆ ಹೋದರು. ಅಲ್ಲಿ ನೂರೆಂಟರದೋ ಸಾವಿರದೆಂಟರದೋ ಸ್ವಾಮಿಗಳೊಬ್ಬರ ಅಧ್ಯಕ್ಷತೆಯಲ್ಲಿ ರಾತ್ರಿ ಹನ್ನೊಂದೂ ಮುಕ್ಕಾಲು ಗಂಟೆಯವರೆಗೂ "ಕನ್ನಡ ಸಾಹಿತ್ಯಕ್ಕೆ ವಚನಕಾರರ ಕಾಣಿಕೆ" ಎಂಬ ವಿಷಯವನ್ನೆತ್ತಿಕೊಂಡು ವಿಶದೀಕರಿಸಿ ಸಭಿಕರ ಮನಸ್ಸಂತೋಷಕ್ಕೆ ಪಾತ್ರರಾದರು. ನಮ್ಮ ಅಭ್ಯಾಗತರು "ಹನ್ನೆರಡು ಹೊಡೀತ್ರಿ. ತುಸು ಆರಾಮ ತಗೋಬಹುದಲ್ಲ !" ಎಂದು ಎಚ್ಚರಿಸಿದರು. "ಓಹೋ, ಹಾಗೇನು ! ಮುಂದಿನ ಕೆಲಸಗಳನ್ನು ನಾಳೆ ನೋಡಿಕೊಳ್ಳೋಣ" ಎಂದು ಶ್ರೀಯವರು ಒಪ್ಪಿಕೊಂಡರು.

ಒಂದು ಉಪನ್ಯಾಸವನ್ನು ಐದು ಗಂಟೆಗಳ ಕಾಲ (ಅಸಂಪೂರ್ಣವಾಗಿ) ಕೊಟ್ಟದ್ದು ಶ್ರೀಯವರ ವಾಗ್ಮಿತೆಯ ಒಂದು ಮುಖ; ಏಳು ಗಂಟೆಗಳಲ್ಲಿ ಆರು ಇಂಗ್ಲಿಷ್–ಕನ್ನಡ ಉಪನ್ಯಾಸ ಮಾಲೆಯನ್ನು ಆಗಗೊಳಿಸಿದ್ದು ಇನ್ನೊಂದು ಮುಖ.

ಮರುದಿನ ಬೆಳಗ್ಗೆ ಗದಗನ್ನು ಸೇರಿದೆವು. ಹತ್ತು ಗಂಟೆಗೆ ಅಲ್ಲಿಯ ಹೆಣ್ಣುಮಕ್ಕಳ ಶಾಲೆಯೊಂದರಲ್ಲಿ ಕನ್ನಡದ ಬಾವುಟವನ್ನು ಹಾರಿಸಿದರು. ಹನ್ನೊಂದು ಗಂಟೆಯಿಂದ ಸಂಜೆ ನಾಲ್ಕು ಗಂಟೆಯವರೆಗೂ ಶ್ರೀಯವರು ಎಲ್ಲೆಲ್ಲಿರುತ್ತಿದ್ದರೊ ಅಲ್ಲಲ್ಲಿಯೇ ಕಿರು ಸಭೆಗಳು ಸೇರುತ್ತಿದ್ದವು. ಶ್ರೀಯವರು ಕನ್ನಡದ ಏಳಿಗೆಗೆ ಜನ ಮಾಡಬೇಕಾಗಿರುವ ಕೆಲಸಗಳು, ಸುಧಾರಣೆಗಳು, ಕರ್ತವ್ಯಗಳು ಮೊದಲಾದುವನ್ನು ಕನ್ನಡ, ಇಂಗ್ಲಿಷ್, ಕನ್ನಡ–ಇಂಗ್ಲಿಷ್ ಭಾಷೆಗಳಲ್ಲಿ ವಿವರಿಸುತ್ತಿದ್ದರು. ಕೊನೆಯದಾಗಿ ಬಂದವರು ಮೂವರು ಸಂಸ್ಕೃತ ಪಂಡಿತರು, ಮುದುಕರು ; ಇವರಲ್ಲಿ ಮೈಸೂರಿನ ಗೋಪಾಲಕೃಷ್ಣ ಶಾಸ್ತ್ರಿಗಳೂ ಒಬ್ಬರು. ಅದಾವುದೋ ಗುಡಿಯೊಂದರಲ್ಲಿ ಭಾಷಣ ಮಾಡಬೇಕೆಂದು ಆಹ್ವಾನಿಸಿದರು. "ನಿಮ್ಮಂಥವರು ಬಂದು ಕೇಳಿದರೆ ನಾನು ಆಜ್ಞೆಯೆಂದು ತಿಳಿಯುತ್ತೇನೆ. ನನಗೆ ಈಗ ಬಿಡುವಿದೆ" ಎಂದರು. ಪಂಡಿತರು "ಹಾಗಿದ್ದರೆ ಇನ್ನೊಂದು ಅರ್ಧ ಗಂಟೆಯೊಳಗಾಗಿ ಅಲ್ಲಿಗೆ ದಯಮಾಡಿಸೋಣವಾಗಲಿ" ಎಂದು ಹೇಳಿ ಹೊರಟುಹೋದರು.

ಈ ಕಾರ್ಯಕ್ರಮ ನಡೆದದ್ದು ಯಾವುದೋ ದೇವಾಲಯದ ಮುಖ ಮಂಟಪದಲ್ಲಿ. ಸುಮಾರು ಐವತ್ತು ಜನ (ಬಹುವಾಗಿ ಸಂಸ್ಕೃತ ಪಂಡಿತರು, ವೈದಿಕರು) ನೆರೆದಿದ್ದರು. ಗೋಪಾಲಕೃಷ್ಣಶಾಸ್ತ್ರಿಗಳು ಅಧ್ಯಕ್ಷತೆ ವಹಿಸಿದರು. ಶ್ರೀಯವರು ಮಾಡಿದ ಭಾಷಣದ ಸಾರಾಂಶ ಹೀಗಿತ್ತು—"ನೀವೆಲ್ಲ ಸಂಸ್ಕೃತ ಪಂಡಿತರು, ಸಂಸ್ಕೃತ ಪಾಠ ಹೇಳುತ್ತಿದ್ದೀರಿ. ಆದ್ದರಿಂದ ನಿಮಗೆ ಸಂಸ್ಕೃತ ಒಂದು ಜೀವನೋಪಾಯ ಮಾರ್ಗ. ಈ ಕಾಲದಲ್ಲಿ ಸಂಸ್ಕೃತದ ಉಪಯೋಗ ಇದಕ್ಕಿಂತ ಹೆಚ್ಚಾಗಿಲ್ಲ. ನಿಮಗೆ ಸಂಸ್ಕೃತ

ವ್ಯಾಮೋಹ. ನಿಮ್ಮ ಮನೆ ಮಾತು, ತಾಯ್ನುಡಿ, ಮುದ್ದಾದ ತಿಳಿಗನ್ನಡ. ತಾಯ್ನುಡಿಯನ್ನು ಮಲತಾಯಿಯನ್ನಾಗಿಟ್ಟುಕೊಂಡು ಸಂಸ್ಕೃತವನ್ನು ಹೆತ್ತ ತಾಯಿಯಾಗಿ ಭಾವಿಸಿಕೊಂಡಿದ್ದೀರಿ..." ಈ ವೇಳೆಗೆ ಸಭೆಯಲ್ಲಿ ಗುಸುಗುಸು ಆರಂಭವಾಗಿ ರಘುಪತ್ಯಾಚಾರ್ಯ (ಅಥವಾ ರಘುನಾಥಾಚಾರ್ಯ ಎಂಬೋ ನನಗೆ ಜ್ಞಾಪಕವಿಲ್ಲ) ಎಂಬೊಬ್ಬರು ಎದ್ದುನಿಂತು "ಸ್ವಾಮಿ, ನಮಗೆ ಸಂಸ್ಕೃತ ಜೀವನೋಪಾಯ ಮಾತ್ರವಲ್ಲ ; ಪ್ರಥಮವಾಗಿ, ಅಧಿಕವಾಗಿ, ಆತ್ಮಜ್ಞಾನೋಪಾಯ" ಎಂದು ಹೇಳಿ ಮಂಟಪದ ಮೂಲೆಗಂಬದ ಹತ್ತಿರ ಸಿಂಧೂರ ಬಳಿದಿದ್ದ ಹನುಮಂತನ ವಿಗ್ರಹದ ಅಡಿಯಲ್ಲಿ ತನಿಯಾಗಿ ಹೋಗಿ ಕುಳಿತುಬಿಟ್ಟರು. ಅಧ್ಯಕ್ಷರು ಎದ್ದುನಿಂತು "ಸಭಿಕರು ಸಹೃದಯತೆಯಿಂದ ವರ್ತಿಸಬೇಕಾಗಿ ಪ್ರಾರ್ಥಿಸುತ್ತೇನೆ" ಎಂದರು. ಶ್ರೀಯವರೂ "ಮನ್ನಿಸಬೇಕು. ನನ್ನ ಮಾತುಗಳನ್ನು ಕೊನೆಯವರೆಗೂ ಲಾಲಿಸಬೇಕು" ಎಂದು ಬೇಡಿಕೊಂಡು ಮುಂದುವರಿಸಿದರು—"ನಾನು ಹೇಳಿದ ನುಡಿ ನಿಜವಾದದ್ದರಿಂದ ನಿಮಗೆ ಒಪ್ಪಿಗೆಯಾಗದೆ ಹೋಯಿತೋ ಏನೋ ! ವಿಷಯ ಇಷ್ಟು : ನಿಮ್ಮ ಮನೆಮಾತಿಗೆ ಮೊದಲನೇ ಜಾಗ ಕೊಡಬೇಕು, ನಿಮ್ಮ ಪಾಠಶಾಲೆಗಳಲ್ಲಿ ಕನ್ನಡ ಬಳಗಗಳನ್ನು ಹುಟ್ಟಿಸಿ ಬೆಳಸಿಕೊಂಡು ಬರಬೇಕು. ನಿಮ್ಮಂಥ ಹಿರಿಯರು ಕನ್ನಡಮ್ಮನ ಮಕ್ಕಳಿಗೆ ಅವರ ನಿಜವಾದ ತಾಯಿ ಯಾರೆಂಬುದರ ಅರಿವು ಕೊಡಬೇಕು..." ಎಂದೂ ಮುಂತಾಗಿ ಒಂದರ್ಧಗಂಟೆ ಮಾತನಾಡಿ, "ಸಂಸ್ಕೃತವಿಲ್ಲದಿದ್ದರೆ ಕನ್ನಡ ಬೆಳೆಯದು ಎಂಬ ನಿಮ್ಮ ಭಾವನೆ ಹೋಗಬೇಕು" ಎಂದು ಹೇಳಿ ಕುಳಿತುಕೊಂಡರು. ಸಭಿಕರಲ್ಲಿ ಉತ್ಸಾಹದ ಅಂಕುರಗಳೇನೂ ಕಾಣಲಿಲ್ಲ. ಕೆಲವರ ಕಣ್ಣುಗಳು ಮಾತ್ರ ದುರುದುರುಗುಟ್ಟುತ್ತಿದ್ದವು. ಗೋಪಾಲಕೃಷ್ಣಶಾಸ್ತ್ರಿಗಳು "ಇಂಥ ಜಿಜ್ಞಾಸಾಪ್ರಚೋದಕಗಳಾದ ವಿಷಯಗಳನ್ನು ನಮ್ಮ ಅವಗಾಹನೆಗೆ ಮಂಡಿಸಿದುದಕ್ಕಾಗಿ..." ಎಂದೂ ಮುಂತಾದ್ದಾಗಿ ವಂದನಾರ್ಪಣೆ ಮಾಡಿದರು. ಗುಡಿಯ ಮೂಲವಿಗ್ರಹವಾದ ಹನುಮಂತರಾಯನಿಗೆ ಮಂಗಳಾರತಿಯಾಯಿತು. ಈ ಸಭೆ ಹೀಗೆ ಮುಗಿದು, ಶ್ರೀಯವರೂ ಗೋಪಾಲಕೃಷ್ಣಶಾಸ್ತ್ರಿಗಳೂ ಬೆನ್ನು ತಿರುಗಿಸಿದರು. ರಘುಪತ್ಯಾಚಾರ್ಯರ ನೇತೃತ್ವದಲ್ಲಿ ಅದೇ ಜನ ಇನ್ನೊಂದು ಸಭೆ ಸೇರಿದರು. ಈ ಸಭೆಯ ನಡವಳಿಕೆಗಳನ್ನು ಗಮನಿಸುವ ಚಪಲ ನನಗೆ ಬಹಳವಿತ್ತಾದರೂ ಸಾಧ್ಯವಾಗಲಿಲ್ಲ.

ಮಧ್ಯಾಹ್ನ ನಾಲ್ಕುಗಂಟೆಗೆ ಹೊಸಪೇಟೆಯನ್ನು ತಲಪಿದೆವು. ಮೊದಲನೆಯ ಕಾರ್ಯಕ್ರಮ—ಅಲ್ಲಿಯ ಕರ್ಣಾಟಕ ಸಂಘದಲ್ಲಿ ಆರಂಭ ಭಾಷಣ. ಮಾಧ್ಯಮ ಶಾಲೆಯ ಹುಡುಗನೊಬ್ಬ ಭೂತಾಕಾರದಲ್ಲಿ ಬರೆದಿದ್ದ ಕನ್ನಡನಾಡಿನ ಭೂಪಟವನ್ನು ಸಭಾಂಗಣದಲ್ಲಿ ತೂಗಹಾಕಿದ್ದರು. ಶ್ರೀಯವರು ಅದನ್ನು ಕಂಡೊಡನೆಯೆ ಐದು

ನಿಮಿಷ ಪರವಶರಾದವರಂತೆ ನಿಂತುಬಿಟ್ಟರು. "ಎಷ್ಟು ಮುದ್ದಾಗಿದೆ, ಅಲ್ಲವೆ ?" ಎಂದು ಪಕ್ಕದಲ್ಲಿದ್ದವರೆಲ್ಲರನ್ನೂ ಕೇಳಿದರು. ಯಾರೂ ಯಾವೊಂದು ಉತ್ತರವನ್ನೂ ಕೊಡಲಿಲ್ಲ. ಕನ್ನಡನಾಡಿನ ಆಕೃತಿಯಲ್ಲಾಗಲಿ, ಆ ಹುಡುಗತನದ ಗೀಟುಗಳಲ್ಲಾಗಲಿ ನನಗಾವ ಮುದ್ದೂ ಕಾಣಲಿಲ್ಲವಾದ್ದರಿಂದ ನಾನೂ ಸುಮ್ಮನಿದ್ದೆ. ಹೊಸಪೇಟೆಯ ಕನ್ನಡಿಗರು ಮಂಕುಬಡಿದವರಂತೆ ಕಣ್ಣು ಬಾಯಿಗಳನ್ನು ಬಿಟ್ಟುಕೊಂಡು ನಿಂತಿದ್ದರು. ಆ ಮಹಾಜನರಿಗೆ ಶ್ರೀಯವರ ಕನ್ನಡ ಅರ್ಥವಾಗಿದ್ದಿರಲಾರದು. ಶ್ರೀಯವರು ಬಹುಶಃ "ಭಾಳ ಛಲೋ ಅದ, ಹೇಂಗ್ರಿ ?" ಎಂದಿದ್ದರೆ ಒಡನೆಯೆ "ಹೌವ್ದ್ರಿ" ಎನ್ನುತ್ತಿದ್ದರೆಂದು ನನ್ನ ಅಭಿಪ್ರಾಯ. ಆ ಭೂಪಟದ ಶಿಲ್ಪಿಯ ಕೈಲಿ ಒಂದು ಹೂಮಾಲೆಯನ್ನು ಕೊಟ್ಟು ಹಿರಿಯರೊಬ್ಬರು "ಹಾಕೋ ತಮ್ಮ !" ಎಂದರು. ಅವನು ತನ್ನ ಕೃತಿ ತೂಗಾಡುತ್ತಿದ್ದ ಗೂಟಕ್ಕೆ ಹಾರವನ್ನು ಏರಿಸಿದ. ಹಿರಿಯರು ಹಾಹಾಕಾರವೆಬ್ಬಿಸಿ "ಅಯ್ಯೋ, ಮಂಗನಾಥ ! ಅದಕಲ್ಲೋ, ಶ್ರೀಕಂಠಯ್ಯ ನೋರಿಗೋ !" ಎಂದು ಕೂಗಿದರು. ಶ್ರೀಯವರು ಸಂತೋಷದಿಂದ ಹುಡುಗನನ್ನು ಅಪ್ಪಿಕೊಂಡು, ಹಾರವನ್ನು ಭೂಪಟಕ್ಕೇ ಹಾಕಿಸಿ, ಕನ್ನಡ ತಾಯಿಯ ಗಾತ್ರ ವಿಸ್ತೀರ್ಣ ಗಳನ್ನೇ ಕುರಿತು ಮಾತನಾಡಿದರು.

ಎರಡನೆಯ ಕಾರ್ಯಕ್ರಮ ನಡೆದದ್ದು—ಊರಿನ ವೀರಶೈವ ಪ್ರಮುಖರೊಬ್ಬರ ಮನೆಯಲ್ಲಿ. ನೆರೆದಿದ್ದವರು ಹದಿನೈದು ಮಂದಿ. ಅವರಲ್ಲಿ ಐದು ಪಂಗಡಗಳವರು, ಮರಾಠಿ—ಕನ್ನಡವಾದಿ, ತೆಲುಗು—ಕನ್ನಡವಾದಿ, ಹಿಂದಿ—ಕನ್ನಡವಾದಿ, ಮೈಸೂರು ಕನ್ನಡ—ಧಾರವಾಡ ಕನ್ನಡವಾದಿ. ಈ ಸಭೆಗೆ ನಿಯತ ಕಾರ್ಯಕ್ರಮವಾಗಲಿ ನಿಶ್ಚಿತ ಉದ್ದೇಶವಾಗಲಿ ಇದ್ದಂತೆ ನನಗೆ ತೋರಲಿಲ್ಲ. ಶ್ರೀಯವರ ಮಾತನ್ನು ಯಾರೂ ಅಪೇಕ್ಷಿಸಿದಂತೆಯೂ ತೋರಲಿಲ್ಲ. ಒಂದೊಂದು ಪಂಗಡದ ನಾಯಕನೂ ತನ್ನ ಮೂಗಿನ ನೇರಕ್ಕೆ ಒರಟೊರಟಾಗಿ ಮಾತನಾಡಿಕೊಂಡು, ಕನ್ನಡಿಗರು ತಮಗೆ ಅನ್ಯಾಯ ಮಾಡುತ್ತಿದ್ದಾರೆಂದು ಬಿರುಸಿನಿಂದ ವಾದಿಸಿದ. ಐದನೆಯ ಪಂಗಡದ ನಾಯಕನ (ನಾಯಕನೂ ಅವನೇ, ಅನುಯಾಯಿಯೂ ಅವನೇ) ತರ್ಕವಂತೂ ವಿಪರೀತ ಅಸಂಬದ್ಧವಾಗಿತ್ತು. ಆತ ಹಿಂದೆಂದೋ ಮೈಸೂರು ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿದ್ದನಂತೆ ; ಇಂಟರ್ ಪರೀಕ್ಷೆಗೆ 'ಹತ್ತಿದ್ದ'ನಂತೆ ; ಇಂಗ್ಲಿಷ್ ಭಾಷೆಯಲ್ಲಿ ತೇರ್ಗಡೆಯಾಗದೆ ಹೋದುದರಿಂದ ಬಿ. ಎ. ಡಿಗ್ರಿಗೆ 'ಕೂಡ್ರುವ' ಅವಕಾಶವಿಲ್ಲದೆ ಹೋಯಿತಂತೆ ; ಇದಕ್ಕೆ ಶ್ರೀಯವರು ಕಾರಣರಂತೆ ; ಏಕೆಂದರೆ, ಈ 'ಪರಮ ಅನ್ಯಾಯ' ನಡೆದಾಗ ಶ್ರೀಯವರೇ ಪ್ರಾಧ್ಯಾಪಕರು ! ಆದರೇನಂತೆ ! ಈಗ ಪ್ಲೀಡರ್ ಆಗಿ ಇಂಗ್ಲಿಷಿನಲ್ಲಿ ವಾದಮಾಡಿ ಕೇಸುಗಳನ್ನು ಗೆಲ್ಲುತ್ತಿದ್ದಾನಂತೆ ; ಹಣವನ್ನೂ ಸಂಪಾದಿಸುತ್ತಿದ್ದಾನಂತೆ,

ಊರಿನ ಗಣ್ಯರಲ್ಲೊಬ್ಬನಾಗಿ ಸಹಸ್ರಾರು ಅನುಯಾಯಿಗಳಿಗೆ ನಾಯಕನಾಗಿದ್ದಾನಂತೆ! "ಇಂಥ ಅನ್ಯಾಯಗಳು ನಿಂತ ಹೊರತು ಕನ್ನಡ ನಾಡಿನ ಏಕೀಕರಣ ಸಾಧ್ಯವಿಲ್ಲ" ಎಂದು ಮುಕ್ತಾಯ ಮಾಡಿದ. ಇಷ್ಟನ್ನೂ ಶ್ರೀಯವರು ಶಾಂತರಾಗಿ ಕೇಳಿ, "ಹಿರಿಯದೊಂದು ಗುರಿಯ ಮುಡಿವಿಗೆ ನಾವು ದುಡಿಯಬೇಕು. ಸಣ್ಣ ಸಣ್ಣ ಕೊರತೆಗಳನ್ನು ಮರೆತುಬಿಡಬೇಕು " ಎಂದು ಹೇಳುತ್ತಿದ್ದಂತೆಯೆ ವಿವಿಧ ಪಂಗಡಗಳವರೂ "ಅದು ಹೇಂಗ್ರಿ ಸಾಧ್ಯ ?" ಎಂದು ಒಕ್ಕೊರಲಿನಿಂದ ಅಬ್ಬರಿಸಿದರು. ವೀರಶೈವ ಗಣ್ಯರು ಕೈ ಕೈ ಹಿಸುಕಿಕೊಳ್ಳುತ್ತ, ಮರ್ಯಾದೆಯಿಂದ ನಡೆದುಕೊಳ್ಳಬೇಕೆಂದು ಸಭಿಕರಿಗೆ ಸನ್ನೆ ಮಾಡಿದರು. ಶ್ರೀಯವರ ಮುಖದ ಮೇಲೆ ಒಂದು ಬಗೆಯ ನಗು ಸುಳಿಯಿತು. ಭಾಷಣವನ್ನು ಮುಂದುವರಿಸ ಹೋಗಲಿಲ್ಲ. ಆತಿಥೇಯರ ಕಿವಿಯಲ್ಲಿ ಏನೋ ಪಿಸು ಮಾತು ಹೇಳಿದರು. ಅವರು ಅರ್ಧ ಮನಸ್ಸಿನಿಂದಲೂ ಇನ್ನರ್ಧ ಸಂಕೋಚದಿಂದಲೂ ಪ್ರಯಾಸದಿಂದ ಎದ್ದು ನಿಂತು, ಶ್ರೀಯವರು ಮುಂದಕ್ಕೆ ಪ್ರಯಾಣ ಮಾಡಬೇಕಾಗಿರುವುದರಿಂದ ಅವರಿಂದ 'ನಾಲ್ಕು ಸಲಹೆಯ ಮಾತುಗಳನ್ನು' ಕೇಳಲು ಸಮಯವಿಲ್ಲದೆ ಹೋದುದಕ್ಕೆ ವಿಷಾದವನ್ನು ವ್ಯಕ್ತಪಡಿಸಿ, ಹಂಪೆಯಿಂದ ಹಿಂತಿರುಗುವಾಗಲಾದರೂ ಇದು ಸಾಧ್ಯವಾಗುವಂತಾಗಲಿ ಎಂದು ಹಾರೈಸಿ ವಂದನಾರ್ಪಣೆ ಮಾಡಿದರು.

ಅಂದಿನ ಕೊನೆಯ ಕಾರ್ಯಕ್ರಮ—ಯಾವುದೋ ಪ್ರೌಢಶಾಲೆಯ ವಿದ್ಯಾರ್ಥಿಗಳಿಂದ ವಿವಿಧ ವಿನೋದಾವಳಿ. ಶ್ರೀಯವರು ಅಧ್ಯಕ್ಷತೆ ವಹಿಸಿದರು. 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂಬ ಗೀತೆಯನ್ನು ಇಬ್ಬರು ಹುಡುಗರು ಕಠೋರವಾಗಿ, ಅಶ್ರಾವ್ಯವಾಗಿ ಹಾಡಿದರು. ಮುಂದಿನ ಅಂಕ ನವೀನವೂ ಆಗಿತ್ತು, ನಗುಪಾಡೂ ಆಗಿತ್ತು. ಭರತಮಾತೆಯಂತೆ ವೇಷತೊಟ್ಟ ಹುಡುಗನೊಬ್ಬ ರಂಗದ ಹಿಂಭಾಗದಲ್ಲಿ ಬಂದು ನಿಂತ. ಗಾಂಧಿಟೋಪಿ ಹಾಕಿಕೊಂಡ ಹುಡುಗನೊಬ್ಬ ಬಂದು ಶ್ರೀಯವರ 'ಭರತಮಾತೆಯ ವಾಕ್ಯ'ವನ್ನು 'ಅನ್ನ'ಲಾರಂಭಿಸಿದ. ಈ ಪದ್ಯದಲ್ಲಿನ ಒಂದೊಂದು ಪ್ರಶ್ನೆಯನ್ನು 'ಅಂದ' ಹಾಗೆಲ್ಲ ಭರತಮಾತೆಯ ತಲೆಯೂ ನಿಲುವೂ ನಾಚಿಕೆಯಿಂದಲೋ ಏನೋ ಕುಗ್ಗಿ ಕುಗ್ಗಿ ಸೊರಗಿಹೋಗುತ್ತಿದ್ದವು; "ಧರ್ಮ ಶಾಂತಿ ಸ್ವತಂತ್ರವಲ್ಲವೆ ನಮ್ಮ ಹಿರಿಯರ ನುಡಿಗಳು ?" ಎಂದು ಕೇಳುವಷ್ಟು ಹೊತ್ತಿಗೆ ಸರಿಯಾಗಿ ಭರತಮಾತೆ ಪೂರ್ತಿ ಕುಸಿದುಬಿದ್ದಳು. "ಭರತಮಾತೆಯೆ, ಭರತಮಾತೆಯೆ, ನಿನ್ನ ಮಾತನು ಮರೆಯೆವು"—ಎಂಬ ನುಡಿಯನ್ನು ಹಾಡುತ್ತ ಹುಡುಗ ನರ್ತನಮಾಡ 'ಹತ್ತಿದ' ; ಭರತಮಾತೆಯೂ ದಿಡೀರೆಂದು ಮೇಲೆದ್ದು ಅವನೊಂದಿಗೆ ಕುಣಿಯುತ್ತ ಸೇರಿಕೊಂಡಳು. ಇಬ್ಬರೂ ಹಾಡುತ್ತ ಕುಣಿಯುತ್ತ ಪದ್ಯವನ್ನು ಮುಗಿಸಿದರು. ಮಿಕ್ಕ ಅಂಕಗಳು ನನಗೆ ಸರಿಯಾಗಿ ಜ್ಞಾಪಕವಿಲ್ಲ. ಶ್ರೀರಂಗರ 'ಮನೆಯಲ್ಲಿ ಮಹಾಸಭೆ'

ಏಕಾಂಕನಾಟಕ, ಬೇಂದ್ರೆಯವರ ಕೆಲವು ಪದ್ಯಗಳ ವಾಚನ, ಇನ್ನಾವುದೋ ಕನ್ನಡ ನಾಟಕಗಳ ತುಣುಕುಗಳು, ಜಾನಪದ ನೃತ್ಯ, ಮೊದಲಾದವೆಲ್ಲ ನಡೆದವು. ಒಬ್ಬಾತ ಸರ್ವಜ್ಞ ಕವಿಯಂತೆ ವೇಷ ಹಾಕಿಕೊಂಡು ಕೆಲವು ವಚನಗಳ ಅಣಕವಾಡುಗಳನ್ನು ಹೇಳಿದ. ಅವುಗಳಲ್ಲೊಂದು ಹೀಗಿತ್ತು (ಜ್ಞಾಪಕದಿಂದ ಹೇಳುತ್ತಿದ್ದೇನೆ; ಸ್ವಲ್ಪ ಅದಲುಬದಲಾಗಿದ್ದರೂ ಇರಬಹುದು) :

ಶ್ರೀಕಂಠ ಸಿರಿಕಂಠ ಕನ್ನಡದ ಹಿರಿಭಂಟ
ಕನ್ನಡದ ನಾಡುನುಡಿಗಳ ಗಂಟೆ ಶಿರದಲಿ
ತಳೆದ ಸಿರಿಗಂಡ— ಸರ್ವಜ್ಞ

ಇದನ್ನು ಕೇಳಿ ಶ್ರೀಯವರಿಗೆ ಸಂತೋಷವಾಯಿತೋ ಇಲ್ಲವೋ, ಸಭಿಕರಂತೂ "ಅಗದಿ" ಕರತಾಡನಮಾಡಿ ಕಂಠಘೋಷದ ಮಳೆಗರೆದರು. ಶ್ರೀಯವರು ಇಲ್ಲಿ ಮಾಡಿದ ಭಾಷಣ ಕಿರಿಯ ಪ್ರಮಾಣದ್ದೆಂದೇ ಹೇಳಬೇಕು—ಕೇವಲ ಮೂವತ್ತು ನಿಮಿಷಗಳು. ಕನ್ನಡದ ಏಳಿಗೆಗೆ ಜನ ಮಾಡಬೇಕಾಗಿರುವ ಕೆಲಸಗಳನ್ನು ವಿವರಿಸಿದರು. ಕೊನೆಯದಾಗಿ, "ಈ ನುಡಿಗಳನ್ನು ಎಲ್ಲರೂ ಒಕ್ಕೊರಲಿನಿಂದ ಜಯಕಾರ ಮಾಡಬೇಕು— ಸಿರಿಗನ್ನಡಂ ಗೆಲ್ಗೆ! .ಕನ್ನಡ ತಾಯ್ ಬಾಳ್ಗೆ!" ಈ ಅಕ್ಷರಗಳ ಕ್ರಮ ಸ್ಫೋನರಿನ ಸೂತ್ರರೀತ್ಯಾ ನೂರಾರು ರೀತಿಯಲ್ಲಿ ಅಸ್ತವ್ಯಸ್ತಗೊಂಡು ಸಭಿಕರ ಬಾಯಿಂದ ಪ್ರತಿಧ್ವನಿಸಿದುವು.

ಶ್ರೀಯವರನ್ನು ಚೆನ್ನಾಗಿ ಅರಿತು, ಅವರ ಜತೆಯಲ್ಲಿ ದುಡಿದ ಹಿರಿಯರೆಲ್ಲರೂ ಶ್ರೀಯವರು ಕನ್ನಡನಾಡು ನುಡಿಗಳ ಏಳಿಗೆಗಾಗಿ ಆತ್ಮಸಮರ್ಪಣೆ ಮಾಡಿಕೊಂಡಿದ್ದ ರೀತಿಗಳನ್ನೂ ವರ್ಣಿಸಿದ್ದಾರೆ. ನನ್ನಂಥ ಕಿರಿಯರಿಗೆ ಇವರ ಮಾತುಗಳಲ್ಲಿ ಸ್ವಲ್ಪ ಉತ್ಪ್ರೇಕ್ಷೆಯಿರಬಹುದೇನೋ ಎನ್ನಿಸುತ್ತಿತ್ತು. ಐವತ್ತೈದು ವಯಸ್ಸಿನ ಶ್ರೀಯವರ ಒಂದೂವರೆ ದಿನದ ಕಾರ್ಯಕ್ರಮವನ್ನು ಕಣ್ಣಾರೆ ಕಂಡ ಮೇಲೆ—ಅವರ ಗೆಳೆಯರಾಡಿದ್ದ ಮಾತುಗಳ ಸತ್ಯಾಂಶ ನನಗೆ ಸ್ಪಷ್ಟವಾಯಿತು.



ಋತವೊಂದೆ ಗೆಲ್ಲುವುದು ಅನೃತವಲ್ತು;
ಅಮೃತಮೆನೆ ವಿದ್ಯೆಯೆ; ಅವಿದ್ಯೆಯಲ್ತು;
ವಿಶ್ವಭಾರತಿ ಶರಣು, ಕಿರುತೀರ್ಥವಲ್ತು.

*   *   *

ಕನ್ನಡಿಗರುಸಿರಾಗಿ ಕನ್ನಡಂ ಬಾಳ್ಗೆ.

—'ಶುಕ್ರಗೀತೆ'ಯಿಂದ

ಎ. ಎನ್. ಮೂರ್ತಿರಾವ್



# ಉತ್ಸಾಹದ ಜ್ಯೋತಿಸ್ಪರ್ಶ *

ರಾಲೊ, ಬಿ.ಎಂ.ಶ್ರೀ — ಇಬ್ಬರೂ ಅವರವರ ಕ್ಷೇತ್ರದಲ್ಲಿ, ಅವರವರ ಮಿತಿಯಲ್ಲಿ ನಮ್ಮ ಜನತೆಗೆ ಅಮೋಘವಾದ ಉಪಕಾರ ಮಾಡಿದರು. ಅದಕ್ಕಾಗಿ ಕೃತಜ್ಞತೆ ಸಲ್ಲಿಸಿ ಧನ್ಯರಾಗುವ ಬದಲು ಅವರನ್ನು ಹೋಲಿಸಿ ತೂಗಿ ನೋಡುವ ಕೆಲಸಕ್ಕೇಕೆ ಕೈಹಾಕಬೇಕು! ಒಂದು ದೃಷ್ಟಿಯಿಂದ ಹಾಗೆ ಮಾಡದಿರುವುದೇ ಸರಿ. ಆದರೂ ನನ್ನ ಮನಸ್ಸು ಆ ಧಾರ್ಷ್ಟ್ಯಕ್ಕೆ ಎಡೆಗೊಟ್ಟಿದೆ. ಒಬ್ಬರನ್ನು ಹೊಗಳಿ ಮತ್ತೊಬ್ಬರನ್ನು ತೆಗಳದೆ ಅವರಿಬ್ಬರ ಶಕ್ತಿಯ ಸ್ವರೂಪವನ್ನು ಮುಂದಿಟ್ಟು ಮಾಡಿಕೊಳ್ಳುವುದರಲ್ಲಿ ತಪ್ಪಿಲ್ಲ ಎಂದುಕೊಂಡಿದ್ದೇನೆ.

ರಾಲೊ ಕವಿಗಳಲ್ಲ ; ಪ್ರವಚನಕಾರರು ; ರಸಿಕರು ; ಸಹೃದಯಿಗಳು ; ಒಳ್ಳೆಯ ವಿಮರ್ಶಕರು. ಅವರ ಹಾಸ್ಯ ಬೇಸಗೆಯಲ್ಲಿ ಆಗಾಗ ಬರುವ ತಂಗಾಳಿಯಂತೆ ಹಿತವಾದದ್ದು. ತಮ್ಮ ಶಿಷ್ಯರೊಡನೆಯೂ ಸಹೋದ್ಯೋಗಿಗಳೊಡನೆಯೂ ಅವರು ಸ್ನೇಹ ಔದಾರ್ಯಗಳಿಂದ ವರ್ತಿಸಿದರು. ಆದರೆ ಅವರು ನಮ್ಮೊಡನೆ ಬೆರೆದು 'ನಮ್ಮವರು' ಎನ್ನಿಸಿಕೊಳ್ಳಲಿಲ್ಲ. ಕಾಲೇಜು, ತರಗತಿಗಳು, ಸಭೆ ಸಮಿತಿಗಳು, ಚರ್ಚಾಕೂಟಗಳು, ನಾಟಕ ಪ್ರದರ್ಶನಗಳು, ಕ್ರೀಡಾಂಗಣ—ಇವುಗಳ ಆವರಣವನ್ನು ಬಿಟ್ಟರೆ ಅವರ ಜೀವನವೂ ನಮ್ಮ ಜನತೆಯ ಜೀವನವೂ ಒಂದಕ್ಕೊಂದು ಹತ್ತಿರ ಬರಲಿಲ್ಲ. ಅವರು ಕನ್ನಡದ ಅಭ್ಯುದಯವನ್ನು ಕಂಡು ಸಂತೋಷಪಟ್ಟರಾದರೂ ತಾವು ಜೀವಿಕೆ ಪಡೆದ ಪ್ರಾಂತದ ಭಾಷೆಯನ್ನು ಕಲಿಯುವ ಗೊಡವೆಗೆ ಹೋಗಲಿಲ್ಲ. ಈ ಮಾತು—ಅದನ್ನು ದೋಷಾರೋಪಣೆಯೆಂದು ಭಾವಿಸಲಾಗದು—ಭಾರತಕ್ಕೆ ಬಂದ ಆಂಗ್ಲರ ಪೈಕಿ ನೂರಕ್ಕೆ ತೊಂಬತ್ತೈದು ಜನರ ವಿಷಯದಲ್ಲಿ ಸಲ್ಲುತ್ತದೆ; ಭಾರತೀಯರೇ ಆಗಿ ಭಾರತದ ಇತರ ಭಾಗಗಳಿಂದ ಇಲ್ಲಿಗೆ ಬಂದವರನೇಕರ ವಿಷಯದಲ್ಲೂ ಸಲ್ಲುತ್ತದೆ. ಆಗಿನ ಸ್ಥಿತಿಗತಿಗಳನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿದರೆ ಆಂಗ್ಲರು ಹಾಗಿದ್ದದ್ದು ಸ್ವಾಭಾವಿಕ ಎನ್ನಿಸುತ್ತದೆ. ಆದರೆ ಸ್ವಾಭಾವಿಕವಾದದ್ದೆಲ್ಲ ಒಳ್ಳೆಯದಲ್ಲ ಎಂದುಕೊಂಡೆವಷ್ಟೆ!

---

* 'ಚಿತ್ರಗಳು, ಪತ್ರಗಳು', ಪು. ೬೮-೮೩.

ಶ್ರೀಕಂಠಯ್ಯನವರು ಆಂಗ್ಲಸಾಹಿತ್ಯದ ಪ್ರಾಧ್ಯಾಪಕರಾಗಿ ದುಡಿದದ್ದಲ್ಲದೆ ಕನ್ನಡನಾಡಿನ ಮೂಲೆಮೂಲೆಯಲ್ಲೂ ಸುತ್ತಾಡಿ ಜನರೊಡನೆ ಬೆರೆದು ಒಂದಾದರು. ಸುಸಂಸ್ಕೃತ ಕನ್ನಡಿಗರ ಆಸೆ ಆಕಾಂಕ್ಷೆಗಳ ಪ್ರತೀಕವಾಗಿ ನಿಂತರು. ನಾವು ಅಸಮಾಧಾನ ತೋರಿದಾಗ ಸಂಕಟಪಟ್ಟರು; ಆದರ ತೋರಿದಾಗ ಆನಂದಪಟ್ಟರು. ಕನ್ನಡ ಸಾಹಿತ್ಯಕ್ಕೆ ಸ್ವತಃ ಕಾಣಿಕೆ ಕೊಟ್ಟರು. ತಮ್ಮ ಉತ್ಸಾಹದ ಜ್ಯೋತಿಸ್ಪರ್ಶದಿಂದ ನಮ್ಮೆಲ್ಲರ ಉತ್ಸಾಹ ಜ್ವಲಿಸುವಂತೆ ಮಾಡಿದರು, ಹೊಸ ಯುಗದ ಪ್ರವರ್ತಕರಾದರು. ರಾಲೋಎಗೆ ಈ ಭಾಗ್ಯವಿರಲಿಲ್ಲ.

(ತೀ.ನಂ. ಶ್ರೀಕಂಠಯ್ಯನವರಿಗೆ ಬರೆದ) ಕೆಲವು ಪತ್ರಗಳಲ್ಲಿ ಬಿ.ಎಂ. ಶ್ರೀಕಂಠಯ್ಯನವರ ಮಾತು—ಅವರನ್ನು ಹೊಗಳುವ ಮಾತಲ್ಲದೆ ಅವರ ಸ್ವಭಾವದಲ್ಲಿದ್ದ ಪ್ರಶಂಸಾರ್ಹವಲ್ಲದ ಕೆಲವು ಅಂಶಗಳ ಮಾತು ಕೂಡ—ಬಂದಿದೆ. ಗುರುಗಳ ವಿಷಯದಲ್ಲಿ ಹೀಗೆಲ್ಲ ಬರೆಯಬಹುದೆ ಎಂಬ ಪ್ರಶ್ನೆ ಬರುವುದು ಸಹಜ. ಈ ಕಾಗದಗಳ ಮಟ್ಟಿಗೆ ಹೇಳುವುದಾದರೆ, ಅವನ್ನು ನಾನು ಬರೆದದ್ದು ನನಗೆ ತೀರ ಆಪ್ತರಾದ ತೀ.ನಂ. ಶ್ರೀಕಂಠಯ್ಯನವರಿಗೆ. ಅವು ಮತ್ತೊಬ್ಬರ ಕಣ್ಣಿಗೆ ಬಿದ್ದಾವು ಎಂಬ ಶಂಕೆಗೆ ಕಾರಣವಿರಲಿಲ್ಲ. ಅವನ್ನು ಪ್ರಕಟಪಡಿಸುವ ಉದ್ದೇಶವೂ ಆಗ ಇರಲಿಲ್ಲ. ಆದ್ದರಿಂದ ಬಿ.ಎಂ. ಶ್ರೀಯವರ ವಿಷಯದಲ್ಲಿ ಟೀಕೆ ಮಾಡಿದ್ದು ಅಪರಾಧವಲ್ಲ ಎನ್ನಬಹುದೇನೊ. ಗುರುಗಳ ವಿಷಯದಲ್ಲಿ ಇಂಥ ಯೋಚನೆಗಳು ಮನಸ್ಸಿಗೆ ಬರುವುದೂ ಅಪರಾಧ ಎನ್ನುವುದಾದರೆ ನಾನು ಅಪರಾಧಿಯೇ; ನನ್ನ ಆಪ್ತ ಮಿತ್ರರಲ್ಲಿ ಕೆಲವರು ಕೂಡ ಅಪರಾಧಿಗಳು.

ಈ ಸಂದರ್ಭದಲ್ಲಿ 'ಆಚಾರ್ಯದೇವೋಭವ ಎಂದೇ ನಾವು ಕುಳಿತುಕೊಳ್ಳಬೇಕಾದುದಿಲ್ಲ' ಎಂದು ಶ್ರೀಯವರೇ ಹೇಳಿದ್ದನ್ನು ನೆನೆದುಕೊಂಡಿದ್ದೇನೆ. ತೀ. ನಂ. ಶ್ರೀಕಂಠಯ್ಯ ನನ್ನಂತೆಯೇ ಅವರ ಶಿಷ್ಯರಾಗಿದ್ದರು—ಇಂಗ್ಲಿಷ್ ಎಂ. ಎ. ತರಗತಿಯಲ್ಲಲ್ಲ, ಕನ್ನಡ ಎಂ.ಎ. ತರಗತಿಯಲ್ಲಿ. ಅನಂತರ ಅವರು ಕನ್ನಡ ಇಲಾಖೆಯಲ್ಲೇ ಅಧ್ಯಾಪಕರಾದರು, ಮತ್ತು ಕನ್ನಡ ಚಳುವಳಿಯಲ್ಲಿ ಮೊದಲಿನಿಂದಲೂ ಗಣನೀಯವಾದ ಪಾತ್ರ ವಹಿಸಿದರು; ಗದುಗಿನ ಭಾರತದ ಸಂಪಾದನೆ ಮುಂತಾದ ಉದ್ಯಮಗಳಲ್ಲಿ ಅವರ ನೇತೃತ್ವದಲ್ಲಿ ಕೆಲಸಮಾಡಿದರು. ಆದ್ದರಿಂದ ಮೊದಮೊದಲು ಅವರು ಬಿ.ಎಂ. ಶ್ರೀಯವರನ್ನು ನನಗಿಂತ ಚೆನ್ನಾಗಿ ಬಲ್ಲವರು. ಈ ಮಾತು ಶ್ರೀ ಡಿ. ಎಲ್. ನರಸಿಂಹಾಚಾರ್ಯರ ಮತ್ತು ಶ್ರೀ ಕೆ. ವಿ. ರಾಘವಾಚಾರ್ಯರ ವಿಷಯದಲ್ಲೂ ಸಲ್ಲುತ್ತದೆ. ಇವರೆಲ್ಲರಿಂದಲೂ ನಾನು ಬಿ.ಎಂ. ಶ್ರೀಯವರ ಅದ್ಭುತ ಪ್ರವಚನಶಕ್ತಿಯನ್ನು ಕುರಿತ ಹೊಗಳಿಕೆಯನ್ನು ಕೇಳಿದ್ದೇನೆ. ಒಂದು ದೃಷ್ಟಿಯಿಂದ ನೋಡಿದರೆ

ನನ್ನ ಅಭಿಪ್ರಾಯಕ್ಕಿಂತ ಅವರದ್ದಕ್ಕೆ ಹೆಚ್ಚು ಮನ್ನಣೆಕೊಡಬೇಕು. ಕನ್ನಡ ಎಂ.ಎ.ಗೆ ಪಾಠ ಹೇಳುವಾಗ ಶ್ರೀಯವರು ಹೆಚ್ಚು 'ಸುಲಭ'ರಾಗಿದ್ದರೆಂದು ಅನೇಕರ ಅಭಿಪ್ರಾಯ. ಆದ್ದರಿಂದ ಶಿಷ್ಯರಿಗೂ ಗುರುಗಳಿಗೂ ಸ್ವಲ್ಪ ಹೆಚ್ಚು ಒಳಕೆಯಿದ್ದಿರಬೇಕು. ಈ ಗುಂಪನ್ನು 'ಶ್ರೀಕಂಠಮಠ' ಎಂದು ಕೆಲವರು ಹಾಸ್ಯಮಾಡುತ್ತಿದ್ದುದುಂಟು. ನಾನು ತೆಗಳುಗಾರರ ಗುಂಪಿನಲ್ಲಿರಲಿಲ್ಲ, 'ಮಠೀಯ'ನಾಗಿಯೂ ಇರಲಿಲ್ಲ. ಮೇಲೆ ಹೆಸರಿಸಿರುವ ನನ್ನ ಮಿತ್ರರ ಪ್ರಾಮಾಣಿಕತೆಯನ್ನು ನಾನು ಎಂದೂ ಪ್ರಶ್ನಿಸಿದವನಲ್ಲ. ಆದರೆ ಸತ್ಯದರ್ಶನಕ್ಕೆ ಒಳಕೆಯಿಲ್ಲದಿರುವುದು ಹೇಗೆ ತಡೆಯಾಗಬಹುದೋ ಒಳಕೆಯೂ ಹಾಗೇ ತಡೆಯಾಗುವುದು ಸಾಧ್ಯವಷ್ಟೆ!

ಅಂತೂ ನನಗೂ ನನ್ನ ಮಿತ್ರರಲ್ಲಿ ಕೆಲವರಿಗೂ ಶ್ರೀಕಂಠಯ್ಯನವರ ಪ್ರವಚನ ತೃಪ್ತಿಕೊಡಲಿಲ್ಲವೆಂಬುದು ನಿಜ. ಮೂರು ನಾಲ್ಕು ಸಂದರ್ಭಗಳಲ್ಲಿ ಅವರು ಅದ್ಭುತವಾಗಿ ಪಾಠ ಹೇಳಿದ್ದೂ ಸಮ್ಮೋಹನಾಸ್ತ್ರಕ್ಕೆ ಕಟ್ಟುಬಿದ್ದವರಂತೆ ನಾವು ಮಂತ್ರಮುಗ್ಧರಾಗಿ ಅದನ್ನು ಕೇಳಿದ್ದೂ ಮನಸ್ಸಿನಲ್ಲಿ ಇಂದೂ ಅಚ್ಚಳಿಯದೆ ನಿಂತಿದೆ. ನಾನು ಬಿ.ಎಂ. ಶ್ರೀಯವರನ್ನು ಕುರಿತು ಬರೆದ ಪುಸ್ತಕದಲ್ಲಿ ಇಂಥ ಸಂದರ್ಭಗಳನ್ನು ಮಾತ್ರ ಕಾಣಿಸಿದ್ದೇನೆ. ಆದರೆ ಅಂಥ ಸಂದರ್ಭಗಳು ಬಹಳ ಕಡಮೆ. ಅವರ ತರಗತಿಗಳಲ್ಲಿ ನನಗೆ ಆಶಾಭಂಗವಾದದ್ದೇ ಹೆಚ್ಚು. ಕೆಲವು ವೇಳೆ ಅವರು ಚೆನ್ನಾಗಿ ಪಾಠಮಾಡುತ್ತಿದ್ದಾಗಲೂ ಏನೋ ಒಂದು ವ್ಯಂಗ್ಯವಾದ ಮಾತು ಬಂದು ವಾತಾವರಣವನ್ನು ಕೆಡಿಸುತ್ತಿದ್ದುದುಂಟು. ಷೇಕ್ಸ್‌ಪಿಯರ್‌ನ 'ರಿಚರ್ಡ್ II' ಪಾಠ ಹೇಳುತ್ತಿದ್ದಾಗ, ಇಂಗ್ಲೆಂಡಿನ ಮಹಿಮೆಯನ್ನು ಕುರಿತು ಜಾನ್ ಆಫ್ ಗಾಂಟ್ (John of Gaunt) ಆಡಿದ ಮಾತುಗಳನ್ನು ಹೃದಯಂಗಮವಾಗಿ ಓದಿದರು; ಹದವರಿತು ಉಚಿತವಾದ ವ್ಯಾಖ್ಯಾನಮಾಡಿದರು—ನಮಗೆ ಮನೋಹರವಾದ ಸಂಗೀತವನ್ನು ಕೇಳಿದಂತೆ ಅನುಭವವಾಯಿತು; ಅದಾದಮೇಲೆ 'Even I get enthusiastic!' ಎಂದು ವ್ಯಂಗ್ಯವಾಗಿ ಹೇಳಿದರು; 'Poor me' ಎಂಬ ಮಾತು ಬಂತು. ಆಗ ಈ ಆತ್ಮಾವಹೇಳನಕ್ಕೆ ಅವಕಾಶವಾಗಲಿ ಕಾರಣವಾಗಲಿ ಇರಲಿಲ್ಲ. ಅದರಿಂದಾಗಿ ಅವರ ಪ್ರವಚನ ಅದುವರೆಗೆ ಮಾಡಿದ್ದ ಸತ್ಪರಿಣಾಮ ನಾಶವಾಗಿಹೋಯಿತು!

ಅವರ ಮಾತೇನೋ ನಿರರ್ಗಳವಾಗಿ ಹರಿಯುತ್ತಿತ್ತು; ಆದರೆ ಅದರಲ್ಲಿ ಸುಬದ್ಧತೆ ಕಾಣುತ್ತಿರಲಿಲ್ಲ. ಅನವಶ್ಯಕವಾದ ವಿಷಯಗಳು ಸುಳಿಯುತ್ತಿದ್ದುವು; ಸುಳಿದು ಹೊರಟುಹೋಗುತ್ತಿರಲಿಲ್ಲ. ಎಷ್ಟೋ ವೇಳೆ ಮುಖ್ಯ ವಿಷಯವನ್ನು ಹೊರತಳ್ಳಿ ತಾವೇ ಅವರ ಮನಸ್ಸನ್ನು ಆಕ್ರಮಿಸುತ್ತಿದ್ದವು. ಒಂದುಬಾರಿ—ಅವರು ವರ್ಡ್ಸ್‌ವರ್ತ್‌ನ ಕವನಗಳನ್ನು ಬೋಧಿಸುತ್ತಿದ್ದಾಗ ಎಂದು ನೆನಪು—ಹೇಗೋ ಸೋರೋಆಸ್ಟರ್‌ನ

(Zoroaster) ಮಾತು ಬಂತು. ನಾಲ್ಕೈದು ವಾರಗಳ ಕಾಲ ಆ ಪ್ರವಾದಿಯ ಮತವನ್ನು ಹೇಳುವುದರಲ್ಲೇ ಕಳೆಯಿತು. ಆ ಮತದ ಪ್ರತಿಪಾದನೆ ಚೆನ್ನಾಗಿಯೇ ಇತ್ತಾದರೂ ಅದರಲ್ಲೂ ಪ್ರದರ್ಶನದ ಅಂಶ ಸೇರಿದಂತೆ ತೋರಿತು; ಅಲ್ಲದೆ ವರ್ಡ್ಸ್‌ವರ್ತ್‌ನ ಕವನಗಳಿಗೂ ಆ ಮತಕ್ಕೂ ಸಂಬಂಧ ಏರ್ಪಟ್ಟಂತೆ ಕಾಣಲಿಲ್ಲ. ನಾನು ಎಂ.ಎ. ತರಗತಿಯಲ್ಲಿದ್ದಾಗ ಅವರು ಮ್ಯಾಥ್ಯು ಆರ್ನಾಲ್ಡ್ (Mathew Arnold) ಷೆಲ್ಲಿ (Shelley) ಯನ್ನು ಕುರಿತು ಬರೆದ 'a beautiful ineffectual angel beating in the void his luminous wings in vain' ಎಂಬ ಮಾತಿನ ಮೇಲೆ ಒಂದೆರಡು ದಿನ ವ್ಯಾಖ್ಯಾನಮಾಡಿದರು. ಅವರ ಉಪನ್ಯಾಸದಲ್ಲಿ ಅನೇಕ ವಿಷಯಗಳು ಸೇರಿದ್ದವು. ಆದರೆ ಅವರು ಆರ್ನಾಲ್ಡ್‌ನ ಅಭಿಪ್ರಾಯವನ್ನು ಅನುಮೋದಿಸಿದರೆ, ಇಲ್ಲವೆ, ಎಂಬುದು ನನಗೆ ತಿಳಿಯಲಿಲ್ಲ. ನನ್ನ ಸಹಪಾಠಿಯಾಗಿದ್ದ ಜಿ.ಆರ್. ರಂಗಸ್ವಾಮಿಯವರೊಡನೆ ಇದನ್ನು ಚರ್ಚಿಸಿದ್ದೂ ಅವರು 'ನನಗೂ ತಿಳಿಯ ಲಿಲ್ಲ' ಎಂದದ್ದೂ ನೆನಪಿದೆ.

ಒಂದು ಕಡೆ ಯಾವ ಅಡಚಣೆಯೂ ಇಲ್ಲದೆ ಗಂಭೀರವಾಗಿ ಹರಿಯುತ್ತಿದ್ದ ಅವರ ವಾಕ್ಪ್ರವಾಹ; ಇಂಪಾದ ಪದಪುಂಜಗಳು; ಒಂದೊಂದು ವೇಳೆ ಹಠಾತ್ತಾಗಿ ಕಣ್ಣಿಗೆ ಕಟ್ಟಿ ದಂತೆ ಬರುತ್ತಿದ್ದ ಉಚಿತವೂ ಸ್ಫುಟವೂ ಆದ ಉಪಮೆ ರೂಪಕಗಳು; ಮಿಂಚಿನಂತೆ ಹೊಳೆದು ಹೋಗುತ್ತಿದ್ದ 'sarcasm' (ಅದು ಕೆಲವು ವೇಳೆ ಕುಹಕವಾಗುತ್ತಿತ್ತು); ಒಂದು ಅಭಿಪ್ರಾಯವನ್ನು ನಿರೂಪಿಸಲು ನಾಲ್ಕಾರು ಪರ್ಯಾಯಪದಗಳನ್ನು ಬಳಸುತ್ತಿದ್ದ ವೈಖರಿ (ಇದು ಕೆಲವು ವೇಳೆ ಹದ ಮೀರುತ್ತಿತ್ತು); ಹತ್ತು ವಾಕ್ಯಗಳಲ್ಲಿ ವಿವರಿಸ ಬಹುದಾದ ಅಭಿಪ್ರಾಯವನ್ನು ನಾಲ್ಕೇ ಪದಗಳಲ್ಲಿ ಸೆರೆಹಿಡಿದ ಸಾರೋಕ್ತಿಗಳು; ಮತ್ತು ಇವೆಲ್ಲಕ್ಕೂ ಶ್ರುತಿಯಂತಿದ್ದ ಅವರ 'ಕಂಠಶ್ರೀ'. ಮತ್ತೊಂದು ಕಡೆ ಇವರ ಆಲೋಚನಾಸರಣಿಯೇನೆಂಬುದು ಸ್ಪಷ್ಟವಾಗಲಿಲ್ಲವಲ್ಲ, ನಮಗೆ ಇವರು ದಾರಿ ತೋರಿ ದಂತಾಗಲಿಲ್ಲವಲ್ಲ ಎಂಬ ಅಹಿತವಾದ ಅನುಭವ. ಹೀಗಾಗಿ ಮೇಲೆ ಉದಾಹರಿಸಿರುವ ಷೆಲ್ಲಿಯನ್ನು ಕುರಿತ ಮಾತನ್ನು ಬಿ. ಎಂ. ಶ್ರೀಯವರಿಗೇ ಅನ್ವಯಿಸಬಹುದು ಎಂದು ನನಗೆ ತೋರಿದ್ದುಂಟು—beautiful ineffectual angel! ಒತ್ತಡ 'beautiful' ಎಂಬ ಪದದ ಮೇಲೂ ಇದೆಯೆಂಬುದನ್ನು ಮರೆಯಲಾಗದು.

ಮೇಲೆ ಹೇಳಿದ್ದೆಲ್ಲ ಅವರು ಸಾರ್ವಜನಿಕ ವೇದಿಕೆಯಿಂದ ಮಾಡಿದ ಉಪನ್ಯಾಸ ಗಳಿಗೂ ಸ್ವಲ್ಪಮಟ್ಟಿಗಾದರೂ ಅನ್ವಯಿಸುತ್ತದೆ. ತಮ್ಮ ವಿರೋಧಿಗಳನ್ನು ಖಂಡಿಸುವ ಚಟದಿಂದಾಗಿ ಆ ಉಪನ್ಯಾಸಗಳು ಆಗಾಗ ಕಂಬಿ ತಪ್ಪುತ್ತಿದ್ದವು. ಆದರೆ ಅವರು ಅದ್ಭುತವಾಗಿ ಪಾಠ ಹೇಳಿದ್ದಕ್ಕೆ ಹೇಗೆ ನಿದರ್ಶನಗಳುಂಟೋ ಹಾಗೇ ಅವರ

ಸಾರ್ವಜನಿಕ ಉಪನ್ಯಾಸಗಳು ಎಲ್ಲ ಅಡಚಣೆಗಳನ್ನೂ ಮೆಟ್ಟಿ ಯಶಸ್ವಿಯಾದದ್ದಕ್ಕೂ ನಿದರ್ಶನಗಳುಂಟು. ಅಂದಮೇಲೆ ಅವರಲ್ಲಿ ಶಿಖರವನ್ನು ಮುಟ್ಟುವ ಶಕ್ತಿಯಿತ್ತೆಂಬುದು ಸ್ಪಷ್ಟ.

ಇಂಗ್ಲಿಷ್ ಇಲಾಖೆಯಲ್ಲಿ ಶ್ರೀಯವರ ಶಿಷ್ಯರೂ ಸಹೋದ್ಯೋಗಿಗಳೂ ಆಗಿದ್ದವರು ಮತ್ತು ಹಾಗೆಯೇ ಕನ್ನಡ ಇಲಾಖೆಯಲ್ಲಿದ್ದವರು—ಇವೆರಡು ಗುಂಪುಗಳಿಗೂ ಅವರ ವಿಷಯದಲ್ಲಿ ಅಭಿಪ್ರಾಯಭೇದವಿರುವುದಕ್ಕೆ ಕಾರಣವೇನು ? ಎರಡು ಗುಂಪಿನವರಿಗೂ ಅವರಲ್ಲಿ ಅಪಾರವಾದ ಭಕ್ತಿಯುಂಟು. ಕಾರಣವನ್ನು ಶ್ರೀಯವರ ಪಾಂಡಿತ್ಯದಲ್ಲಿ ಹುಡುಕುವಂತಿಲ್ಲ. ಇಂಗ್ಲಿಷ್ ಮತ್ತು ಕನ್ನಡ ಸಾಹಿತ್ಯಗಳೆರಡರಲ್ಲೂ ಅವರ ಪಾಂಡಿತ್ಯ ಅಗಾಧವಾದದ್ದು. ನನಗೆ ತೋರುವ ಮಟ್ಟಿಗೆ ಕಾರಣ ಇದು: ಕನ್ನಡ ಪಾಠ ಹೇಳುವಾಗ ಅವರಲ್ಲಿ ಯಾವ ಮನೋವೃತ್ತಿಯಿತ್ತೋ ಅದಕ್ಕೆ ಭಿನ್ನವಾದ ಮನೋವೃತ್ತಿಯಿತ್ತು—ಇಂಗ್ಲಿಷ್ ಪಾಠ ಹೇಳುವಾಗ. ಇಂಗ್ಲಿಷ್ ಪಾಠ ಹೇಳಲು ಆಂಗ್ಲರೇ ಸರಿ ಎಂಬ ಭಾವನೆ ಆಗ ಬಲವಾಗಿತ್ತು. ಆಂಗ್ಲರಲ್ಲದವರು ಕೆಳದರ್ಜೆಯ ಹುದ್ದೆಗಳಲ್ಲಿರಬಹುದು; ಪ್ರಾಧ್ಯಾಪಕ ಸ್ಥಾನಕ್ಕೆ ಆಂಗ್ಲರೇ ಬರಬೇಕು; ಅಥವಾ ಅದು ಸಾಧ್ಯವಲ್ಲದಿದ್ದರೆ ಇಂಗ್ಲೆಂಡಿನಲ್ಲಿ ಡಿಗ್ರಿ ಪಡೆದವರಾದರೂ ಆಗಬೇಕು. ಒಂದು ದೃಷ್ಟಿಯಿಂದ ಈ ಅಭಿಪ್ರಾಯ ಸರಿ ಎಂದೂ ತೋರಬಹುದು. ಎಷ್ಟಾಗಲಿ ಇಂಗ್ಲಿಷ್ ಆಂಗ್ಲರ ಮಾತೃಭಾಷೆ; ಅಲ್ಲದೆ ಇಂಗ್ಲೆಂಡಿನ ವಿಶ್ವವಿದ್ಯಾಲಯಗಳಲ್ಲಿ ದೊರೆಯುವ ಶಿಕ್ಷಣವೂ ಉತ್ತಮ ಮಟ್ಟದ್ದು ಎನ್ನುವುದು ಸಾಧ್ಯ. ಇದು ನಿಜವೆಂದರೂ ನಮ್ಮ ವಿಶ್ವವಿದ್ಯಾಲಯದಲ್ಲೇ ಪ್ರಾಧ್ಯಾಪಕರಾಗಿದ್ದ ಒಬ್ಬಿಬ್ಬರು ಆಂಗ್ಲರು ಒಳ್ಳೆಯ ಹೆಸರುಗಳಿಸುವುದಂತಿರಲಿ, 'ಅಪ್ರಯೋಜಕರು' ಎನ್ನಿಸಿಕೊಂಡಿದ್ದರು! ಇದೇನೂ ಅವರ ಅಭ್ಯುದಯಕ್ಕೆ ತಡೆಯಾಗಲಿಲ್ಲ. ಆಳರಸರ ಜನಾಂಗದವರು ಎಂಬ ಪ್ರತಿಷ್ಠೆಯಿಂದಾಗಿ ಅವರು ಮೂರು ದಶಕಗಳ ಕಾಲ ದರ್ಬಾರು ನಡಸಿಯೇ ಬಿಟ್ಟರು.

ಇಂಥ ಉದಾಹರಣೆಗಳಿದ್ದರೂ 'ಭಾರತೀಯರು ಅವರ ಸಮಕ್ಕೆ ಬರಲಾರರು' ಎಂಬ ಭಾವನೆ—ಬಹುಶಃ ವಿದ್ಯಾರ್ಥಿಗಳಲ್ಲಿದ್ದದ್ದಕ್ಕಿಂತ ಹೆಚ್ಚಾಗಿ ಸರ್ಕಾರದವರಲ್ಲಿ—ಇದ್ದೇ ಇತ್ತು. ಶ್ರೀಯವರ ಬಾಲ್ಯ ಸ್ನೇಹಿತರಾದ ಎನ್. ಎಸ್. ಸುಬ್ಬರಾಯರು ಅವರಿಗೆ ಹೇಳಿದ್ದರಂತೆ, 'ನೀನು ಇಂಗ್ಲೆಂಡಿಗೆ ಹೋಗಿಬರದಿದ್ದರೆ ನಿನಗೆ ಭವಿಷ್ಯವಿಲ್ಲ' ಎಂದು. ನಾನು ಕಾಲೇಜಿಗೆ ವಿದ್ಯಾರ್ಥಿಯಾಗಿ ಸೇರಿದ ವರ್ಷ (೧೯೧೯) ಶ್ರೀಯವರು ಆಗತಾನೆ 'ಟೆಂಪೊರೆರಿ ಜೂನಿಯರ್ ಪ್ರೊಫೆಸರ್' ಆಗಿದ್ದರು. ಅವರ ಜೊತೆಯವರೆಲ್ಲ ಅವರಿಗಿಂತ ಎರಡು ಮೆಟ್ಟಲು ಮೇಲೆ ಪ್ರಥಮ ದರ್ಜೆಯ ಪ್ರೊಫೆಸರಾಗಿದ್ದರು. 'ಆಂಗ್ಲರ ತಲೆಮೆಟ್ಟಿ ಹಾರುತ್ತೇನೆ' ಎಂಬ ಕೆಚ್ಚು ಶ್ರೀಯವರಲ್ಲಿತ್ತಾದರೂ ಅದರ ಜೊತೆಗೆ

'ನಾನು ಏನೇ ಸಾಧಿಸಲಿ, ಸರ್ಕಾರದವರೂ ಸಹೋದ್ಯೋಗಿಗಳೂ ವಿದ್ಯಾರ್ಥಿಗಳೂ ಎಲ್ಲರೂ ಆಂಗ್ಲರಿಗೆ ಪ್ರಥಮಸ್ಥಾನ ಕೊಡುತ್ತಾರೆ. ಅವರ ಹಿಂದೆ ಕುಂಟುತ್ತ ನಡೆಯುವುದೇ ನನ್ನ ಹಣೆಬರಹ' ಎಂಬ ಕಲ್ಪನೆ ಅವರಲ್ಲಿ ಬೇರೂರಿತ್ತೆಂದು ತೋರುತ್ತದೆ. ನಿಜವಾಗಿ ಇದು ಅವರನ್ನು ಕಾಡಬೇಕಾಗಿರಲಿಲ್ಲ. ಅವರ ಪ್ರವಚನದಿಂದ ತೃಪ್ತಿ ಪಡೆಯದ ನತದೃಷ್ಟರು ನಾಲ್ಕಾರು ಜನರಿದ್ದರೆ ತೃಪ್ತಿ ಪಡೆದು ಆನಂದಿಸಿ ಉತ್ಸಾಹಿತರಾದವರು ಸಾವಿರಾರು ಜನರಿದ್ದರು. ಆದರೂ ಆ ಕಲ್ಪನೆ ಅವರನ್ನು ಕಾಡಿದ್ದು ನಿಜ. ನನ್ನ ಸಹಪಾಠಿಗಳೊಬ್ಬರು ಏನನ್ನೋ ಕೇಳಹೋದಾಗ ಅವರು 'ಸಾಹೇಬರಿದ್ದಾರಲ್ಲ, ಅವರನ್ನು ಕೇಳಿ!' ಎಂದರು. ನನ್ನ ಮಿತ್ರರೊಬ್ಬರು—ಆಗ ತಾನೆ ಇಂಗ್ಲೆಂಡಿನಲ್ಲಿ ಡಿಗ್ರಿ ಪಡೆದು ಬಂದಿದ್ದ ಯುವಕರು—ಶ್ರೀಯವರ ಉಪನ್ಯಾಸವೊಂದನ್ನು ಹೊಗಳಿದಾಗ ಅವರು 'After all we are just home-products, you know' ಎಂದು ವ್ಯಂಗ್ಯವಾಗಿ ಉತ್ತರ ಕೊಟ್ಟರು. ಅವರಿಗೆ ಆ ಯುವಕನ ಮನಸ್ಸನ್ನು ನೋಯಿಸಬೇಕೆಂಬ ಉದ್ದೇಶವಿಲ್ಲದಿದ್ದಿರಬಹುದು, ಆದರೆ 'ಹೋಮ್-ಪ್ರಾಡಕ್ಟ್ಸ್' ಆದವರು ಇಂಗ್ಲೆಂಡಿನಿಂದ ಬಂದವರಿಗೇನೂ ಕಡಮೆಯಲ್ಲ ಎಂಬುದನ್ನು ಒತ್ತಿ ಹೇಳುವ ಉತ್ಕಟೇಚ್ಛೆಯಿತ್ತು.

ಅವರ ಇಂಗ್ಲಿಷ್ ಸಾಹಿತ್ಯವನ್ನು ಕುರಿತ ಉಪನ್ಯಾಸಗಳು ಹದಗೆಟ್ಟದ್ದು ಇದರಿಂದ, ಎಂದು ನನ್ನ ನಂಬಿಕೆ. ತಮಗೆ ಸಾಹಿತ್ಯ ಮಾತ್ರವಲ್ಲದೆ ಇತರ ವಿಷಯಗಳಲ್ಲೂ ಪಾಂಡಿತ್ಯವುಂಟು, ತಮ್ಮ ಪ್ರವಚನಕ್ಕೆ ಇತರರದ್ದಕ್ಕಿಂತ ಹೆಚ್ಚಿನ ವ್ಯಾಪ್ತಿಯುಂಟು ಎಂಬುದು ಎಲ್ಲರಿಗೂ ತಿಳಿಯಲೆಂದು ಅವರು ಮಿತಿಮೀರಿ ಪ್ರಯತ್ನಿಸಿದರು. ಪ್ರಯತ್ನಪೂರ್ವಕವಾಗಿ ಮೆಚ್ಚಿಕೆ ಗಳಿಸಹೊರಟದ್ದರಿಂದ ಅವರ ಪ್ರವಚನಕ್ಕೆ ಪ್ರದರ್ಶನದ ಸೋಂಕು ತಗಲಿತು, ಸಮತೂಕ ತಪ್ಪಿ ಅನೇಕ ವೇಳೆ ಮುಖ್ಯ ವಿಷಯ ಹಿಂದಾಗಿ ಅಮುಖ್ಯವಾದದ್ದೇ ಮುಂದಾಯಿತು. ತಾವೇ ಚಕ್ರಭೀಮನ ಕೋಟೆ (maze) ಯೊಂದನ್ನು ನಿರ್ಮಿಸಿಕೊಂಡು ಅದರಲ್ಲಿ ತಾವೇ ದಾರಿತಪ್ಪಿ ಅಲೆಯುವಂತಾಯಿತು.

ಕನ್ನಡ ಎಂ.ಎ. ತರಗತಿಗೆ ಪಾಠ ಹೇಳುತ್ತಿದ್ದಾಗ ಈ ಮನೋದೌರ್ಬಲ್ಯ ಅವರನ್ನು ಕಾಡಲಿಲ್ಲ. ಅಲ್ಲಿ ಅವರು ಯಾರೊಡನೆಯೂ ಸ್ಪರ್ಧಿಸಬೇಕಾಗಿರಲಿಲ್ಲ — ಸ್ಪರ್ಧೆಯ ಅಂತಸ್ತನ್ನು ಮೀರಿ 'not for competition' ಎನ್ನಿಸಿಕೊಂಡಿದ್ದರು. ಅವರು ೧೯೧೧ರಲ್ಲಿ—ತಮ್ಮ ೨೬ನೆಯ ವಯಸ್ಸಿನಲ್ಲಿ—ಮಾಡಿದ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ಭಾಷಣದಲ್ಲಿ ಕೂಡ 'ನಾನೆಷ್ಟರವನು!' ಎಂಬ 'ಅಪಾಲಜಿಟಿಕ್' (apologetic) ಮನೋವೃತ್ತಿಯಾಗಲಿ 'ನನ್ನ ಆಲೋಚನೆ ಎಷ್ಟು ಗಾಢವಾಗಿದೆ

ನೋಡಿ" ಎನ್ನುವಂಥ ಪ್ರದರ್ಶನ ಮನೋವೃತ್ತಿಯಾಗಲಿ ಎಳ್ಳಷ್ಟೂ ಇಲ್ಲ. ವಿಷಯವನ್ನು ಚೆನ್ನಾಗಿ ತಿಳಿದು ಮನಸ್ಸಿನಲ್ಲಿ ಮಥಿಸಿದವರು ; ಬರಬಹುದಾದ ಪೂರ್ವ ಪಕ್ಷಗಳನ್ನು ಮೊದಲೇ ಊಹಿಸಿಕೊಂಡವರು ; ವಿರೋಧಿಗಳ ಮಾತಿನಲ್ಲಿ ಒಪ್ಪಬಹುದಾದ ಅಂಶಗಳನ್ನು ಒಪ್ಪಲು ಹಿಂಜರಿಯದವರು ; ತಮ್ಮ ವಾದವನ್ನು ಅಸಂದಿಗ್ಧವಾಗಿ ಆತ್ಮವಿಶ್ವಾಸದಿಂದ ಮಂಡಿಸಬಲ್ಲವರು—ಇಂಥವರ ಮಾತು, ಆ ಭಾಷಣದಲ್ಲಿ ಕಾಣಬರುವುದು. ಕನ್ನಡ ಎಂ. ಎ. ತರಗತಿ ಆರಂಭವಾದದ್ದೂ (ಅದು ಆರಂಭವಾದದ್ದು ಶ್ರೀಯುವರ ಪ್ರಯತ್ನದ ಫಲವಾಗಿಯೇ) ಅವರು ಕನ್ನಡದ 'ಆನರೆರಿ' ಪ್ರೊಫೆಸರಾದದ್ದೂ ೧೯೩೭ರಲ್ಲಿ. ಆ ವೇಳೆಗೆ ಅವರು ವಿಶ್ವವಿದ್ಯಾಲಯದಲ್ಲಿ ರಿಜಿಸ್ಟ್ರಾರ್ ಪದವಿಗೆ ಏರಿದ್ದರು ; ಅವರ 'ಇಂಗ್ಲಿಷ್ ಗೀತಗಳು' ಮತ್ತು 'ಗದಾಯುದ್ಧ ನಾಟಕಂ' ಪ್ರಕಟವಾಗಿ ಎಲ್ಲರ ಮೆಚ್ಚಿಕೆಯನ್ನೂ ಗಳಿಸಿದ್ದವು. ೧೯೩೮ರಲ್ಲಿ ಅವರು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನದ ಅಧ್ಯಕ್ಷರಾದರು—ಕನ್ನಡ ಸಾಹಿತ್ಯ ಸಾಮ್ರಾಜ್ಯದಲ್ಲಿ ಸಿಂಹಾಸನಸ್ಥರಾಗಿದ್ದರು.

ಇದರಿಂದಾಗಿ ಅವರು ಕನ್ನಡದ ಅಭಿಮಾನಿಗಳಾದವರೆದುರಿಗೆ ಆಡಿದ ಮಾತು ಸಂಪೂರ್ಣ ಆತ್ಮವಿಶ್ವಾಸದಿಂದ ಕೂಡಿ ಸುಸಂಬದ್ಧವಾಗಿರುತ್ತಿತ್ತು ; ಅವರ ತರ್ಕ ಶ್ರೇಣಿಯ ಮೆಟ್ಟಲುಗಳೊಂದೂ ಮಸಕಾಗುತ್ತಿರಲಿಲ್ಲ ; ಭಾವ ಶಿಥಿಲವಾಗುತ್ತಿರಲಿಲ್ಲ. ಅಲ್ಲದೆ ಕನ್ನಡ ಸಾಹಿತ್ಯವನ್ನು ಕುರಿತು ಮಾತಾಡುವಾಗ ಅವರ ಪಾಶ್ಚಾತ್ಯ ಸಾಹಿತ್ಯ ಜ್ಞಾನವೆಲ್ಲ ನೆರವಿಗೆ ಬರುತ್ತಿತ್ತು ; ಅವರ ಭಾಷಣ ಹೀಗೆ ಉಪನದಿಗಳ ಕಾಣಿಕೆಯನ್ನು ಸ್ವೀಕರಿಸಿದ ಮಹಾನದಿಯಂತೆ ಹರಿಯುತ್ತಿತ್ತು. ಅವರು ಇಂಗ್ಲಿಷ್ ಸಾಹಿತ್ಯವನ್ನು ಕುರಿತು ಮಾಡಿದ ಭಾಷಣಗಳಲ್ಲಿ ಈ ಗುಣ ಕಾಣುತ್ತಿರಲಿಲ್ಲ. ನಾನು ಅವರ ತರಗತಿಗಳಲ್ಲಿದ್ದ ಐದು ವರ್ಷದ ಅವಧಿಯಲ್ಲಿ ಎಂದೂ ಅವರು ಒಂದು ಕನ್ನಡ ಪದವನ್ನು ಉಪಯೋಗಿಸಲಿಲ್ಲ (ಇದೇನೊ ಆಗಿನ ಕಾಲದ ಅಧ್ಯಾಪಕರೆಲ್ಲರಿಗೂ ಅನ್ವಯಿಸುವ ಮಾತು) ; ಎಂದೂ ಸಂಸ್ಕೃತ ಸಾಹಿತ್ಯದ ಅಥವಾ ಕನ್ನಡಸಾಹಿತ್ಯದ ಮಾತೆತ್ತಿದ ನೆನಪಿಲ್ಲ. ಆದರೆ ಒಂದು ದಿನ ಸಂಜೆ ಕರ್ಣಾಟಕ ಸಂಘದ ವತಿಯಿಂದ ಕನ್ನಡ ಛಂದಸ್ಸನ್ನು ಕುರಿತು ಕೊಟ್ಟ ಉಪನ್ಯಾಸದಲ್ಲಿ ಇಂಗ್ಲಿಷಿನ 'ಹಿರೋಯಿಕ್ ಕಪ್ಲೆಟ್' (heroic couplet)ನ ಬೆಳವಣಿಗೆಯನ್ನು ಕ್ರಮವಾಗಿ ವಿವರಿಸಿದ್ದು ; ಅರ್ಥ ಪ್ರತಿ ಪಂಕ್ತಿಯಲ್ಲೂ ಪೂರ್ಣವಾಗುವ ದ್ವಿಪದಿಗಳ, ಮತ್ತು ಪಂಕ್ತಿಯಲ್ಲಾಗಲಿ ದ್ವಿಪದಿಯಲ್ಲಾಗಲಿ ಅರ್ಥವು ಪೂರ್ಣವಾಗದೆ ಮುಂದಿನ ದ್ವಿಪದಿಗೂ ಹರಿಯುವ ದ್ವಿಪದಿಗಳ ಗುಣದೋಷಗಳನ್ನು ವಿವರಿಸಿದ್ದು ; ಸಂಸ್ಕೃತಕವಿಗಳು (ವಾಲ್ಮೀಕಿಯಂಥವರು ಕೂಡ) ಅನುಷ್ಟುಪ್ ಅನ್ನು ತಮ್ಮ ಕಾವ್ಯರಥಕ್ಕೆ ಹೂಡಿ ನಾಲ್ಗಾಲೋಟದಿಂದ ಓಡಿಸಿಕೊಂಡು

ಹೋಗುವ ಒವಲೂ ಪಂಕ್ತಿಯ ಮತ್ತು ಶ್ಲೋಕದ ಕೊನೆಯಲ್ಲಿ ನಿಂತು ನಿಂತು ಸಾಗಿದರೇಕೆ, ಎಂದು ಪ್ರಶ್ನೆ ಹಾಕಿಕೊಂಡದ್ದು ; ಕನ್ನಡದ ರಗಳೆಯನ್ನು ಉದಾಹರಿಸಿ ಅನುಷ್ಟುಪ್‌ನಂತೆಯೇ ಇದೂ ಧೈರ್ಯಮಾಡಿ ಓಡಲಿಲ್ಲ ಎಂದದ್ದು—ಇದೆಲ್ಲ ನೆನಪಿನಲ್ಲಿದೆ. ಕನ್ನಡ ಎಂ.ಎ. ಯಲ್ಲಿ ಅವರ ಶಿಷ್ಯರಾಗಿದ್ದವರು ಇಂಥ ಎಷ್ಟೋ ಉಪನ್ಯಾಸಗಳನ್ನು ಕೇಳಿರಬೇಕು ! ಅಂದಮೇಲೆ ಅವರಿಗೂ ನಮಗೂ ಅಭಿಪ್ರಾಯ ಭೇದವಿರುವುದಕ್ಕೆ ಕಾರಣವಿದೆ. ಅವರು ಹೇಳುವುದೂ ಸರಿ, ನಾನು ಹೇಳಿರುವುದೂ ಸರಿ ; ಎರಡು ಅಭಿಪ್ರಾಯಗಳ ಸಮರ್ಥನೆಗೂ ಸಾಕ್ಷ್ಯ ಸಿಕ್ಕುತ್ತದೆ.

ಕನ್ನಡ ಸಾಹಿತ್ಯವನ್ನು ಕುರಿತ ಪ್ರವಚನಗಳಲ್ಲಿದ್ದ ಈ ಆತ್ಮವಂತಿಕೆ ಅವರ ಸಾರ್ವಜನಿಕ ಉಪನ್ಯಾಸಗಳಲ್ಲಿ ಅನೇಕವೇಳೆ ಕಾಣುತ್ತಿರಲಿಲ್ಲ. ಇದಕ್ಕೆ ಕಾರಣ : ತಮ್ಮ ಅಭಿಪ್ರಾಯಗಳನ್ನು ವಿರೋಧಿಸುವ ಜನ ಸಭೆಯಲ್ಲಿದ್ದಾರೆ ಎಂಬ ಭಾವನೆ. ಅಂಥ ಜನರು ಅಲ್ಲಿರಲಿ ಇಲ್ಲದಿರಲಿ, ಕಾಲ್ಪನಿಕ ವಿರೋಧಿಯೊಬ್ಬನನ್ನಾದರೂ ಸೃಷ್ಟಿಸಿಕೊಂಡು ಅವನ ಮೇಲೆ ಅಸ್ತ್ರಪ್ರಯೋಗ ಮಾಡುವ ಚಟವೂ ಅವರಲ್ಲಿತ್ತು. ಭಾಷಣದ ಬಿಗಿ ಸಡಿಲವಾಗಿ ಅದು ಮಿತಿ ಮೀರಿ ಬೆಳೆಯುತ್ತಿದ್ದದ್ದು ; ಕಂಬಿತಪ್ಪಿ ಉರುಳುತ್ತಿದ್ದದ್ದು ; ಅನವಶ್ಯಕವಾದ ಮತ್ತು ಅಹಿತವಾದ ವ್ಯಂಗ್ಯೋಕ್ತಿ, ಕಟಕಿ, ಅತ್ಯುಕ್ತಿ— ಇವೆಲ್ಲ ಆ ಚಟದ ಫಲ. ಇದರಿಂದಾಗಿ ಇಡೀ ಭಾಷಣದ ಉದ್ದೇಶವೇ ಮುಸಕಾದದ್ದೂ ಉಂಟು.

ಪ್ರಭಾವಶಾಲಿಗಳಾದ ಸಾರ್ವಜನಿಕರೊಡನೆ ವ್ಯವಹರಿಸುವಾಗ ಕೆಲವು ವೇಳೆ ಅವರು ತೋರಿದ ವಿನಯ ಅತಿಯಾಯಿತೆಂದು ನನಗೆ ತೋರಿತ್ತು. ಅದಕ್ಕಿಂತ ಹೆಚ್ಚಾಗಿ ಅನೇಕರಿಗೆ, ಶ್ರೀಕಂಠಮೂರ್ತಿಯವರು ಎನ್ನಿಸಿಕೊಂಡವರಿಗೆ ಕೂಡ— ಬೇಸರ ತಂದದ್ದು ರಾಜಮಹಾರಾಜರುಗಳ ಮತ್ತು ಅವರ ಮಂತ್ರಿಗಳ ವಿಷಯದಲ್ಲಿ ಅವರು ತೋರಿದ ಭಕ್ತಿ. 'ರಾಜಸೇವಾಸಕ್ತ' ಎಂಬ ಬಿರುದು ಬಂದಾಗ ಅವರು ನಿಜವಾಗಿ ಸಂತೋಷಪಟ್ಟರು, ಹೆಮ್ಮೆಪಟ್ಟರು. ಆ ಸಂದರ್ಭದಲ್ಲಿ ಏರ್ಪಡಿಸಿದ ಸಮಾರಂಭಗಳಲ್ಲಿ ಉತ್ಸಾಹದಿಂದ ಭಾಗವಹಿಸಿ ಆ ಬಿರುದಿನ ಲಾಂಛನವನ್ನು ಎಲ್ಲರಿಗೂ ತೋರಿಸಿದರು. ಅವರಂಥ ಘನ ವಿದ್ವಾಂಸರು, ನಮ್ಮ ಸಾಹಿತ್ಯ ಪ್ರಾಂತದಲ್ಲಿದ್ದ ಬಂಜರು ಭೂಮಿಯನ್ನು ನಂದನವನವಾಗಿ ಮಾರ್ಪಡಿಸುವುದರಲ್ಲಿ ಮೊದಲಿಗರಾದವರು—ಅವರಿಗೆ ಈ ಒಣಬಿರುದಿನ ಮೇಲೆ ವ್ಯಾಮೋಹ ಏತಕ್ಕೆ ಬಂತು ! ಸರಸ್ವತಿಗೆ ಮತ್ತು ಜನತಾ ಜನಾರ್ದನನಿಗೆ ಮಾಡಿದ ಸೇವೆಗೆ 'ರಾಜಸೇವೆ' ಎಂದು ಹೆಸರಿಡಬಹುದೆ ? ಇಂಥವರು ದಿವಾನರ ಅನುಚರರಾಗಿ ಅವರೊಡನೆ ಊರೂರು ಸುತ್ತಬೇಕೆ ?

ರಾಜಭಕ್ತಿಯ ಲೇಪ ಶ್ರೀಯವರು ರಚಿಸಿದ ಸಾಹಿತ್ಯದಲ್ಲೂ ಕಾಣುತ್ತದೆ. ಅವರು 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ'ವನ್ನು ಬರೆದಾಗ ನಮಗೆ (ಅಂದರೆ ಅವರ ಶಿಷ್ಯರಿಗೆ) ಅಷ್ಟೇನೂ ಅಸಮಾಧಾನವಾಗಲಿಲ್ಲ. ಕನ್ನಡ ಸಾಹಿತ್ಯದಲ್ಲಿ ಅದೊಂದು ಹೊಸ ಪ್ರಯೋಗ ಎಂಬ ದೃಷ್ಟಿಯಿಂದ ಅದನ್ನು ಸ್ವಾಗತಿಸಿದೆವು. 'ಬಾನ್‌ಕೊಂಡ ಕೃಷ್ಣನ್' ಮತ್ತು 'ಶ್ರೀಜಯನ ಬೆಳಕು' ಎಂಬ ಕವನಗಳಲ್ಲಿ ಎರಡನೆಯದನ್ನು ಗಣನೆಗೆ ತಂದುಕೊಳ್ಳಬೇಕಾಗಿಲ್ಲ. ಮೊದಲನೆಯದನ್ನೂ ಹೊಸ ಪ್ರಯೋಗ (ಇಂಗ್ಲಿಷಿನ elegy ಯನ್ನು ಕನ್ನಡಕ್ಕೆ ತಂದದ್ದು) ಎಂದು ಸ್ವಾಗತಿಸಬೇಕೇನೊ. ಅದನ್ನು ಬರೆಯಬೇಕಾದರೆ ಒಳ್ಳೆಯ ಕವಿಯೇ ಆಗಬೇಕು. ಆದರೂ ಪದಗಳ ಮೇಲೂ ಲಯದ ಮೇಲೂ ಇರುವ ಸ್ವಾಮ್ಯ ಆ ಕವನದ ವಸ್ತುವಿಗೆ ತೀರ ಹೆಚ್ಚು ಎನ್ನಿಸುತ್ತದೆ. ಇದಕ್ಕೂ 'ಎಲಿಜಿ'ಗಳಲ್ಲಿ ಇದೇನೂ ಅಪರೂಪವಲ್ಲ ಎಂದು ಸಮಾಧಾನ ಹೇಳಬಹುದು. ಆದರೆ 'ಶುಕ್ರಗೀತೆ'ಯ ಕೊನೆಯಲ್ಲಿ ಬರುವ 'ಶ್ರೀಜಯನ್ ನಿಡುಬಾಳಿ ನಮ್ಮನೊಲಿದಾಳ್ಗೆ' ಎಂಬ ಪಂಕ್ತಿಯನ್ನು ಸಮರ್ಥಿಸುವುದು ಕಷ್ಟ.

ಮೊತ್ತಮೊದಲ್, ಬೆಳಕಾಗಲೆಂದಾಗ, ಬೆಳಕಾಯ್ತು ; ಬೆಳಕು ಚೆಲುವಾಯ್ತು ;
ಕಿಡಿ ಸಿಡಿದು ಮಿನುಗಿದುವು ಜ್ಯೋತಿಗಳ್ ; ಮೂಡಿದರ್ ಸೂರ್ಯಚಂದಿರರು.
ಲೋಕಚಕ್ಷುಗಳೆನಿಸಿ, ಸತ್ಯಧರ್ಮಗಳಂತೆ, ಕ್ಷಮೆ ದಯೆಗಳಂತೆ.
ಹಸುರ ಸೊಬಗಂ ತೊಟ್ಟು, ಹಾಡುತ್ತ, ಬಾನ್‌ಬಯಲೊಳಾಡುತ್ತ,
ಸೌಂದರ್ಯದಿಂ ತೀವಿ, ಭೂದೇವಿ ಬೆಳಗಿದಳು, ಜೀವಸರಮಾತ್ಮರಿಂತೊಳಗಿ.

ಈ 'ದಿವ್ಯದರ್ಶನ'ದಿಂದ ಆರಂಭವಾಗಿ ಗಾಯತ್ರಿಯ ಮತ್ತು ಉಪನಿಷನ್ಮಂತ್ರಗಳ ಗಂಭೀರಗಾನಕ್ಕೆ ಹೊಂದಿಕೊಂಡಂತೆ ಮುಂದುವರಿದು, ಸೃಷ್ಟಿಯಾದಂದಿನಿಂದಲೂ ನಡೆದಿರುವ ಧರ್ಮಾಧರ್ಮಗಳ ಯುದ್ಧವನ್ನೂ

ವಿಷದಿನಮೃತವ ಕಡೆದು, ರೌದ್ರರೂಪಂಗಳಿಂ ರಮ್ಯತೆಯ ಪಡೆದು,
ವಕ್ರಮಂ ಋಜುಗೊಳಿಸಿ, ಒಲ್ಲದುದನೊಲ್ಮೆಯಿಂದೊಲಿಸಿ,

ವಿಶ್ವದಲ್ಲೂ ಮಾನವನ ಆಂತರಿಕ ಜೀವನದಲ್ಲೂ ನಡೆದ ಮಹಾತುಮುಲದಿಂದ ಹೀಗೆ ಮೇಲೆದ್ದು ಪಡೆದ ಶಾಂತಿಯನ್ನೂ 'ಪುಣ್ಯಪುರಮಂ ಕಟ್ಟಿ ಪುರುಷನೊಳ ಅಗ್ನಿಯಂ' ಕಾಯುವವರ ಸಾಧನೆಯನ್ನೂ ಬಣ್ಣಿಸಿದ ಕವನ ಹಠಾತ್ತಾಗಿ ಪವನತಪ್ಪಿದ ಪುಷ್ಪಕದಂತೆ ಕೆಳಗುರುಳಿ 'ಶ್ರೀಜಯನ್ ನಿಡುಬಾಳಿ ನಮ್ಮನೊಲಿದಾಳ್ಗೆ' ಎಂಬ ಪಂಕ್ತಿಯಲ್ಲಿ ಕೊನೆಗಾಣಬೇಕೆ ! ಇದು ಶ್ರೀ ಜಯನ್ ಅವರನ್ನು ಕಡೆಗಣಿಸುವ ಮಾತಲ್ಲ. ಕಾವ್ಯ

ಕಲೆಯ ದೃಷ್ಟಿಯಿಂದ ಆ ಕವನ ಮುಗಿಯಬೇಕಾದ್ದು ಹಾಗಲ್ಲ. 'ವಿಶ್ವಭಾರತಿ ಶರಣು, ಕಿರುತೀರ್ಥವುಲ್ಲು'!

ಇವನ್ನೆಲ್ಲ ಇಲ್ಲಿ ಕಾಣಿಸಬೇಕಾದದ್ದೇನು? ಆಗ ನನ್ನನ್ನು ಕಾಡಿದ ದುಗುಡದಲ್ಲಿ ಭಾಗಿಗಳಾದ ಇತರರೂ ಇದ್ದಾರೆಂಬುದನ್ನು ನಾನು ಬಲ್ಲೆ. ಅವರೊಡನೆ ನನ್ನ ಅಸಮಾಧಾನವನ್ನು ಹಂಚಿಕೊಂಡದ್ದಾಗಿದೆ. ಈಚೆಗೆ ನಾನು ತಂದುಕೊಂಡಿರುವ ಸಮಾಧಾನವನ್ನೂ ಅಂತೆಯೇ ಹಂಚಿಕೊಳ್ಳಬೇಕು ಎನ್ನಿಸುತ್ತಿದೆ.

ಈಗ ಯೋಚಿಸಿ ನೋಡಿದರೆ — ಬಿ. ಎಂ. ಶ್ರೀಯವರು ಇದಕ್ಕೆಲ್ಲ ಹೇಗೆ ಮನ ಸೋತರು ಎಂಬ ಆಶ್ಚರ್ಯಕ್ಕಿಂತ 'ನಮ್ಮ ಮನಸ್ಸಿನಲ್ಲಿ ಅದೇಕೆ ಅಂಥ ದೊಡ್ಡ ಅಪರಾಧ ವಾಗಿ ಕಂಡಿತು!' ಎಂಬ ಆಶ್ಚರ್ಯವೇ ಹೆಚ್ಚಾಗಿ ಕಾಣುತ್ತದೆ. ಅವರು ಬೆಳೆದ ವಾತಾವರಣ ದಲ್ಲಿ ರಾಜಭಕ್ತಿಗೆ ಸದ್ಗುಣಗಳ ಪಟ್ಟಿಯಲ್ಲಿ ಸ್ಥಾನವಿತ್ತು; ಶ್ರೇಷ್ಠವಾದ ಸ್ಥಾನವೇ ಇತ್ತು. ನಾಲ್ವಡಿ ಕೃಷ್ಣರಾಜ ಒಡೆಯರಲ್ಲಿ ಶ್ರೀಯವರಿಗಿದ್ದ ಗೌರವಕ್ಕೆ ಒಡೆಯರು ಅರ್ಹರೆಂದೂ ಒಪ್ಪಬೇಕು. ಒಂದು ವೇಳೆ ಅರ್ಹರಲ್ಲದಿದ್ದರೂ—ರಾಜಮಹಾ ರಾಜರುಗಳಲ್ಲಿ ಗೌರವಾರ್ಹರಲ್ಲದವರು ಒಬ್ಬರಲ್ಲ ಇಬ್ಬರಲ್ಲ!—ಆ ಕಾಲದಲ್ಲಿ ಅವರ ಸ್ಥಾನಕ್ಕೆ ಗೌರವವಿತ್ತು. ಫ್ರಾನ್ಸಿನ ದೊರೆಗಳನೇ ಲೂಯಿ 'l' etat c'est moi' (ರಾಜ್ಯವೆಂದರೆ ನಾನೇ!) ಎಂದನಂತೆ. ಆ ಭಾವನೆ ಹೆಚ್ಚಾಗಿಯೋ ಕಡಮೆ ಯಾಗಿಯೋ ಮೊನ್ನೆಮೊನ್ನೆಯವರೆಗೂ ಇತ್ತು; ಈಗಲೂ ನಾಶವಾಗಿದೆ ಎನ್ನು ವಂತಿಲ್ಲ! ರಾಜರಿಗಿಂತ ಜ್ಞಾನದಲ್ಲಿ ಸಾವಿರಪಾಲು ಶ್ರೇಷ್ಠರಾದವರು ರಾಜರಿಗೆ ಮಣಿದಿದ್ದಾರೆ—ಆ ನಡತೆ ಶ್ರೀಕಂಠಯ್ಯನವರಿಗೆ ವಿಶಿಷ್ಟವಾದದ್ದಲ್ಲ. ಅರಮನೆಯ ಉತ್ಸವಗಳ ಸಂದರ್ಭದಲ್ಲಿ ಟೆನಿಸನ್ ಕವನ ಕಟ್ಟಬಹುದಾದರೆ—ಅಷ್ಟು ದೂರ ಏಕೆ ಹೋಗಬೇಕು? ನಮ್ಮಲ್ಲೇ ಪಂಪ ರನ್ನರಿಲ್ಲವೆ!—ಶ್ರೀಕಂಠಯ್ಯನವರಲ್ಲಿ ಅದೇಕೆ ಅಕ್ಷಮ್ಯವಾಗಬೇಕು? ಸಿಂಹಾಸನಸ್ಥರಾದ ರಾಜರು ಜಿ. ಸಿ. ಎಸ್. ಐ. ಯಂಥ ನಾಲ್ಕಕ್ಷರಕ್ಕಾಗಿ ಹಂಬಲಿಸಿ ಅಂಗಲಾಚಿ ಲಕ್ಷಗಟ್ಟಲೆ ಲಂಚ ಕೊಡುತ್ತಿದ್ದರಂತೆ, ದಿಗ್ವಿಜಯ ಮಾಡಿಕೊಂಡು ಬಂದವರಂತೆ ಅದನ್ನು ಮೆರೆಸುತ್ತಿದ್ದರಂತೆ. ಶ್ರೀಕಂಠಯ್ಯ ನವರು ತಮ್ಮ 'ರಾಜಸೇವಾಸಕ್ತ'ಕ್ಕಾಗಿ ಹೆಮ್ಮೆಪಟ್ಟದ್ದು ಆಶ್ಚರ್ಯವಲ್ಲ. ಆ ಮಟ್ಟದಿಂದ ಮೇಲಕ್ಕೇರಲಿಲ್ಲವಲ್ಲ ಎಂದು ಬೇಕಾದರೆ ನಾವು ನಿಟ್ಟುಸಿರೆಳೆಯಬಹುದು.

ಸಾರ್ವಜನಿಕ ಪ್ರಮುಖರಲ್ಲಿ ಅವರು ತೋರಿದ ವಿನಯಕ್ಕೂ ಕಾರಣವಿದೆ. ನಮಗೆ ಅತಿ ನಮ್ರತೆಯಾಗಿ ಕಂಡದ್ದು ಅವರಿಗೆ ಸೌಜನ್ಯ, ಸರಳತೆ ಎನ್ನಿಸಿರಬಹುದು. ಕನ್ನಡದ ವಿಷಯದಲ್ಲಿ ಜನರಿಗಿದ್ದ ಔದಾಸೀನ್ಯವನ್ನು ತೊಡೆದು ಹಾಕಿ, ಕನ್ನಡನಾಡಿನ ಎಲ್ಲ ಭಾಗದವರೂ ಒಂದು ಜನ ಎಂಬ ಭಾವನೆಯನ್ನು ಬೆಳಸಬೇಕು—ಅದಕ್ಕಾಗಿ

ಅವರು ಎಲ್ಲ ಕಷ್ಟವನ್ನೂ ಸಹಿಸಿ ಆರೋಗ್ಯವನ್ನೂ ಲೆಕ್ಕಿಸದೆ ದೇಶವಲ್ಲೆಲ್ಲ ಸುತ್ತಾಡಿ ಜನರೊಡನೆ ಒಂದಾಗಿ ಬೆರೆದರು. ಅವರಿಗೆ ಮೆಚ್ಚಿಕೆಯಾಗುವ ಮಾತಾಡಿದರು, ಸಲ್ಲಬೇಕಾದ್ದಕ್ಕಿಂತ ಹೆಚ್ಚಿನ ಹೊಗಳಿಕೆಯನ್ನು ಸಲ್ಲಿಸಿದರು. 'ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ' ಎಂಬ ಮಾತಾಡಿದವರೂ ಅವರೇ! ಆದರೆ ಜನರಲ್ಲಿ 'ಅಭಿಮಾನ'ವನ್ನು ಕೆರಳಿಸಿ ಅದನ್ನು ತಮ್ಮ ಉದ್ದೇಶಕ್ಕಾಗಿ ಬಳಸಿಕೊಂಡು ಅವರನ್ನು ಹಿರಿಯ ಸತ್ಯವೊಂದರ ಕಡೆಗೆ ಸೆಳೆಯಬಹುದು ಎಂದು ಅವರಿಗೆ ತೋರಿರಬಹುದು. ಕರ್ಣಾಟಕದ ಎಲ್ಲ ಭಾಗಗಳನ್ನೂ ಒಟ್ಟುಗೂಡಿಸಿ ಜನವನ್ನು ಕಟ್ಟದಿದ್ದರೆ ನಮಗೆ ಅಭ್ಯುದಯವಿಲ್ಲ ಎಂಬುದು ಅವರು ಕಂಡ ಸತ್ಯ. ಅವರು ಆಗಾಗ ತಗ್ಗಿ ನಡೆದದ್ದು ಆ ಸತ್ಯದ ಸೇವೆಯಲ್ಲಿ. ಅದಕ್ಕಾಗಿ ರಾಜರು, ದಿವಾನರು, ಮಠಗಳು, ರಾಜಕಾರಣಿಗಳು—ಇವರೆಲ್ಲರ ಸಹಕಾರವನ್ನೂ ಅವರು ಬಯಸಿದರು, ಪಡೆದರು.

ಮೇಲಿನ ಮಾತುಗಳನ್ನು ಬರೆದ ಮೇಲೆ ಇದು ಸ್ವಲ್ಪ ವಿಶೇಷ ವಕೀಲಿ (special pleading) ಆಯಿತೇನೋ ಎಂಬ ಸಂದೇಹ ಬಂತು. ನಾನೇನೊ ಪ್ರಾಮಾಣಿಕವಾಗಿ ನನಗೆ ತೋರಿದ್ದನ್ನು ಬರೆದೆ. ಇಷ್ಟರ ಮೇಲೆ ವಿಶೇಷ ವಕೀಲಿ ಯಾದರೆ ಆಗಲಿ, ಅಲ್ಲದೆ ಸೈತಾನ್ ವಕೀಲಿ (the devil's advocate) ಕೆಲಸಕ್ಕಿಂತ ವಿಶೇಷ ವಕೀಲಿಯೇ ಹಿತ!

ಇನ್ನು ಶ್ರೀಯವರ ಕವಿತಾಶಕ್ತಿಯನ್ನು ಕುರಿತು ಒಂದೆರಡು ಮಾತು. 'ಇಂಗ್ಲಿಷ್ ಗೀತಗಳು' ಕನ್ನಡ ಸಾಹಿತ್ಯದ ಮೇಲೆ ಉಂಟುಮಾಡಿದ ಪರಿಣಾಮವನ್ನಾಗಲಿ 'ಅಶ್ವತ್ಥಾಮನ್' ನಾಟಕದ ಹಿರಿಮೆಯನ್ನಾಗಲಿ ಯಾರೂ ಅಲ್ಲಗಳೆಯುವಂತಿಲ್ಲ. ಕನ್ನಡದಲ್ಲಿ ಹೊಸ ರೀತಿಯ ಕಾವ್ಯರಚನೆಗೆ ಸ್ವಲ್ಪಮಟ್ಟಿಗೆ ಪೂರ್ವ ಸಿದ್ಧತೆ ನಡೆದಿತ್ತೆಂದು ಒಪ್ಪಬಹುದಾದರೂ 'ಇಂಗ್ಲಿಷ್ ಗೀತಗಳು' ಸಂಕಲನದ ಪ್ರಕಟಣೆ ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯೆಬ್ಬಿಸಿತೆಂಬ ಮಾತು ಸತ್ಯ. ಶ್ರೀಯವರು ಇನ್ನೇನೂ ಮಾಡದೆ ಅದೊಂದು ಪುಸ್ತಕವನ್ನು ಮಾತ್ರ ಪ್ರಕಟಿಸಿದ್ದರೂ ಕನ್ನಡ ಸಾಹಿತ್ಯದಲ್ಲಿ ಅವರ ಹೆಸರು ಶಾಶ್ವತವಾಗಿ ನಿಲ್ಲುತ್ತಿತ್ತು. ಆದರೂ ಅದು ಭಾಷಾಂತರ. 'ಅಶ್ವತ್ಥಾಮನ್' ಭಾಷಾಂತರವೂ ಹೌದು, ರೂಪಾಂತರವೂ ಹೌದು, ಶ್ರೀಯವರ ಸ್ವಂತ ಕೃತಿಯೂ ಹೌದು. ಅವರು ಸ್ವತಃ ಕವಿಗಳಲ್ಲದಿದ್ದರೆ ಆ ನಾಟಕವನ್ನು ಬರೆಯಲಾಗುತ್ತಿರಲಿಲ್ಲ. ಅದು ತನ್ನದೇ ಆದ ಪ್ರಭೆಯುಳ್ಳ ಕೃತಿ; ಸ್ವತಂತ್ರವಾಗಿ ನಿಲ್ಲಬಲ್ಲದು. ಆದರೆ ಶ್ರೀಯವರಿಗೆ ಸೋಫೊಕ್ಲೀಸನ 'ಏಜಾಕ್ಸ್' ನಾಟಕ ಸಿಕ್ಕಲೇ ಇಲ್ಲ, ಯಾರೋ ಆ ನಾಟಕದ ಕಥೆಯನ್ನು ಮಾತ್ರ ಹೇಳಿದ್ದರು, ಎಂದಿಟ್ಟುಕೊಳ್ಳೋಣ. ಅದಷ್ಟೇ ಆಧಾರದ ಮೇಲೆ ಅವರು ನಾಟಕ ಬರೆದಿದ್ದರೆ, ಆ ಕೃತಿ ಈಗ ನಮ್ಮ ಮುಂದಿರುವ 'ಅಶ್ವತ್ಥಾಮನ್' ಮಟ್ಟಕ್ಕೆ ಏರುತ್ತಿತ್ತೆ?

ನಡೆಯದೆ ಹೋದದ್ದು ನಡೆದಿದ್ದರೆ, ಇಲ್ಲದೆ ಹೋದದ್ದು ಇದ್ದಿದ್ದರೆ ಏನಾಗುತ್ತಿತ್ತು ಎನ್ನುವ ಪ್ರಶ್ನೆ (ಅದೂ ಸಾಹಿತ್ಯವನ್ನು ಕುರಿತ ಪ್ರಶ್ನೆ!) ಕೇಳುವುದು ಹುಚ್ಚುತನ. ಸರಸ್ವತಿ ಯಾವ ಘಳಿಗೆಯಲ್ಲಿ ಯಾರಿಗೆ ಯಾವ ಪ್ರಮಾಣದ ವರ ಕೊಡುತ್ತಾಳೆ ಎಂಬುದನ್ನು ಯಾರೂ ಅರಿಯರು. ಆ ಪ್ರಶ್ನೆಯನ್ನು ಯಾರಾದರೂ ಕೇಳಿದರೆ ನಾವು ಕೆಳಗೆ ಕಂಡಂತೆ ಉತ್ತರಕೊಡಬಹುದು : "ನಿಮ್ಮ ಪ್ರಶ್ನೆಯಲ್ಲಿ ನೀವು ಪ್ರಸ್ತಾಪಿಸಿರುವ ಅಸ್ತಿತ್ವವಿಲ್ಲದ ಕೃತಿ 'ಅಶ್ವತ್ಥಾಮನ್'ಗಿಂತ ಕೀಳಾಗಿರುತ್ತಿತ್ತೋ ಮೇಲಾಗಿರುತ್ತಿತ್ತೋ ಖಚಿತವಾಗಿ ಹೇಳಲಾರೆವು. ನಾವು ಮಾಡಬಹುದಾದ ಕೆಲಸವೆಂದರೆ—ಶ್ರೀಯವರ ಕೃತಿಗಳ ಆಧಾರದ ಮೇಲೆ ಒಂದು ಊಹೆ ಕಟ್ಟುವುದು. ಅದು ಊಹೆ ಮಾತ್ರವೆಂಬುದನ್ನು ನೆನಪಿನಲ್ಲಿಡಬೇಕು. ನಾವು ಗಮನಕ್ಕೆ ತಂದುಕೊಳ್ಳುವ ಅಂಶಗಳು ಎರಡು : ೧. ಶ್ರೀಯವರು 'ಅಶ್ವತ್ಥಾಮನ್'ನಲ್ಲಿ ತಮಗೆ ಸೂಕ್ತ ತೋರಿದ ಒದಲಾವಣೆ ಮಾಡಿಕೊಂಡಿದ್ದಾರೆಂಬುದು ನಿಜ. ಆದರೆ ಅವರಿಗೆ ಮೂಲದ ಕಥಾವಸ್ತು ಮಾತ್ರದ ಅವಲಂಬನ ಸಾಕಾಗಲಿಲ್ಲ. ಅವರು ಮೂಲವನ್ನು ಬಹುಮಟ್ಟಿಗೆ ದೃಶ್ಯವಾದ ಮೇಲೆ ದೃಶ್ಯ, ಭಾಷಣವಾದ ಮೇಲೆ ಭಾಷಣ, ಹೀಗೆ ಅನುಸರಿಸಿದ್ದಾರೆ. ಅವೆಲ್ಲದರ ಅವಲಂಬನವೂ ಅವರಿಗೆ ಬೇಕೆನ್ನಿಸಿತು—ಇದೂ ನಿಜ. ಇವನ್ನೂ, ಅವರು ಸಂಪೂರ್ಣ ಸ್ವತಂತ್ರವಾದ ನಾಟಕ ಯಾವುದನ್ನೂ ಬರೆಯಲಿಲ್ಲವೆಂಬುದನ್ನೂ ನಾವು ಗಮನಿಸಬೇಕು. ೨. ಅವರ ಇತರ ಕೃತಿಗಳನ್ನು ಪರಿಶೀಲಿಸಿ ನೋಡಿದರೆ, ಅವರು ಸ್ವತಂತ್ರವಾಗಿ 'ಅಶ್ವತ್ಥಾಮನ್' ಮಟ್ಟದ ಕೃತಿಯನ್ನು ರಚಿಸಬಹುದಾಗಿತ್ತು ಎಂಬುದಕ್ಕೆ ಸಾಕ್ಷ್ಯ ಸಿಕ್ಕುವುದಿಲ್ಲ. ಇಷ್ಟು ಮಾತ್ರ ನಾವು ಹೇಳಬಲ್ಲೆವು.

ಶ್ರೀಯವರ ಪ್ರತಿಭೆ ಮಹಾಕೃತಿಯೊಂದರ ಲಯಕ್ಕೆ ಸರಿಯಾಗಿ ಮಿಡಿಯಬಲ್ಲದು, ಅದರ ಕರೆಗೆ ಓಗೊಡಬಲ್ಲದು ; ಆದರೆ ತಾನೇ ಆ ಮಟ್ಟದ ಕೃತಿಯನ್ನು ಸೃಷ್ಟಿಸಲಾರದು—ಬಹುಶಃ ಇದು ಅವರ ಪ್ರತಿಭೆಯ ಗುಣ. ಅದನ್ನು ಸೃಷ್ಟಿಶಕ್ತಿಯುಳ್ಳ ಪ್ರತಿಭೆ (creative imagination) ಎನ್ನುವುದಕ್ಕಿಂತ ಸೃಷ್ಟಿಶಕ್ತಿಗೆ ಪ್ರತಿಸ್ಪಂದನ ಕೊಡಬಲ್ಲ ಪ್ರತಿಭೆ (responsible imagination) ಎಂದರೆ ಸರಿಹೋದೀತೇನೋ. ನಾನು ಇಲ್ಲಿ ಲಕ್ಷಣ (definition) ಹೇಳುತ್ತಿಲ್ಲ, ಅವರ ಪ್ರತಿಭೆಯನ್ನು ಬಣ್ಣಿಸುತ್ತಿದ್ದೇನೆ ಮಾತ್ರ. ಮೇಲೆ ಹೇಳಿದ ಎರಡೂ ಬೇರೆ ಬೇರೆ ಜಾತಿಯ ಪ್ರತಿಭೆಗಳು ಎಂದರೆ ಮನಶ್ಶಾಸ್ತ್ರ ಒಪ್ಪುವುದಿಲ್ಲ. ಅವೆರಡಕ್ಕೂ ಇರುವ ವ್ಯತ್ಯಾಸ ಪ್ರಮಾಣದ್ದು, ಜಾತಿಯದಲ್ಲ. 'Responsive' ಮಟ್ಟದಲ್ಲಿ ಅವರ ಪ್ರತಿಭೆ ಅದ್ಭುತವಾದ ಕೆಲಸ ಮಾಡಬಲ್ಲದು.

ಈ ಮಾತಿನ ಜೊತೆಗೆ ಇನ್ನೂ ಒಂದನ್ನು ಸೇರಿಸುವ ಸಾಹಸ ಮಾಡಬಹುದೇನೊ. ಶ್ರೀಯವರ ಹೃದಯ ಮಿಡಿದದ್ದು ಸಾವಿರ ಬಣ್ಣದ, ಸಾವಿರ ಮುಖದ ಮಾನವ ಜೀವನಕ್ಕೆ ಸಂವಾದಿಯಾಗಿ ಎನ್ನುವುದಕ್ಕಿಂತ 'ಆ ಜೀವನದ ಪ್ರತಿಕೃತಿಯಾದ ಸಾಹಿತ್ಯಕ್ಕೆ ಸಂವಾದಿಯಾಗಿ', ಎನ್ನುವುದು ಸತ್ಯಕ್ಕೆ ಹತ್ತಿರ ಎನ್ನಿಸುತ್ತದೆ. ಇಲ್ಲೂ ಒರುವ ಪ್ರಶ್ನೆ ಪ್ರಮಾಣದ್ದು ; ಸಾಹಿತ್ಯಕ್ಕೂ ಜೀವನಕ್ಕೂ ಮಧ್ಯೆ ಕಂದರವಿದೆಯೆಂದು ನಾನು ಸೂಚಿಸುತ್ತಿಲ್ಲ. ಶ್ರೀಯವರ ಸ್ವಂತ ಕೃತಿಗಳನ್ನೇ ಒಳಗೊಂಡ 'ಹೊಂಗನಸುಗಳು' ಎಂಬ ಸಂಕಲನದಲ್ಲಿ ೧೪ ಕವನಗಳಿವೆ. ಅವುಗಳಲ್ಲಿ ಐದು ಭಾಷಾ ಪ್ರೇಮ ದೇಶಪ್ರೇಮ ಗಳನ್ನು ಕುರಿತವು. ಇನ್ನೈದು ಮೈಸೂರಿನ ರಾಜವಂಶವನ್ನು ಕುರಿತವು—'ಮೈಸೂರು ಮಕ್ಕಳು' ಎಂಬ ಕವನದಲ್ಲೂ ರಾಜಭಕ್ತಿಗೆ ಹೆಚ್ಚು ಸ್ಥಾನ ದೊರಕಿದೆ. ಎರಡು ('ಪಂಪ' ಮತ್ತು 'ಶಿಲಪ್ಪದಿಗಾರಂ') ನೇರವಾಗಿ ಸಾಹಿತ್ಯವನ್ನು ಕುರಿತವು. ಉಳಿ ದೆರಡಕ್ಕೆ ಸ್ವಲ್ಪ ಹೆಚ್ಚಿನ ವ್ಯಾಪ್ತಿಯಿದೆ. ದೇಶಪ್ರೇಮ ಭಾಷಾಪ್ರೇಮ ಸಾಹಿತ್ಯಪ್ರೇಮ ಗಳು ಎಷ್ಟೋ ಕವಿಗಳನ್ನು ಆಕರ್ಷಿಸಿವೆ. ಶ್ರೀಯವರ ಕವಿತೆ ಆ ಕ್ಷೇತ್ರಕ್ಕೆ ಸೀಮಿತ ವಾದಂತೆ ತೋರುತ್ತದೆ. ಜೀವನದ ನೂರೆಂಟು ಆಸೆಗಳೂ ಸುಖದುಃಖಗಳೂ ಅವರನ್ನು ಕಾವ್ಯಸೃಷ್ಟಿಗೆ ಪ್ರೇರಿಸಿದಂತಿಲ್ಲ.

ಇದು ಅವರ ಪ್ರತಿಭೆಯ ಸ್ವರೂಪವನ್ನು ನಿರ್ದೇಶಿಸುವ ಮಾತು. ಆ ಕಾಲದಲ್ಲಿ ಕನ್ನಡಿಗರ ಮತ್ತು ಕನ್ನಡ ಸಂಸ್ಕೃತಿಯ ಅಭ್ಯುದಯಕ್ಕೆ ಯಾವುದು ಅತ್ಯಾವಶ್ಯಕ ವಾಗಿತ್ತೊ ಅದು ಅವರ ಹೃದಯವನ್ನು ಆಕ್ರಮಿಸಿತು, ಪ್ರೇರಕಶಕ್ತಿಯಾಯಿತು. ಅದಕ್ಕಾಗಿ, ಅಂದರೆ ಅವರ ಕವನಗಳಿಗಾಗಿ ಮಾತ್ರವಲ್ಲ, ಅವುಗಳ ಮತ್ತು ಭಾಷಣ ಇತ್ಯಾದಿಗಳ ಮೂಲಕ ಅವರು ಕನ್ನಡ ಜನತೆಯ ಮೇಲೆ ಬೀರಿದ ಪ್ರಭಾವಕ್ಕಾಗಿ ನಾವು ಕೃತಜ್ಞರಾಗಿರಬೇಕು. ಹೇಳಿದ್ದನ್ನೇ ಹೇಳಿ 'ರಾಯ ಕೇಳೆಂದ' ಸಾಹಿತ್ಯದಲ್ಲೇ ತೃಪ್ತಿ ಪಡೆದಿದ್ದ ಜನರನ್ನು ಎಚ್ಚರಿಸಿದವರು ; ನಾವು ಒಂದಾಗಬೇಕು ಎಂದು ಬೇಡಲು ಸಹ ಬಾಯಿಲ್ಲದವರಿಗೆ ಬಾಯಿ ಕೊಟ್ಟವರು ;

> ಸಾವಿಲ್ಲ—ಸಾಯುತಿಹೆ........
> ನನ್ನನೊಲ್ಲರು ನನ್ನ ಮಕ್ಕಳೇ ! ತಾವ್ ಬಾಳಿ ತಾಯ ಬಾಳಿಸರು.
>
> ಹೆರರ ನುಡಿ, ಹೆರರ ನಡೆ—ಹೆರರ ಕೂಗೇ ಕೂಗು ; ಹೆರರವೇ ಹೆಮ್ಮೆ !

ಹೀಗೆ ಗೋಳಿಡುತ್ತಿದ್ದ ಕನ್ನಡತಾಯ ಚಿತ್ರವನ್ನು ನಮ್ಮ ಕಣ್ಣಿಗೆ ಕಟ್ಟಿ ನಮ್ಮನ್ನು ಹೊಡೆದೆಬ್ಬಿಸಿದವರು—ಶ್ರೀಯವರು. ಅವರ ದೇಶಾಭಿಮಾನ ಭಾಷಾಭಿಮಾನದ ಕವನಗಳು ಅದೆಷ್ಟೋ ಶಾಲೆಗಳಲ್ಲಿ ಮೊಳಗಿದವು. ಕನ್ನಡ ಜನತೆ ಒಂದಾಯಿತು.

ಕರ್ಣಾಟಕ ರಾಜ್ಯದ ಸ್ಥಾಪನೆಗೆ ಅಸ್ತಿಭಾರ ಹಾಕಿದವರಲ್ಲಿ ಅವರು ಮುಖ್ಯರು. ರಾಜಕಾರಣಿಗಳು ಬಾಹ್ಯಪರಿಸರವನ್ನು ಸಿದ್ಧಮಾಡಲು ದುಡಿದಿರಬಹುದು. ಶ್ರೀಯವರು ನಮ್ಮ ಭಾವಜೀವನವನ್ನು ಮಾರ್ಪಡಿಸಿ ಕಾರ್ಯೋನ್ಮುಖವಾದ ಶಕ್ತಿ ಕಟ್ಟಿಯೊಡೆದು ಚಿಮ್ಮುವಂತೆ ಮಾಡಿದರು. ಇದು ಬಿ.ಎಂ. ಶ್ರೀಕಂಠಯ್ಯನವರ ನಿಜವಾದ ಸೇವೆ ; ಇತರ ಎಲ್ಲ ಸೇವೆಗಳಿಗಿಂತ ಹೆಚ್ಚು ಮಹತ್ವದ್ದು, ಕೃತಜ್ಞತೆಗೆ ಅರ್ಹವಾದದ್ದು.

ಅವರು ಕೆಲವುಬಾರಿಯಾದರೂ ಅನುಪಮವಾದ ರೀತಿಯಲ್ಲಿ ಪಾಠ ಹೇಳಿದ್ದುಂಟು, ಭಾಷಣ ಮಾಡಿದ್ದುಂಟು ; ಒಳ್ಳೆಯ ಕವನಗಳನ್ನು ಬರೆದದ್ದುಂಟು. ಆದರೂ ನನ್ನ ದೃಷ್ಟಿಯಲ್ಲಿ ಅವರು ಪ್ರಥಮತಃ ಅಧ್ಯಾಪಕರಲ್ಲ, ಭಾಷಣಕಾರರಲ್ಲ ; ಇವೆರಡಕ್ಕಿಂತ ಹೆಚ್ಚಾಗಿ ಕವಿಗಳು. ಅದಕ್ಕಿಂತ ಹೆಚ್ಚಾಗಿ ಅವರು ಸೇನೆಯೊಂದರ ಸೇನಾನಿ, ಕ್ರಾಂತಿಯೊಂದರ ಕೇಂದ್ರ, ಪಂಥವೊಂದರ ಪ್ರವಾದಿ.

* * *

ನಾನು ಮಾತಿನ ಪಂಜರದಲ್ಲಿ ಹಿಡಿದಿಡಲು ಯತ್ನಿಸಿರುವ ನೆನಪುಗಳಲ್ಲಿ ಬಹುಭಾಗ ಅರ್ಧ ಶತಮಾನಕ್ಕಿಂತ ಹಿಂದಿನದು. ಈಗ ನನಗೆ ಕಾಣುತ್ತಿರುವ ನನ್ನ ಗುರುಗಳ ವ್ಯಕ್ತಿತ್ವ ಸಂಜೆ ಬೆಳಕಿನ ಹಿನ್ನೆಲೆಯಿಂದಾಗಿ ಕಾಣುವ ದೀರ್ಘವಾದ ನೆರಳೆ? ನನಗೆ ಯಾವುದು ಅವರಲ್ಲಿ ಹಿರಿಮೆಯಂತೆ ಕಾಣುತ್ತದೆಯೋ ಅದು ಕಾಲಪುರುಷ ನನಗೆ ನೇಯ್ದುಕೊಟ್ಟ ನಾನು ಅವರ ಮೇಲೆ ಹೊದಿಸಿದ ವರ್ಣರಂಜಿತ ಉತ್ತರೀಯ ಮಾತ್ರವೆ ? ಅವರಿಗೆ 'ಪುರಾಣಮಿತ್ಯೇವ' ಗೌರವ ಸಲ್ಲಿಸುತ್ತಿದ್ದೇನೆಯೆ ? 'ಇಲ್ಲ' ಎಂಬ ತೀರ್ಮಾನಕ್ಕೆ ಬಂದಿದ್ದೇನೆ. ಅವರೇನು ಆದರ್ಶ ಪುರುಷರಲ್ಲ ; ನಮ್ಮೆಲ್ಲರಂತೆ ಬದುಕಿನಲ್ಲಿ ಆಗಾಗ ಎಡವಿದವರೇ. ಆದರೆ ಬ್ರೌನಿಂಗ್ ಕವಿಯ ರಬ್ಬಿ ಬೆನ್ ಎಸ್ರ (Rabbi Ben Ezra) ತನ್ನ ವಿಷಯದಲ್ಲಿ ಹೇಳಿಕೊಂಡ ಮಾತು ಅವರ ವಿಷಯದಲ್ಲಿಯೂ ಸಲ್ಲುತ್ತದೆ.

What I aspired to be
And was not, comforts me.

ಒಟ್ಟಿನಲ್ಲಿ ಭವ್ಯವಾದೊಂದು ಆದರ್ಶ ಅವರಿಗೂ ಅವರ ಜೀವನಪಥಕ್ಕೂ ಬೆಳಕು ಕೊಟ್ಟಿತು. ಅವರು ನಿರ್ವಂಚನೆಯಾಗಿ ತಮ್ಮ ಶಿಷ್ಯರಿಗೆ ಆದರ್ಶದ ಕಲ್ಪನೆಯನ್ನು ದಾನಮಾಡಿದರು. ಅದು ನಮಗೆ ರಕ್ಷೆ. 'ಅದು ನನ್ನನ್ನು ಕಾಪಾಡಲಿ ; ಅದು ವಕ್ತಾರನನ್ನು (ಗುರುವನ್ನು) ಕಾಪಾಡಲಿ, ನನ್ನನ್ನು ಕಾಪಾಡಲಿ ; ಗುರುವನ್ನು ಕಾಪಾಡಲಿ.'

ತನ್ಮಾಮವತು ; ತದ್ವಕ್ತಾರಮವತು !
ಅವತು ಮಾಂ ; ಅವತು ವಕ್ತಾರಂ ||

ಎಸ್.ವಿ. ಪರಮೇಶ್ವರಭಟ್ಟ



# ಆ ಅಮೃತಘಳಿಗೆ

ಶ್ರೀಯವರನ್ನು ಮೊತ್ತಮೊದಲು ನಾನು ಕಂಡು ಮಾತನಾಡಿದ್ದು ಒಂದು ಬೆಳಗಿನ ತಂಪುಹೊತ್ತಿನಲ್ಲಿ, ಬೆಂಗಳೂರಿನ ಬಸವನಗುಡಿಯ ಅವರ ಮನೆಯಲ್ಲಿ. ಈ ಮುಂದೆ ನಾನು ಬರೆಯುತ್ತಿರುವ ಸಂಗತಿ ನಡೆದದ್ದು ಐವತ್ತು ವರುಷಗಳಿಗೂ ಹಿಂದೆ! ನಾನು ಎಂದಿನಿಂದಲೂ ಮರವೆಗೆ ಹೆಸರಾದವನು. ಈಗಂತೂ ನೆನಪಿನ ಶಕ್ತಿ ತೀರ ದುರ್ಬಲ ವಾಗಿದೆ. ಪರಿಸ್ಥಿತಿ ಹೀಗಿರುವಾಗ ಅಂದು ನಡೆದ ಸಂಗತಿಯನ್ನು ಯಥಾವತ್ತಾಗಿ ಬರೆಯುವುದು ಸಾಧ್ಯವಿಲ್ಲದ ಮಾತಾಗಿದೆ. ಕೇವಲ ಗುರುತು ಗೆರೆಯಾಗಿ ನಾಲ್ಕಾರು ಮಾತುಗಳನ್ನು ಹೇಳುತ್ತಿದ್ದೇನೆ. ಶ್ರೀಯವರ ಹಿರಿಮೆಯನ್ನು ತಿಳಿಸುವುದಷ್ಟೇ ನನ್ನ ಉದ್ದೇಶವಾಗಿದೆ.

ಆ ಕಾಲಕ್ಕೆ ನಾನು ಬೆಂಗಳೂರು ಕೋಟೆ ಪ್ರೌಢಶಾಲೆಯ ಬೆಳಗಿನ ತರಗತಿಯಲ್ಲಿ ಓದುತ್ತಿದ್ದ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಯಾಗಿದ್ದೆ. ಆ ಕಾಲಕ್ಕೇ ನಾನು ನನಗೆ ತೋಚಿದ ಹಾಗೆ ಬಾಲಭಾಷೆಯಲ್ಲಿ 'ಇವು ಕವಿತೆಗಳೆಂದೇ ಭ್ರಮಿಸಿ' ಹತ್ತಿಪ್ಪತ್ತು ಕವನಗಳನ್ನು ರಚಿಸಿದ್ದೆ. ಅವು ಕುಮಾರ ವಯಸ್ಸಿನವು. ನನ್ನ ವಯಸ್ಸಿನ ನನ್ನ ಮಿತ್ರರಿಗೆ ಸ್ವಾರಸ್ಯವಾಗಿ ಕಂಡವು. ಅದರಿಂದಾಗಿ ಈ ಕವನಗಳನ್ನು ದೊಡ್ಡವರಿಗೆ ತೋರಿಸಿ ಅವರ ಆಶೀರ್ವಾದ ಪಡೆಯಬೇಕೆಂಬ ಆಸೆ ನನ್ನಲ್ಲಿ ಹೊಳೆಯಿತು. ನನ್ನನ್ನು ಬಲ್ಲ ಕೆಲವರು ಹಿತೈಷಿಗಳು 'ಪ್ರೊ. ಬಿ. ಎಂ. ಶ್ರೀಕಂಠಯ್ಯನವರಿಗೇ ಹೋಗಿ ತೋರಿಸಿ ಬಿಡಿ' ಎಂದು ಸೂಚಿಸಿದರು. ನನಗೆ ಇದು ಪ್ರಿಯವಾಗಿ ತೋರಿತು. ಒಡನೆಯೇ ಅಂಗಡಿಯಿಂದ ನಾಲ್ಕಾರು ಬಿಳಿಯ ಹಾಳೆಗಳನ್ನು ತಂದು ನಾನೇ ಉತ್ತಮವೆಂದು ತಿಳಿದು ಆಯ್ದ ಹನ್ನೆರಡು ಕವಿತೆಗಳನ್ನು ಆದಷ್ಟು ಅಂದವಾಗಿ ಬರೆದೆನು. 'ಹೊಸ ಗನ್ನಡದ ದ್ವಾದಶ ಕನ್ನಡಕಾವ್ಯ ಕುಸುಮಾಂಜಲಿ' ಎಂದು ಹೆಸರಿಟ್ಟೆನು. ಆಚಾರ್ಯ ರನ್ನು ಪೂರ್ವಭಾವಿಯಾಗಿ ನೋಡಲೆಂದು ನ್ಯಾಷನಲ್ ಹೈಸ್ಕೂಲಿನ ಬಳಿಗೆ ಹೋದೆನು. ಆಗ ಅನುತ್ತೀರ್ಣರಾದ ಇಂಟರ್ ಮೀಡಿಯೆಟ್ ವಿದ್ಯಾರ್ಥಿಗಳ ಉಪಯೋಗಾರ್ಥ ವಾಗಿ ಶ್ರೀಯವರು ಇಂಗ್ಲಿಷ್ ಪಾಠ ಹೇಳುವ ಕಾರ್ಯಕ್ರಮವನ್ನಿಟ್ಟುಕೊಂಡಿದ್ದರು.

ಅವರು ಅಂದು ಪಾಠ ಮುಗಿಸಿ ತರಗತಿ ಬಿಟ್ಟು ಹೊರಗೆ ಬಂದರು. ನಾನು ಅದೇ ಸಮಯ ಸಾಧಿಸಿ ಬಳಿಸಾರಿ ನಮಸ್ಕರಿಸಿ 'ತಮಗೆ ಬಿಡುವಿದ್ದಾಗ ಇದನ್ನು ನೋಡಿ ಆಶೀರ್ವದಿಸಬೇಕೆಂದು' ಕೇಳಿಕೊಂಡು ನನ್ನ ಬಳಿಯ ಹಾಳೆಗಳ ಸುರುಳಿಯನ್ನು ಅವರ ಕೈಗಿತ್ತೆನು. ಅವರು ಅಲ್ಲಿಯೆ ಸುರುಳಿ ಬಿಚ್ಚಿ ಕಣ್ಣಾಡಿಸಿ ಮುಂದಿನ ಭಾನುವಾರ ಬೆಳಗ್ಗೆ ಬನ್ನಿ ನೋಡೋಣ ಎಂದು ಹೇಳಿ ಹೋದರು. ನಾನು ಕೃತಜ್ಞತಾಭಾವದ ನಮಸ್ಕಾರ ಮಾಡಿ ಹಿಂದಿರುಗಿದೆ.

ಮುಂದೆ ನಾನು ಅವರು ಹೇಳಿದ ದಿನ ಹೇಳಿದ ಹೊತ್ತಿಗೆ ಸರಿಯಾಗಿ ಅವರ ಮನೆಗೆ ಹೋದೆ. ನಾನು ಬಂದ ಸಂಗತಿ ತಿಳಿದು ಎದ್ದುಬಂದು ಬಾಗಿಲು ತೆರೆದು ನನ್ನನ್ನು ಒಳಕ್ಕೆ ಬರಹೇಳಿದರು. ನಾನು ಅವರನ್ನೇ ವಿನಮ್ರನಾಗಿ ಹಿಂಬಾಲಿಸಿದೆ. ತಮ್ಮ ಅಧ್ಯಯನದ ಕೊಠಡಿಗೆ ಹೋಗಿ ತಾವು ತಮ್ಮ ಪೀಠದಲ್ಲಿ ಸುಖಾಸೀನರಾಗಿ ತಮ್ಮ ಬಳಿಯಲ್ಲಿಯೇ ಇದ್ದ ಇನ್ನೊಂದು ಪೀಠದಲ್ಲಿ ನನ್ನನ್ನು ಕುಳಿತುಕೊಳ್ಳ ಹೇಳಿದರು. ಎದುರುಗಡೆಯ ಮೇಜಿನ ಮೇಲೆ ಅವರ ಅಧ್ಯಯನದ ಗ್ರಂಥಗಳು ಹಲವು ಇದ್ದವು. ಅವುಗಳ ನಡುವೆ ನನ್ನ 'ಹೊಸಗನ್ನಡದ ದ್ವಾದಶ ಕನ್ನಡ ಕುಸುಮಾಂಜಲಿ' ಸಹ ಇತ್ತು. ಆ ಹಾಳೆಗಳ ಭಾಗ್ಯವೇ ಭಾಗ್ಯ! ಶ್ರೀಯವರು ಅವುಗಳನ್ನು ಎಳೆದು ಕೈಗೆತ್ತಿ ಕೊಂಡರು. ನನಗೆ ಏನು ಹೇಳುವರೋ ಎಂದು ನಡುಕವೋ ನಡುಕ.

ಮೊದಲು ಶ್ರೀಯವರು ಮೃದುವಾಗಿ ಮಾತನಾಡತೊಡಗಿದರು. ನನ್ನ ಊರು, ನನ್ನ ವಿದ್ಯಾಭ್ಯಾಸ, ನನ್ನ ಕನ್ನಡದ ಮೇಲಿನ ಆಸಕ್ತಿ ಮುಂತಾದವುಗಳನ್ನೆಲ್ಲ ವಿಚಾರಿಸಿ ಕೊಂಡರು. ತಮಗಾದ ಸಂತೋಷವನ್ನು ತಮ್ಮ ಮೆಲುನಗೆಯಿಂದ ಸೂಚಿಸಿದರು. ಓದುವುದಕ್ಕಾಗಿ ಮಲೆನಾಡಿನ ಆ ದೂರದಿಂದ ಬೆಂಗಳೂರಿಗೆ ಬಂದಿರುವುದು ಮೆಚ್ಚ ತಕ್ಕದ್ದು ಎಂದರು. ನನಗೆ ಚಳಿ ಬಿಟ್ಟಿತು. ಹಾಯಾಗಿ ಕುಳಿತೆ. ಮುಂದೆ ನನ್ನ ಕವಿತೆಗಳ ವಿಷಯಕ್ಕೆ ಬಂದರು. ಅವುಗಳನ್ನು ಅವರು ಆ ವೇಳೆಗಾಗಲೇ ಓದಿದ್ದರು. ಅಲ್ಲಲ್ಲಿ ಸೀಸದ ಕಡ್ಡಿಯ ಗುರುತುಗಳು ನನಗೆ ಕಾಣುತ್ತಿದ್ದವು. 'ಇಲ್ಲಿ ನೀವು ಪುಟ್ಟಪ್ಪನವರನ್ನು ಅನುಕರಿಸಿದ್ದೀರಿ. ನೀವು ಪುಟ್ಟಪ್ಪನವರನ್ನು ಓದಿರುವುದು ಸಂತೋಷ. ಆದರೆ ಅವರು ಬರೆದ ಹಾಗೆಯೇ ಅವೇ ಛಂದಸ್ಸಿನ ರೂಪವನ್ನೇ ಇಟ್ಟುಕೊಂಡು ಬರೆಯುವುದು ಹಿತವಾಗುವುದಿಲ್ಲ. ನೀವು ಸ್ವತಂತ್ರವಾಗಿ ಬರೆಯಬೇಕು. ನೀವು ಈಗ ಚಿಕ್ಕವರಿದ್ದೀರಿ. ಮುಂದೆ ಇಂಟರ್‌ಮೀಡಿಯಟ್ ಮುಗಿಸಿ ಬಿ.ಎ. ಆನರ್ಸ್ ತರಗತಿ ಸೇರಿಕೊಳ್ಳಿ. ಅದೂ ಆದಮೇಲೆ ಕನ್ನಡ ಎಂ. ಎ. ತರಗತಿಗೆ ಸೇರಿ ಅದನ್ನೂ ಓದಿ ಮುಗಿಸಿ. ಆ ವೇಳೆಗೆ ನಿಮ್ಮ ಅನುಭವ ವಿಸ್ತಾರವಾಗಿರುತ್ತದೆ. ಛಂದಸ್ಸು, ಭಾಷೆ, ವ್ಯಾಕರಣ, ಸಾಹಿತ್ಯ

ಚರಿತ್ರೆಗಳನ್ನೆಲ್ಲಾ ವ್ಯಾಸಂಗಮಾಡಿರುತ್ತೀರಿ. ಆಗ ಒಳ್ಳೆಯ ಬರವಣಿಗೆ ಯಾವುದು ಕೆಟ್ಟ ಬರವಣಿಗೆ ಯಾವುದು ಎಂಬುದು ನಿಮಗೇ ಗೊತ್ತಾಗುತ್ತದೆ' ಎಂದು ಮುಂತಾಗಿ ಹೇಳಿದರು. ನಾನು ಶ್ರೀ ಪುಟ್ಟಪ್ಪನವರು ಬರೆದಿದ್ದ 'ಅಡಿಯ ಗೆಜ್ಜೆ ನಡುಗೆ ಹೆಜ್ಜೆ ಇಡುತ ಸುಗ್ಗಿ ಬರುತಿದೆ' ಎಂಬ ಕವಿತೆಯ ಮಾದರಿಯಲ್ಲಿ ಸೂರ್ಯಾಸ್ತವನ್ನು ಕುರಿತು ಬರೆದಿದ್ದೆ. ಶ್ರೀಯವರು ಪುಟ್ಟಪ್ಪನವರ ಕವಿತೆಯನ್ನು ಮೆಚ್ಚಿಕೊಂಡಿದ್ದರು. ಆ ಕವಿತೆಯ ಸ್ವಾರಸ್ಯವನ್ನು ನನಗೆ ವಿವರಿಸಿದರು. ನನ್ನ ಕವಿತೆಯ ಲೋಪದೋಷಗಳನ್ನು ತೋರಿಸಿಕೊಟ್ಟರು. ಇನ್ನೂ ನಾಲ್ಕಾರು ತಿಳಿವಳಿಕೆಯ ಮಾತುಗಳನ್ನಾಡಿ 'ನೀವು ಕವಿತೆ ಬರೆಯುವುದನ್ನು ಬಿಡಬೇಡಿ, ಬರೆಯುತ್ತಾ ಇರಿ, ಹೆಚ್ಚು ಹೆಚ್ಚು ಓದಿ ಹೆಚ್ಚು ಹೆಚ್ಚು ಬರೆಯಿರಿ, ನಿಮಗೆ ಒಳ್ಳೆಯದಾಗಲಿ' ಎಂದು ಹರಸಿದರು. ನಾನು ವಿನಮ್ರನಾಗಿ ಅವರಿಗೆ ನಮಸ್ಕಾರ ಮಾಡಿದೆನು. 'ತಮ್ಮಿಂದ ತುಂಬಾ ಉಪಕಾರವಾಯಿತು. ನಾನು ತಮ್ಮ ಮಾತಿನಂತೆ ನಡೆದುಕೊಳ್ಳುತ್ತೇನೆ' ಎಂದು ಹೇಳಿ ಮತ್ತೊಮ್ಮೆ ಕೈಮುಗಿದು ಧನ್ಯತಾಭಾವದಿಂದ ಹಿಂದಿರುಗಿದೆನು. ಶ್ರೀಯವರು ಜೆನ್ನ ಹಿಂದೆಯೇ ಬಾಗಿಲವರೆಗೆ ಬಂದು 'ಒಳ್ಳೆಯದು, ಹೋಗಿಬನ್ನಿ' ಎಂದು ಬೆನ್ನಮೇಲೆ ಕೈಯಾಡಿಸಿ ಮನೆಯೊಳಕ್ಕೆ ಹೋದರು.

ಗುರುದೈವದ ಆಶೀರ್ವಾದದ ಫಲ ನನಗೆ ದೊರಕಿದ ದಿನದ ಆ ಅಮೃತಘಳಿಗೆಯನ್ನು ಇಲ್ಲಿ ಸ್ಮರಿಸುತ್ತಿದ್ದೇನೆ. ಮುಂದೆ ಅವರು ಹೇಳಿದ ಹಾಗೆಯೇ ನಾನು ಕನ್ನಡ ಎಂ.ಎ. ಪದವೀಧರನಾದೆ. ಕಾಲೇಜಿನಲ್ಲಿಯೇ ಕನ್ನಡದ ಉಪನ್ಯಾಸಕನಾದೆ. ಬೇಕಾದ ಹಾಗೆ ಕವನ ಬರೆದೆ. ವರ್ಡ್ಸ್‌ವರ್ತ್ ಕವಿಯ ಮೈಕೇಲ್ ಕವನದ ನನ್ನ ಅನುವಾದಕ್ಕೆ ಶ್ರೀಯವರೇ ಇಟ್ಟ ಸುವರ್ಣಪದಕವೂ ನನಗೆ ಲಭಿಸಿತು. ಯಾರಾದರೊಬ್ಬರು ಯಾವನಾದರೊಬ್ಬ ಅನ್ಯಭಾಷಾ ಕವಿಯ ಸಮಗ್ರ ಕೃತಿಗಳನ್ನೂ ಓದಿ ಕನ್ನಡಕ್ಕೆ ತರಬೇಕೆಂದು ಶ್ರೀಯವರು ಹೇಳುತ್ತಿದ್ದರು. ಅವರ ಕೋರಿಕೆಯನ್ನು ಈ 'ಸಿರಿಗನ್ನಡಿಗರ ಡಿಂಗರಿಗ'ನು ಯಥಾಮತಿಯಾಗಿ ಈಡೇರಿಸಿದ್ದಾನೆ. ಸಂಸ್ಕೃತದ ಕಾಳಿದಾಸ ಭಾಸಾದಿಗಳ ಸಮಗ್ರ ಕಾವ್ಯನಾಟಕಗಳನ್ನೂ ಕನ್ನಡಿಸಿದ್ದಾನೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಮಾಳೂರಿನಲ್ಲಿ ಹುಟ್ಟಿದ, ಎಸ್.ಎಸ್.ಎಲ್.ಸಿ. ಓದುತ್ತಿದ್ದ, ಮುಗ್ಧ ಬಾಲನೊಬ್ಬನು ರಸಜ್ಞರೂ ತತ್ವವಿದರೂ ಕವಿ ಸಹೃದಯರೂ ಬಹುಭಾಷಾ ಸಾಹಿತ್ಯಗಳಲ್ಲಿ ಪರಿಣತರಾದವರೂ ಸರ್ವತೋಮುಖವಾದ ಕನ್ನಡದ ಪುನರುಜ್ಜೀವನದ ಕಾರ್ಯದಲ್ಲಿ ದೀಕ್ಷಾಬದ್ಧರಾದವರೂ ಆದ ಕನ್ನಡದ ಕಾರಣಪುರುಷರೊಬ್ಬರ ಬಳಿ ಸಾರ್ಥಕವಾದ ಮುಕ್ಕಾಲು ತಾಸಿನ ಮಾತು ಕಥೆಗಳಲ್ಲಿ ಆಗ

ತೊಡಗಿದ್ದುದು ನನಗೆ ಸಾಮಾನ್ಯವಾದ ಘಟನೆಯಾಗಿ ಈಗ ಕಾಣಿಸುತ್ತಿಲ್ಲ. ಅಘಟನಘಟನಾ ಸಾಮರ್ಥ್ಯವಿರುವ ವಿಧಾತನೇ ಯೋಜಿಸಿದ ಒಂದು ಅಪೂರ್ವದ ಘಟನೆ ಅದು. ಶ್ರೀಯವರು ಕನ್ನಡದ ನವೋದಯ ಸಾಹಿತ್ಯಕ್ಕೇ ಶ್ರೀಕಾರ ಹಾಕಿದವರು. ಅವರು ಹಾಕಿಕೊಟ್ಟ ಶ್ರೀಕಾರದ ಮೇಲೆಯೇ ತಿದ್ದಿ ತಿದ್ದಿ ನಾವೆಲ್ಲ ಸಾಕಾರಪಡೆದವರು. ಈ 'ಕನ್ನಡದ ಕಣ್ವ'ರ ತಪೋಮಹಿಮೆ ಅಮೋಘವಾದದ್ದು ಎನ್ನುವುದಕ್ಕೆ ನಾನೇ ಸಣ್ಣ ಉದಾಹರಣೆ.

ಎಚ್. ಎಂ. ಶಂಕರನಾರಾಯಣರಾವ್

# ಕೆಲವು ನೆನಪುಗಳು

ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳು 'ಪ್ರಬುದ್ಧಕರ್ಣಾಟಕ'ದ ಮೊದಲ ಸಂಚಿಕೆಯನ್ನು ಹೊರತಂದಾಗ ಅವರಿಗೆ ಬರಹದ ಮೂಲಕ ಪ್ರೋತ್ಸಾಹ ದೊರಕಿದ್ದು ಪ್ರೊ. ಬಿ.ಎಂ. ಶ್ರೀಕಂಠಯ್ಯನವರಿಂದ. ಆ ಪತ್ರಿಕೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಂದಾಗ, ಅದರ ಪ್ರಧಾನ ಸಂಪಾದಕರಾಗಿ ನಿಂತು, ಪತ್ರಿಕೆಯ ರೂಪರೇಷೆಗಳನ್ನು ನಿರ್ಣಯಿಸಿದವರು ಶ್ರೀಯವರೇ. ಆದಕಾರಣ ಶ್ರೀಯುತರ ಜನ್ಮಶತಾಬ್ದಿಯ ಸಮಯದಲ್ಲಿ 'ಪ್ರಬುದ್ಧಕರ್ಣಾಟಕ' ಅವರ ನೆನಪಿನ ಸಂಚಿಕೆಯಾಗಿ ಹೊರಬರುತ್ತಿರುವುದು ಅತ್ಯಂತ ಸಮುಚಿತವಾಗಿದೆ.

ಶ್ರೀಯವರು ನನಗೆ ಇಂಗ್ಲಿಷ್ ಮತ್ತು ಕನ್ನಡಗಳನ್ನು ಪಾಠ ಹೇಳಿದ ಗುರುಗಳು. ಅರ್ಧಶತಮಾನಕ್ಕೂ ಮಿಕ್ಕ ಹಿಂದಿನ ಕಾಲದ ಮಾತು. ನಾನು ಅವರ ಶಿಷ್ಯನಾಗಿದ್ದುದೇನೋ ಅಭಿಮಾನಾಸ್ಪದವಾದ ವಿಷಯ. ಆದರೆ ಆ ಕಾಲದಲ್ಲಿ ವಿದ್ಯಾರ್ಥಿಗಳು ಉಪನ್ಯಾಸಕರನ್ನು ಕಂಡರೆ ಮಾರುದೂರ ನಿಲ್ಲುತ್ತಿದ್ದರು. ಹೀಗಿರುವಲ್ಲಿ ಪ್ರಾಧ್ಯಾಪಕರ ವಿಷಯ ಹೇಳತಕ್ಕದ್ದೇನಿದೆ? ಹೀಗಾಗಿ ನಾನು ಅವರ ಪ್ರವಚನದಿಂದ ಪ್ರಭಾವಿತನಾದೆನೇ ಹೊರತು ಅವರೊಡನೆ ಎಂದೂ ಸಲಿಗೆಯಿಂದ ಬೆರೆಯಲು ಸಾಧ್ಯವಾಗಲಿಲ್ಲ. ಅವರನ್ನು ಕಂಡರೆ ನಮಗೆಲ್ಲ ಭಯಮಿಶ್ರಿತ ಗೌರವ. ನನ್ನ ಅವರ ಸಂಬಂಧ ದೇವಾಲಯದ ಮೂಲಮೂರ್ತಿಯನ್ನು ದೂರದಿಂದ ಕಂಡು ನಮಸ್ಕರಿಸುವ ಭಕ್ತನಂತೆ. ಆ ಕಾಲದ ಗುರುಶಿಷ್ಯರ ಸಂಬಂಧವೇ ಆ ತೆರನಾಗಿತ್ತು. ಆದರೂ ಶಿಷ್ಯರ ವಿಷಯದಲ್ಲಿ ಗುರುಗಳಿಗೆ ಅಭಿಮಾನ ವಾತ್ಸಲ್ಯಗಳಿಗೆ ಯಾವ ಕೊರತೆಯೂ ಇರಲಿಲ್ಲ.

ನನಗೆ ಶ್ರೀಯವರ ಮೊಟ್ಟ ಮೊದಲ ಪರಿಚಯವಾದದ್ದು ಅವರ 'ಇಂಗ್ಲಿಷ್ ಗೀತಗಳು' ಎಂಬ ಕವನ ಸಂಗ್ರಹದ ಮೂಲಕ—೧೯೨೬ನೆಯ ಇಸವಿಯ ಡಿಸೆಂಬರ್ ತಿಂಗಳಲ್ಲಿ. 'ಕನ್ನಡವೆಂದರೆ ಕಗ್ಗ; ಅದರಲ್ಲಿ ಆಕರ್ಷಕವಾದುದು ಏನೂ ಇಲ್ಲ. ಪರೀಕ್ಷೆಯ ಹೊತ್ತಿಗೆ ಓದಿದರಾಯಿತು.' ಎಂಬ ಭಾವನೆ ವಿದ್ಯಾರ್ಥಿಗಳಲ್ಲಿತ್ತು. ಹೀಗಿರುವಲ್ಲಿ ನಾನು ಓದುತ್ತಿದ್ದ ದಾವಣಗೆರೆಯ ಹೈಸ್ಕೂಲಿಗೆ ಉಪಾಧ್ಯಾಯರಾಗಿ ಬಂದ ಶ್ರೀ ಎಸ್. ವಿ. ಶ್ರೀನಿವಾಸರಾಯರು ನಮಗೆ 'ಇಂಗ್ಲಿಷ್ ಗೀತಗಳ' ಪರಿಚಯ ಮಾಡಿ

ಕೊಟ್ಟರು. 'ರಾವುತರ ದಾಳಿ', 'ದುಃಖಸೇತು', 'ಕರುಣಾಳು ಬಾ ಬೆಳಕೆ'—ಎಂಬ ಕವನಗಳನ್ನು ಅವರು ವಾಚನ ಮಾಡಿದಾಗಂತೂ ತಂಗಾಳಿ ಬೀಸಿ, ನಮ್ಮನ್ನು ಹೊಸ ಪ್ರಪಂಚಕ್ಕೆ ಕೊಂಡು ಹೋದಂತಾಯಿತು. ಆಗ ಆ ಕಾವ್ಯ ಹೊಸಗನ್ನಡ ಪ್ರಪಂಚದಲ್ಲಿ ತಂದ ಮಾರ್ಪಾಟು ನಮಗೆ ತಿಳಿಯದು.

೧೯೨೬ನೆಯ ವರ್ಷ ಹೊಸಗನ್ನಡ ಸಾಹಿತ್ಯದಲ್ಲಿ ಬಹು ಮುಖ್ಯವಾದ ವರ್ಷ. ಹೊಸಗನ್ನಡ ಸಾಹಿತ್ಯದಲ್ಲಿ ಭಾವಗೀತೆಗಳ ಯುಗವನ್ನು ಸಾರಿತಂದ, ರುದ್ರನಾಟಕಗಳ ರಚನೆಗೆ ಭದ್ರವಾದ ತಳಹದಿಯನ್ನು ಹಾಕಿದ 'ಇಂಗ್ಲಿಷ್ ಗೀತಗಳು' ಮತ್ತು 'ಗದಾಯುದ್ಧ ನಾಟಕಂ'—ಈ ಕೃತಿಗಳು ಪ್ರಕಟವಾದ ವರ್ಷ ಅದು. ಅಲ್ಲದೆ ಶ್ರೀ ಯವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಪದವಿಯನ್ನು ವಹಿಸಿಕೊಂಡ ವರ್ಷ ಅದು. ಸ್ವಭಾವತಃ ಶ್ರೀಯವರು ಪ್ರವಚನ ಪ್ರಿಯರು. ಕನ್ನಡಕ್ಕೆ ಏನಾದರೂ ಒಳ್ಳೆಯ ಕೆಲಸ ಮಾಡಬಹುದೆಂಬ ಉದ್ದೇಶದಿಂದ ಅವರು ಈ ಪದವಿಯನ್ನು ಒಪ್ಪಿ ಕೊಂಡರಂತೆ! ಅವರು ರಿಜಿಸ್ಟ್ರಾರ್ ಪದವಿಯಲ್ಲಿದ್ದಾಗ ಕನ್ನಡದ ಏಳ್ಗೆಗಾಗಿ ನಡೆದ ಕೆಲಸವೆಷ್ಟು! ಕನ್ನಡದಲ್ಲಿ ಸ್ನಾತಕೋತ್ತರ ತರಗತಿಗಳನ್ನು ತೆರೆಯಲಾಯಿತು. ಪ್ರಾಧ್ಯಾಪಕರೊಬ್ಬರು ಕನ್ನಡಕ್ಕೆ ದೊರಕಿದರು. ಪ್ರಾಧ್ಯಾಪಕರು ನೇಮಕವಾಗುವವರೆಗೆ ಶ್ರೀಯವರೇ ಗೌರವ ಕನ್ನಡ ಪ್ರಾಧ್ಯಾಪಕರಾಗಿ ಕೆಲಸಮಾಡಿದರು. ಶ್ರೀಯವರ ಈ ಕಾರ್ಯದಿಂದ ಕನ್ನಡಕ್ಕೆ ದ್ವಿಮುಖಲಾಭವಾಯಿತು. ಕನ್ನಡದಲ್ಲಿ ಪಾಂಡಿತ್ಯ ಸಂವರ್ಧ ನೆಗೆ ಎಂಥೆಂಥ ಘನ ವಿದ್ವಾಂಸರು ದೊರಕಿದರು! ಉಸ್ಮಾನಿಯಾ ವಿಶ್ವವಿದ್ಯಾನಿಲಯ ದಲ್ಲಿ ಕನ್ನಡ ಸ್ನಾತಕೋತ್ತರ ಪೀಠವನ್ನು ತೆರೆಯಲು ಇದರಿಂದ ಅನುಕೂಲವಾಯಿತು. 'ಕನ್ನಡ ಕೈಪಿಡಿ' ಹೊರಬಿದ್ದದ್ದು ಈ ಕಾಲದಲ್ಲಿಯೇ! (೧೯೭೮). ಪ್ರಚಾರೋಪನ್ಯಾಸ ಗಳಿಗೆ, (ಮಾಲೆಗೆ) ಪರೋಕ್ಷವಾಗಿ ಪ್ರೇರಣೆ ಕೊಟ್ಟ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಯೋಜನೆ ಸಿದ್ಧವಾದುದು ಈ ಕಾಲದಲ್ಲಿಯೇ. ಇಷ್ಟಾದರೂ ಶ್ರೀಯವರು ನಮ್ಮೊಡನೆ 'ನಾನು ನಾಲ್ಕು ವರ್ಷಗಳ ವಿಶ್ವವಿದ್ಯಾನಿಲಯದ ಹೆಡ್ ಗುಮಾಸ್ತನಾಗಿದ್ದೆ' ಎಂದು ನಗೆಯಾಡುತ್ತಿದ್ದರು. ಡಾ. ಮೆಟ್‌ಕಾಫ್ ಅವರು ತಾವು ಉಪಕುಲಪತಿಗಳಾಗಿರುವವರೆಗೂ ಶ್ರೀಯವರು ರಿಜಿಸ್ಟ್ರಾರ್ ಆಗಿರಬೇಕೆಂದು ಬಯಸಿದ್ದರು. ಅದಕ್ಕೆ ಶ್ರೀಕಂಠಯ್ಯನವರು ಒಪ್ಪಲಿಲ್ಲ. ಮೈಸೂರಿನ ಕಾಲೇಜಿನಲ್ಲಿ ಇಂಗ್ಲಿಷ್ ಕನ್ನಡಗಳೆರಡನ್ನೂ ಪಾಠ ಹೇಳುವ ಬಯಕೆ ಶ್ರೀಯವರದಾಗಿತ್ತು. ಶ್ರೀಯವರ ಈ ಸಲಹೆಗೆ ಮೆಟ್‌ಕಾಫ್ ಒಪ್ಪಲಿಲ್ಲ. 'ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಇಲಾಖೆ ಹದಗೆಟ್ಟಿದೆ. ಅದನ್ನು ನೀವು ಸರಿಪಡಿಸಬೇಕು' ಎಂದು ಮೆಟ್‌ಕಾಫರ ಆದೇಶವಾಯಿತು. ಈ ಕೆಲಸವನ್ನು ಅವರು ಎಷ್ಟು ಸಮರ್ಪಕವಾಗಿ ಮಾಡಿದರೆಂಬು

ದನ್ನು ಆ ಕಾಲದ ವಿದ್ಯಾರ್ಥಿಲೋಕವೇ ಬಲ್ಲದು. ಇವೆಲ್ಲ ಶ್ರೀಯವರಿಂದಲೇ ನಮಗೆ ತಿಳಿದು ಬಂದ ವಿಷಯಗಳು.

೧೯೩೦ ರ ಮಧ್ಯಭಾಗದಲ್ಲಿ ಶ್ರೀಯವರು ಪ್ರಥಮದರ್ಜೆಯ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಬಂದಾಗ ವಿದ್ಯಾರ್ಥಿಲೋಕ ಅವರಿಗೆ ಕೊಟ್ಟ ಸ್ವಾಗತ ಅದ್ಭುತ ವಾಗಿತ್ತು. ಮಟ್ಟಸನಾದ ಆಕಾರ, ರಕ್ತ ಚಿಮ್ಮುವಂತಿದ್ದ ದೇಹ, ದುಂಡು ಮುಖ, ತೇಜಃಪುಂಜವಾದ ಕಣ್ಣುಗಳು, ಮೃದುಮಧುರವಾಕ್ಕು—ಇವುಗಳಿಗೆ ಮರುಳಾಗದವ ರಾರು? ಶ್ರೀಯವರಿಗೆ ಇಂಗ್ಲಿಷ್ ಸಾಹಿತ್ಯದ ಮೇಲೆ ಅತಿಶಯವಾದ ಪ್ರಭುತ್ವ ವಿದ್ದರೂ, ಷೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಬ್ರೌನಿಂಗ್—ಈ ಮೂವರ ವಿಷಯ ದಲ್ಲಿ ಅತಿಶಯವಾದ ಪ್ರೀತಿ ಇದ್ದಿತೆಂದು ಪ್ರತೀತಿ. (ಒಮ್ಮೆ ಶ್ರೀಯವರು ಈ ಮೂವರು ಕವಿಗಳ ಮೇಲೆ ವಿಶ್ವವಿದ್ಯಾನಿಲಯದ ಪರವಾಗಿ ಸೆಂಟ್ರಲ್ ಕಾಲೇಜಿನಲ್ಲಿ ಉಪನ್ಯಾಸ ಮಾಡಿದರಂತೆ. ಅವುಗಳು ಅಚ್ಚಿನಲ್ಲಿ ಬಂದಿದ್ದರೆ ಯಾವ ಇಂಗ್ಲಿಷ್ ವಿಮರ್ಶಕನ ಬರವಣಿಗೆಗೂ ಕಡಮೆಯಾಗಿರುತ್ತಿರಲಿಲ್ಲವೆಂದು ಎ.ಆರ್. ಕೃ ನನ್ನೊಡನೆ ಹೇಳದ್ದುಂಟು). ಈ ಮೂವರು ಕವಿಗಳ ಮೇಲೂ ಶ್ರೀಯವರ ಪ್ರವಚನವನ್ನು ಕೇಳುವ ಸುಯೋಗ, ಭಾಗ್ಯ ನನ್ನದಾಗಿತ್ತು. ಇಂಟರ್‌ಮಿಡಿಯಟ್ ಪರೀಕ್ಷೆಗೆ ನಮಗೆ ವರ್ಡ್ಸ್‌ವರ್ತ್ ಕವಿಯ ಕೆಲವು ಕವನಗಳನ್ನಿಟ್ಟಿದ್ದರು. ವರ್ಷದ ಕೊನೆಯಲ್ಲಿ ನಿಷ್ಣಾತ ರಾದವರಿಂದ ವಿಶೇಷೋಪನ್ಯಾಸಗಳನ್ನು ಇಡಿಸುವುದು ಪದ್ಧತಿಯಾಗಿತ್ತು. (ಈಗ ಹೇಗೋ!) ಆ ವರ್ಷ ಶ್ರೀಯವರು ನಮಗೆ ಪಠ್ಯವಾಗಿದ್ದ ವರ್ಡ್ಸ್‌ವರ್ತ್ ಕವಿಯ ಕವನಗಳ ಮೇಲೆ ಅಖಂಡವಾಗಿ ಮೂರು ಗಂಟೆಗಳ ಕಾಲ ಮಾತನಾಡಿ ವಿದ್ಯಾರ್ಥಿ ಗಳನ್ನು ಸಮ್ಮೋಹನಗೊಳಿಸಿದರು. ಈ ಉಪನ್ಯಾಸಕ್ಕೆ ಇಂಗ್ಲಿಷ್, ಕನ್ನಡ, ಚರಿತ್ರೆಯ ಉಪನ್ಯಾಸಕರು ಬಂದಿದ್ದರೆಂದ ಮೇಲೆ ಹೇಳತಕ್ಕದ್ದೇನಿದೆ?

ಶ್ರೀಯವರಿಗೆ ಷೇಕ್ಸ್‌ಪಿಯರ್ ಎಂದರೆ ಪಂಚಪ್ರಾಣ. ನಮ್ಮ ಕಾಲದಲ್ಲಿ ಅವರು ಇಂಟರ್‌ಮೀಡಿಯೆಟ್ ತರಗತಿಯ ಒಂದು ಭಾಗಕ್ಕೆ ಷೇಕ್ಸ್‌ಪಿಯರ್ ಕವಿಯ ನಾಟಕವನ್ನು ಪಾಠ ಹೇಳುತ್ತಿದ್ದರು. ಅವರ ತರಗತಿಗೆ ಬೆಲ್ಲಕ್ಕೆ ಇರುವೆ ಮುತ್ತುವಂತೆ ವಿದ್ಯಾರ್ಥಿಗಳು ತುಂಬಿರುತ್ತಿದ್ದರು. ಅವರು ಶಬ್ದಗಳಿಗೆ ಅರ್ಥ ಹೇಳುತ್ತಿರಲಿಲ್ಲ. ವಿಶಿಷ್ಟ ರೀತಿಯ ಶಬ್ದಗಳನ್ನು ಮಾತ್ರ ವಿವರಿಸುತ್ತಿದ್ದರು. ಎಲ್ಲ ಪ್ರಸಿದ್ಧ ವಿಮರ್ಶಕರ ವಿಮರ್ಶೆಗಳನ್ನು ಜೀರ್ಣಿಸಿಕೊಂಡಿದ್ದರೂ ಯಾವ ವಿಮರ್ಶಕನನ್ನೂ ಹೆಸರಿಸುತ್ತಿರಲಿಲ್ಲ. ಅರ್ಥ ಕಣ್ಣುಕಟ್ಟಿ ಕವಿಯ ವಾಕ್ಯಗಳನ್ನು ವಿಶೇಷ ರೀತಿಯಲ್ಲಿ ಓದಿದ ಮಾತ್ರಕ್ಕೆ ಅರ್ಥ ವಾಗುತ್ತಿದ್ದವು. ಅವರದು ವ್ಯವಾಕ್. ಶ್ರೀಯವರು ಭಾಷಣಕ್ಕೆ ನಿಂತರೆ ಕಾಲವೇ ಸ್ತಬ್ಧವಾಗಿ ನಿಂತಂತೆ ತೋರುತ್ತಿತ್ತು. ಒಮ್ಮೆ ವಿದ್ಯಾರ್ಥಿಯೊಬ್ಬನು ತರಗತಿಯಲ್ಲಿ

'Shakespeare has no Philosophy' ಎಂದು ಕೇಳಿದ್ದ ಪ್ರಶ್ನೆಯನ್ನು ಅವರ ಗಮನಕ್ಕೆ ತಂದನು. ತಕ್ಷಣವೇ ಶ್ರೀಯವರು ಅದು ಬರ್ನಾರ್ಡ್‌ಷಾ ಅವರ ಮಾತೆಂದು ತಿಳಿಸಿ, ಮ್ಯಾಕ್‌ಬೆತ್ ನಾಟಕದಿಂದ ಪಂಕ್ತಿ ಪಂಕ್ತಿಗಳನ್ನು ಉದ್ಧರಿಸಿ ಷಾ ಮಾತು ಅಬದ್ಧವೆಂದು ತೋರಿಸಿದರು.

೧೯೩೧ರ ಡಿಸೆಂಬರ್ ತಿಂಗಳೆಂದು ತೋರುತ್ತದೆ. ಬೆಂಗಳೂರಿನ ವಿಶ್ವವಿದ್ಯಾನಿಲಯದವರು ಇಂಗ್ಲಿಷಿನಲ್ಲಿ ಪ್ರಾಧ್ಯಾಪಕರ ಚರ್ಚೆಯನ್ನು ಏರ್ಪಡಿಸಿತ್ತು. ವಿಷಯ ಸೂಚಕರು ಪ್ರೊ. ಸಿ.ಆರ್. ನಾರಾಯಣರಾಯರು. ಅವರ ಕಡೆ ಕೊನೆಯ ಭಾಷಣಕಾರರು ಶ್ರೀಯವರ ಅಳಿಯಂದಿರೂ ಇಂಗ್ಲಿಷ್ ಉಪನ್ಯಾಸಕರೂ ಆದ ಶ್ರೀ ಎಸ್.ಆರ್. ಗುಂಡಪ್ಪನವರು. ವಿರೋಧಪಕ್ಷದ ನಾಯಕರು ಬಿ.ಎಂ. ಶ್ರೀಯವರು. ತಮ್ಮ ಅಳಿಯ ಮಾತನಾಡುತ್ತಿದ್ದರೆ ಶ್ರೀಯವರ ಮುಖದಲ್ಲಿ ಮುಗುಳುನಗೆ ಚಿಮ್ಮುತ್ತಿತ್ತು. ಆದರೆ ಆ ನಗೆ ಬಹುಬೇಗ ಇನ್ನಿಲ್ಲವಾಯಿತು. ಆ ತಿಂಗಳ ಕೊನೆಯಲ್ಲಿ ಅವರ ಅಳಿಯ ವಿಷಮಶೀತ ಜ್ವರಕ್ಕೆ ತುತ್ತಾಗಿ ಮೃತರಾದರು. ತಮ್ಮ ದುಃಖವನ್ನು ಒತ್ತಿಹಿಡಿದು ತರಗತಿಗೆ ಬಂದರು. ಕಾಲೇಜಿನವರು ಕಳುಹಿಸಿದ್ದ ಸಂತಾಪಸೂಚಕ ನಿರ್ಣಯದ ಮಾತೆತ್ತಿ, ಅದಕ್ಕೆ ತಮ್ಮ ಕೃತಜ್ಞತೆಯನ್ನು ಸೂಚಿಸಿ 'If the young man has won .......' ಎನ್ನುವ ವೇಳೆಗೆ ಅವರ ಕತ್ತು ಬಿಗಿಯಿತು ; ಕಣ್ಣು ಹನಿಗೂಡಿತು. ತಕ್ಷಣವೇ ಸಾವರಿಸಿಕೊಂಡು, ಕಣ್ಣೀರನ್ನು ಒರಸಿಕೊಂಡು ಪಾಠವನ್ನು ಮುಂದುವರಿಸಿದರು. ಶ್ರೀಯವರ ಸ್ಥೈರ್ಯವನ್ನು ಕಂಡು ನಮಗೆಲ್ಲ ಆಶ್ಚರ್ಯವೆನಿಸಿತು. ಸೋಜಿಗದ ಸಂಗತಿಯೇನೆಂದರೆ ಗುಂಡಪ್ಪನವರು ಅನುತ್ತೀರ್ಣರಾದ ಇಂಟರ್‌ಮೀಡಿಯೆಟ್ ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಪ್ರೌಢವಿದ್ಯಾಶಾಲೆಯವರು ಏರ್ಪಡಿಸಿದ್ದ ತರಗತಿಗಳಿಗೆ ಇಂಗ್ಲಿಷ್ ಪದ್ಯವನ್ನು ಬೋಧಿಸುತ್ತಿದ್ದರು. ಅವರು ಬ್ರೌನಿಂಗ್ ಕವಿಯ 'A Grammarian's funeral' ಎಂಬ ಪದ್ಯವನ್ನು ಮಾಡಿರಲಿಲ್ಲ. ಪರೀಕ್ಷೆಯೋ ಎಂಟು ಹತ್ತು ದಿನಗಳಿವೆ. ನಾವೆಲ್ಲ ಹೋಗಿ ಶ್ರೀಯವರಿಗೆ ಸಂದರ್ಭವನ್ನು ವಿವರಿಸಿದಾಗ, ಅವರು ಮತ್ತೊಮ್ಮೆ ಕಣ್ಣೀರನ್ನು ಒರಸಿಕೊಂಡು, ಹತ್ತಿರದ ಭಾನುವಾರ ಮಧ್ಯಾಹ್ನ ಎರಡು ಗಂಟೆಗೆ ಬಂದು ರಾತ್ರಿ ಎಂಟುಗಂಟೆಗೆ ಪದ್ಯವನ್ನು ಮುಗಿಸಿದರು. ಅವರ ಪ್ರವಚನವನ್ನು ಕೇಳಿದ ಮೇಲೆ ಮತ್ತೆ ಆ ಪದ್ಯವನ್ನು ವ್ಯಾಸಂಗ ಮಾಡುವ ಆವಶ್ಯಕತೆ ಇಲ್ಲವಾಯಿತು. ಅರ್ಧ ಶತಮಾನದ ಮೇಲೂ ಆ ಕವನದ ಸಾಲುಗಳು ನನ್ನ ಕಿವಿಯಲ್ಲಿ ನಿನದಿಸುತ್ತಿವೆಯೆಂದ ಮೇಲೆ ಶ್ರೀಯವರ ಪ್ರವಚನದ ವೈಖರಿಯನ್ನು ಊಹಿಸಿಕೊಳ್ಳಬಹುದಾಗಿದೆ.

ಶ್ರೀಯವರು ಉಪನ್ಯಾಸಕ್ಕೆ ನಿಂತರೆ ಅವರಿಗೆ ಕಾಲದ ಪರಿವೆ ಇರುತ್ತಿರಲಿಲ್ಲ. ಕವಿಯುಗದ ಹಿನ್ನೆಲೆಯನ್ನು ವಿವರಿಸಿ, ಕಾವ್ಯದ ಇಲ್ಲವೆ ನಾಟಕದ ಸ್ವಾರಸ್ಯವನ್ನು ಸಂಪೂರ್ಣವಾಗಿ ಹೇಳದ ಹೊರತು ಅವರಿಗೆ ತೃಪ್ತಿ ಇರುತ್ತಿರಲಿಲ್ಲ. ಷೇಕ್ಸ್‌ಪಿಯರ್ ಕವಿಯ ರೋಮನರಿಗೆ ಸಂಬಂಧಿಸಿದ ಒಂದು ನಾಟಕವನ್ನು ಪಠ್ಯವಾಗಿಟ್ಟಿದ್ದರೆ ಉಳಿದ ನಾಟಕಗಳನ್ನು ಓದುವುದು ಅವರ ಪದ್ಧತಿಯಾಗಿತ್ತು. ಪಠ್ಯವಾಗಿಟ್ಟಿದ್ದ ಕವಿಯ ಸಮಗ್ರ ಗ್ರಂಥವನ್ನು ತರುವಂತೆ ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರೆಂದು ಶ್ರೀಯವರ ಹಿರಿಯ ಶಿಷ್ಯರೊಬ್ಬರು ಹೇಳಿದ ನೆನಪುಂಟು. ಪರೀಕ್ಷೆಗೆ ಇಟ್ಟಿದ್ದ ಕವನಗಳನ್ನು ಪಾಠ ಹೇಳಿಯಾದ ಮೇಲೆ ಆ ಕವಿಯ ಇತರ ಮುಖ್ಯ ಕವನಗಳನ್ನು ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಕೊಡುತ್ತಿದ್ದರು. ಒಮ್ಮೆ ಹೀಗಾಯಿತು. ಮಹಾರಾಜರವರ ಕಾಲೇಜಿನಲ್ಲಿ ಶ್ರೀಯವರ ಉಪನ್ಯಾಸ. ವಿಷಯ—'An hour with English Poets.' ಅಧ್ಯಕ್ಷರು ಪ್ರೊ.ಎ.ಬಿ. ವ್ಯಾಕೆಂಟಾಷರು. ಆಶ್ಚರ್ಯದ ವಿಷಯವೇನೆಂದರೆ, ಛಾಸರ್ ಕವಿಯಿಂದ ಮೊದಲು ಮಾಡಿ, ಟೆನಿಸನ್ ಕವಿಯವರೆಗೆ ಇಂಗ್ಲಿಷ್ ಸಾಹಿತ್ಯವನ್ನು ಅವಲೋಕಿಸಿ ಒಂದು ಗಂಟೆಗೆ ಸರಿಯಾಗಿ ಭಾಷಣ ಮುಗಿಸಿದರು. ಮಾತನಾಡಿದರೆ ಮುತ್ತು ಸುರಿಸುತ್ತಿದ್ದ ಅಧ್ಯಕ್ಷರು ಶ್ರೀಯವರ ವಾಗ್ಮಿತೆಗೆ ತಲೆದೂಗಿ ಕೊನೆಯಲ್ಲಿ 'ಜನ್ಮಾಂತರಗಳನ್ನು ನಂಬುವುದಾದರೆ ಶ್ರೀಕಂಠಯ್ಯನವರು ತಮ್ಮ ಹಿಂದಿನ ಜನ್ಮದಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಗ್ರೀಕ್ ಇಲ್ಲವೆ ಇಂಗ್ಲಿಷ್ ಭಾಷೆಯ ಪ್ರೊಫೆಸರ್ ಆಗಿದ್ದಿರಬೇಕು' ಎಂದು ಮುಕ್ತಕಂಠದಿಂದ ಪ್ರಶಂಸಿಸಿದರು.

ಕನ್ನಡ ಮತ್ತು ಇಂಗ್ಲಿಷ್ ಭಾಷಾ ಸಾಹಿತ್ಯಗಳಲ್ಲಿ ಶ್ರೀಯವರು ಸವ್ಯಸಾಚಿಗಳೆಂದು ಹೇಳಿತಷ್ಟೆ. ಇಂಗ್ಲಿಷಿನಷ್ಟೇ ಕನ್ನಡದಲ್ಲಿ ಅವರು ಮಾತನಾಡಬಲ್ಲವರಾಗಿದ್ದರು. ನಾನು ಬೆಂಗಳೂರಿನಲ್ಲಿ ಕೇಳಿದ ಅವರ ಮೂರು ಕನ್ನಡ ಉಪನ್ಯಾಸಗಳ ವೈಶಿಷ್ಟ್ಯವನ್ನು ಇಲ್ಲಿ ನೆನೆಯಬಹುದು. ಈ ಉಪನ್ಯಾಸಗಳು ನಡೆದದ್ದು ಕರ್ಣಾಟಕ ಸಂಘದ ವತಿಯಿಂದ. ತಮ್ಮ ಶ್ರೇಷ್ಠಕೃತಿಯಾದ 'ಅಶ್ವತ್ಥಾಮನ್' ನಾಟಕವನ್ನು ಶ್ರೀಯವರು ಹದಿನೈದು ವರ್ಷಗಳ ಕಾಲ ಸಂತತವಾಗಿ ಚಿಂತಿಸಿ ಹದಿನೈದು ದಿನಗಳಲ್ಲಿ ಬರೆದರಂತೆ! ಆ ನಾಟಕದಲ್ಲಿ ಬರುವ 'ಆಸ್ವಾಮಿಗಾನಲ್ತು ಮೊದಲೊಲ್ಮೆ, ಕರ್ಣನ್. ಸೇನಾಧಿಪತ್ಯಮೋ, ಕರ್ಣನ್ ; ಶೃಂಗಾರಮೋ, ಕರ್ಣನ್ ; ಎಂಜಲ್ ಎಂಜಲ್ ನನಗೆ ಸಿಡುಕಂಗೆ' ಎನ್ನುವ ಸಾಲುಗಳಿಗೆ ಪ್ರೇರಕವಾದದ್ದು ಪಂಪಭಾರತದ 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' ಎಂಬ ಪಂಪಭಾರತದ ಪದ್ಯ. 'ತೆಂಗುಗಳು ಕಡಲುಲಿಯ ಮನೆಯೋ' ಈ ಸಾಲುಗಳಿಗೆ ಪ್ರೇರಕವಾದದ್ದು ಗೋಕರ್ಣದ ಕಡಲತೀರ. ಜನ್ನನ 'ಯಶೋಧರ ಚರಿತೆ' ಮತ್ತು 'ಪಂಪಭಾರತ'ಗಳ ಮೇಲೆ ಶ್ರೀಯವರು ಮಾಡಿದ

ಉಪನ್ಯಾಸಗಳು ಅನೋಘವಾಗಿದ್ದವು. ಒಂದೇ ನೋಟದಲ್ಲಿ ಸುಪ್ರಸಿದ್ಧ ಪ್ರಾಚೀನ ಕನ್ನಡ ಕಾವ್ಯಗಳ ಸ್ವಾರಸ್ಯವನ್ನು, ರಸಭಾವಗಳನ್ನು ಶ್ರೋತೃಗಳಿಗೆ ಮನದಟ್ಟು ಮಾಡಿಸಿಕೊಡಬಲ್ಲವರಾಗಿದ್ದರು. ತಮ್ಮ ವಾಚನದಿಂದಲೇ ಅವರು ಈ ಕೆಲಸವನ್ನು ನಿರ್ವಹಿಸಬಲ್ಲವರಾದ್ದರಿಂದ ಪದ್ಯಗಳಿಗೆ ಅರ್ಥ ಹೇಳುವ ಆವಶ್ಯಕತೆ ಕಂಡುಬರುತ್ತಿರಲಿಲ್ಲ. ಒಂದು ವೇಳೆ ಕಾವ್ಯದಲ್ಲಿ ಬರತಕ್ಕ ಅಪೂರ್ವ ಶಬ್ದಗಳಿಗೆ ಉಚಿತವಾದ ವ್ಯಾಖ್ಯಾನ ಮಾಡಿ ಮುಂದೆ ಸಾಗುತ್ತಿದ್ದರು. ಯಶೋಧರ ಚರಿತೆಯ 'ತಕ್ಕುಗೊಂಡಂ ತಿರ್ದಂ', ಪಂಪಭಾರತದ 'ಗುಣಮನಿಂತು ಪಿಕ್ಕದಿರಿಂ' ಎಂಬ ಪದಗಳ ಮೇಲೆ ವ್ಯಾಖ್ಯಾನ ಮಾಡಿದ ನೆನಪುಂಟು. 'ಕನ್ನಡ ಛಂದಸ್ಸಿ'ನ ಮೇಲೆ ಶ್ರೀಯವರು ಮಾಡಿದ ಭಾಷಣದ ಮೇಲೆ 'ತಾಯಿನಾಡು' ಪತ್ರಿಕೆ ಸುದೀರ್ಘವಾದ ಸಂಪಾದಕೀಯವನ್ನೇ ಬರೆದು ಪ್ರಕಟಿಸಿತು. ಶ್ರೀಯವರ ಈ ಕಾರ್ಯ ಆ ಕಾಲಕ್ಕೆ ಅವಶ್ಯಕವಾಗಿತ್ತು ; ಅನಿವಾರ್ಯವಾಗಿತ್ತು.

ನನ ಮನಸ್ಸಿನಲ್ಲಿ ಹಚ್ಚ ಹಸಿರಾಗಿ ನಿಂತಿರುವ ಶ್ರೀಯವರ ಇನ್ನೊಂದು ಭಾಷಣವನ್ನು ಕುರಿತು ಇಲ್ಲಿ ಪ್ರಸ್ತಾಪ ಮಾಡಬೇಕು. ಅದು ತಮಿಳು ಸಾಹಿತ್ಯದ ಪ್ರಸಿದ್ಧ ಕೃತಿಯಾದ 'ಕುಱಳ್' ಕಾವ್ಯಕ್ಕೆ ಸಂಬಂಧಿಸಿದ್ದು. ಆರ್. ನರಸಿಂಹಾಚಾರ್ಯರು ಕನ್ನಡಿಸಿದ ಈ ಕೃತಿ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಪಠ್ಯಗ್ರಂಥವಾಗಿತ್ತು. ಕರ್ಣಾಟಕ ಸಂಘದವರು ತಮಿಳು ವಿದ್ವಾಂಸರೊಬ್ಬರಿಂದ ಈ ಕೃತಿಯ ಮೇಲೆ ಉಪನ್ಯಾಸವನ್ನು ಏರ್ಪಡಿಸಿದ್ದರು. ಶ್ರೀಯವರು ಅಂದಿನ ಸಭಾಧ್ಯಕ್ಷರು. ಉಪನ್ಯಾಸಕರಾದವರೋ ಕೃತಿಯ ವಿಷಯವನ್ನು ಕುರಿತು ಮಾತನಾಡದೆ, ಅದರ ಮೇಲೆ ವಿಮರ್ಶಕರ ಪ್ರಶಸ್ತಿವಾಕ್ಯಗಳನ್ನು ಹೇಳಿ ಕುಳಿತರು. ಆ ಬಳಿಕ ಅಧ್ಯಕ್ಷರಾದ ಶ್ರೀಯವರು ಎದ್ದು ನಿಂತು 'ಶ್ರೀಯುತರು ಕುರಳ್ ಸಮುದ್ರದಲ್ಲಿ ಮುಳುಗಿ ಕೆಲವು ರತ್ನಗಳನ್ನು ತಂದಿದ್ದಾರೆ. ನಾನೂ ಕೆಲವು ರತ್ನಗಳನ್ನು ತರಲು ಪ್ರಯತ್ನಿಸುತ್ತೇನೆ' ಎಂದು ಹೇಳಿ ವಾಚೋವಿಧೇಯವಾದ ಆ ಕಾವ್ಯದ ಸ್ವಾರಸ್ಯವನ್ನು ಸುಮಾರು ಮೂರು ಗಂಟೆಗಳ ಕಾಲ ವಿವರಿಸಿದರು. ಆಗ ನಮಗೆ ಶ್ರೀಯವರ ತಮಿಳು ಭಾಷೆಯ ವಿದ್ವತ್ತು ಸುವಿದಿತವಾಯಿತು. ಅವರ ಈ ಕಾವ್ಯದ ಅನುವಾದ ನಮಗೆ ದೊರಕದೆ ಇದ್ದದ್ದು ಕನ್ನಡಿಗರ ದುರ್ದೈವ.

ಪ್ರಾಚೀನ ಕಾವ್ಯಗಳಲ್ಲಿ—ಅದರಲ್ಲೂ ಚಂಪೂ ಕಾವ್ಯಗಳಲ್ಲಿ—ಪ್ರಯೋಗವಾದ ಅತಿಶಯವಾದ ಸಂಸ್ಕೃತವನ್ನು ಕಂಡು ಶ್ರೀಯವರು ಸಿಡಿದೆದ್ದದ್ದುಂಟು. (ಕಾದಂಬರಿಯ ಮೊದಲ ಪದ್ಯವನ್ನು ಉದಹರಿಸಿ 'ಮಾಡುಗೆಂದುಂ' ಎಂಬಲ್ಲಿಗೆ ಬಂದಾಗ, ಕವಿ ಈಗ ನಮ್ಮಲ್ಲಿಗೆ ಬಂದ ಎಂದು ಹೇಳುತ್ತಿದ್ದುದುಂಟು. ಆದಿಪುರಾಣದಲ್ಲಿ ಪಂಪನು ಅತಿಶಯವಾಗಿ ಸಂಸ್ಕೃತವನ್ನು ಉಪಯೋಗಿಸಿದರೆ, ಭಾರತದಲ್ಲಿ ಕನ್ನಡವನ್ನು ಭೂರಿ

ವಿರಚಿಸಿದ್ದಾನೆ ಎಂದು ಘೋಷಿಸಿದವರು ಅವರೇ.) ಇದರಿಂದ ಅವರು ಸಂಸ್ಕೃತದ್ವೇಷಿಗಳು ಎಂಬ ಅಪವಾದಕ್ಕೆ ಪಕ್ಕಾದುದುಂಟು. ಇದು ಸತ್ಯಕ್ಕೆ ದೂರವಾದ ವಿಷಯ. ಶ್ರೀಯವರದು ಸಂಸ್ಕೃತದ್ವೇಷವಲ್ಲ ; ಕನ್ನಡದ ಅಭಿಮಾನ. ಶ್ರೀಯವರು ಸಂಸ್ಕೃತ ಕಾವ್ಯ, ನಾಟಕ, ಛಂದಸ್ಸುಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದುಂಟು.* 'He is one of our best Scholars in Sanskrit' ಎಂದು ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ನನ್ನೊಡನೆ ಹೇಳಿದ್ದುಂಟು. ಒಮ್ಮೆ ಸೆಂಟ್ರಲ್ ಕಾಲೇಜಿನ ಸೆಮಿನಾರಿನಲ್ಲಿ ಕಠೋಪನಿಷತ್ತಿನ ಮೇಲೆ ಮೂರು ಗಂಟೆಗಳ ಕಾಲ ಅನೋಘವಾದ ಭಾಷಣವನ್ನು ಮಾಡಿ, ಎಲ್ಲರೂ ಉಪನಿಷತ್ತುಗಳನ್ನು ಅಭ್ಯಾಸಮಾಡಬೇಕೆಂದು ಒತ್ತಿ ಹೇಳಿದರು. ಛಂದಸ್ಸಿನ ಬೋಧನೆಯಲ್ಲಿ ಅವರು ಆ ಛಂದಸ್ಸಿನ ಪದದ ಸ್ವರೂಪವನ್ನು ವಿವರಿಸಿ, ಮೊದಲು ವೈದಿಕ ಛಂದಸ್ಸನ್ನು ಪ್ರಸ್ತಾಪಿಸುತ್ತಿದ್ದರು. ಕನ್ನಡ ಸಂಸ್ಕೃತ ಶಬ್ದಗಳ ಉಪಯೋಗದಲ್ಲಿ ವಿವೇಚನೆಯನ್ನು ಬೋಧಿಸುತ್ತಿದ್ದರು. ಉದಾಹರಣೆಗೆ ಅಚ್ಚಿಲ್ ಮತ್ತು ನಕ್ಷತ್ರ ಎಂಬ ಎರಡು ಪದಗಳಲ್ಲಿ ಜನರಿಗೆ ಅರ್ಥವಾಗುವ ನಕ್ಷತ್ರ ಎಂಬ ಪದವನ್ನೇ ಉಪಯೋಗಿಸಬೇಕೆಂಬುದು ಅವರ ವಾದವಾಗಿರುತ್ತಿತ್ತು. ಕೆಲವೊಮ್ಮೆ ಸಂಸ್ಕೃತ ಶಬ್ದಗಳ ಸತ್ವವೇನೆಂಬುದನ್ನು ಮನವರಿಕೆ ಮಾಡಿಕೊಡುತ್ತಿದ್ದರು. ಧರ್ಮ ಮತ್ತು ತೇಜಸ್ಸು ಎಂಬ ಪದಗಳ ಸತ್ವವನ್ನು ಬೇರೆ ಭಾಷೆಗಳ ಯಾವ ಪದಗಳೂ ತರಲಾರವೆಂಬುದು ಅವರ ಅಭಿಮತ. ಇದು ಒಂದು ಉದಾಹರಣೆ. ಹೀಗೆ ಅವರು ನಮಗೆ ವಿವರಿಸಿದ ಪದಗಳೆಷ್ಟೋ! ಸಂಸ್ಕೃತದಿಂದ ಕನ್ನಡಕ್ಕೆ ಆಗಬೇಕಾದ ಉಪಕಾರ ಅಪಾರ ಎಂದು ನಂಬಿದ್ದರು. 'ನಮ್ಮ ದಿವ್ಯ ಸಂಸ್ಕೃತವಿದೆ. ಅದರಿಂದಲೂ ಹೀರಬಹುದಾದ ತಂದು ಬೀರಬಹುದಾದ ತಿರುಳು ಅಪಾರವಾಗಿದೆ, ಅನಂತವಾಗಿದೆ.' ಎಂಬ ಮಾತುಗಳಲ್ಲಿ ಅವರ ಸಂಸ್ಕೃತ ಪ್ರೇಮ ಅಡಕವಾಗಿದೆ. ಆದರೆ ಈ ಕೆಲಸವನ್ನು ವಿಶ್ವಸಾಹಿತ್ಯದ ದೃಷ್ಟಿಯಿಂದ ನೋಡಬೇಕು, ವಿಮರ್ಶೆಮಾಡಬೇಕು ; ಅಷ್ಟೆ. ಅವರಿಗೆ ಸಂಸ್ಕೃತ ಅಭಿಮಾನವಿರದಿದ್ದರೆ ಕನ್ನಡ ಗ್ರಂಥಮಾಲೆಯಲ್ಲಿ 'ಸಂಸ್ಕೃತ ನಾಟಕ', 'ಭಾರತೀಯ ಕಾವ್ಯಮೀಮಾಂಸೆ'ಯಂಥ ಗ್ರಂಥಗಳನ್ನು ಬರೆಯಿಸಲು ಏರ್ಪಡಿಸುತ್ತಿದ್ದರೇ ?

ಕನ್ನಡದ ಗೌರವ ಪ್ರಾಧ್ಯಾಪಕರಾಗಿ ಶ್ರೀಯವರು ವರ್ಷದ ಕೊನೆಯಲ್ಲಿ ಆನರ್ಸ್ ಮತ್ತು ಎಂ.ಎ. ತರಗತಿಗಳಿಗೆ ಛಂದಸ್ಸು, ಭಾಷಾಶಾಸ್ತ್ರಗಳನ್ನು ಒಂದುವಾರ

---

* ಮಹಾರಾಜ ಕಾಲೇಜಿನ ಪುಸ್ತಕಭಂಡಾರದ ಸಂಸ್ಕೃತ ವಿಭಾಗದ ಭಾಸಕವಿಯ ಬಾಲಚರಿತೆ (ಟ್ರಿವ್ಯಾಂಡರಂ ಗ್ರಂಥಮಾಲೆ)ಯ ಇಂಡೆಕ್ಸ್‌ಕಾರ್ಡಿನಲ್ಲಿ ಶ್ರೀಯವರ ಒಂದೇ ಹೆಸರಿದ್ದುದನ್ನು ವಿದ್ಯಾರ್ಥಿಯಾಗಿದ್ದಾಗ ನಾನು ನೋಡಿದ್ದೆ.

ಪೂರ್ತಿ ಬೋಧಿಸುತ್ತಿದ್ದರು. ತಲಸ್ಪರ್ಶಿಯಾದ ವ್ಯಾಪಕವಾದ ಅವರ ಉಪನ್ಯಾಸಗಳು ಯಾವುದಾದರೊಂದು ವಿಷಯವನ್ನು ಮುಗಿಸುವ ವೇಳೆಗೆ ಬೆಳಗಾಗುತ್ತಿತ್ತು. ಒಮ್ಮೆ ನಾವು ಅವರನ್ನು ಭಾರತೀಯ ಕಾವ್ಯಮೀಮಾಂಸೆಯ ಮೇಲೆ ಪ್ರವಚನ ನಡೆಸುವಂತೆ ಕೇಳಿದೆವು. ಅದಕ್ಕೆ ಅವರು 'ನಾನು ಆ ವಿಷಯವನ್ನು ಆಳವಾಗಿ ಅಭ್ಯಾಸ ಮಾಡಿಲ್ಲ. ಇದನ್ನು ಆಳವಾಗಿ ಅಭ್ಯಾಸ ಮಾಡಿರುವ ತೀ.ನಂ. ಶ್ರೀ ಅವರೇ ಇದರಲ್ಲಿ ಪ್ರವಚನ ಸಮರ್ಥರು. ನೀವು ಇಷ್ಟಪಟ್ಟರೆ ಪಾಶ್ಚಾತ್ಯ ಕಾವ್ಯಮೀಮಾಂಸೆಯ ವಿಷಯವಾಗಿ ಹೇಳುತ್ತೇನೆ' ಎಂದು ನುಡಿದು ಒಂದು ವಾರ ಪಾಶ್ಚಾತ್ಯ ಸಾಹಿತ್ಯ ಪ್ರಕಾರಗಳ ಬೆಳವಣಿಗೆಗಳನ್ನು ವಿವರಿಸಿದರು. ಇದರಿಂದ ಶ್ರೀಯವರಿಗೆ ತಮ್ಮ ಸಹೋದ್ಯೋಗಿಗಳ ವಿದ್ವತ್ತಿನ ವಿಷಯದಲ್ಲಿದ್ದ ಗೌರವ, ತಮ್ಮ ಶಕ್ತಿಯ ಪರಿಮಿತಿ ಸ್ಪಷ್ಟವಾಗುತ್ತದೆ.

ವಿದ್ಯಾರ್ಥಿಗಳಾಗಿದ್ದ ನಾವು 'ತರುಣರ ದಂಡು' ಎಂಬ ಸಂಸ್ಥೆಯನ್ನು ಮಾಡಿಕೊಂಡಿದ್ದೆವು. ೧೯೩೭ ರ ಮಾರ್ಚಿಯಲ್ಲಿ ಅದರ ವಾರ್ಷಿಕೋತ್ಸವ ನಡೆಯಿತು. ಶ್ರೀಯವರು ಅಧ್ಯಕ್ಷರು. ಛಾಯಾಚಿತ್ರಗ್ರಹಣದ ಕಾಲದಲ್ಲಿ ಕುರ್ಚಿಯಲ್ಲಿ ಕುಳಿತಿದ್ದ ಶ್ರೀಯವರು—ಅದೇನು ಸ್ಫೂರ್ತಿ ಬಂದಿತೋ ಕಾಣೆ—'ಇದು ತರುಣರ ದಂಡು, ನೀವು ಕೂಡಬೇಕು. ನಾವು ನಿಮಗೆ ಬೆಂಬಲವಾಗಿ ನಿಲ್ಲಬೇಕು' ಎಂದು ಹೇಳಿ ನಮ್ಮನ್ನು ಕೂಡಿಸಿ, ತಾವು ನಮ್ಮ ಹಿಂದೆ ನಿಂತರು. ನಮಗೆ ಶ್ರೀಯವರ ವರ್ತನೆ ಆಶ್ಚರ್ಯವೆನಿಸಿತು. ಸುಮಾರು ಐವತ್ತು ವರ್ಷಗಳ ಹಿಂದಿನ ಈ ಚಿತ್ರ ಈಗಲೂ ನನ್ನಲ್ಲಿದೆ. ಅದರಲ್ಲಿ ಸರ್ವಶ್ರೀ ಬಿ.ಎಂ.ಶ್ರೀ., ತೀ.ನಂ.ಶ್ರೀ, ಡಿ.ಎಲ್.ಎನ್, ಆನಂದ (ಎ. ಸೀತಾರಾಂ), ಎ. ಎನ್. ಮೂರ್ತಿರಾವ್, ಎನ್.ಎಸ್. ನಾರಾಯಣಶಾಸ್ತ್ರೀ, ಜಿ. ವೆಂಕಟಸುಬ್ಬಯ್ಯ, ಎಸ್.ವಿ. ಪರಮೇಶ್ವರಭಟ್ಟ, ಎಚ್. ದೇವೀರಪ್ಪ, ದ.ರಾ. ಬೇಂದ್ರೆ ಇವರೇ ಮೊದಲಾದ ಸಾಹಿತಿಗಳನ್ನು ಕಾಣಬಹುದಾಗಿದೆ.

ಶ್ರೀಯವರು ಗಂಭೀರ ಸ್ವಭಾವದವರು. ಅವರೊಡನೆ ಹೆಚ್ಚು ಸಲಿಗೆಯನ್ನು ತೆಗೆದುಕೊಳ್ಳುವಂತಿರಲಿಲ್ಲ. ಆ ಕಾಲದ ಜನರಲ್ಲಿಯೇ ಇದನ್ನು ಕಾಣಬಹುದಾಗಿತ್ತು. ವಿದ್ವತ್ತು, ಸ್ಥಾನಮಾನ, ಅಧಿಕಾರ ಇವುಗಳೆಲ್ಲ ಇದ್ದರೆ ಕೇಳತಕ್ಕದ್ದೇನಿದೆ ? ಆದರೂ ಒಮ್ಮೊಮ್ಮೆ ಅವರ ನಯವಿನಯ ಇವು ನಮ್ಮನ್ನು ಬೆರಗುಗೊಳಿಸುತ್ತಿದ್ದವು. ಇದಕ್ಕೆ ಒಂದು ಉದಾಹರಣೆ. ನಮಗೆ ಎಂ. ಎ. ವಾಚಾಪರೀಕ್ಷೆಯಾದ ಮೇಲೆ—ನಮ್ಮಲ್ಲಿ ಯಾವ ಸಾಮರ್ಥ್ಯವನ್ನು ಕಂಡರೋ ಕಾಣೆ—'ಕನ್ನಡವನ್ನು ನಿಮ್ಮ ಕೈಯಲ್ಲಿಟ್ಟಿದ್ದೇವೆ. ಕಾಪಾಡಿಕೊಂಡು ಬನ್ನಿ.' ಎಂದು ಹೇಳಿ ಕೈಮುಗಿದು ನಮ್ಮನ್ನು ಬೀಳ್ಕೊಟ್ಟರು. ನನಗಂತೂ ಅವರ ಮಾತು ಕೇಳಿ ಸಂಕೋಚವಾಯಿತು. ಅವರ ವಿದ್ಯಾರ್ಥಿಗಳು ತಕ್ಕ

ವಟ್ಟಿಗೆ ಕನ್ನಡ ಸೇವೆಯನ್ನು ಮಾಡಿ ಗುರುವಾಕ್ಯವನ್ನು ಪರಿಪಾಲಿಸಿದ್ದಾರೆಂದು ನನ್ನ ನಂಬಿಕೆ.

ಸಾಹಿತ್ಯ ಪರಿಷತ್ತಿನ ವಾರಪತ್ರಿಕೆಯಾಗಿ 'ಕನ್ನಡ ನುಡಿ' ಹೊರಬಿದ್ದ ಸಂದರ್ಭದಲ್ಲಿ ಅವರ ಸಂಭ್ರಮ ಹೇಳತೀರದು. ಒಮ್ಮೆ ಮೈಸೂರು ವಿಶ್ವವಿದ್ಯಾನಿಲಯದ ಪುಸ್ತಕಭಂಡಾರದಲ್ಲಿ ನನ್ನನ್ನೂ ಶ್ರೀ ಎಸ್. ವಿ. ಪರಮೇಶ್ವರಭಟ್ಟರನ್ನೂ ಸಂಧಿಸಿದಾಗ 'ಕನ್ನಡ ನುಡಿ' ನಿಮ್ಮ ಗಮನಕ್ಕೆ ಬಂತೇ ?" ಎಂದು ಮುಗುಳುನಗೆ ಬೀರಿ ಪ್ರಶ್ನಿಸಿದರು. 'ವಾರವಾರವೂ ಅದನ್ನು ನಾವು ಕೊಂಡು ಓದುತ್ತಿದ್ದೇವೆ.' ಎಂದು ಹೇಳಿದಾಗ ಅವರಿಗೆ ಪರಮಾನಂದವಾಯಿತು. 'ನೋಡಿ, ಅದನ್ನು ಕನ್ನಡದ ಗೆಜೆಟಿಯರ್ ಮಾಡಬೇಕೆಂದಿದ್ದೇವೆ. ಕನ್ನಡನಾಡು ನುಡಿಗಳ ಸಮಸ್ತ ಚಟುವಟಿಕೆಗಳೂ ಅದರಲ್ಲಿ ಮೂಡಿಬರಬೇಕು, ಇದಕ್ಕೆ ನಿಮ್ಮ ಸಹಕಾರ ಬೇಕು.' ಎಂದು ನುಡಿದು ಕೈ ಕುಲುಕಿ ಹೊರಟುಹೋದರು. ಅಂದು ಅವರು ಹುಟ್ಟುಹಾಕಿದ 'ಕನ್ನಡ ನುಡಿ' (೧೯೩೮) ಇಂದಿಗೂ ಪರಿಷತ್ತಿನ ಪಕ್ಷಪತ್ರಿಕೆಯಾಗಿ ಪ್ರಕಟವಾಗುತ್ತಿದೆ.

ಶ್ರೀಯವರನ್ನು ಹತ್ತಿರದಿಂದ ನೋಡಿದ ಕೆಲವು ನೆನಪುಗಳನ್ನು ಇಲ್ಲಿ ಹಿಡಿದಿಡಲು ಯತ್ನಿಸಿದ್ದೇನೆ. ಇಂಗ್ಲಿಷ್ ಪ್ರಾಧ್ಯಾಪಕರಾದರೂ ಅವರು ನಾಲ್ಕಾರು ಭಾಷೆಗಳಲ್ಲಿ ಪರಿಣತಿಯನ್ನು ಪಡೆದರು. ಚಿಕ್ಕಂದಿನಲ್ಲಿಯೇ ಕನ್ನಡವನ್ನು ಮೇಲೆತ್ತುವ ಕನಸನ್ನು ಕಟ್ಟಿಕೊಂಡರು. ಭಾಷಣಗಳ ಮೂಲಕ, ಗ್ರಂಥರಚನೆಯ ಮೂಲಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶನಮಾಡಿ ಕವಿಗಳ, ವಿದ್ವಾಂಸರ ಪಡೆಗಳನ್ನು ಸೃಷ್ಟಿಸಿದರು. ಸಾಂಸ್ಕೃತಿಕವಾಗಿ ಕರ್ಣಾಟಕದ ಏಕೀಕರಣಕ್ಕಾಗಿ ಶ್ರಮಿಸಿದರು. ಹಗಲೆನ್ನದೆ, ರಾತ್ರಿಯೆನ್ನದೆ, ದೇಹಶ್ರಮವನ್ನು ಲೆಕ್ಕಿಸದೆ ನಾಡಿನ ಉದ್ದಗಲ ಸಂಚರಿಸಿ ಜನರಲ್ಲಿ ಭಾವೈಕ್ಯವನ್ನು ಮೂಡಿಸಿದರು. ಕನ್ನಡ ಸಂಘಗಳನ್ನು ಕಟ್ಟಿದರು. ಅಂದು ಅವರು ನಮ್ಮ ವಿಶ್ವವಿದ್ಯಾನಿಲಯದಲ್ಲಿ ತೆರೆದ ಕನ್ನಡ ಸ್ನಾತಕೋತ್ತರ ಶಾಖೆ ಇಂದು ಹೆಮ್ಮರನಾಗಿ ಬೆಳೆದಿದೆ. ಕನ್ನಡದ ವಿದ್ವತ್ತಿನ ದಿಗಂತವನ್ನು ವಿಸ್ತರಿಸಿದೆ. ಕನ್ನಡದ ಕೆಲಸಕ್ಕೆ ಹತ್ತು ಜನ ಪ್ರಾಧ್ಯಾಪಕರಿದ್ದರೂ ಸಾಲದು ಎನ್ನುತ್ತಿದ್ದ ಅವರ ಮಾತು ಬಹುಮಟ್ಟಿಗೆ ನಿಜವಾಗಿದೆ. ಕನ್ನಡಕ್ಕಾಗಿ ತಮ್ಮನ್ನೇ ಮುಡಿಪಾಗಿಟ್ಟುಕೊಂಡ ಈ ಮಹನೀಯರನ್ನು ನೆನೆಯುವುದು ಶ್ರೇಯಸ್ಕರ. ಮೇಲಾಗಿ ನಾನು ಅವರ ಶಿಷ್ಯನಾಗಿದ್ದುದು ಒಂದು ಭಾಗ್ಯ ಎಂದು ಎಣಿಸುತ್ತೇನೆ.

ಕನ್ನಡನುಡಿ, ನಮ್ಮ ಹೆಣ್ಣು,
ನಮ್ಮ ತೋಟದಿನಿಯ ಹಣ್ಣು;
ಬಳಿಕ, ಬೇರೆ ಬೆಳೆದ ಹೆಣ್ಣು
ಬಳಿಗೆ ಸುಳಿದಳು;
ಹೊಸದು ರಸದ ಬಳ್ಳಿಹಣ್ಣು
ಒಳಗೆ ಸುಳಿದಳು.

ಪಡುವ ಕಡಲ ಹೊನ್ನ ಹೆಣ್ಣು,
ನನ್ನ ಜೀವದುಸಿರು, ಕಣ್ಣು,
ನಲಿಸಿ, ಕಲಿಸಿ, ಮನವನೊಲಿಸಿ
ಕುಣಿಸುತಿರುವಳು;
ಒಮ್ಮೆ ಇವಳು, ಒಮ್ಮೆ ಅವಳು,
ಕುಣಿಸುತಿರುವಳು.

—'ಕಾಣಿಕೆ' (ಇಂಗ್ಲಿಷ್ ಗೀತಗಳು)
'ಶ್ರೀಸಾಹಿತ್ಯ'ದಲ್ಲಿ ಪು. ೫೯

ಡಾ. ಜಿ. ವರದರಾಜರಾವ್

# 'ಶ್ರೀ' ಸ್ಮೃತಿ

ಬಿ.ಎಂ. ಶ್ರೀ ಅವರು ೧೯೩೮ರಲ್ಲಿ ಅಂದಿನ ಕರ್ಣಾಟಕ ಸಾಹಿತ್ಯಪರಿಷತ್ತಿನ ಉಪಾಧ್ಯಕ್ಷ ಪದವಿಯನ್ನು ವಹಿಸಿದ್ದು ಕನ್ನಡಿಗರಿಗೆಲ್ಲ ತುಂಬ ಹರ್ಷದಾಯಕವಾದ ಸಂಗತಿಯಾಗಿತ್ತು. ಒಂದು ಕಾಲದಲ್ಲಿ, ಕೇವಲ ಒಂದು ಸೀಮಿತ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿದ್ದ ಪರಿಷತ್ತು, ಕ್ರಮಕ್ರಮವಾಗಿ ಬೆಳೆದು, ತನ್ನದೇ ಆದ ಒಂದು ಕಟ್ಟಡವನ್ನು ನಿರ್ಮಿಸಿಕೊಂಡು ತನ್ನ ಕಾರ್ಯಕ್ರಮಗಳನ್ನು ನಿರ್ವಹಿಸಿಕೊಂಡು ಹೋಗುತ್ತಿತ್ತು. ಆಗಿನ ಅಂಗರಚನೆಯಂತೆ, ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಪರಿಷತ್ತಿನ ಮಹಾಪೋಷಕರಾಗಿದ್ದರು. ಶ್ರೀಮದ್ಯುವರಾಜರವರು ಅಧ್ಯಕ್ಷರಾಗಿದ್ದರು. ಪರಿಷತ್ತಿನ ಕಾರ್ಯನಿರ್ವಹಣೆಯ ಹೊಣೆಯೆಲ್ಲ ಉಪಾಧ್ಯಕ್ಷರದೇ ಆಗಿತ್ತು. ಸಮ್ಮೇಳನಾಧ್ಯಕ್ಷರಾದರೋ ಆಯಾ ವರ್ಷದ ಉತ್ಸವಕ್ಕೆ ಭೂಷಣಪ್ರಾಯರೆನ್ನಿಸಿದ್ದರು. ಬಿ.ಎಂ.ಶ್ರೀ. ಅವರು ತಮ್ಮ ಉಪಾಧ್ಯಕ್ಷ ಪದವಿಯನ್ನು ಸ್ವೀಕರಿಸುವ ಸಂದರ್ಭದಲ್ಲಿ ಚಿಕ್ಕದಾದ ಒಂದು ಭಾಷಣವನ್ನೇ ಮಾಡಿ (೨೬-೧-೧೯೩೮), ತಾವು ಸಾಧಿಸಬೇಕೆಂದಿರುವ ಗುರಿಗಳನ್ನು ತಿಳಿಯ ಹೇಳಿದರು.

ಕನ್ನಡವನ್ನು ಬೆಳೆಸಿ, ಕನ್ನಡ ನಾಡಿನಲ್ಲೆಲ್ಲಾ ಒಂದು ರೂಪಕ್ಕೆ ತಂದು ಅದರ ಮೂಲಕ ಕನ್ನಡಿಗರನ್ನೆಲ್ಲಾ ಒಂದುಗೂಡಿಸುವುದು ;

ಈ ಹೊಸ ಕಾಲದಲ್ಲಿ ಕನ್ನಡಿಗರಿಗೆ ಬೇಕಾದ ತಿಳಿವಳಿಕೆಯನ್ನೆಲ್ಲಾ ಕನ್ನಡದಲ್ಲಿ ಕೊಟ್ಟು, ಕನ್ನಡ ನಾಡಿನ ಮುನ್ನಡೆಗಾಗಿ ಕೆಲಸಮಾಡುವುದು ;

ಹಳೆಯ ಸಾಹಿತ್ಯದ ಪ್ರಚಾರ, ಹೊಸ ಸಾಹಿತ್ಯದ ಪೋಷಣೆ, ವ್ಯಾಸಂಗಗೋಷ್ಠಿ, ಪರೀಕ್ಷೆ, ವಿಮರ್ಶೆ, ಪರಿಶೋಧನ ;

ಸಮ್ಮೇಳನ, ವಸಂತೋತ್ಸವ, ಉಪನ್ಯಾಸ, ನಾಟಕ, ಗಮಕ ಕಲೆ, ಜನಸಂಸ್ಕೃತಿ, ವಿನೋದ, ಸ್ಪರ್ಧೆ, ಮಕ್ಕಳ ನಲಿವು;

ಕನ್ನಡ ಸಂಘಗಳ ಒಕ್ಕೂಟ ಮತ್ತು ಕೈವಾಡದಿಂದ ಊರೂರು ಹಳ್ಳಿಹಳ್ಳಿಗಳಲ್ಲಿ ಬೆಳಕು, ಹುರುಪು, ಹೊಸಬಾಳು, ಹಬ್ಬ ;

ಒಂದು ಮಾತಿನಲ್ಲಿ **ಕನ್ನಡಿಗರ ಪುನರುಜ್ಜೀವನ.**

ಒಟ್ಟಿನಲ್ಲಿ ಪರಿಷತ್ತು **ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠ ;**

ದೊಡ್ಡ ಕೆಲಸ, ದೊಡ್ಡ ಪ್ರಯೋಜನ. ನೀವು ಬೇಕು– ಈವೊತ್ತೇ ಸದಸ್ಯರಾಗಿ, ಅಭಿಮಾನಿಗಳಾಗಿ, ನಮ್ಮನ್ನು ಹರಸಿ.

ಈ ಕಾರ್ಯಕ್ರಮಗಳನ್ನು ನಿಯೋಜಿಸಿಕೊಂಡು, ಬಿ.ಎಂ.ಶ್ರೀ. ಅವರು ೧೯೩೮ ರಿಂದ ೧೯೪೩ರವರೆಗೆ ಪರಿಷತ್ತಿನ ಏಳ್ಗೆಗಾಗಿ ತಮ್ಮ ತನು, ಮನ, ಧನಗಳನ್ನು ನೀಡಿ ದುಡಿದರು. ಅವರು ಆಲೋಚಿಸಿದ್ದಂತೆ, ಅವರ ಅಧಿಕಾರಾವಧಿಯಲ್ಲಿ ಹಳಗನ್ನಡ ಸಾಹಿತ್ಯದ ಪ್ರಚಾರ ಮತ್ತು ಹೊಸಗನ್ನಡದ ಪೋಷಣೆಗಳು ಸಂತತವಾಗಿ ನಡೆದುವು. ಅವರ ಕಾಲದಲ್ಲಿ ಏರ್ಪಡಿಸುತ್ತಿದ್ದ ವ್ಯಾಸಂಗಗೋಷ್ಠಿಗಳು ವಿದ್ವತ್ಪ್ರಿಯವಾದುವಲ್ಲದೆ, ಕನ್ನಡದ ಅಭಿಮಾನಿಗಳಿಗೂ ತುಂಬ ಅನುಕೂಲವಾದುವು. ಆಗ ವಿದ್ಯಾರ್ಥಿಯಾಗಿದ್ದ ನನಗಂತೂ ಇದರಿಂದ ತುಂಬಾ ಪ್ರಯೋಜನವಾಯಿತು. ಹೀಗೆಯೇ ಕನ್ನಡದ ಅಣುಗ, ಕಾವ, ಜಾಣ ಎಂಬ ಪರೀಕ್ಷೆಗಳು ಮೊದಲಾಗಿ ಆ ಮೂಲಕವೂ ಅನೇಕರು ತಮ್ಮ ಕನ್ನಡ ಜ್ಞಾನವನ್ನು ಬೆಳೆಸಿಕೊಂಡರು. (ಈ ಪರೀಕ್ಷೆಯ ಮಾಲಿಕೆಯಲ್ಲಿ ಆ ಬಳಿಕ 'ರತ್ನ' ಎಂಬುದು ಬಂದಿತೆಂದು ನನ್ನ ನೆನಪು.) ಈ ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳಿಗೆ "ಶ್ರೀ" ಅವರು ಮೊದಲ್ಗೊಂಡು ಅನೇಕ ಪ್ರತಿಭಾಶಾಲಿಗಳಾದ ಅಧ್ಯಾಪಕರು ಪಾಠ ಹೇಳುತ್ತಿದ್ದುದರಿಂದ ಅವು ಎಲ್ಲರ ಮನ್ನಣೆಗೂ ಪಾತ್ರವಾದುವು. ಡಿ.ವಿ.ಜಿ. ಅವರ ಕಾಲದಲ್ಲಿ ಪ್ರಾರಂಭವಾದ ಗಮಕ ತರಗತಿಗಳು ಎಂದಿನಂತೆಯೇ ಮುಂದುವರಿದುವು. "ಶ್ರೀ" ಅವರಿಗೆ ಈ ಮೊದಲಿನಿಂದ ಪ್ರಕಟವಾಗುತ್ತಿದ್ದ ಪರಿಷತ್ತಿನ ತ್ರೈಮಾಸಿಕ ಪತ್ರಿಕೆಯ ಜೊತೆಗೆ,ಪರಿಷತ್ತಿನ ಮುಖವಾಣಿಯಾಗಿ, ಸರ್ವರಿಗೂ ಪ್ರಿಯವಾಗುವಂತೆ ಒಂದು ವಾರಪತ್ರಿಕೆಯನ್ನೂ ಪ್ರಕಟಿಸಬೇಕೆಂಬ ಅಭಿಲಾಷೆ ಬಹಳವಾಗಿತ್ತು. ಅವರ ಅಪೇಕ್ಷೆಯ ಮೇರೆಗೆ "ಕನ್ನಡ ನುಡಿ" ಎಂಬ ಹೆಸರಿನಲ್ಲಿ ಒಂದು ವಾರಪತ್ರಿಕೆ ಮೊದಲಾಯಿತು. ಅದರ ಮೊತ್ತಮೊದಲನೆಯ ಸಂಪಾದಕರಾಗಿದ್ದವರು ಅ. ನ. ಕೃಷ್ಣರಾಯರು. ಮುದ್ರಣಕಾರ್ಯ ಹೆಚ್ಚಿದಂತೆಲ್ಲ ಪರಿಷತ್ತಿಗೇ ಪ್ರತ್ಯೇಕವಾದ ಒಂದು ಮುದ್ರಣಾಲಯದ ಅಗತ್ಯವಿದ್ದುದನ್ನು ಮನಗಂಡು, ಬಿ.ಎಂ.ಶ್ರೀ. ಅವರು ಉದಾರವಾಗಿ ಧನಸಹಾಯ ಮಾಡಿ, ಈ ಕಾರ್ಯವನ್ನು ಪ್ರಾರಂಭಿಸಿದರು. ಕನ್ನಡ ನಾಡಿನ ವಿಸ್ತಾರವನ್ನು ಜನರಿಗೆ ತಿಳಿಸುವ ಸಲುವಾಗಿ, ಆಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇತಿಹಾಸದ ಪ್ರಾಧ್ಯಾಪಕರಾಗಿದ್ದ ಡಾ. ಎಂ. ಎಚ್. ಕೃಷ್ಣ ಅವರ ನೆರವಿನಿಂದ ಕನ್ನಡನಾಡಿನ ಭೂಪಟವನ್ನು ಅಣಿಗೊಳಿಸಲಾಯಿತು.

ಕನ್ನಡಿಗರಿಗೆ ಅವರ ಸಾಹಿತ್ಯದ ಹಿರಿಮೆಯನ್ನು ತಿಳಿಸುವ ಸಲುವಾಗಿಯೇ ಈ ಅವಧಿಯಲ್ಲಿಯೇ 'ಶ್ರೀ' ಅವರ ಸಂಪಾದಕತ್ವದಲ್ಲಿ 'ಕನ್ನಡದ ಬಾವುಟ'ವೆಂಬ ಕವನಸಂಕಲನವೊಂದನ್ನು ಪ್ರಕಟಿಸಲಾಯಿತು. "ಶ್ರೀ" ಅವರು ಲಿಪಿ ಸಂಸ್ಕರಣದ ಕಡೆಗೂ ಎಷ್ಟು ಉತ್ಸುಕರಾಗಿದ್ದರೆನ್ನುವುದಕ್ಕೆ ಪ್ರಕೃತ ಕವನಸಂಕಲನದಲ್ಲಿ ಪ್ರಕಟವಾಗಿರುವ 'ಕನ್ನಡದ ಬಾವುಟ' (ಕನ್‌ನಡದ ಬಾವುಟ) ಎಂಬ ಪದ್ಯವೇ ಸಾಕ್ಷಿ. 'ಶ್ರೀ' ಅವರ ಅಧಿಕಾರಾವಧಿಯಲ್ಲಿಯೇ ಪರಿಷತ್ತಿನ ಬೆಳ್ಳಿಯ ಹಬ್ಬವು ೩೦-೬-೧೯೪೦ನೆಯ ಭಾನುವಾರದಂದು ಶ್ರೀಮನ್ಮಾಲ್ಪಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರ ಅಧ್ಯಕ್ಷತೆಯಲ್ಲಿ ಬಹು ವಿಜೃಂಭಣೆಯಿಂದ ಬೆಂಗಳೂರಿನಲ್ಲಿ ನಡೆಯಿತು. ಬಿ.ಎಂ.ಶ್ರೀ. ಅವರ ಅಧಿಕಾರಾವಧಿಯಲ್ಲಿ ಇದೇ ರೀತಿ ಅನೇಕ ಸಮಾರಂಭಗಳೂ, ಸುಧಾರಣೆಗಳೂ ನಡೆದುವು.

ಆದರೆ, ಆ ಅವಧಿಯಲ್ಲಿ ನಡೆದ ಒಂದು ಘಟನೆ, ಪರಿಷತ್ತಿನ ಇತಿಹಾಸದಲ್ಲಿಯೇ ಒಂದು ಅಪೂರ್ವವಾದ ಸಂಗತಿ ಎನ್ನಬಹುದು. ಒಮ್ಮೆ ಪರಿಷತ್ತಿನಲ್ಲಿ ವಸಂತೋತ್ಸವವು ನಡೆಯುವ ಕಾಲದಲ್ಲಿ, ಪರಿಷತ್ತಿನ ಕಟ್ಟಡವನ್ನು ವಿದ್ಯುದ್ದೀಪಾಲಂಕಾರದಿಂದ ಮೆರೆಸಬೇಕೆಂಬ ಹಂಬಲ "ಶ್ರೀ" ಅವರಿಗೆ ಉಂಟಾಯಿತು. ಆಗ ತಾನೆ ಜನಪ್ರಿಯವಾಗುತ್ತಿದ್ದ ಬಣ್ಣಬಣ್ಣದ ಕೊಳವೆ ದೀಪಗಳಿಂದ "ಕರ್ಣಾಟಕ ಸಾಹಿತ್ಯ ಪರಿಷತ್ತು" ಎಂದು ನಿರೂಪಿಸಬೇಕೆಂದು ಸಂಕಲ್ಪಿಸಲಾಯಿತು. ಆ ಕಾರ್ಯನಿರ್ವಾಹಕನು ಬಣ್ಣದ ಕೊಳವೆಯಲ್ಲಿ 'ಣ'ಕಾರವನ್ನು ನಿರ್ವಹಿಸಲಾರನೆ 'ನ'ಕಾರವನ್ನು ಮಾಡಬಹುದೆಂದು ಸೂಚನೆಯಿತ್ತನು. ಆಗ, 'ಕರ್ಣಾಟಕ' ಮತ್ತು 'ಕರ್ನಾಟಕ' ಶಬ್ದಗಳನ್ನು ಜನರು ಪರ್ಯಾಯವಾಗಿ ಬಳಸುತ್ತಿದ್ದುದರಿಂದ, ಉಪಾಧ್ಯಕ್ಷರ ಒಪ್ಪಿಗೆ ಪಡೆದು ಹಾಗೆಯೇ ಮಾಡಲಾಯಿತು. ಇದು ಮೊದಮೊದಲು ಹೆಚ್ಚು ಜನರ ಗಮನಕ್ಕೆ ಬರಲಿಲ್ಲ. ಆದರೂ ಪರಿಷತ್ತಿನ ಸಂಸ್ಥಾಪಕ ಸದಸ್ಯರಾಗಿದ್ದ ಹಿರಿಯ ಸದಸ್ಯರಲ್ಲಿ ಕೆಲವರಿಗೆ, ಈ ಬದಲಾವಣೆ ಒಪ್ಪಲಿಲ್ಲ. ರಿಜಿಸ್ಟರ್ ಆಗಿದ್ದ ಸಂಸ್ಥೆಯ ಹೆಸರನ್ನು ಹಾಗೆ ಇದ್ದಕ್ಕಿದ್ದಂತೆಯೇ ಬದಲಾಯಿಸುವುದೂ ಸಲ್ಲದೆಂದು ಅವರ ಆಕ್ಷೇಪಣೆ. ಅವರಿಗೆ "ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ" ಎಂದು ಪ್ರಕಟವಾಗುತ್ತಿದ್ದುದನ್ನು "ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ" ಎಂದು (ನೋಡಿ : ಸಂಪುಟ xxiii ಸಂಚಿಕೆ ೧, ಜನವರಿ-ಮಾರ್ಚ್ ೧೯೩೮) ಮಾರ್ಪಡಿಸಿದುದನ್ನು ಕಂಡು ಬೆಳ್ಳಾವೆ ನಾರಾಯಣಪ್ಪನವರಂಥ ಹಿರಿಯರು ಈ ಬಗ್ಗೆ ತುಂಬ ಅಸಮಾಧಾನಗೊಂಡು, 'ಕರ್ಣಾಟಕ-ಕರ್ನಾಟಕ' ಎಂಬ ರೂಪಗಳಲ್ಲಿ ಯಾವುದು ಸಾಧು, ಯಾವುದು ಅಸಾಧು ಎಂದು ನಿರ್ಣಯಿಸಲು ಪಂಡಿತಮಂಡಲಗಳನ್ನು ಏರ್ಪಡಿಸಿದರು.

"ಶ್ರೀ" ಅವರು 'ಅಶ್ವತ್ಥಾಮನ್' ಎಂಬ ರುದ್ರನಾಟಕವನ್ನು ಬರೆದು, ಚಿರಂಜೀವಿಯಾದ ಅಶ್ವತ್ಥಾಮನು ಆತ್ಮಹತ್ಯೆ ಮಾಡಿಕೊಂಡನೆಂದು ನಿರೂಪಿಸಿದ್ದರಿಂದ ವಿದ್ವಾಂಸರಲ್ಲಿ ತುಂಬ ವಾದ–ಪ್ರತಿವಾದಗಳೆದ್ದುವೆಂದು ನಾನು ಕೇಳಿದ್ದೆ. ಈಗ ಲಾದರೋ, ದಿನ ಕಳೆದಂತೆಲ್ಲ ವಾತಾವರಣ ಅದೇ ಮೇರೆಗೆ ಕಾವೇರುತ್ತಿತ್ತು. ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಯು ಬಹುಮತ ಸದಸ್ಯರ ಸಮ್ಮತಿಯನ್ನು ಪಡೆದು ಪತ್ರಿಕೆಯ ಹೆಸರಿನಲ್ಲಿ ಮಾರ್ಪಾಡು ಮಾಡಲಾಯಿತೆಂಬ ಸಂಪಾದಕರ ಮನವಿ 'ಕರ್ಣಾಟಕ'ದ ವಾದಿಗಳಿಗೆ ಒಪ್ಪಿಯಾಗಲಿಲ್ಲ.

ಆಗ ವಿದ್ಯಾರ್ಥಿಗಳಾಗಿದ್ದ ನಮ್ಮಂಥವರಿಗೆ ಈ ಬಗ್ಗೆ ಕುತೂಹಲ ಕೆರಳಿತು. ಮೈಸೂರು ಸಂಸ್ಥಾನದ ಪ್ರಮುಖ ಪತ್ರಿಕೆಗಳಾಗಿದ್ದ 'ಪ್ರಬುದ್ಧ ಕರ್ಣಾಟಕ' 'ವಿಶ್ವ ಕರ್ಣಾಟಕ' ಮೊದಲಾದವುಗಳಲ್ಲಿಯೂ 'ಕರ್ಣಾಟಕ ಸಂಘ' ಎಂಬ ಹೆಸರಿನಲ್ಲಿಯೂ 'ಣ'ಕಾರವೇ ಬಳಕೆಯಾಗಿರುವುದನ್ನೂ, ಉತ್ತರ ಕರ್ನಾಟಕದ ಜನರ ಮಾತಿನಲ್ಲಿ ಮತ್ತು 'ಜಯಕರ್ನಾಟಕ' ಎಂಬ ಪತ್ರಿಕೆಯ ಹೆಸರಿನಲ್ಲಿ 'ನ' ಕಾರವೇ ಪ್ರಧಾನ ವಾಗಿರುವುದನ್ನೂ ಕಂಡು, ಇವು ಪ್ರಾದೇಶಿಕ ಭೇದಗಳಿರಬೇಕೆಂದು ಭಾವಿಸಿದ್ದೆವು.

ಈ ಶಬ್ದ ಪ್ರಯೋಗಗಳ ಸಾಧುತ್ವದ ಬಗ್ಗೆ ಪ್ರಶ್ನೆ ಉಂಟಾದ್ದರಿಂದ, ಕಡೆಗೆ ಸಾಹಿತ್ಯ ಪರಿಷತ್ತಿನಲ್ಲಿ ಒಂದು ಮಹಾಸಭೆಯೇ ಏರ್ಪಟ್ಟಿತು. ಆ ದಿನ ಒಂದು ಕಡೆ "ಶ್ರೀ" ಮತ್ತು ಅವರ ಬೆಂಬಲಿಗರೂ, ಪ್ರತಿಪಕ್ಷದಲ್ಲಿ ಸಂಸ್ಕೃತ ಪಕ್ಷಪಾತಿಗಳಾದ ವಿದನ್ಮಂಡಲಿಯವರೂ ಸೇರಿದ್ದರು. ವಿದ್ಯಾರ್ಥಿಗಳಾದ ನಾವು ಕೇವಲ ಪ್ರೇಕ್ಷಕರಾಗಿ ಕುಳಿತಿದ್ದೆವು. "ಶ್ರೀ" ಅವರು ಡಾ|| ಕಾಲ್ಡ್‌ವೆಲ್ ಮತ್ತು ಡಾ|| ಗುಂಡರ್ಟ್ ಅವರು ಕನ್ನಡನಾಡಿನ ಮೂಲವನ್ನು ಕರ್(ಕರು) + ನಾಡು ಎಂಬ ಸಮಾಸಶಬ್ದವನ್ನೂ, ತಮಿಳಿನ ಪ್ರಾಚೀನ ಗ್ರಂಥಗಳಲ್ಲಿ ಕಂಡುಬರುವ ಪ್ರಯೋಗಗಳನ್ನೂ ಅವಲಂಬಿಸಿ ಹೇಗೆ ನಿರ್ಣಯಿಸಿರುವರೆಂದು ಬಹಳ ವಿಶದವಾಗಿ ವಿವರಿಸಿದರು. "ಕರ್ + ನಾಟ್ + ಅಗಂ" ಎಂಬ ಶಬ್ದಗಳ ಮೂಲಕ ಕರ್ನಾಟಕ ನಿಷ್ಪತ್ತಿಯನ್ನು ಸುಲಭವಾಗಿ ಮಾಡಬಹುದಾದ್ದರಿಂದ ಅದೇ ಮೂಲರೂಪವಿದ್ದು, 'ಕರ್ಣಾಟಕ'ವೆನ್ನುವುದು ಸಂಸ್ಕೃತೀಕರಣವಿರಬಹುದೆಂದು ಒಂದು ಪಕ್ಷದವರ ಅಭಿಪ್ರಾಯವಾಗಿತ್ತು. ಸಂಸ್ಕೃತ ವಿದ್ವಾಂಸರಾದರೋ ಇದನ್ನು ಅಂಗೀಕರಿಸದೆ, ತಾವೂ ಸಹ ಪ್ರಾಚೀನ ಪ್ರಯೋಗಗಳನ್ನು ಮುಂದಿಟ್ಟು 'ಕರ್ಣಾಟಕ' ಎಂಬುದೇ ಮೂಲವೆಂದೂ, ಕೇಶಿರಾಜನೇ ಹೇಳಿರುವಂತೆ 'ಕನ್ನಡ' ಎನ್ನುವುದೇ ಅದರ ತದ್ಭವ ರೂಪವೆಂದೂ ಬಹುವಾಗಿ ವಾದಿಸಿದರು. ಗಂಟೆಗಟ್ಟಲೆ ನಡೆದ ಈ ವಾದ–ಪ್ರತಿವಾದಗಳಿಂದ ಯಾವ ಒಮ್ಮತಕ್ಕೂ ಬರಲು ಆಗಲಿಲ್ಲ. ಬಿ.ಎಂ.ಶ್ರೀ. ಅವರು ಒಮ್ಮೊಮ್ಮೆ ಬಹಳ ಖೇದಪಟ್ಟುಕೊಂಡರು. "ಶ್ರೀ" ಅವರ ಅಭಿಪ್ರಾಯಕ್ಕೆ

ನೆರವಾಗುವ ರೀತಿಯಲ್ಲಿ 'ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ'ಯಲ್ಲಿ ತೀ. ನಂ. ಶ್ರೀಕಂಠಯ್ಯನವರು ಮತ್ತು ಜಿ. ಪಿ. ರಾಜರತ್ನಂ ಅವರು ಲೇಖನಗಳನ್ನೂ ಬರೆದರು (ನೋಡಿ : ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ xxiii, ಸಂಚಿಕೆ iii, ಪು. ೧೫೯-೧೮೬ ; ಜುಲೈ-ಸೆಪ್ಟೆಂಬರ್, ೧೯೩೮)

ಈ ಬಗೆಹರಿಯದ ಪ್ರಶ್ನೆ ಯಾವ ರೀತಿ ಪರಿಹಾರವಾಯಿತೆನ್ನುವುದು ಇನ್ನೂ ಸೋಜಿಗವಾದ ಸಂಗತಿ. ೧೯೩೮ನೆಯ ಡಿಸೆಂಬರ್ ತಿಂಗಳಿನಲ್ಲಿ ಬಳ್ಳಾರಿಯಲ್ಲಿ ನಡೆದ ವಾರ್ಷಿಕ ಸಮ್ಮೇಳನದಲ್ಲಿ, ಅಲ್ಲಿಂದ ಮುಂದಕ್ಕೆ "ಕರ್ನಾಟಕ ಸಾಹಿತ್ಯ ಪರಿಷತ್ತು" ಎನ್ನುವುದಕ್ಕೆ ಬದಲಾಗಿ "ಕನ್ನಡ ಸಾಹಿತ್ಯ ಪರಿಷತ್ತು" ಎಂದೂ, ಪತ್ರಿಕೆಯ ಹೆಸರನ್ನು "ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ"ಯೆಂದೂ ಕರೆಯತಕ್ಕದ್ದೆಂದು ಸರ್ವಾನುಮತದಿಂದ ಅಂಗೀಕರಿಸಲಾಯಿತು. (ನೋಡಿ : ಕಸಾಪಪ : ಸಂ. xxiv, ಸಂ. i, ಸಂಪಾದಕೀಯ ಟಿಪ್ಪಣಿಗಳು, ಪುಟ ೧೦೫ ; ಜನವರಿ–ಮಾರ್ಚ್ ೧೯೩೯). ಇದೀಗ ವಿಧಿಯ ವೈಚಿತ್ರ್ಯ! ಈ ಉಭಯಪಕ್ಷಗಳಲ್ಲಿ ಈಗ ಗೆಲುವು-ಸೋಲುಗಳ ಪ್ರಶ್ನೆಯೇ ಏಳುವುದಿಲ್ಲ. ಆದರೆ "ಶ್ರೀ" ಅವರು ಎಲ್ಲಿದ್ದರೆ ಅಲ್ಲಿ ಒಂದು ತೆರನಾದ ಪರಿವರ್ತನೆಯೋ, ಪುನರುಜ್ಜೀವನವೋ ಅನಿವಾರ್ಯವೆಂದು ತೋರುತ್ತದೆ. ಕಳೆದ ಇಪ್ಪತ್ತೆರಡು ವರ್ಷಗಳಿಂದ ಇದ್ದ ಪರಿಷತ್ತಿನ ಹೆಸರು, ಅವರ ಅಧಿಕಾರಾವಧಿಯಲ್ಲಿ ಹೊಸ ಚೇತನದೊಂದಿಗೆ ಹೊಸ ಹೆಸರನ್ನೂ ಪಡೆಯಿತು. ಪರಿಷತ್ತಿನ ಇತಿಹಾಸದಲ್ಲಿ ಇದೊಂದು ಚಿರಸ್ಮರಣೀಯವಾದ ಘಟನೆ. ಇಂಥ ಚರಿತ್ರಾರ್ಹವಾದ ಘಟನೆಯನ್ನು ಒಂದು ಸಣ್ಣ ಪದ್ಯದಲ್ಲಿ ಅಡಕ ಮಾಡಿಡಬೇಕೆಂದು ನನಗೆ ಅನ್ನಿಸಿತು. ಆ ಮೇರೆಗೆ ಈ ಕೆಳಗಿನ ಅಷ್ಟಷಟ್ಪದಿಯನ್ನು ಬರೆದೆ.

## ಸಂದೇಶ

ಇಂದು ಒಂದಕ್ಷರದ ಸಲುವಾಗಿ ಸೆಣಸುವರು
ಹಳೆಯ ವ್ಯಾಕರಣ ಸೂತ್ರಾದಿಗಳ ಮಸೆಮಸೆದು
ಕನ್ನಡದ ಕುವರರಿವರೆರಡು ಪಡೆಯಾಗೊಡೆದು
ಹಗಲಿರುಳು ಹಠತೊಟ್ಟು ವಾದಿಸುತ ನಿಂತಿಹರು ।
ಅಕಟಕಟ, ಛಲವೇಕೆ ? ಮುನಿಸೇಕೆ ? ಪಣವೇಕೆ ?
ತಾಯಿ ತಾ ಕಣ್ಣೀರ ಸುರಿಸದಿಹಳೇ ಇದಕೆ ?
ಈಗೀಗ ಚಿಗುರುತಿರೆ ತಾಯಿಯಾ ಎಳೆ ಬಯಕೆ
ಇಂದಿನೀ ಒಳಜಗಳದಲಿ ಕೊರಗಳೇ ಆಕೆ ?



ಕನ್ನಡದ ಮುನ್ನಡೆಯ ಮುಂಬೆಳಗಿನಲಿ, ಇಂದು
ಕೇಳಿ ಬಹ ಈ ಅಪಸ್ವರಗಳಿಗೆ ಕೊನೆಯೆಲ್ಲಿ ?
ನ-ಣ ಕಾರಗಳ ಪಕ್ಷ ಹಿಡಿದು ವಾದಿಸುವಲ್ಲಿ
ಸವಿಗನ್ನಡದ ಪಾಲ್ಗೆ, ಹುಳಿ ಬೆರೆಯದೆ ಬಂಧು !
ಕನ್ನಡಿಗರೆದೆಯಲ್ಲಿ ಬೆಳಗೆ ಈ ಸಂದೇಶ,
ತನಗೆ ತಾನಾಗಿ ಅಡಗದೆ ಅಹಿತ ಆವೇಶ ?* (೨-೧೦-೧೯೩೮)

(*ಅರ್ಥಸ್ಪಷ್ಟತೆಗಾಗಿ ಈ ಪದ್ಯದ ಉತ್ತರಾರ್ಧವನ್ನು ಸ್ವಲ್ಪ ತಿದ್ದಿದೆ.)

ಪದ್ಯವನ್ನು ಬರೆದುದು ಮಾತ್ರವೇ ಅಲ್ಲ ; ವಿಳಂಬ ಮಾಡದೆ ಸ್ಥಳೀಯ ಪತ್ರಿಕೆಯೊಂದರಲ್ಲಿ ಪ್ರಕಟಿಸಿದ್ದೂ ಆಯಿತು. ನನ್ನ ಮಿತ್ರರು ನನ್ನನ್ನು ಅಭಿನಂದಿಸಿದರು. ಅಂಥ ಪ್ರಸಂಗವೊಂದನ್ನು ಎಂದೆಂದಿಗೂ ಸ್ಮರಿಸಿಕೊಳ್ಳುವಂತೆ ಒಂದು ಕವಿತೆಯನ್ನು ಬರೆದುದಕ್ಕಾಗಿ ನನ್ನ ಬೆನ್ನನ್ನು ನಾನೇ ತಟ್ಟಿಕೊಂಡೆ. ಆದರೆ ಆ ಕವಿತೆಯನ್ನು ಓದಿದ, ನನ್ನ ಹಿತೈಷಿಗಳಾದ ಹಿರಿಯ ಸಾಹಿತಿಗಳೊಬ್ಬರು ನನ್ನನ್ನು ಕಂಡಾಗ, “ನಿಮ್ಮ ಪದ್ಯ, ಮನೆಯಲ್ಲಿ ಅಜ್ಜ ಅಜ್ಜಿಯರು ಯಾತಕ್ಕೋ ಜಗಳವಾಡುತ್ತಿರಲು, ಪ್ರಪಂಚದ ಜ್ಞಾನವೇ ಇಲ್ಲದ ಮೊಮ್ಮಗುವೊಂದು ಹೋಗಿ ಸಮಾಧಾನಪಡುವಂತಿದೆ” ಎಂದು ಬಹಳ ಮೃದುವಾಗಿ ಎಚ್ಚರಿಸಿದರು. ಆಗ ನನಗೆ, ನನ್ನ ಆ ಪದ್ಯದಿಂದ ಯಾರಿಗೆ ಏನು ಅಪಚಾರ ಮಾಡಿದೆನೋ ಎಂದು ತುಂಬ ಅಳುಕಾಯಿತು. ಸ್ವಲ್ಪ ದಿನಗಳ ಬಳಿಕ, ಇದೇ ಪ್ರಸಂಗವನ್ನೇ ಅವಲಂಬಿಸಿ ಜಿ.ಪಿ. ರಾಜರತ್ನಂ ಅವರು “ಮಹಾಕವಿ ಪುರುಷ ಸರಸ್ವತಿ” ಎಂಬ ಅಂಕಿತ ನಾಮದಿಂದ “ಕರ್ಣಾಟಕ ಪುರಾಣವು ಅರ್ಥಾತ್ ಸಾಲಂಕೃತ ಶತ ಕಾರ್ಥಪಟ್ಟದವು ಎಂಬ ಣತ್ವೋದ್ಧರಣ ಮಹಾಕ್ಷುದ್ರ ಕಾವ್ಯ ಪ್ರಸಂಗವು” ಎಂಬ ಖಂಡಕಾವ್ಯವನ್ನೇ ಬರೆದು ‘ಪ್ರಬುದ್ಧ ಕರ್ಣಾಟಕ’ದಲ್ಲಿ ಪ್ರಕಟಿಸಿದರು. (ನೋಡಿ : ಪ್ರಬುದ್ಧಕರ್ಣಾಟಕ, ಸಂ. xx, ಸಂ. ii, ಸಂ. iii, ಸಂ. iv ; ೧೯೩೯) ಅವನ್ನು ಓದಿದವರೆಲ್ಲ ರಾಜರತ್ನಂ ಅವರನ್ನು ಮುಕ್ತಕಂಠದಿಂದ ಹೊಗಳಿದರು. ಆ ಕೃತಿ, ಆ ಬಳಿಕ ಸ್ವತಂತ್ರವಾಗಿಯೂ ಅಚ್ಚಾಯಿತು. ಇಂದಿಗೂ, ಕನ್ನಡದಲ್ಲಿ ವಿರಳವಾಗಿರುವ ವಿಡಂಬನಾತ್ಮಕ ಕೃತಿಗಳಲ್ಲಿ ಅದಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ರಾಜರತ್ನಂ ಅವರ ರಚನೆಯನ್ನು ಓದಿದ ಬಳಿಕ ನನ್ನ ಅಳುಕು ಹೋಯಿತು.

ಬಿ.ಎಂ.ಶ್ರೀ. ಅವರು ತಮ್ಮ ಅಧಿಕಾರದ ಅವಧಿ ಮುಗಿಸಿದಾಗ, ನಾಲ್ಕುವರ್ಷಗಳಲ್ಲಿ ನಡೆದ ಕಾರ್ಯಕಲಾಪಗಳನ್ನು ವಿವರಿಸುತ್ತ, “ನನ್ನ ಕನ್ನಡದ ಉರುಬಿನಲ್ಲಿ ಕಾವು ನೋವುಗಳಿಗೆ ಎಡೆಕೊಟ್ಟಿದ್ದೇನೆ, ಕನ್ನಡಕ್ಕಾಗಿ, ಕನ್ನಡನಾಡಿಗಾಗಿ. ಹಟಕ್ಕಲ್ಲ,

ನಾನು ಕಂಡ ದಿಟಕ್ಕಾಗಿ. ಮರೆತುಬಿಡಿ, ಮನ್ನಿಸಿಬಿಡಿ : 'ನೆನೆಯದಿರಿ ಹಿಂದಿನದನೆಲ್ಲ." ಎಂದು ಕೇಳಿಕೊಳ್ಳುವಲ್ಲಿ ಈ ನ-ಣ ಕಾರದ ಹಾಹಾಕಾರವೇ ಅವರ ಹೃದಯವನ್ನು ಪೀಡಿಸುತ್ತಿತ್ತೋ ಏನೋ!

ಇದೀಗ ಕನ್ನಡನಾಡಿಗೆ 'ಕರ್ನಾಟಕ' ಎಂಬ ಹೆಸರನ್ನೇ ಅಧಿಕೃತವಾಗಿ ಇಟ್ಟಿರುವುದನ್ನು ಕಂಡು ಬಿ.ಎಂ.ಶ್ರೀ. ಅವರ ಆತ್ಮಕ್ಕೆ ಈ ವೇಳೆಗೆ ತೃಪ್ತಿಯಾಗಿದ್ದೀತು!*

* * *

ಆಗಿನ ಕಾಲದಲ್ಲಿ, ಜನರಲ್ಲಿ ಕನ್ನಡದ ಅಭಿಮಾನವನ್ನು ಬೆಳೆಸುವುದರಲ್ಲಿ 'ಕರ್ಣಾಟಕ ಸಂಘ'ಗಳು ವಹಿಸಿದ ಪಾತ್ರ ಮಿಗಿಲಾದುದು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನ "ಕರ್ಣಾಟಕ ಸಂಘ", ಮೈಸೂರಿನ ಮಹಾರಾಜಾ ಕಾಲೇಜಿನ "ಕರ್ಣಾಟಕ ಸಂಘ"ಗಳು ಮೊದಲಾದ ಬಳಿಕ, ಇತರ ಕಡೆಗಳಲ್ಲಿಯೂ "ಕರ್ಣಾಟಕ ಸಂಘ"ಗಳು ಪ್ರಾರಂಭವಾದವು. ಸೆಂಟ್ರಲ್ ಕಾಲೇಜಿನ 'ಕರ್ಣಾಟಕ ಸಂಘ'ವು 'ಶ್ರೀ' ಅವರ 'ಇಂಗ್ಲಿಷ್ ಗೀತಗಳು', ಶ್ರೀನಿವಾಸರ 'ತಾವರೆ', ಡಿ. ವಿ. ಜಿ. ಅವರ 'ನಿವೇದನ' ಮೊದಲಾದ ಕವನಸಂಕಲನಗಳನ್ನು ಪ್ರಕಟಿಸಿ ಅಧುನಿಕ ಕನ್ನಡ ಕಾವ್ಯದ ಬೆಳವಣಿಗೆಗೆ ನೆರವಾದರೆ, ಮಹಾರಾಜಾ ಕಾಲೇಜಿನ 'ಕರ್ಣಾಟಕ ಸಂಘ'ವು 'ಕಿರಿಯ ಕಾಣಿಕೆ' 'ತಳಿರು' ಮೊದಲಾದ ವಿದ್ಯಾರ್ಥಿ ಕವನಸಂಕಲನಗಳನ್ನು ಪ್ರಕಟಿಸಿ ಅಂದಿನ ವಿದ್ಯಾರ್ಥಿ ಕವಿಗಳಿಗೆ ಉತ್ತೇಜನವಿತ್ತಿತ್ತು. ಸೆಂಟ್ರಲ್ ಕಾಲೇಜಿನ 'ಕರ್ಣಾಟಕ ಸಂಘ'ವೇ 'ಪ್ರಬುದ್ಧ ಕರ್ಣಾಟಕ'ದ ಹುಟ್ಟು, ಬೆಳವಣಿಗೆಗೆ ಮುಖ್ಯ ಕಾರಣ. ಇವುಗಳಲ್ಲದೆ, ವಿದ್ವಾಂಸರಿಂದ ಉಪನ್ಯಾಸಗಳೂ, ಇತರ ಸಾಂಸ್ಕೃತಿಕ ಕಾರ್ಯಕ್ರಮಗಳೂ ಆಗಿಂದಾಗ್ಗೆ ನಡೆಯುತ್ತಿದ್ದುವು. ಸೆಂಟ್ರಲ್ ಕಾಲೇಜಿನ 'ಕರ್ಣಾಟಕ ಸಂಘ'ದಲ್ಲಿ ಒಮ್ಮೆ 'ಶ್ರೀ' ಅವರು ಅಜಂತ ಗುಹೆಗಳಲ್ಲಿರುವ ಭಿತ್ತಿ ಚಿತ್ರಗಳನ್ನು ಕುರಿತು ಭಾಷಣ ಮಾಡಿದರು. ವಿದ್ಯಾರ್ಥಿಯಾಗಿದ್ದ ನನಗೆ ಬಿ. ಎಂ. ಶ್ರೀ ಅವರ ಭಾಷಣವನ್ನು ತಪ್ಪಿಸಿಕೊಳ್ಳಲು ಇಷ್ಟವಾಗಲಿಲ್ಲ. ನನ್ನ ಮನೆ ಇದ್ದುದು ಗವೀಪುರದ ಬಡಾವಣೆಯಲ್ಲಿ. ಆಗ ಬೆಂಗಳೂರಿನಲ್ಲಿ ಈಗಿನಂತೆ ನಗರ ಬಸ್ಸುಗಳ ಸೌಕರ್ಯವಿರಲಿಲ್ಲ. ಆದರೂ, ಧೈರ್ಯಮಾಡಿಕೊಂಡು ಭಾಷಣ ಕೇಳಲು ಹೋದೆ. 'ಶ್ರೀ' ಅವರು ಅತ್ಯಂತ ಗಂಭೀರವಾಗಿ ತಮ್ಮದೇ ಆದ ರೀತಿಯಿಂದ ಭಾಷಣವನ್ನು ಮೊದಲು

---

* ಕರ್ನಾಟಕ-ಕರ್ಣಾಟಕ ಶಬ್ದಗಳ ಬಗ್ಗೆ ಹೆಚ್ಚು ತಿಳಿಯ ಬಯಸುವವರು ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ ಅವರ 'ನಮ್ಮ ಕರ್ನಾಟಕ' ಎಂಬ ಪುಸ್ತಕ ನೋಡಬಹುದು. ಪ್ರ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

ಮಾಡಿದರು. ಈ ಭಿತ್ತಿ ಚಿತ್ರಗಳನ್ನು ಮಾಯಾಲಾಂದ್ರದ (Magic Lantern) ಮೂಲಕ ತೋರಿಸುತ್ತ, ಅವುಗಳನ್ನು ವಿಸ್ತಾರವಾಗಿ ವರ್ಣಿಸುತ್ತಿದ್ದರು. ಆಗತಾನೆ ಅವರು ಆ ಭಿತ್ತಿ ಚಿತ್ರಗಳನ್ನು ನೋಡಿ ಬಂದಿದ್ದರಿಂದ ಅವರ ಉಪನ್ಯಾಸ ತುಂಬಾ ವಿದ್ವತ್ಪೂರ್ಣವಾಗಿತ್ತು. ಸಂಜೆ ಸುಮಾರು ೬ ಘಂಟೆಗೆ ಮೊದಲಾದ ಆ ಉಪನ್ಯಾಸ ರಾತ್ರಿ ೮ ಘಂಟೆಯಾದರೂ ಮುಗಿದಿರಲಿಲ್ಲ. ಬಹಳ ದೂರ ನಡೆದುಕೊಂಡ ಹೋಗಬೇಕಾಗಿದ್ದ ನಾನು ಉಪನ್ಯಾಸದ ಅರ್ಧದಲ್ಲಿಯೇ ಎದ್ದು ಹೋಗಬೇಕಾಗಿತ್ತು. ಮಾರನೆಯ ದಿನ ವಿಚಾರಿಸಿದ್ದರಲ್ಲಿ, 'ಶ್ರೀ' ಅವರು ಅಂದು ರಾತ್ರಿ ೯ ರವರೆಗೂ ಉಪನ್ಯಾಸ ಮಾಡಿದರೆಂದೂ, ಆದರೂ ಮುಗಿದಿರಲಿಲ್ಲವೆಂದೂ ತಿಳಿದು ಬಂದಿತು. (ಈ ಉಪನ್ಯಾಸದ ವಿವರವನ್ನು ತಿಳಿಯಬಯಸುವವರು ಡಾ. ಬಿ.ಜಿ. ಎಲ್. ಸ್ವಾಮಿ ಅವರು ಬರೆದಿರುವ 'ಪಂಚಕಲಶಗೋಪುರ'ದಲ್ಲಿರುವ ಬಿ.ಎಂ.ಶ್ರೀ. ಅವರ ವ್ಯಕ್ತಿ ಚಿತ್ರಣವನ್ನು ನೋಡಬಹುದು.)

ಇನ್ನೊಮ್ಮೆ, ಇದೇ ಸಂಘದ ಆಶ್ರಯದಲ್ಲಿ, 'ಶ್ರೀ' ಅವರು ಹೊಸದಾಗಿ ಅನುವಾದಿಸಿದ್ದ 'ಪಾರಸಿಕರು' ಎಂಬ ನಾಟಕದ ವಾಚನವನ್ನು ಏರ್ಪಡಿಸಲಾಗಿತ್ತು. ಗ್ರೀಕ್ ಭಾಷೆಯಲ್ಲಿ ಪರಿಣತರಾಗಿದ್ದ 'ಶ್ರೀ' ಅವರು ಈಸ್ಕಿಲಸ್‌ನ 'ಪರ್ಸಿ' ಎಂಬ ಗ್ರೀಕ್ ನಾಟಕವನ್ನು ನೇರವಾಗಿ ಹಳಗನ್ನಡದಲ್ಲಿ ಭಾಷಾಂತರಿಸಿದ್ದರು. ಅವರ 'ಅಶ್ವತ್ಥಾಮನ್' ನಾಟಕವನ್ನು ಓದಿ ಮೆಚ್ಚಿಕೊಂಡಿದ್ದವರಿಗೆ ಈ ಹೊಸ ನಾಟಕವನ್ನು ಕೇಳಬೇಕೆಂಬ ಕುತೂಹಲವಿರುವುದು ಸಹಜ. ಆ ದಿನ ಸೆಂಟ್ರಲ್ ಕಾಲೇಜಿನ ಗಣಿತಭವನದ ತುಂಬ ಜನ ಸೇರಿದ್ದರು. ಹಿರಿಯ ಸಾಹಿತಿಗಳೆಲ್ಲ ಮುಂಭಾಗದ ಪೀಠಗಳಲ್ಲಿದ್ದರು. ಇತರ ಸಾರ್ವಜನಿಕರೂ, ವಿದ್ಯಾರ್ಥಿಗಳೂ ಹಿಂದಿನ ಬೆಂಚುಗಳ ಮೇಲೆ ಕುಳಿತಿದ್ದರು. 'ಶ್ರೀ' ಅವರು ನಾಟಕದ ಸ್ವರೂಪವನ್ನು ಪರಿಚಯ ಮಾಡಿಕೊಟ್ಟು, ತಮ್ಮ ಅನುವಾದವನ್ನು ಓದಲು ಆರಂಭಿಸಿದರು. "ಶ್ರೀ" ಅವರ ಹಳಗನ್ನಡದ ಮಾಧುರ್ಯ ನನ್ನ ಮನಸ್ಸನ್ನು ತುಂಬ ಆಕರ್ಷಿಸಿತು. ನಾಟಕದ ವಸ್ತುವನ್ನೂ ಅದರ ಹಿರಿಮೆಯನ್ನೂ ಅರ್ಥಮಾಡಿಕೊಳ್ಳುವಷ್ಟು ಶಿಕ್ತಿ ನನಗೆ ಬೆಳೆದಿರಲಿಲ್ಲ. ಮೇಳಗಳೇ ಪ್ರಧಾನ ಪಾತ್ರವಹಿಸಿದ್ದ ಈ ನಾಟಕ ಎಲ್ಲರಿಗೂ ನನ್ನಂತೆಯೇ ಗ್ರಹಿಸುವುದು ಸ್ವಲ್ಪ ಕಷ್ಟವೆಂದು ಅರಿವಾಯಿತು. 'ಶ್ರೀ' ಅವರ ವಾಚನಕಲೆಗೆ ಎಲ್ಲರೂ ನನ್ನಂತೆಯೇ ಮಾರುಹೋಗಿದ್ದರು. ಸ್ವಲ್ಪ ದಿನಗಳ ಅನಂತರ, ಸೆಂಟ್ರಲ್ ಕಾಲೇಜಿನ ಮಹೋತ್ಸವವೊಂದರ ಸಂಬಂಧದಲ್ಲಿ ಈ ಹಳಗನ್ನಡ ನಾಟಕವನ್ನು ಗುಬ್ಬಿ ಕಂಪನಿಯ ನಾಟಕ ಮಂದಿರದಲ್ಲಿ ಪ್ರಯೋಗಿಸಲಾಯಿತು. ಕಾಲೇಜಿನ ಅಧ್ಯಾಪಕರಲ್ಲಿ ಅತ್ಯಂತ ಪ್ರತಿಭಾಶಾಲಿಗಳಾದವರು ಅಭಿನಯಿಸಿದರು. ಆಗಲೂ ಸಹ ಅದು ಕಳೆ ಕಟ್ಟಲಿಲ್ಲ. ನಾಟಕದ ಕಥಾವಸ್ತುವನ್ನೇ ಅರಿಯದ, ವಿದ್ಯಾವಂತರಾದ

ಪ್ರೇಕ್ಷಕರಿಗೂ ಅದು ಉದ್ವಕ್ಕೂ ಏನೋ ಗೋಳು ಕರೆಯಂತೆ ಕೇಳಿಬಂದಿತು. ಅಂತೂ ಹಳಗನ್ನಡದಲ್ಲಿ ರಚಿತವಾಗಿರುವ 'ಶ್ರೀ' ಅವರ 'ಅಶ್ವತ್ಥಾಮನ್' ನಾಟಕವನ್ನೂ 'ಪಾರಸಿಕರು' ಎಂಬ ಈ ನಾಟಕವನ್ನೂ ತೌಲನಿಕ ದೃಷ್ಟಿಯಿಂದ ಪರಿಶೀಲಿಸಿದರೆ, ಮಹಾಭಾರತದ ಕಥೆಯನ್ನು ಸೊಫೊಕ್ಲೀಸನ 'ಏಜಾಕ್ಸ್' ಎಂಬ ನಾಟಕದ ವಸ್ತುವಿನೊಂದಿಗೆ ಅಳವಡಿಸಿಕೊಂಡು ಬರೆದಿರುವ 'ಶ್ರೀ' ಅವರ ಪ್ರತಿಭೆ ಅಲ್ಲಿ ಎಷ್ಟು ಉಜ್ವಲವಾಗಿದೆಯೆನ್ನುವುದು ವ್ಯಕ್ತವಾಗುತ್ತದೆ. 'ಪಾರಸಿಕರು' ಎಂಬ ನಾಟಕದ ಹಳಗನ್ನಡ ಭಾಷೆಯ ಬಗ್ಗೆ ನಾವು ಏನೂ ಆಕ್ಷೇಪವೆತ್ತಲು ಆಗದಿದ್ದರೂ, ನಾವು ನಾಟಕದಲ್ಲಿ ನಿರೀಕ್ಷಿಸುವ ಕ್ರಿಯಾಂಶ ಕಡಮೆಯಾಗಿರುವುದರಿಂದಲೂ, ಎರಡು ಮೇಳಗಳೇ ಇಡೀ ನಾಟಕದಲ್ಲಿ ಪ್ರಧಾನ ಪಾತ್ರವಹಿಸಿ ಪ್ರಶ್ನೋತ್ತರಗಳನ್ನು ಹಾಡಿನ ಮೂಲಕ ನಿರೂಪಿಸುವುದರಿಂದಲೂ ಈ ಕೃತಿ ಹೆಚ್ಚು ಪ್ರಿಯವಾಗಲಿಲ್ಲವೆನ್ನಿಸುತ್ತದೆ. ('ಪಾರಸಿಕರು' ನಾಟಕದ ಅನುವಾದದ ವಿಮರ್ಶೆಯನ್ನು ಓದ ಬಯಸುವವರು, ವಿ. ಎಂ. ಇನಾಂದಾರ್ ಬರೆದಿರುವ ಬಿ.ಎಂ.ಶ್ರೀ : 'ಬದುಕು–ಬರಹ' ಎಂಬ ಪುಸ್ತಕವನ್ನು ನೋಡಬಹುದು.)

* * *

'ಶ್ರೀ' ಅವರ ಸ್ಮೃತಿ ಪರಂಪರೆಯಲ್ಲಿ ನನ್ನ ಮನಸ್ಸು ಈಗ ೧೯೪೬ನೆಯ ಜುಲೈ ೧೨, ೧೩ ಮತ್ತು ೧೪ ರಂದು ಮೈಸೂರಿನಲ್ಲಿ ನಡೆದ ಮೈಸೂರು ವಿಶ್ವವಿದ್ಯಾನಿಲಯದ ರಜತೋತ್ಸವ ಸಮಾರಂಭದತ್ತ ಹರಿಯುತ್ತಿದೆ. ಆ ಮಹಾ ಸಮಾರಂಭದ ಅಂಗವಾಗಿ ಮಹಾರಾಜ ಕಾಲೇಜಿನಲ್ಲಿ ನಡೆದ ಕನ್ನಡ ಕವಿಸಮ್ಮೇಳನವನ್ನು ನಾನು ಮರೆಯುವಂತಿಲ್ಲ. ಆಗ ನಾನು ಬಿ. ಎ. (ಆನರ್ಸ್) ತರಗತಿಯಲ್ಲಿ ಓದುತ್ತಿದ್ದೆ. ಆ ಕವಿ ಸಮ್ಮೇಳನದ ಅಧ್ಯಕ್ಷತೆಯನ್ನು ಬಿ. ಎಂ. ಶ್ರೀ. ಅವರು ಅಲಂಕರಿಸಿದ್ದರು. ಅಂದು ಹದಿನೈದು ಜನ ಕವಿಗಳು ಭಾಗವಹಿಸಿದ್ದರು. ಬಹುಮಟ್ಟಿಗೆ ಹಿರಿಯರೇ ಭಾಗವಹಿಸಿದ್ದ ಆ ಕವಿಸಮ್ಮೇಳನದಲ್ಲಿ ಶ್ರೀ ಕೆ. ನರಸಿಂಹಮೂರ್ತಿ ಮತ್ತು ನಾನು ಇಬ್ಬರೇ ವಿದ್ಯಾರ್ಥಿ ಕವಿಗಳು. ಕಾಲೇಜಿನ ಮಹೋತ್ಸವದಲ್ಲಿ ತರುಣರಿಗೂ ಒಂದು ಅವಕಾಶಕಲ್ಪಿಸಬೇಕೆಂಬ ಸದುದ್ದೇಶದಿಂದ ಕನ್ನಡ ಪ್ರಾಧ್ಯಾಪಕರಾಗಿದ್ದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ನಮಗೂ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದರೆಂದು ತೋರುತ್ತದೆ. ಮನೆಯಲ್ಲಿ ನಡೆಯುವ ಹಬ್ಬಹರಿದಿನಗಳಲ್ಲಿ ದೊಡ್ಡವರ ಪಾಲು ಎಷ್ಟು ಹಿರಿದೋ, ಚಿಕ್ಕವರದೂ ಅಷ್ಟೇ ಮುಖ್ಯವಾದುದಲ್ಲವೆ?

ಅಂದಿನ ಕವಿ ಸಮ್ಮೇಳನದ ಸ್ವಾಗತ ಭಾಷಣವನ್ನು ಮಾಡುತ್ತ ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ಗುರುಗಳಾದ 'ಶ್ರೀ' ಅವರ ಪ್ರಯತ್ನದಿಂದ ಆಧುನಿಕ ಕನ್ನಡದ ಕವಿ ಪರಂಪರೆ ಹೇಗೆ ಬೆಳೆಯುತ್ತಿತ್ತು ಎನ್ನುವುದನ್ನು ಪ್ರಸ್ತಾಪಿಸಿ, ಕಡೆಗೆ, ಆ ಸಲು

ವಾಗಿಯೇ ತಾವು ಬರೆದಿದ್ದ ಒಂದು ಪದ್ಯದ ಮೂಲಕ ಎಲ್ಲರನ್ನೂ ಸ್ವಾಗತಿಸಿದರು. ಎ. ಆರ್. ಕೃಷ್ಣಶಾಸ್ತ್ರಿಗಳ ಆ ಪದ್ಯದಲ್ಲಿ ಅಂದಿನ ಕನ್ನಡ ಕಾವ್ಯದ ಬೆಳವಣಿಗೆಯ ಹೆಜ್ಜೆ ಗುರುತುಗಳನ್ನು ಕಾಣಬಹುದಾದ್ದರಿಂದ ಅದನ್ನು ಇಲ್ಲಿ ಉಲ್ಲೇಖಿಸಿದೆ.

ಸಂಸ್ಕೃತದ ಕನ್ನಡದ ಸಾಹಿತ್ಯ ಸಾಗರವ
ತಮ್ಮದೊಂದು ನುಡಿಯಿಂದ ಪಾಲ್ಗಡಲನಾಗಿಸಿಹ
ಕವಿಗಳೇ ಬನ್ನಿರೈ, ಕವಿತೆಗಳ ತನ್ನಿರೈ !
ಸಂಸ್ಕೃತವ ಕನ್ನಡವ ಕಡೆ ಕಡೆದು ನವನೀತ
ಕಾವ್ಯಗಳ ಪಡೆಯುತಿಹ ಕವಿರತ್ನರೇ ಬನ್ನಿ !
ಕನ್ನಡಕೆ ಮೆಚ್ಚಾದ ಸಂ–ಕ್ರಾಂತಿ ಪೊಸಕಬ್ಬ
ಕನ್ನಡದ ಬಾವುಟವ ಮಾಡಿ ಮುನ್ನುಗ್ಗಿದಾ
ಶ್ರೀಕಂಠ ಗುರುವರ್ಯ ಕನ್ನಡದ ಮಮತೆಯಿಂ
ಕಾವ್ಯನಿಧಿ ಕೂಡಿಡಲು ವಿಶ್ವವಿದ್ಯಾಲಯದೆ.
ಶ್ರೀನಿವಾಸರು ಪಲರು ಕಾವ್ಯಲಕ್ಷ್ಮಿಯನೊಲಿಸಿ
ಪ್ರತಿವರ್ಷ ಕೌಸ್ತುಭವ ಪಡೆದು ಧರಿಪಂತಾಯ್ತು.
ಮೈಸೂರ ಮಕ್ಕಳಿಗೆ ಅರಿವಿನಮೃತವನೂಡಿ
ವಿಶ್ವವಿದ್ಯಾಲಯವ ಸಂತತಂ ಪೋಷಿಸಿದ
ಸಂಸ್ಕೃತದ ಕನ್ನಡದ ಹಿರಿಯಣ್ಣರೇ ಬನ್ನಿ !
ಪುಟ್ಟಕವಿಗಳೆ ಬನ್ನಿ, ದೊಡ್ಡ ಕಾವ್ಯವ ತನ್ನಿ !
ಕನ್ನಡದ ಕಂದಗಳೆ, ಸಾಹಿತ್ಯ ಕಂದಗಳೆ,
ಕವಿತೆಯುಕ್ಕಂದಗಳೆ, ಕಾವ್ಯ ಮಾಕಂದಗಳೆ
ದಯಮಾಡಿ ! ತಮಗೆಲ್ಲ ಬಯಸುವೆವು ಸ್ವಾಗತವ,
ಸು–ಸ್ವಾಗತವ !

ಕನ್ನಡ ಮತ್ತು ಸಂಸ್ಕೃತ ಕವಿಗಳ ಸಮ್ಮೇಳನಗಳು ಏಕಕಾಲದಲ್ಲಿ ನಡೆದುದರಿಂದ ಈ ಸ್ವಾಗತ ಪದ್ಯದಲ್ಲಿ ಕನ್ನಡ ಮತ್ತು ಸಂಸ್ಕೃತ ವಿದ್ವಾಂಸರ ಹೆಸರುಗಳು ಒಟ್ಟಿಗೆ ಬಂದಿವೆ.

ಕನ್ನಡ ಕವಿ ಸಮ್ಮೇಳನದಲ್ಲಿ ಭಾಗವಹಿಸಿದ ಎಲ್ಲ ಕವಿಗಳೂ ವಿಶ್ವವಿದ್ಯಾನಿಲಯದ ಹಿರಿಮೆಯನ್ನೇ ಪ್ರಸ್ತಾಪಿಸಿದ್ದರು. ಅಧ್ಯಕ್ಷತೆ ವಹಿಸಿದ್ದ 'ಶ್ರೀ' ಅವರು ಅಂದು 'ಶುಕ್ರ

ಗೀತೆ' ಎಂಬ ಕವನವನ್ನು ಓದಿ ಎಲ್ಲರ ಚೇತನವನ್ನೂ ಬಡಿದೆಬ್ಬಿಸಿದರು. ದರ್ಶನಾತ್ಮಕವಾದ ಈ ಕವಿತೆಯ ಮುಖ್ಯ ಸಂದೇಶವಂತೂ ಮಂತ್ರ ಸದೃಶವಾಗಿದೆ :

ಋತವೊಂದೆ ಗೆಲ್ಲುವುದು, ಅನೃತವಲ್ತು ;
ಅಮೃತವೆನೆ ವಿದ್ಯೆಯೆ ; ಅವಿದ್ಯೆಯಲ್ತು ;
ವಿಶ್ವಭಾರತಿ ಶರಣು, ಕಿರುತೀರ್ಥವಲ್ತು.
ಸರ್ವಜೀವಂಗಳುಂ ಮುಕ್ತಿಯಂ ಕಾಣ್ಗೆ ;
ದೇವರೊಳ್ ಪಗೆವವರ ಕಾಳಗಂ ಮಾಣ್ಗೆ ;
ಸಾವುದೆಲ್ಲಾ ಸತ್ತು, ಬಾನಾಳ್ಕೆ ಪೂಣ್ಗೆ.
ಜ್ಞಾನ ಧರ್ಮಂಗಳಿಂ ತಣ್ಪನಿಳೆ ತಾಳ್ಗೆ ;
ಶ್ರೀಜಯನ್ ನಿಡುಬಾಳಿ ನಮ್ಮನೊಲಿದಾಳ್ಗೆ ;
ಕನ್ನಡಿಗರುಸಿರಾಗಿ ಕನ್ನಡಂ ಬಾಳ್ಗೆ.

ಶಿಸ್ತು, ಶ್ರದ್ಧೆ, ಅಚ್ಚುಕಟ್ಟುಗಳಿಗೆ ಹೆಸರಾಗಿದ್ದ ಶ್ರೀಮಾನ್ ಎ.ಆರ್. ಕೃಷ್ಣಶಾಸ್ತ್ರಿಗಳು ಈ ರಜತೋತ್ಸವದ ವಿಶಿಷ್ಟ ಕಾರ್ಯಕ್ರಮಗಳನ್ನು ಪ್ರಬುದ್ಧ ಕರ್ಣಾಟಕದ ೨೩ನೆಯ ಸಂಪುಟದ (೧೯೪೨) ಮೊದಲನೆಯ ಸಂಚಿಕೆಗೆ (ವಿನಾಯಕ ಸಂಚಿಕೆಗೆ) ಒಂದು ಪುರವಣಿಯನ್ನಾಗಿ ಪ್ರಕಟಿಸಿ ಮಹೋಪಕಾರ ಮಾಡಿರುತ್ತಾರೆ. ಆ ಪುರವಣಿಯಲ್ಲಿ ಕನ್ನಡ ಮತ್ತು ಸಂಸ್ಕೃತ ಕವಿಗಳ ಕವನಗಳನ್ನೆಲ್ಲ ಪ್ರಕಟಿಸಿರುತ್ತಾರೆ. ೬೬ ಪುಟಗಳಿರುವ ಈ ಪುರವಣಿಯನ್ನೇ ಪ್ರತ್ಯೇಕವಾಗಿ ಪ್ರಕಟಿಸಿ, ಕವಿಸಮ್ಮೇಳನದಲ್ಲಿ ಹಾಗೂ ಇತರ ಕಾರ್ಯಕ್ರಮಗಳಲ್ಲಿ ಭಾಗವಹಿಸಿದವರಿಗೆಲ್ಲ ಉಡುಗೊರೆಯಾಗಿ ಕೊಟ್ಟದ್ದು ಅವರ ಕಾರ್ಯತತ್ಪರತೆಗೆ ಒಂದು ದೊಡ್ಡ ಸಂಕೇತ.

* * *

ಈವರೆಗೆ ಬಿ. ಎಂ. ಶ್ರೀ. ಅವರು ಜೀವಂತವಾಗಿರುವ ಅವಧಿಗೆ ಸಂಬಂಧಿಸಿದಂತೆ ಕೆಲವು ಘಟನೆಗಳನ್ನು ಪ್ರಸ್ತಾಪಿಸಿದೆ. ಸಮಗ್ರ ಕರ್ನಾಟಕದ ಏಕೀಕರಣದ ಕನಸನ್ನು ಕಟ್ಟಿಕೊಂಡು, ನಾಡಿನ ಹಳ್ಳಿ ಹಳ್ಳಿಗಳನ್ನೆಲ್ಲ ಸುತ್ತಾಡಿ ಬಂದ ಅವರ ಪರ್ಯಟನೆಯ ವಿಚಾರ ಎಲ್ಲರಿಗೂ ತಿಳಿದಿದ್ದಷ್ಟೆ. ಅವರಿಗೆ ಕನ್ನಡದ ಕಪ್ಪುನೆಲವೆಂದರೆ ತುಂಬಾ ಅಭಿಮಾನ. 'ಕನ್ನಡ ತಾಯ ನೋಟ'ವೆಂಬ ತಮ್ಮ ನೀಳ್ಗವಿತೆಯಲ್ಲಿ ಕನ್ನಡನಾಡಿನ ಸಿರಿಯನ್ನು ವರ್ಣಿಸುತ್ತ "ಕೆಳಗೆ ಬೆಳೆ ಹೊಲ ಕಪ್ಪು, ಹೊಳೆ ಕೆರೆಯು ಮಡುಕಪ್ಪು, ತಾಯ ಕಾಲ್ತೊಳೆವ ಉಪ್ಪುಕಡಲದು ಕಪ್ಪು, ಜನ ಕಪ್ಪು—ಏನೆಂದೆ ? ತಪ್ಪು, ತಪ್ಪು !" ಎಂದು ತಮ್ಮ ನಾಲಿಗೆಯನ್ನು ತಾವೇ ತಿದ್ದಿಕೊಂಡಿರುವಂತೆ ಎಚ್ಚೆತ್ತು,

"ಓ ತಾಯೆ, ಕನ್ನಡದ ಪೆರ್ ತಾಯೆ, ನಮ್ಮಮ್ಮ ದೇವಿ, ಸಮ್ರಾಜ್ಞಿ, ಸುಳಿಗುರುಳು, ನಗೆಗಣ್ಣು ಏನು ಕಪ್ಪೇ ನಿನಗೆ—ಮುತ್ತಿಡುವ ಕಪ್ಪು!" ಎಂದು ಹೊಗಳಿ ಹಿಗ್ಗಿರುವರು. ಇಂಥವರು, ಈ ಕಪ್ಪು ನೆಲದಲ್ಲಿಯೇ ತಮ್ಮ ಸಾವನ್ನು ಅಪ್ಪಿದುದು, ಒಂದು ರೀತಿಯಲ್ಲಿ ಬಹಳ ಅರ್ಥಪೂರ್ಣವಾಗಿದೆ. ಕನ್ನಡ ಸಾಹಿತ್ಯದ ಪುನರುಜ್ಜೀವನ ಮತ್ತು ಕರ್ನಾಟಕದ ಏಕೀಕರಣ ಇವೆರಡೂ ಅವರ ಆಜನ್ಮದ ದೀಕ್ಷೆಗಳಾಗಿದ್ದುವು. ಕನ್ನಡ ಸಾಹಿತ್ಯದ ಪುನರುಜ್ಜೀವನವನ್ನೇನೋ ಅವರು ಕಣ್ಣಾರೆ ಕಂಡರು. ಕರ್ನಾಟಕದ ರಾಜಕೀಯ ಏಕೀಕರಣವನ್ನು ಕಣ್ಣಾರೆ ಕಾಣದಿದ್ದರೂ, ಅವರು ನಾಡಿನ ಸಾಂಸ್ಕೃತಿಕ ಏಕೀಕರಣ ವನ್ನು ಕಂಡಿದ್ದರೆನ್ನುವುದರಲ್ಲಿ ಸಂಶಯವಿಲ್ಲ.

'ಶ್ರೀ' ಅವರ ಸಾವಿನ ಅನಂತರ, ಕರ್ನಾಟಕದ ಏಕೀಕರಣವನ್ನು ಸಾಧಿಸುವ ಕೆಲವು ಹಂತಗಳಲ್ಲಿ ರಾಜಕೀಯ ಧುರೀಣರಲ್ಲಿ ನಡೆದ ಹೋರಾಟ, ಕಾಡಿದ ಸಂಶಯ ಪಿಶಾಚಿ, ಒಡಕುದನಿಗಳನ್ನು ಕಂಡು ನನ್ನ ಮನಸ್ಸು, ಕರ್ನಾಟಕದ ಇತರ ಹಿತೈಷಿ ಗಳಂತೆಯೇ ತುಂಬ ಪರಿತಪಿಸಿತು. ಆಗ, ಒಮ್ಮೆ, ಇಂಥ ಸಂದಿಗ್ಧ ಸಮಯದಲ್ಲಿ 'ಶ್ರೀ' ಅವರು ಬದುಕಿರಬಾರದಿತ್ತೆ ಎಂದು, ಬಹುವಾಗಿ ನೊಂದುಕೊಂಡು, ಅವರನ್ನು ನೆನೆದು ಒಂದು ಅಷ್ಟಪದಿಯನ್ನೇ ರಚಿಸಿದೆ.

ನೀವಿಂದು ಜೀವಿಸಿರಬೇಕಿತ್ತು ಶ್ರೀಕಂಠ
  ಗುರುವರ್ಯ ! ಓ, ಕನ್ನಡದ ನುಡಿಯ ಆಚಾರ್ಯ !
  ಚಣಚಣವು ನಿಮ್ಮನೇ ನೆನೆಯುತಿಹೆ ಗುರುವರ್ಯ
ಉಗ್ರವಾಗುತಿರೆ ಕರ್ನಾಟಕದ ಜನಕಂಠ !
ಕನ್ನಡದ ಗಡಿಗಾಗಿ, ಕನ್ನಡದ ನುಡಿಗಾಗಿ,
  ಕನ್ನಡದ ತಾಯ್ನಾಡ ಒಂದುಗೂಡಿಸಲೆಂದು
  ಹಗಲಿರುಳು ಒಂದೆ ಸಮ ಸಂಚರಿಸಿ ನೀವಂದು
ನುಡಿದ ಆ ನುಡಿಗುಡುಗು ಕೇಳಿಬರದೇ ಮೊಳಗಿ ?
ನಾಡನಾಡಿಯ ಮಿಡಿವ ಕನ್ನಡದ ನುಡಿಯಿಂದು
  ಸಿಡಿಲು ಮಿಂಚುಗಳಂತೆ ಕನ್ನಡದ ಬಾನಿನಲಿ
  ಕೆರಳಿ ಕಿಡಿಗಾರುತಿದೆ, ಕೆಂಪೇರುತಿದೆ ಕನಲಿ,
ತಾಯ್ನಾಡ ಬಿಡದಂತೆ ಇಂದೆ ಕಟ್ಟುವೆವು ಎಂದು !
  ಕನ್ನಡದ ಕುಲವೆಲ್ಲ ಒಂದೆ ಹಿರಿ ಸಂಸಾರ !
  ಕನ್ನಡದ ನೆಲವೆಲ್ಲ ಒಂದೆ ಭೂವಿಸ್ತಾರ !

(೧೩-೧೨-೧೯೪೯)

ಕಡೆಗೂ ರಾಜಕಾರಣಿಗಳ ಕುಟಿಲೋಪಾಯಗಳು ಕಣ್ಮರೆಯಾಗಿ, ಇಡಿಯ ಕನ್ನಡ ಸಾಹಿತಿಗಳ ಹೃದಯದ ಹಾರೈಕೆಯೇ ಫಲಿಸಿತೆಂಬಂತೆ ೧೯೫೬ನೆಯ ನವೆಂಬರ್ ಒಂದನೆಯ ತಾರೀಖು ಕನ್ನಡನಾಡಿನ ಪುನರ್ಜನ್ಮವಾಯಿತು. ಆದರೆ, ಒಂದು ಕುಂದು ಮಾತ್ರ ಹಾಗೆಯೇ ಉಳಿಯಿತು. ಒಟ್ಟು ನಾಡನ್ನು "ಮೈಸೂರು" ಎಂದು ಕರೆಯಬೇಕೆಂಬ ನಿರ್ಧಾರವನ್ನು ಕೇಳಿ, ಅಂದು ಜೀವಂತರಾಗಿದ್ದ ಎಷ್ಟೋ ಕನ್ನಡದ ಆಚಾರ್ಯರು ನಿಟ್ಟುಸಿರುಬಿಟ್ಟರು. ಮುಂದೆ ಎಲ್ಲ ಸರಿ ಹೋಗುವುದೆಂಬ ಭರವಸೆಯಿಂದ ಸಮಗ್ರ ಕನ್ನಡನಾಡಿನಲ್ಲಿ ಏಕೀಕರಣೋತ್ಸವವನ್ನು ಅತ್ಯಂತ ವೈಭವದಿಂದ ಆಚರಿಸಲಾಯಿತು.

ಆ ಪರ್ವ ದಿನದಂದು ನಾನು ಚಿತ್ರದುರ್ಗದಲ್ಲಿದ್ದೆ. ಆ ಪ್ರಶಸ್ತಿದಿನವನ್ನು ನೆನೆದು ಪುಳಕಗೊಂಡು 'ಪುನರ್ಜನ್ಮ'ವೆಂಬ ಕವನವನ್ನು ರಚಿಸಿದೆ.

ಪುನರ್ಜನ್ಮ ಪುನರ್ಜನ್ಮ ಪುನರ್ಜನ್ಮ ಪಡೆಯಿತು!
ಹರಿದು ಹಂಚಿ ಹೋದ ನಾಡು ಮತ್ತೆ ಒಂದಾಯಿತು!

ಪುನರ್ಜನ್ಮ ಪಡೆದು ನಾಡು
ದಿವಿಗು ಮಿಾರಿದೆ
ಕಾಡು, ಮೇಡು, ಬೀಡು ಬೀಡು
ಹುರುಪುಗೊಂಡಿದೆ
ಪುನರ್ಜನ್ಮ ಪಡೆದವೋಲು
ಕನ್ನಡದ ಜನರ ಸಾಲು
ಮುದವನಾಂತಿದೆ
ಒಡೆದ ಮಂದಿ ಒಟ್ಟುಗೂಡಿ
ನಡೆವ ಬೆಡಗ ನೋಡಿ ನೋಡಿ
ನೇಹ ನಲಿದಿದೆ.

ತೇರನೆಳೆಯೆ ಎಲ್ಲ ಬನ್ನಿ
ಇದು ರಥೋತ್ಸವ!
ಒಲುಮೆ ಬಲುಮೆ ಎಲ್ಲ ತನ್ನಿ
ಇದು ಮಹೋತ್ಸವ!

ಪ್ರಬುದ್ಧ ಕರ್ನಾಟಕ — ಬಿಎಂಶ್ರೀ : ಸೂರರ ನೆನಪು

ಅಣ್ಣ ತಮ್ಮ ಅಕ್ಕ ತಂಗಿ
ಒಂದೆ ಮನೆಯಲೆಲ್ಲ ತಂಗಿ
ಇನ್ನು ಬಾಳುವ !
ಹೆಜ್ಜೆ ಹೆಜ್ಜೆ ಹೆಜ್ಜೆಯಿಟ್ಟು
ಒಂದೆ ಗುರಿಗೆ ಮನವನಿಟ್ಟು
ಇನ್ನು ಸಾಗುವ !

ನಾಡಿ ನಾಡಿ ನಾಡಿಯಲ್ಲಿ
ಮಿಡಿಯೆ, ಕನ್ನಡ
ಉಸಿರು ಉಸಿರು ಉಸಿರಿನಲ್ಲಿ
ಸುಳಿಯೆ ಕನ್ನಡ
ಅದುವೆ ಅನ್ನ ! ಅದುವೆ ಚಿನ್ನ !
ಎಲ್ಲ ಕನ್ನಡ !
ಇದುವೆ ಚಿನ್ನ ! ಇದುವೆ ರನ್ನ !
ನಮ್ಮ ಕನ್ನಡ




ಸಾಕಷ್ಟು ನಿಡಿದಾಗಿದ್ದ ಈ ಕವಿತೆಯನ್ನು ಚಿತ್ರದುರ್ಗದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಹಾಡಲಾಯಿತು. ತನು, ಮನಗಳಲ್ಲಿ ಕನ್ನಡದ ಜಪವನ್ನೇ ಮಾಡುತ್ತಿದ್ದ ಶ್ರೀಮಾನ್ ಸಿದ್ದವನಹಳ್ಳಿ ನಿಜಲಿಂಗಪ್ಪನವರು ಸಭಾಧ್ಯಕ್ಷತೆಯನ್ನು ವಹಿಸಿದ್ದರು. ಅವರು ತಮ್ಮ ಭಾಷಣದಲ್ಲಿ ಮೊತ್ತ ಮೊದಲನೆಯದಾಗಿ ಕನ್ನಡದ ಏಕೀಕರಣಕ್ಕಾಗಿ ಶ್ರಮಿಸಿದ ಹಿರಿಯರಿಗೆಲ್ಲ ತಮ್ಮ ಕೃತಜ್ಞತೆಯನ್ನು ಸಲ್ಲಿಸಿ, ರಾಜಕೀಯವಾಗಿ ಭಿನ್ನ ಭಿನ್ನವಾಗಿ ಒಡೆದು ಹೋಗಿದ್ದ ಕನ್ನಡಿಗರ ಎದೆಯಲ್ಲಿ ಕನ್ನಡನಾಡಿನ ಏಕೀಕರಣವನ್ನು ಸಾಂಸ್ಕೃತಿಕವಾಗಿ ಸಂರಕ್ಷಿಸಿಕೊಂಡು ಬಂದಿದ್ದ ಸಾಹಿತಿಗಳಿಗೆ ತಮ್ಮ ಪ್ರಣಾಮಗಳನ್ನು ಸಲ್ಲಿಸಿದರು.

ಆ ದಿನ 'ಶ್ರೀ' ಅವರು ಜೀವಂತವಾಗಿ ಇದ್ದಿದ್ದರೆ ಎಂಥ ಅಮೂಲ್ಯವಾದ ಕವನವನ್ನು ರಚಿಸುತ್ತಿದ್ದರೋ ಏನೋ ! ಸದ್ಯದಲ್ಲಿ, ಅವರು 'ಕನ್ನಡ ತಾಯ ನೋಟ'ವೆಂಬ ಕವಿತೆಯ ಕಡೆಯಲ್ಲಿ ಕನ್ನಡ ನಾಡಿನ ಏಕೀಕರಣವನ್ನು ಭಾವಿಸಿಕೊಂಡು ಹಾಡಿರುವ ಕೆಲವು ಸಾಲುಗಳನ್ನು ಸ್ಮರಿಸಿ ನಾವೂ ತೃಪ್ತರಾಗಬಹುದು.

" ನಿನ್ನ ಮಕ್ಕಳು ನಿದ್ದೆಗಳೆದೆದ್ದ ಸಿಂಹದಂತೇಳುತ್ತ, ವೊಳಗಿ,
ಕಣಕಿಳಿದು ಪಂಪ, ನೃಪತುಂಗರಾ ಮಾತುಗಳು ದಿಟವೆನಿಸುತಿಹರು,
ಸೆರೆಯನೊಕ್ಕಡೆಗೊಗೆದು, ಬಿಡುಗಡೆಯ ಕೈಕೊಂಡು, ಹಳೆ ನೆನಪು ನೆನೆದು,
ಹೊಸಕಾಣ್ಕೆಗಳ ಕಂಡು, ಸಾಮ್ರಾಜ್ಯಗಳ ಕಟ್ಟುತಿಹರು.
ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ, ಮನೆಮಕ್ಕಳೆಲ್ಲ
ಪೇರೊಕ್ಕಲಾಗಿ ಪಾಡುವರು !
ತಾಯ್ ಬದುಕಿ, ತಾವ್ ಬದುಕಿ, ಹೆರರ ಬದುಕಿಪರು !

'ಶ್ರೀ' ಅವರ ಈ ಅಭಯವಚನ ಇಂದು ಅಕ್ಷರಶಃ ಸತ್ಯವಾಗತೊಡಗಿದೆ.

"ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಬಾಳ್ಗೆ
— ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ"

ಎಂಬ ಅವರ ಅಂದಿನ ಘೋಷಣೆ ಇಂದು ಎಲ್ಲರಿಗೂ ನಿತ್ಯ ಪಾರಾಯಣದ ಪವಿತ್ರ ಮಂತ್ರವಾಗಲಿ.



ಮಾತೃಭಾಷೆಯನ್ನು ಸಾಯಿಸುವ ಮಾತನ್ನು ಇಲ್ಲಿಗೇ ಬಿಟ್ಟುಬಿಡೋಣ. ಈಗ ಎಲ್ಲಾ ರಾಜ್ಯಗಳಲ್ಲೂ ಎಲ್ಲಾ ಜನರಿಗೂ ಓದುಬರಹವನ್ನು ಕಲಿಸಿ ತಿಳಿವಳಿಕೆಗೆ ದಾರಿ ಮಾಡಬೇಕೆಂದು ಹೊರಟಿರುತ್ತಾರೆ. ಇದಕ್ಕೆ ಮಾತೃಭಾಷೆಯನ್ನು ಬಿಟ್ಟರೆ ಆಗುವುದಿಲ್ಲ. ಇದಲ್ಲದೆ ಪ್ರಪಂಚದಲ್ಲಿ ಅಭಿಮಾನವುಳ್ಳ ಯಾವ ಜನವೂ ತಮ್ಮ ಭಾಷೆಯನ್ನು ತಾವೇ ಹಳಿದುಬಿಟ್ಟು ತೊರೆಯುವುದಿಲ್ಲ.

— 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೫೬

ವಿಶಾಲಾಕ್ಷಿ

# ರಸಋಷಿ

ಮನೆಯ ಹೊರಗೂ ಒಳಗೂ ವ್ಯಾಪಿಸಿಕೊಂಡು ಏಕಮುಖವಾಗಿ ಚಲಿಸುತ್ತಿದ್ದ ಧೀರ ಗಂಭೀರ ವ್ಯಕ್ತಿ ನಾನು ಕಂಡ ಬಿ. ಎಂ. ಶ್ರೀ. ಅಂತರಾಳದಿಂದ ಮೇಲಕ್ಕೆದ್ದು ಸ್ಫುರಿಸುತ್ತಿದ್ದ ಅವರ ಪ್ರೇಮ ಕರುಣೆ ಧಾರಾವಾಹಿ ಜೇನು ಸವಿದಂತೆ. ಮನದಂಕಣ ದಿಂದ ಪವಿತ್ರ ಗಂಗೆಯಂತೆ ಇಳಿದು ಬಂದು ಹೃದಯ ತಾಕುತ್ತಿದ್ದ ಸಂಸ್ಕೃತಿ ಕಲಾಪ ಈ ರಸಋಷಿ ಪರಿವ್ರಾಜಕನ ಮಹಾ ಸೆಳೆತ.

ಮನೆಯ ಹೊರಗಣ ಕಾರ್ಯವಿಧಿ ನಿಯಮ, ಮನೆಯೊಳಗಿನ ದೈನಂದಿನ ಜೀವನ, ಇವೆರಡರ ಸಂಪರ್ಕವೂ ನನಗಿದ್ದುದು ಒಂದು ವಿಶೇಷ. ಶ್ರೀಯವರ ಚಲನ ವಲನಗಳನ್ನು ಒಟ್ಟಿಗೆ ಈಕ್ಷಿಸುವ, ಅನುಭವಿಸುವ, ಮತ್ತೆ ಮತ್ತೆ ಮೆಲುಕುಹಾಕಿ ಪ್ರೇರಣೆ ಹೊಂದುವ ಒಂದು ಸುಕೃತ ನನ್ನ ಪಾಲಿಗೆ ಬಂತು. ಕನ್ನಡದ ನವೋದಯಕ್ಕೆ ನಾಂದೀಸ್ವರೂಪರಾದ ಬಿ. ಎಂ. ಶ್ರೀಕಂಠಯ್ಯನವರನ್ನು ತಾತನಾಗಿ ಹೊಂದುವ ಸೌಭಾಗ್ಯ ಲಭಿಸಿದ್ದು ೧೯೩೫ರ ಬುದ್ಧಪೂರ್ಣಿಮಾ ದಿನ. ಅಂದಿನಿಂದ ಬೆಳಕಾಯಿತು ಈರ್ವರಲ್ಲೂ ಸ್ನೇಹಮಿಶ್ರಿತ ಬಂಧುತ್ವ. ಅವರ ಕಡೆಯ ದಿನದವರೆಗೂ ನನ್ನ ಜೀವನ ಅವರೊಟ್ಟಿಗೇ ಹಾಸುಹೊಕ್ಕಾಗಿತ್ತು.

ಬಾಲ್ಯದಲ್ಲಿ ನನ್ನ ಪಾಲಿಸಿದ ಶ್ರೀ ರೀತಿ ನೀತಿಗಳು ಧವಳ ಭವ್ಯ. ಕುಣಿಸಿ ಉಣಿಸಿ, ಮನ ತಣಿಸಿ ಹವಣಿಸಿದ ವಿಧಗಳು ಈಗಲೂ ಕಣ್ಣು ತೋಯಿಸುವಂಥವು. ಸತ್ಯ ಸೌಂದರ್ಯಗಳು ಬಿರಿದ ಚೆಲುವಿನ ಕಣಿವೆಯಲ್ಲಿ ಅವರ ಮಮತೆಯ ಹೃದಯ ಚಲಿಸಿ, ಹಿಗ್ಗಿನ ಹಂಪಲುಗಳನ್ನು ಧಾರಾಳವಾಗಿ ಹಂಚುತ್ತಿತ್ತು; ಹಂಬಲಗಳನ್ನು ಪೂರೈಸುತ್ತಿತ್ತು.

ನನ್ನ ಹುಟ್ಟು ಹಬ್ಬವನ್ನು ಅವರು ಆಚರಿಸುತ್ತಿದ್ದ ವೈಖರಿಯೇ ದೃಷ್ಟಾಂತ ಅವರ ಉದಾರ ಮನಸ್ಸಿಗೆ. ನನ್ನ ಜೊತೆಗಾರ್ತಿಯರನ್ನು ವಾರ ಮುಂಚೆಯೇ ಕೂಡಿ ಹಾಕಿ, ನಮ್ಮ ತಾಯಿ ಹಾಗೂ ಚಿಕ್ಕಮ್ಮನಿಂದ,—ಅವರ ಹೆಣ್ಣುಮಕ್ಕಳುಗಳಿಂದ— ವಿವಿಧ ವಿನೋದಾವಳಿ ಕಾರ್ಯಕ್ರಮವೊಂದನ್ನು ತಯಾರಿಸಿ, ಭಾಗವಹಿಸಿದವರ ಮನೆಯವರನ್ನೆಲ್ಲಾ ಆದರದಿಂದ ಬರಮಾಡಿಕೊಂಡು, ವಿನೋದ ಮುಗಿದ ಮೇಲೆ

ಮನೆ ತಾರಸಿ ಮೇಲೆ ಭಾರೀ ಜೆಳದಿಂಗಳೂಟ ಏರ್ಪಡಿಸಿ ನೀಡುತ್ತಿದ್ದ ನಿಷ್ಕಲ್ಮಷ ಆನಂದದ ಸುಗ್ಗಿ ಒಂದು ಅಪೂರ್ವ ಭಾಗ್ಯವೆಂದು ನಾನೆಣಿಸಿದ್ದೇನೆ. ಈ ಸಂತೋಷ ಸಂಭ್ರಮದ ಸಂಜೆಯು ಪೇಳೆ ಹುಡುಗರೊಡನೆ ತಾವೂ ಹುಡುಗರಾಗಿ "ಲಲ್ಲೆಯಿಂದ ತೊದಲಿ ನುಡಿದು, ಕೆಳೆಯುರೊಡನೆ" ಮಾತು ಜೆಳೆಸಿ ಹಿಗ್ಗುತ್ತಿದ್ದರು.

ಇಂತಹ ವಿನೋದ ವಿಲಾಸ ಸಮಾರಂಭಗಳು ಮನೆಯಲ್ಲಿ ಆಗಾಗ್ಗೆ ಕಾಣಿಸಿ ಕೊಳ್ಳುತ್ತಲೇ ಇದ್ದುವಾದರೂ, ಶ್ರೀಯವರ ಪ್ರಕೃತಿ ಗಾಂಭೀರ್ಯದೋಜಸ್ಸಿನೆಡೆಗೇ ಹೆಚ್ಚು ಒಲಿತ್ತು, ಒಲೆಯುತ್ತು. ಸಿರಲತೇಜಂ "ಆ ವಾಣಿ ತನ್ನ ಪಾವನ ಸೇವೆಗೆ ಕೃಪೆಯಿಂದಮೆಂದು ಕರೆವಳೊ ಎನ್ನಂ" ಎಂಬುದೇ ಗೀಳಾಗಿತ್ತು. ಜೈಗೂ ಜೆಳಗೂ ಪುಸ್ತಕ ಶಾರದೆ ಪ್ರಪಂಚದಲ್ಲೇ ಅವರ ದೀರ್ಘ ಶ್ವಾಸೋಚ್ಛ್ವಾಸ. ಅದೇ ಆಹಾರ ವಿಹಾರ; ಪೂರ್ಣ ತಲ್ಲೀನತೆ ; ಜ್ಞಾನಯಜ್ಞ.

ವಿದ್ಯಾರ್ಜನೆಗೆ ಶ್ರೀಯವರು ಕೊಟ್ಟ ಪ್ರಾಮುಖ್ಯವನ್ನು ಬಹುಶಃ ಇನ್ನಾವ ತೀವ್ರ ಆಸಕ್ತಿಗೂ ಕೊಟ್ಟಿರಲಾರರು. ತಮ್ಮ ಪೋಷಣೆಯಲ್ಲಿದ್ದವರ ಬಗೆಗೆ ಹೆಚ್ಚಿನ ಅನುಕಂಪ ಚಿಂತನೆ ಕೂಡ ಇದೇ ವಿದ್ಯಾರ್ಜನೆಯ ಮೂಲಕ ಮಧುರ ವರ್ಣವನ್ನೇ ತಾಳಿತ್ತು. ವಿಧಿ ತಂದ ನೋವಿಗೆ ವಿದ್ಯಾನಿಧಿಯನ್ನು ಒದಗಿಸಿ, ಮಕ್ಕಳ ಮನವನ್ನು ಸಂಕಟದಿಂದ ಪಾರುಮಾಡಲು ಯತ್ನಿಸಿದರು. ದೃಷ್ಟಿ ಕಳೆದುಕೊಂಡ ಒಬ್ಬನೇ ಮಗ ತಮ್ಮಯ್ಯನಿಗೆ ಶ್ರೀ ಎಲ್. ಗುಂಡಪ್ಪನವರಿಂದ ಪಾಠ ಹೇಳಿಸಿ ಅಂತರ್ ಜ್ಯೋತಿಯನ್ನು ಜೆಳಗಿಸಿದರು. ವಿಧವೆಯಾಗಿ ಬಾಹ್ಯಜಗತ್ತಿನ ಅಂಧಶ್ರದ್ಧೆಗಳಿಂದ ನೊಂದ ಮಗಳಿಗೆ ಮೆಲು ಅಂತಃಕರಣದಿಂದ ಅಮೆರಿಕಾದಿಂದ ಬಂದು 'ಹೋಂಸ್ಕೂಲ್' ತೆಗೆದ ಒಬ್ಬ ಮಹಿಳೆಯಿಂದ ಮನೆಯಲ್ಲೇ ಇಂಗ್ಲಿಷ್‌ಭಾಷೆ ಕಲಿಸಿ, ಒಳ್ಳೆಯ ಸಾಹಿತ್ಯ ಓದಲು ಪ್ರೇರೇಪಿಸಿದರು. ಆಕೆಯನ್ನು ಕಿರು ಕೂಪದಿಂದ ಮೇಲಿನ ನಲುನೋಟಕ್ಕೆ ಎತ್ತಿದರು. ಆಗಿನ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಪ್ರೌಢ ವಿದ್ಯಾಭ್ಯಾಸ ದುರ್ಬಲವಾಗಿದ್ದ ರಿಂದ, ಈ ಏರ್ಪಾಡಿಗೆ ಶರಣಾಗಿದ್ದರು. ವಿಶಾಲ ವಿದ್ಯೆಯ ನಾನಾ ಮುಖ ಪ್ರಯೋಜನಕ್ಕಾಗಿ ಎದೆ ಮನ ತೆರೆದಿಡಲು ಎಲ್ಲೂ ಬಾಗಿಲು ಮುಚ್ಚದೆ, ಹೋಗಲು ಅವಕಾಶವಿದ್ದ ಕಡೆಗಳಿಗೆಲ್ಲಾ ಮನೆಯುವರನ್ನು ಅವರ ಸಂಗಡ ಕರೆದೊಯ್ಯುತ್ತಿದ್ದ ಮನೋಭಾವ, ನಾನುಂಟೋ ಮೂರು ಲೋಕವುಂಟೋ ಎಂಬ ಭಾವನೆಗೆ ಅತಿ ವಿರುದ್ಧವಾಗಿತ್ತು. ಪ್ರಜಾಪ್ರಭುತ್ವ ಸಂದೇಶ ಅವರಲ್ಲಿ ಅರಳಿ ಕಂಪು ಸೂಸುತ್ತಿತ್ತು.

ಶ್ರೀಯವರ ಅವಿಶ್ರಾಂತ ವ್ಯಾಸಂಗ, ಗ್ರಂಥಸರಣ, ಜ್ಞಾನಾರ್ಜನೆ ನಾನು ಕಂಡಂತೆ ಶ್ರೀ ಕೃಷ್ಣರಾಜೇಂದ್ರ ರಸ್ತೆಯಲ್ಲಿದ್ದ ಅವರ ಬೆಂಗಳೂರು ಮನೆಯ ಅಧ್ಯಯನ ಕೊಠಡಿಯಲ್ಲಿ ನಡೆಯುತ್ತಿತ್ತು. ಓದಿದುದನ್ನು ಮಥಿಸಿ ಮಥಿಸಿ ರಕ್ತಗತ ಮಾಡಿ

ಕೊಳ್ಳುತ್ತಿದ್ದಾಗ ಹೂತೋಟದಲ್ಲೋ, ವರಾಂಡದಲ್ಲೋ ಶತಪಥ ತಿರುಗುತ್ತಿದ್ದುದನ್ನು ನೋಡಿರುವೆನಾದರೂ, ಸಾಮಾನ್ಯವಾಗಿ ಕೊಠಡಿಯಲ್ಲಿ ಮೇಜಿನ ಮುಂದೆ ಕುಳಿತೇ ಅವರ ಗ್ರಂಥಪಠಣ ಸಾಗುತ್ತಿತ್ತು.

ತೇಗದ ಮೇಜಿನ ಮೇಲೆ, ಮಧ್ಯೆ ಬುದ್ಧನ ಬಿಳೀ ಪ್ರತಿಮೆ. ಒಂದು ಪಾರ್ಶ್ವಕ್ಕೆ ಗಂಧದ ಮರದ ಪ್ರಭಾವಳಿಯಲ್ಲಿ ಬಕುಳ ಪುಷ್ಪಗುಚ್ಛದ ಕೆಳಗೆ ಗೋವನ್ನೊರಗಿ ಕೊಳಲೂದುವ ಗೋಪಾಲಕೃಷ್ಣನ ಸೊಬಗು. ಅದರ ಬಲಭಾಗಕ್ಕೆ ಮುಂದುಗಡೆ ಒಂದು ಗಾಜಿನ ಕಟ್‌ಗ್ಲಾಸ್ ಬೇಸನ್ನಿನಲ್ಲಿ ಉತ್ತರಿಸಬೇಕಾದ ಪತ್ರಗಳ ಜೋಡಣೆ. ಕಾಲಕಾಲಕ್ಕೆ ತಾತ ಅವಕಾಶ ಕೊಟ್ಟಾಗ, ಖಾಲಿಮಾಡಿ ಅದನ್ನು ಶುಭ್ರವಾಗಿರಿಸುವ ಕೆಲಸ ನನ್ನದಾಗಿತ್ತು. ಈ ಬೇಸನ್ನಿನ ಸೀದಾ ಮುಂದೆ ನಿಂತ ಎರಕ ಹುಯ್ದ ಕಬ್ಬಿಣದ ಗಣಪತಿ,—ಭದ್ರಾವತಿ ಕಾರ್ಖಾನೆಯಲ್ಲಿದ್ದ ನೆಂಟರೊಬ್ಬರು ಉಡುಗೊರೆ ಕೊಟ್ಟ ವಸ್ತು, — ಪೇಪರ್‌ವೈಟಿನ ಕೆಲಸ ಮಾಡುತ್ತಿತ್ತು. ಈ ಮೇಜಿನ ಮುಂದೆ ಶ್ರೀಯವರ ಅಧ್ಯಯನ ನಡೆಯುತ್ತಿತ್ತು.

ಒಮ್ಮೊಮ್ಮೆ, ವ್ಯಾಸಂಗದ ದೀರ್ಘಾಲೋಚನೆಗೆ ತೊಡಗಿದ್ದರೆಂದರೆ, ಬಾಹ್ಯ ಪರಿಸರದ ಸಂಪರ್ಕ ಕಡಿದಿತ್ತೆಂದರೆ, ನಮ್ಮ ಕರೆ—ಕೂಗಿಗೆ ಪ್ರತಿಧ್ವನಿ ಬರುತ್ತಲೇ ಇರಲಿಲ್ಲ. ಸಾಧಾರಣವಾಗಿ ಕಾಲೇಜಿಗೆ ಅವರು ಊಟಮಾಡಿಕೊಂಡು ಹೋಗುವ ರೂಢಿ. "ಅಣ್ಣಯ್ಯ, ತಟ್ಟೆ ಹಾಕಿದೆ. ಊಟಕ್ಕೆ ಬರಬಹುದು,"—ಇದು ನನ್ನ ನಿತ್ಯ ಉತ್ಸಾಹದ ಕರೆಯುವ ಪರಿ. ತದೇಕ ಚಿತ್ತದಿಂದ ವ್ಯಾಸಂಗ ನಡೆದಂದು ಮಾತು ಕಿವಿಗೆ ದೂರವಾಗೇ ನಿಲ್ಲುತ್ತಿತ್ತು. ಆಗ ಕೊಂಚ ಸಮಯ ಕಾದು ಪುನಃ ಪುನಃ ಹೋಗಿ ಬರುತ್ತಿದ್ದೆ. ಆಮೇಲೆ ಅವರ ಗಮನ ಸೆಳೆಯುವಂತೆ ಮಾಡುವುದನ್ನು ಕಲಿತೆ. ಕೇಳಿದರೆ ತಲೆ ಎತ್ತಿನೋಡಿ, 'ಬರುವೆನಮ್ಮ' ಎಂದು ಹೇಳಿ, ತಕ್ಷಣ ಪುಸ್ತಕವನ್ನು ಕೆಳಗಿಟ್ಟು ಬರಲು ಸಿದ್ಧರಾಗುತ್ತಿದ್ದರು. ಊಟದ ವೇಳೆ ಆಗಿಂದಾಗ್ಗೆ ಅವರು ಕಣ್ಣು ಮುಚ್ಚುತ್ತ ಅಗಿಯುತ್ತಿದ್ದುದು ಈಗಲೂ ಕಣ್ಣಿಗೆ ಕಟ್ಟಿದ ಹಾಗಿದೆ. ಜಟಿಲ ಸಮಸ್ಯೆಗಳಿಗೆ ಪರಿಹಾರ ಹುಡುಕುತ್ತಿದ್ದರೇನೋ, ಸ್ಫೂರ್ತಿ ವಿಚಾರ ಮತಿಗೆ ಏನನ್ನಾದರೂ ಎಟುಕಿಸುತ್ತಿತ್ತೇನೋ ಅಥವಾ ಆ ದಿನದ ಪಾಠವನ್ನು ಪುನರ್‌ನಿರ್ಮಾಣ ಮಾಡಿಕೊಳ್ಳುತ್ತಿದ್ದರೇನೋ ಎಂಬಂತೆ ಮಧ್ಯೆಮಧ್ಯೆ ಕಣ್ಣುಮುಚ್ಚಿ ಗೋಧಿ ಅನ್ನವನ್ನು ನುಂಗುವ ಅಭ್ಯಾಸ ಅವರಿಗೆ. ಆವರೆದುರಿಗೆ ಕುಳಿತ ನನಗೆ ಈ ಸಂದರ್ಭ ಬೇಡದ ತರಕಾರಿಯನ್ನು ತಟ್ಟೆಯ ಹಿಂಭಾಗಕ್ಕೆ ಸರಿಸುವ ಸದವಕಾಶ !

ರಜಾ ದಿನಗಳಲ್ಲಿ ಮಧ್ಯಾಹ್ನ ಊಟವಾದ ಮೇಲೆ ಸಾವಕಾಶವಾಗಿ ಹುರಿಗಾಳು ಅಥವಾ ಹುರುಕಲು ತಿನ್ನುತ್ತ ನಮ್ಮೊಡನೆ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದರು.

ಚರ್ಚೆ ಎನ್ನುವುದಕ್ಕಿಂತ ವಿಚಾರ ಸಂಕಿರಣವೆಂದರೆ ಹೆಚ್ಚು ಒಪ್ಪುತ್ತದೆ. ಯಾವುದೇ ಚೌಕಟ್ಟಾಗಲೀ,—ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ನಾಗರೀಕತೆಯ ಘಟ್ಟಗಳು,—ಎಲ್ಲಾ ಕೋನಗಳಿಂದಲೂ ಪರೀಕ್ಷಿಸಿ, ಅಳೆದು ಸುರಿದು ತೂಗಿ ಸಾಲುಗಳಲ್ಲಿ ಕೇಂದ್ರೀಕರಿಸಿ ವಿಚಾರಪೂರ್ಣ ಬೆಳಕನ್ನು ಬೀರುತ್ತಿದ್ದರು; ಬೆಳಕಿನ ಕುಯಿಲನ್ನು ಬುದ್ಧಿಮತಿಗೆ ತರುತ್ತಿದ್ದರು. ಜೀವನವನ್ನು ಎದುರಿಸಲು ಸಜ್ಜುಗೊಳಿಸಿದ ಪ್ರಬುದ್ಧ ಭಂಡಾರ ಈ ಜಿಜ್ಞಾಸೆ— ಕೂಟಗಳಿಂದಲೇ ಹನಿಗೂಡಿಸಿಗೂಡಿಸಿ ಕೂಡಿಸಿದ್ದು. ಜಳ್ಳು ತೂರಿದ್ದು ; ಕಾಳು ತುಂಬಿದ್ದು.

ಈ ವಿಚಾರ ಪ್ರಧಾನವಾದ ಹರ್ಷಕ್ಕಿಂತ ಭಿನ್ನವಾದ, ಒಂದು ಎಣೆಯಿಲ್ಲದ ಸಂತೋಷ ನಮಗೆ ಕಾದಿರುತ್ತಿತ್ತು, ಶ್ರೀಯವರು ಹೊರಗೆ ಕನ್ನಡನಾಡಿನ ಯಾತ್ರೆ ಮುಗಿಸಿ ಮನೆಗೆ ಹಿಂದಿರುಗಿದಂದು. ಆ ರಾತ್ರಿಯನ್ನೇ ಎದುರುನೋಡುತಿದ್ದೆವು. ಊಟಮುಗಿಸಿ ಎಲ್ಲರೂ ಬಳಸಿಕೊಂಡು ಕುಳಿತೆವೆಂದರೆ ಇಡೀ ಪ್ರವಾಸದ ಮುಖಚಿತ್ರವನ್ನು ನಮ್ಮ ಮುಂದಿಡುತ್ತಿದ್ದರು. ಎಷ್ಟರಮಟ್ಟಿಗೆ ಅದು ಸ್ವಾರಸ್ಯವಾಗಿರುತ್ತಿತ್ತೆಂದರೆ ನಾವೂ ಆ ತಿರುಗಾಟದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದೆವೋ ಎಂಬ ಭ್ರಮೆ ಬರುತ್ತಿತ್ತು. ಕನ್ನಡದ ಕಿಚ್ಚು ನಮ್ಮೆಲ್ಲರಲ್ಲೂ ಹೆಚ್ಚಿಕೊಂಡದ್ದೇ ಹೀಗೆ. ಇದೇ ವಾಕ್ಚುರಿ ಪದಪ್ರಯೋಗ ರಾಜನೈಖರಿಯನ್ನು ಹೊರಗೆ ಸಭೆ ಸಮ್ಮೇಳನಗಳಲ್ಲೂ ಅನುಭವಿಸಿ ಸ್ತಂಭೀಭೂತಳಾದದ್ದುಂಟು. ಗಂಟೆಗಟ್ಟಲೆ ಉಪನ್ಯಾಸ ಮಾಡಿದರೂ ಹೊತ್ತಿನ ಅರಿವಿಲ್ಲದೆಯೆ ಆ ಚಿಕ್ಕ ವಯಸ್ಸಿನಲ್ಲೂ ಕುಳಿತು ಕೇಳಿ ಹಿಗ್ಗಿದ ದಿನಗಳನ್ನು ಹೇಗೆ ಮರೆಯುವುದು ?

ಮನೆಯ ಒಳಗೇನು ? ಹೊರಗೇನು ? ಗಾನ ಮೆಲುಪಿನ ಕೊರಲು ಒಂದೇ. ಅಂತರ್ಯದ ಶುದ್ಧ ಚಾರಿತ್ರ್ಯ ಮಿಡಿಟದ ಭಾವಪರವಶತೆ ಒಂದೇ. ತಾವು ನಂಬಿದ ಸತ್ಯಗಳ ತತ್ವಗಳ ಬಗೆಗೆ ನಿಶ್ಚಲವಾದ ನಿಲುವು ಅವರದು. ಮಹಾನುಭಾವರಲ್ಲಿ ನಾವು ಕಾಣುವ ಕುಸುಮ–ಮೃದುತ್ವ, ವಜ್ರ–ಕಾಠಿಣ್ಯ, ಎರಡೂ ಅವರ ವ್ಯಕ್ತಿತ್ವದಲ್ಲಿಯೂ ಇಣುಕಿ ನೋಡುತ್ತಿದ್ದುವು.

ಶ್ರೀಯವರ ಭಾಷಣ, ಉಪನ್ಯಾಸ, ಚರ್ಚಾಕೂಟಗಳ ಉತ್ಸಾಹ, ಸಂತೋಷ, ಪ್ರಯೋಜನಗಳನ್ನು ಮನೆಯಲ್ಲೂ ಹೇಗೆ ಪಡೆದೆನೋ, ಹಾಗೆಯೇ ಅವರ ಪ್ರಾಧ್ಯಾಪಕತ್ವದ ಫಲವನ್ನು ಕೂಡ ಅವರ ವ್ಯಾಸಂಗ ಕೊಠಡಿಯಲ್ಲೇ ಅನುಭವಿಸಿದ ನೆನಹುಗಳು ಅಚ್ಚಳಿಯದೆ ಇವೆ. ಕಾಲೇಜಿನಲ್ಲಿ ಸಲ್ಲದಿದ್ದದ್ದು ಮನೆಯಲ್ಲಿ ಲಭಿಸಿತು. ತಮ್ಮ ಕೆಲಸದಿಂದ ಶ್ರೀಯವರು ನಿವೃತ್ತರಾದ ವರ್ಷ ನಾನು ಇಂಗ್ಲಿಷ್ ಸಾಹಿತ್ಯ ಓದಲು ಸೆಂಟ್ರಲ್ ಕಾಲೇಜು ಸೇರಿದೆ. ಪಠ್ಯವಾಗಿ ನೇಮಿಸಿದ ಅನೇಕ ಕೃತಿಗಳನ್ನು

ಅವರು ನನಗೆ ಮನೆಯಲ್ಲೇ ಪಾಠ ಹೇಳಿದರು. ಷೇಕ್ಸ್‌ಪಿಯರನ ನಾಟಕಗಳೇ ಆಗಲಿ, ಮಿಲ್ಟನ್ನನ ಕಾವ್ಯಗಳೇ ಆಗಲಿ, ಕನ್ನಡ ಬಾವುಟದಿಂದಾಯ್ದ ಹಳೆಗನ್ನಡದ ತೆನೆಯೇ ಆಗಲಿ, ಆ ಉಗ್ರಾಣದ ಸಾರಸಂಪತ್ತನ್ನು ಹಿನ್ನೆಲೆ-ಮುನ್ನೆಲೆಗಳೊಡನೆ ಉಜ್ವಲತೆ ಯಿಂದ ಬಿಚ್ಚಿ ತೆರೆದಿಡುತ್ತಿದ್ದರು. ಯಾವ ಭಾಷೆಯದೇ ಆಗಲಿ, ಅವರು ಒಮ್ಮೆ ಓದಿದರೆ ಸಾಕು. ತಕ್ಷಣ ಅರ್ಥ ಕಣ್ಮುಂದೆ ಬಂದು ನಿಲ್ಲುತ್ತಿತ್ತು. ಮುಂಚೆ ಕಬ್ಬಿಣದ ಕಡಲೆಯಾಗಿ ತೋರುತ್ತಿದ್ದ ಪಾಠರಾಶಿ ಅವರ ಸೂತ್ರವಿಧಾನಗಳಿಂದ ಸುಲಿದ ಬಾಳೆಯ ಹಣ್ಣಿನಂದದಿ, ಕಳೆದ ಸಿಗುರಿನ ಕಬ್ಬಿನಂದದಿ ಮಾರ್ಪಾಟಾಗುತ್ತಿತ್ತು. ಈ ವಿಷಯ ವಾಗಿ ಪ್ರಸ್ತಾಪಿಸಿರುವ ಅವರ ಅನೇಕ ಶಿಷ್ಯರೊಡನೆ ನಾನೂ ಧ್ವನಿಗೂಡಿಸುವೆ. ನಾನು ಕಂಡ ಗುರು ಬಿ.ಎಂ.ಶ್ರೀ ಕಾಲೇಜಿನ ಶಿಷ್ಯರುಗಳು ಕಂಡ ಶ್ರೀಯವರಿಗಿಂತ ಭಿನ್ನವಾಗಿರ ಲಿಲ್ಲ. ಅದೇ ಪಾಠವಿಧಾನ,ಒಲುಮೆಯ ಆಸಕ್ತಿ, ಅಕ್ಕರೆಯ ಚಿಲುಮೆ ; ಪ್ರಚೋದಕ ಶಕ್ತಿ.

ಶ್ರೀಕಂಠಯ್ಯನವರು ಎಲ್ಲ ಕಾಲಕ್ಕೂ ಶ್ರೇಷ್ಠರಾಗಿ ಉಳಿಯುವಂಥ ಕೆಲವೇ ವ್ಯಕ್ತಿ ಗಳಲ್ಲಿ ಒಬ್ಬರೆಂದೇ ನನ್ನ ತಿಳುವಳಿಕೆ. ನಗುಮೊಗ, ವಿದ್ಯಾವಿನಯ ವರ್ಚಸ್ಸು ಮತ್ತು ಮೇಧಾವಿತ್ವವನ್ನು ತೋರುವ ಕಣ್ಣುಗಳು, ಉದಾರ ಹಸ್ತ, ಸುಸಂಸ್ಕೃತವಾದ ನಡೆ-ನುಡಿಗಳು ಮತ್ತು ಉಡಿಗೆ ತೊಡಿಗೆಗಳು—ಇವೆಲ್ಲವನ್ನೂ ನಾನು ಶ್ರೀಯವರಲ್ಲಿ ಕಂಡದ್ದು. ಆಗ ಅವು "ಶ್ರೀನಿಧಿ" ಎಂಬ ಭಾವನೆ ಬೆಳೆದಿರಲಿಲ್ಲ. ತಾತನೆಂಬ ಮೋಹ ಆವರಿಸಿತ್ತು. ಶ್ರೀಯವರ ಶತಮಾನೋತ್ಸವ ಆ ಪೊರೆಯನ್ನು ಕಳಚಿ ಸತ್ಯವನ್ನು ತೆರೆದು ತೋರಿದೆ.

"ಅಂಧಶ್ರದ್ಧೆಯನ್ನು ಬಿಟ್ಟು ಸತ್ಯವನ್ನು ಹುಡುಕೋಣ. ಕೊನೆಗೆ ನಿಲ್ಲುವುದು, ಅಭಿಮಾನವಲ್ಲ; ಸತ್ಯ" ಎಂದು ಘೋಷಿಸಿದ ಶ್ರೀವಾಣಿ, ಸತ್ತವರನ್ನು ಎಬ್ಬಿಸುವ ಅಷ್ಟೇ ಅಲ್ಲ, ಬದುಕಿರುವವರನ್ನೂ ಎಚ್ಚರಗೊಳಿಸುವ ಕವಿವಾಣಿ; ಜಯಭೇರಿ.

ಸಾಮಾನ್ಯವಾಗಿ ಪ್ರತಿಯೊಬ್ಬರಿಗೂ ತಮ್ಮ ತಮ್ಮ ಭಾಷೆಯ ವಿಷಯದಲ್ಲಿ ಹೆಮ್ಮೆ ಭಕ್ತಿ ಶ್ರದ್ಧೆಗಳು ಇದ್ದೇ ಇರುತ್ತವೆ. ಹೀಗಿರುವುದೇನೂ ತಪ್ಪಾಗಿ ಕಾಣುವುದಿಲ್ಲ. ಅದರಿಂದ, ಕನ್ನಡದ ಪರವಾಗಿ, ಕನ್ನಡದ ಮೇಲಿನ ಅಭಿಮಾನದಿಂದ, ನಾನು ಒಂದು ಮಾತನ್ನು ಹೇಳಿದ ಪಕ್ಷದಲ್ಲಿ ಅದನ್ನು ಸಂಕುಚಿತ ದೃಷ್ಟಿಯೆಂದು ಯಾರೂ ಹೇಳಬಾರದು : ಆ ಮಾತೇನೆಂದರೆ—"ಕನ್ನಡನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ." ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ, ಕನ್ನಡ.

— 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೯೦

ಕೆ. ವೆಂಕಟರಾಮಪ್ಪ

# ಮಹಾ ಪ್ರಾಧ್ಯಾಪಕ

ಈಗ್ಗೆ ಅರವತ್ತು ವರ್ಷಗಳ ಹಿಂದೆ ಮೈಸೂರು ಮಹಾರಾಜರ ಕಾಲೇಜಿನಲ್ಲಿ ಮೊದಲಬಾರಿಗೆ ಶ್ರೀ ಶ್ರೀಕಂಠಯ್ಯನವರನ್ನು ಕಂಡಾಗ ಅವರು ಕನ್ನಡಿಗರು ಹೌದೋ ಅಲ್ಲವೋ ಎಂಬ ಸಂಶಯ ಮೂಡಿತು. ಅವರು ಆಗ ಹೆಸರಾಂತ ಇಂಗ್ಲಿಷ್ ಪ್ರಾಧ್ಯಾಪಕರು. ತರಗತಿಯಲ್ಲಿ ನಿಂತು ಅವರು ಇಂಗ್ಲಿಷ್ ಪಾಠ ಆರಂಭಿಸಿದರೆ ಗಂಟೆ, ಎರಡು ಗಂಟೆಗಳ ಕಾಲ ವ್ಯಾಖ್ಯಾನ ನಡೆಸುತ್ತಿದ್ದರು. ಆ ಕಾಲೇಜಿನ ಬಿ.ಎ. ತರಗತಿಗಳಲ್ಲಿ ಆಗ ೩೦೦-೩೫೦ ಮಂದಿ ವಿದ್ಯಾರ್ಥಿಗಳಿರುತ್ತಿದ್ದುದರಿಂದ ಅದು ಕೇವಲ ತರಗತಿಯ ಪಾಠದಂತಿರದೆ ಸಾರ್ವಜನಿಕ ಉಪನ್ಯಾಸದಂತೆಯೇ ತೋರುತ್ತಿತ್ತು. ಶ್ರೀಕಂಠಯ್ಯನವರ ವಾಗ್ಧಾರೆ ಗೇರುಸೊಪ್ಪೆಯಲ್ಲಿ ಧುಮ್ಮಿಕ್ಕುವ ಶರಾವತಿಯ ಪ್ರವಾಹದಂತೆ, ಹಿಮಾಲಯದ ಪರ್ವತಶ್ರೇಣಿಯಿಂದ ಇಳಿದು ಮೊದಲಸಾರಿ ಸಮತಳ ಪ್ರದೇಶವನ್ನು ಕಂಡ ಹರಿದ್ವಾರದ ಗಂಗಾ ಪ್ರವಾಹದಂತೆ, ರಭಸದ ವಾಗ್ಧಾರೆ. ಅವರ ಭಾಷಣ ಕೇಳುತ್ತ ತರಗತಿಯಲ್ಲಿ ಕುಳಿತ ವಿದ್ಯಾರ್ಥಿಗಳಿಗೆ ತಮ್ಮ ಎಲ್ಲ ಸಂದೇಹಗಳೂ ಆ ರಭಸದ ಶಬ್ದ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವಂತೆ ಇರುತ್ತಿತ್ತು. ಅವರ ಪಾಠ ಗಂಟೆ ನಡೆಯಲಿ, ಎರಡು ಗಂಟೆ ಹೊತ್ತೇ ನಡೆಯಲಿ, ಅವಿರತವಾದ ಇಂಗ್ಲಿಷ್ ವಾಕ್ಯ ಪ್ರವಾಹವೇ ಆಗಿರುತ್ತಿತ್ತು. ಅವರು ಎಂದೂ ಮರೆತು ಕೂಡ ಒಂದು ಕನ್ನಡ ಶಬ್ದವನ್ನು ಪ್ರಯೋಗಿಸುತ್ತಿರಲಿಲ್ಲ. ಇಂಗ್ಲಿಷ್ ಭಾಷೆ ಅವರಿಗೆ ಸ್ವಂತದ್ದಾಗಿಬಿಟ್ಟಿತ್ತು. ಮಾತೃಭಾಷೆಯಲ್ಲಿ ಹೇಳುವ ಹಾಗೆಯೇ ಅವರು ಇಂಗ್ಲಿಷಿನಲ್ಲಿ ಕೊಂಚವೂ ಅಡೆತಡೆಯಿಲ್ಲದೆ ಮಾತಿಗಾಗಿ ತಡಕದೆ, ತಡವರಿಸದೆ, ತುಂಬು ಗಾಂಭೀರ್ಯದಿಂದ ಹೇಳಬಲ್ಲವರಾಗಿದ್ದರು. ಗಹನವಾದ ತತ್ವ ವಿಚಾರವಾಗಲಿ, ಕಥೆಯ ಒಂದು ಹಾಸ್ಯ ಸನ್ನಿವೇಶವಾಗಲಿ, ಯಾವ ವಿಷಯವೇ ಆಗಲಿ ಶ್ರೀಕಂಠಯ್ಯನವರು ಮಾತಿನಲ್ಲಿ ಸುಲಭವಾಗಿ ಚಿತ್ರಿಸಬಲ್ಲವರಾಗಿದ್ದರು. ಅವರ ಸಹೋದ್ಯೋಗಿಗಳಾದ ಎ. ಬಿ. ಮ್ಯಾಕಿಂಟಾಷ್ ಎಂಬ ಬ್ರಿಟಿಷ್ ಪ್ರಜೆ, ಶ್ರೀಕಂಠಯ್ಯನವರ ಪಾಂಡಿತ್ಯ, ಪ್ರವಚನ ಗಾಂಭೀರ್ಯಗಳನ್ನು ಮೆಚ್ಚಿ "ಇವರು ಪೂರ್ವಜನ್ಮದಲ್ಲಿ ಆಕ್ಸ್‌ಫೋರ್ಡ್ ವಿಶ್ವವಿದ್ಯಾಲಯದಲ್ಲಿ

ಗ್ರೀಕ್ ಪ್ರೊಫೆಸರ್ ಆಗಿದ್ದರೆಂದು ತಿಳಿಯುತ್ತೇನೆ" ಎಂದು ಪ್ರಶಂಸೆಮಾಡಿದುದುಂಟು. ಮಹಾರಾಜಾ ಕಾಲೇಜಿನ ವಿದ್ಯಾರ್ಥಿಲೋಕಕ್ಕೆ ಶ್ರೀಕಂಠಯ್ಯನವರು ಆರಾಧ್ಯಮೂರ್ತಿಯಾಗಿದ್ದರು.

ಆಗತಾನೆ ಪ್ರವೇಶ ಪರೀಕ್ಷೆಯಲ್ಲಿ (University Entrance Examination) ಉತ್ತೀರ್ಣನಾಗಿ ಕಾಲೇಜು ಹೊಕ್ಕ ನನ್ನಂಥವರಿಗೆ ಆ ಪರಿಸರವೇ ಬೆರಗನ್ನುಂಟು ಮಾಡುವಂತಿತ್ತು. ಅಲ್ಲಿ ಪ್ರಾಧ್ಯಾಪಕರಾಗಿದ್ದ ಎನ್.ಎಸ್. ಸುಬ್ಬರಾವ್, ಎ.ಆರ್. ವಾಡಿಯಾ, ಎಂ. ಹಿರಿಯಣ್ಣ, ಜೆ. ಸಿ. ರಾಲೋ, ಎಲ್ಲರೂ ತಮ್ಮ ತಮ್ಮ ಶಾಸ್ತ್ರ, ಸಾಹಿತ್ಯಗಳಲ್ಲಿ ಪರಮ ಪಂಡಿತರು, ಪ್ರವಚನ ವಿಚಕ್ಷಣರು. ಅವರ ಮಾತು ಕೇಳುವುದೇ ಒಂದು ಭಾಗ್ಯ ವಿಶೇಷವೆಂಬ ಭಾವನೆ ಮೂಡುತ್ತಿತ್ತು. ಆ ಕಾಲದಲ್ಲಿ ಇಂಗ್ಲಿಷ್ ಕಲಿಯುವುದು, ಪರೀಕ್ಷೆಯಲ್ಲಿ ಇಂಗ್ಲಿಷಿನಲ್ಲಿ ಬರೆದು ಪರೀಕ್ಷಕರ ಕೈಲಿ 'ಸೈ' ಎನ್ನಿಸಿಕೊಳ್ಳುವುದು, ಬಹಳ ಕಷ್ಟದ ಕೆಲಸಗಳೇ ಆಗಿದ್ದುವು. ಪ್ರವೇಶ ಪರೀಕ್ಷೆಯಲ್ಲಿ ಒಮ್ಮೆಯೂ ಕುಂಟದೆ ಉತ್ತೀರ್ಣರಾಗುವುದು ಅಸಾಧ್ಯವೆಂದೇ ಹಲವರು ನಂಬಿದ್ದರು. "ಎಂಟ್ರೆನ್ಸ್ ಪಾಸಾಗಿಬಿಟ್ಟರೆ ಆಮೇಲೆ ಬಿ.ಎ. ಏನೂ ಕಷ್ಟವಲ್ಲ" ಎಂದು ಹೇಳುತ್ತಿದ್ದವರೂ ಉಂಟು. ಆ ಪರೀಕ್ಷೆ ಬಹಳ ಕ್ರೂರವಾದ ಪರೀಕ್ಷೆ. "ಆ ಪ್ರವಾಹದಲ್ಲಿ ಮುಳುಗುವವರೇ ಹೆಚ್ಚು, ತೇಲುವವರೇ ಕಡಿಮೆ. ದಡ ಮುಟ್ಟಿದವರು ಧನ್ಯರು" ಎಂಬುದು ಅನೇಕ ಅನುಭವಿಗಳ ಸಿದ್ಧಾಂತ. ಆ ಪರೀಕ್ಷೆಯಲ್ಲಿ ಫೇಲುಮಾಡಿಸುತ್ತಿದ್ದವರು ಇಂಗ್ಲಿಷ್ ಪರೀಕ್ಷಕರೆಂದೇ ಅಲ್ಲಿ ನೊಂದ ಅನೇಕ ವಿದ್ಯಾರ್ಥಿಗಳ ಭಾವನೆ. ಆ ಕ್ರೂರ ಕರ್ಮಿಗಳಲ್ಲಿ ಅಗ್ರಸ್ಥಾನವನ್ನು ವಿದ್ಯಾರ್ಥಿ ಲೋಕ ಬಿ. ಎಂ. ಶ್ರೀಕಂಠಯ್ಯನವರಿಗೆ ಕೊಟ್ಟಿತ್ತು. 'ಶ್ರೀಕಂಠಯ್ಯನ ಪೇಪರಲ್ಲಿ ಪಾಸಾದರೆ ಪರೀಕ್ಷೆಯೇ ಮುಗಿಯಿತೆಂದು ತಿಳಿ' ಎಂದು ನನಗೆ ತಿಳಿಯ ಹೇಳಿದವರು ಉಂಟು. ಈ ಅಪಕೀರ್ತಿ ಶ್ರೀಕಂಠಯ್ಯನವರಿಗೆ ಏಕೆ ಅಂಟಿಕೊಂಡಿತ್ತೋ ತಿಳಿಯದು. ಅವರನ್ನು ಕಂಡು ಅರಿಯದ ಜನ ಕಟ್ಟಿದ ಕಥೆ, ಅದು. ಕಾಲೇಜು ಹೊಕ್ಕ ಮೇಲೆ ನಮಗೆ ಶ್ರೀಕಂಠಯ್ಯನವರು ಆದರ್ಶ ಪರೀಕ್ಷಕರೆಂಬುದು ಚೆನ್ನಾಗಿ ಮನವರಿಕೆಯಾಯಿತು. ಅವರು ಕೇಳಿದ ಪ್ರಶ್ನೆ ಮಹಾ ಕಠಿಣವೆನ್ನಿಸುತ್ತಿತ್ತು. ಗಾಬರಿಗೊಳ್ಳದೆ ಪ್ರಶ್ನೆಯನ್ನು ಅರ್ಥಮಾಡಿಕೊಂಡು ಉತ್ತರ ತಕ್ಕಮಟ್ಟಿಗೆ ಬರೆದರೂ ಸಾಕು ಪಾಸಿಗೆ ಮೋಸವಿಲ್ಲ. ಶ್ರೀಕಂಠಯ್ಯನವರು ವಿದ್ಯಾರ್ಥಿ ಬಂಧುಗಳು.

ಶ್ರೀಕಂಠಯ್ಯನವರು ತರಗತಿಯಲ್ಲಿ ಪಾಠ ಮಾಡುತ್ತಿರುವಾಗ ನಡುವೆ ಯಾರೂ ಏನೂ ಪ್ರಶ್ನೆ ಕೇಳುವಂತಿರಲಿಲ್ಲ. ಅವರು ಹೇಳಿದುದನ್ನು ಕೇಳಿಕೊಂಡು ಹೊರಕ್ಕೆ

ಬರಬೇಕು. ಮಧ್ಯೆ ಒಂದು ಮಾತು ಅರ್ಥವಾಗಲಿಲ್ಲವೆಂದು 'ಮೇಷ್ಟರನ್ನು' ಒಡನೆಯೇ ಕೇಳಿ ಸಂಶಯ ಪರಿಹರಿಸಿಕೊಳ್ಳುವುದು ಹೈಸ್ಕೂಲಿನಲ್ಲಿ ವಾಡಿಕೆ. ನನಗೆ ಲಭಿಸಿದ ಹೈಸ್ಕೂಲು ಉಪಾಧ್ಯಾಯರು ಮಹಾದಯಾಳುಗಳು. "You may ask me any question. You may stop me in the middle of a sentence and ask me" ಎಂದು ಅಪ್ಪಣೆ ಕೊಡಿಸಿದ ಉಪಾಧ್ಯಾಯರ ಔದಾರ್ಯವನ್ನು ಎಂದಿಗೂ ಮರೆಯಲಾರೆ. ಆದರೆ ಆ ಸೂತ್ರ ಶ್ರೀಕಂಠಯ್ಯನವರ ಪಾಠಕ್ಕೆ ಅನ್ವಯಿಸುತ್ತಿರಲಿಲ್ಲ. ಒಂದು ದಿನ ಪಾಠ ಮಾಡುತ್ತ, ಶ್ರೀಕಂಠಯ್ಯನವರು "It is highly subjective" ಎಂದರು. ಆ 'ಸಬ್ಜೆಕ್ಟಿವ್' ಎಂದರೇನೋ ನಮಗೆ ಯಾರಿಗೂ ತಿಳಿಯಲಿಲ್ಲ. ಆದರೆ ನಾವು ಯಾರೂ ಧೈರ್ಯಮಾಡಿ ಶ್ರೀಕಂಠಯ್ಯನವರನ್ನು ಕೇಳುವ ಸಾಹಸ ಮಾಡಲಾರದೆ ಹೋದೆವು. ಮುಂದಿನ ಸಾಲಿನಲ್ಲಿಯೇ ಕುಳಿತಿದ್ದ ಒಬ್ಬ ಬೆಳ್ಳನೆಯ ಹುಡುಗ–ಅವನ ಚಿತ್ರ ಈಗಲೂ ನನ್ನ ಮನಃಪಟಲದಲ್ಲಿ ಚಿತ್ರಿತವಾಗಿದೆ– ಎದ್ದು ನಿಂತು "What is subjective Sir" ಎಂದು ಅತ್ಯಂತ ವಿನಯದಿಂದ ಕೇಳಿಕೊಂಡ. ಅದಕ್ಕೆ ಶ್ರೀಕಂಠಯ್ಯನವರ ಪ್ರತಿಕ್ರಿಯೆ ಭಯಪ್ರದವಾಯಿತು. "If you don't understand, refer to dictionary, I am not here to give you word meanings" ಎಂದು ಗರ್ಜಿಸಿಬಿಟ್ಟರು. ಆ ಹುಡುಗನ ಮುಖ ಪೆಚ್ಚಾಯಿತು; ನಿರ್ವಿಣ್ಣನಾಗಿ ಕುಳಿತುಕೊಂಡ. ಇನ್ನು ಯಾವುದೇ ವಿಚಾರದಲ್ಲಿ ಅಭಿಪ್ರಾಯ ಭೇದವನ್ನು ಸೂಚಿಸುವುದಂತು ಆಗದ ಮಾತು. ಅದು ಅನರ್ಥಕಾರಿಯೇ ಆಗಿರುತ್ತಿತ್ತು. Mark Antony ವಿಷಯವಾಗಿ ಏನೋ ಪ್ರಶ್ನೆ ಕೇಳಿದ ನನ್ನ ಸಹಾಧ್ಯಾಯಿಗೆ ಬಂದ ಉತ್ತರ : "Yes, Yes, I know you know more than I know about Antony, Brutus and Shakespeare. Sit down." ಶ್ರೀಕಂಠಯ್ಯನವರು ಅವರ ಸಿಟ್ಟಿನ ಭರದಲ್ಲಿ "Shut up" ಎಂದು ಹೇಳಲಿಲ್ಲ ಅಷ್ಟೇ. ಆದರೆ ಇಂಥ ಘಟನೆಗಳು ಬಹಳ ವಿರಳ, ಆದರೂ ಅವಿಸ್ಮರಣೀಯ. ಈಗ ತೋರುತ್ತಿದೆ, ಆ ಮಹಾಪ್ರಾಧ್ಯಾಪಕರೊಡನೆ ನಮಗೆ ಭಿನ್ನಾಭಿಪ್ರಾಯವೆ ? ಅವರು ಹೇಳಿದ್ದನ್ನು ಕೇಳಿ ತೃಪ್ತರಾಗಬೇಕಿತ್ತು ; ದೇವರ ಮನೆಗೆ ಹೋಗಿ ತೀರ್ಥ ತೆಗೆದುಕೊಂಡಂತೆ! ಒಟ್ಟಿನಲ್ಲಿ ಶ್ರೀಕಂಠಯ್ಯನವರು ತರಗತಿಯಲ್ಲಿ ಯಾವಾಗಲೂ ದರ್ಪದಿಂದಲೇ ನಡೆದುಕೊಳ್ಳುತ್ತಿದ್ದರು.

ಮಹಾದರ್ಪಿಷ್ಠರೆಂಬ ಕೀರ್ತಿ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಎನ್. ಎಸ್. ಸುಬ್ಬರಾಯರಿಗೆ ಇತ್ತು, ಅವರನ್ನು ಕಂಡರೆ ವಿದ್ಯಾರ್ಥಿಗೆ ಎದೆಯಲ್ಲಿ ನಡುಕ.

ಪ್ರಿನ್ಸಿಪಾಲರಿಂದ ಕರೆ ಬಂತು, ಎಂದರೆ ಏನೋ ಅನಿಷ್ಟ ಕಾದಿದೆಯೆಂದೇ ಎಲ್ಲರ ಭಾವನೆ. ಹೊರಗೆ ಹೇಗಿದ್ದರೂ ತರಗತಿಯಲ್ಲಿ ಶ್ರೀ ಸುಬ್ಬರಾಯರು ಸರಸಿಗಳಾಗಿರುತ್ತಿದ್ದರು. ವಿದ್ಯಾರ್ಥಿಗಳು ಅವರನ್ನು ಪಾಠದ ನಡುವೆ ಪ್ರಶ್ನೆ ಕೇಳಬಹುದಾಗಿತ್ತು. ಆ ಪ್ರಶ್ನೆಗಳಿಗೆ ಅವರು ಸಹನೆಯಿಂದ ಸಮಂಜಸವಾದ ಉತ್ತರ ಕೊಡುತ್ತಿದ್ದರು. ಕೆಲವು ಸಲ ನಾವು ಭಿನ್ನಾಭಿಪ್ರಾಯವನ್ನು ಪ್ರಕಟಿಸಿದರೂ ಸಹನೆಯಿಂದ ಚರ್ಚಿಸಿ ವಿದ್ಯಾರ್ಥಿಯ ಸಂಶಯ ಪರಿಹಾರಮಾಡುತ್ತಿದ್ದರು. ಅವರು ಎಷ್ಟೋ ವೇಳೆ ಹಾಸ್ಯಮಾಡಿ ಹುಡುಗರನ್ನು ನಗಿಸಿದ್ದೂ ಉಂಟು! ಆದರೂ "ಸುಬ್ಬರಾಯ ಭುಸುಗುಟ್ಟುತ್ತಾನೆ, ತಟ್ಟನೆ ಹೆಡೆ ಬಿಚ್ಚುತ್ತಾನೆ" ಎಂಬ ಅಪಪ್ರಥೆ ಅವರಿಗೆ ಅಂಟಿತ್ತು. ಶ್ರೀಕಂಠಯ್ಯನವರ ಪಾಠಕಾಲದಲ್ಲಿ ಅದೆಲ್ಲ ಆಗದು. ಬಹುಶಃ ಆ ಮುನ್ನೂರು ಹುಡುಗರ ಮಹಾಸಭೆಯಲ್ಲಿ ಒಬ್ಬ ವಿದ್ಯಾರ್ಥಿಯೊಡನೆ ಚರ್ಚೆಗಿಟ್ಟುಕೊಂಡರೆ ಮಿಕ್ಕವರು ಗದ್ದಲ ಮಾಡಿಯಾರೆಂಬ ಅಂಜಿಕೆಯೂ ಇದ್ದಿರಬಹುದೋ ಏನೋ! ಆದರೆ ಇಷ್ಟಂತು ನಿಜ. ವಿದ್ಯಾರ್ಥಿಗಳ ಮನದಲ್ಲಿ ಮೂಡಬಹುದಾದ ಹಲವು ಸಂಶಯಗಳನ್ನು ಅವರು ಊಹಿಸಿಕೊಂಡು ಅವುಗಳಿಗೆ ಪರಿಹಾರವನ್ನೂ ತಾವೇ ಹೇಳಿಬಿಡುತ್ತಿದ್ದರು. ಅಂದಿನ ಶಿಷ್ಯಕೋಟಿ ಶ್ರೀಕಂಠಯ್ಯನವರನ್ನು ಅತ್ಯಂತ ಭಕ್ತಿಗೌರವಗಳಿಂದ ಕಾಣುತ್ತಿದ್ದರು. ಕಾಲೇಜಿನಲ್ಲಿ, ಹೊರಗೆ, ಶ್ರೀಕಂಠಯ್ಯನವರು ನಡೆಯುತ್ತಿದ್ದರೆ ಆಚೀಚೆ ನಿಂತ ಹುಡುಗರು ಭಕ್ತಿಯಿಂದ ಕೈ ಜೋಡಿಸಿ ನಮಸ್ಕರಿಸುತ್ತಿದ್ದರು. ಶ್ರೀಕಂಠಯ್ಯನವರು ತಮ್ಮ ತರಗತಿಯಲ್ಲಲ್ಲದೆ ಬೇರೆ ಕಡೆ ಯಾವುದಾದರೂ ಭಾಷಣ ಮಾಡಿದರೆ ವಿದ್ಯಾರ್ಥಿಗಳು ಬೆಲ್ಲಕ್ಕೆ ಇರುವೆ ಮುತ್ತಿದಂತೆ ಗುಂಪು ಸೇರುತ್ತಿದ್ದರು. ಶ್ರೀಕಂಠಯ್ಯನವರ ವಾಣಿ ಪ್ರವಾಹದಂತೆ ಹರಿದಾಗ ಆ ವಾಗ್ಗಂಗೆಯಲ್ಲಿ ಅವಗಾಹಸ್ನಾನವಾಚರಿಸಿದವರೇ ಧನ್ಯರು. ದುರ್ದೈವದಿಂದ ಅವರ ಭಾಷಣಗಳನ್ನು ಹಿಡಿದಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಆ ಕಾಲಕ್ಕೆ ಟೇಪುರಿಕಾರ್ಡರುಗಳು ಇರಲಿಲ್ಲ. ಅವರ ಧ್ವನಿಮುದ್ರಿಕೆಯನ್ನು ಹಾಕಿ ಇಂದಿನವರಿಗೆ ಅವರ ಭಾಷಣದ ವೈಭವದ ಅನುಭವ ಮಾಡಿಕೊಡಲು ಶಕ್ಯವಿಲ್ಲದಂತಾಗಿದೆ.

'ಇಂಗ್ಲಿಷ್ ಗೀತಗಳು' ಎಂಬ ಅವರ ಕವನ ಸಂಕಲನ ಅಚ್ಚಾಗಿ ಹೊರಬರುವ ತನಕ ನಮಗೆ ಇವರ ಕನ್ನಡದ ಅಭಿಮಾನ ತಿಳಿಯದು. 'ಗದಾಯುದ್ಧ ನಾಟಕ'ವನ್ನು ಕಾಲೇಜು ವಿದ್ಯಾರ್ಥಿಗಳು ರಂಗದ ಮೇಲೆ ಅಭಿನಯಿಸಿದಾಗ ಶ್ರೀಯವರು ಕನ್ನಡ ರಂಗಕ್ಕೆ ಇಳಿದದ್ದು ನಮಗೆಲ್ಲ ಗೊತ್ತಾಯಿತು. ಕನ್ನಡದಲ್ಲಿ ಎಂ.ಎ., ಬಿ.ಎ. ಆನರ್ಸ್ ಪರೀಕ್ಷೆಗಳನ್ನು ಆರಂಭಿಸುವ ಕೆಲಸದಲ್ಲಿ ಶ್ರೀಯವರ ಪಾತ್ರವೇನೆಂಬುದು ಸುವೇದ್ಯವಾದ ಸಂಗತಿ. ಅವರ ಕನ್ನಡದ ಅಭಿಮಾನ, ಅದಕ್ಕಾಗಿ ಅವರು ನಡೆಸಿದ ನಿರಂತರ ಕೃಷಿ,

ಕನ್ನಡದ ಪ್ರಚಾರಕ್ಕಾಗಿ ಅವರು ಪಟ್ಟ ಶ್ರಮ ಯಾರಿಗೆ ಗೊತ್ತಿಲ್ಲ ? ಕನ್ನಡನಾಡಿನ ಅಭುಕ್ತ ಮೂಲೆಗಳಿಗೂ ಸ್ವಂತ ವೆಚ್ಚದಲ್ಲಿ ಹೋಗಿ ಕನ್ನಡಿಗರಲ್ಲಿ ಸ್ವಭಾಷಾಭಿಮಾನ ವನ್ನು ಜಾಗ್ರತಗೊಳಿಸಿ ಕನ್ನಡ ಸಂಘಗಳನ್ನು ಹುಟ್ಟುಹಾಕಿ, ಕನ್ನಡಿಗರ ಸಂಘಟನೆಗೆ ವಿಶೇಷವಾಗಿ ಶ್ರಮಿಸಿದರು.

ಕನ್ನಡ ಪ್ರಚಾರ, ಕನ್ನಡದಲ್ಲಿ ಆಡಳಿತ, ಕನ್ನಡದಲ್ಲಿ ಶಿಕ್ಷಣ, ಇವು ಅವರ ಬದುಕಿನ ಧ್ಯೇಯಗಳೇ ಆಗಿದ್ದುವು. ಕನ್ನಡನಾಡಿನ ಏಕೀಕರಣಕ್ಕಾಗಿ ಶ್ರೀಯವರು ನಡೆಸಿದ ಅವಿರತವಾದ ಚಳವಳಿಯ ಕಥೆ ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದದ್ದು. "ಸಿರಿಗನ್ನಡಂ ಗೆಲ್ಗೆ" ಎಂಬುದು ಅವರ ತಾರಕಮಂತ್ರವಾಯಿತು. 'ಕನ್ನಡ ಏಕೀಕರಣ' ಅವರ ಪರಮಗುರಿ. ಯಾರಾದರೂ ಕನ್ನಡದ ಈ ಚಳುವಳಿಯನ್ನು ಕುರಿತು ಏನೊಂದು ಟೀಕೆ ಮಾಡಿದರೂ ಶ್ರೀಕಂಠಯ್ಯನವರಿಗೆ ಸಹನೆಯಾಗುತ್ತಿರಲಿಲ್ಲ. ಒಂದು ಚರ್ಚಾಕೂಟದಲ್ಲಿ ಆಡಿದ ಮಾತಿಗೆ ಅವರು ಬಹಳ ನೊಂದುಕೊಂಡದ್ದು ನನಗೆ ನೆನಪಿದೆ. ಕನ್ನಡ ಭಾಷಾ ಪ್ರಾಂತ್ಯ ನಿರ್ಮಾಣವನ್ನು ಕುರಿತು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ನಡೆದ ಒಂದು ಚರ್ಚಾಕೂಟದಲ್ಲಿ 'ಮಾತೃಭಾಷೆ ಯಾವುದೆಂದು ನಿರ್ಣಯಿಸುವುದು ಹೇಗೆ ?' ಎಂಬ ಪ್ರಶ್ನೆ ಉದ್ಭವಿಸಿತು. ಆಗ ನಾನು "ಮಾತೃಭಾಷಾ ನಿರ್ಣಯ ಸುಲಭವಲ್ಲ, ತಾಯಿಯೊಡನೆ, ತಂದೆಯ ಸಂಗಡ, ಹೆಂಡತಿಯ ಸಂಗಡ, ಮಕ್ಕಳೊಡನೆ ಆಡುವ ಭಾಷೆಯೇ ಮಾತೃಭಾಷೆಯೆಂದು ಹೇಳುವುದು ಸರಿಯಲ್ಲ" ಎಂದು ವಾದಿಸತೊಡಗಿ ತೆಲುಗು ಮಾತನಾಡುವ ತಂದೆ, ತಮಿಳು ಮಾತನಾಡುವ ತಾಯಿ, ಹಿಂದಿ ಮಾತನಾಡುವ ಹೆಂಡತಿ, ಬಂಗಾಳಿಯನ್ನೇ ಆಡುವ ಮಕ್ಕಳು ಉಳ್ಳ ಒಬ್ಬ ವ್ಯಕ್ತಿಯನ್ನು ಚಿತ್ರಿಸಿ ಅವನ ಮಾತೃಭಾಷೆ ಯಾವುದು ? ಯಾರು ನಿರ್ಧರಿಸ ಬೇಕು ? ಎಂದು ಸ್ವಲ್ಪ ಅಬ್ಬರ ಮಾಡಿದೆ. ದುರ್ದೈವದಿಂದ ಅಂದಿನ ಸಭೆ ನನ್ನ ವಾದವನ್ನು ಮೆಚ್ಚಿ ನನಗೇ ಓಟು ಕೊಟ್ಟಿತು ! ಅಂದು ಅಧ್ಯಕ್ಷರಾಗಿದ್ದ ಶ್ರೀಕಂಠಯ್ಯ ನವರಿಗೆ ಇದು ಸಹಿಸಲಿಲ್ಲ. ಭಾಷಾವಾರು ಪ್ರಾಂತ್ಯ ನಿರ್ಮಾಣತತ್ವವನ್ನು ಕುರಿತ ಟೀಕೆಯೇ ತಪ್ಪೆಂದು ಅವರ ದೃಢವಾದ ನಿಲುವು. "ಇಂಥಾ ಬಹುಭಾಷಿಕನಾದ ಒಬ್ಬ ವ್ಯಕ್ತಿ ಇರುವುದೇ ನಿಜವಾದರೆ ನಿನ್ನ ಮಾತೃಭಾಷೆ ಯಾವುದೆಂಬುದನ್ನು ನೀನೇ ನಿರ್ಣಯಿಸಿಕೊಳ್ಳೆಂದು ಹೇಳಿದರಾಯಿತು" ಎಂದು ಅವರ ಅಧ್ಯಕ್ಷ ಭಾಷಣದಲ್ಲಿ ಹೇಳಿದರು. ಅಂದು ಸಭೆ ಮುಗಿದ ಮೇಲೆ ಅವರನ್ನು ಬೀಳ್ಕೊಡುವ ಸಂದರ್ಭದಲ್ಲಿ ಅವರು "ಹೀಗೆ ಧೂಳೆಬ್ಬಿಸುವ ಮಾತಗಳನ್ನಾಡಬಹುದೇನಪ್ಪಾ ? " ಎಂದು ಕೇಳಿದರು. ವಿನೋದದ ಮಾತಿನಲ್ಲಿಯೂ ಕನ್ನಡ ಪ್ರಾಂತ್ಯ, ಕನ್ನಡದಲ್ಲಿ ಆಡಳಿತ, ಕನ್ನಡದಲ್ಲಿ

ಶಿಕ್ಷಣ—ಈ ವಿಷಯಗಳನ್ನು ಕುರಿತ ಯಾವ ಟೀಕೆಯೂ ಇರಬಾರದೆಂದೇ ಅವರು ಹೇಳಿದರು. ಈ ವಿಚಾರದಲ್ಲಿ ಅವರ ಮನಸ್ಸು ಬಹಳ ಸೂಕ್ಷ್ಮವಾಗಿತ್ತು. ಆ ವಿಚಾರ ದಲ್ಲಿ ಅವರು ಮುಟ್ಟಿದರೆ ಮುನಿಯುತ್ತಿದ್ದರು.

ಒಂದು ಕಾಲದಲ್ಲಿ ಕೇವಲ ಇಂಗ್ಲಿಷ್ ಭಕ್ತರಂತೆ ಇದ್ದು ಆಮೇಲೆ ಶ್ರೀಕಂಠಯ್ಯ ನವರು ಕನ್ನಡದ ಆಚಾರ್ಯರಾದರು, ಕನ್ನಡ ಸೇವಾ ದೀಕ್ಷೆಯನ್ನು ಕೈಕೊಂಡರು, 'ಕನ್ನಡದ ರಕ್ಷಾಮಣಿ'ಯೇ ಆದರು.

ತ. ಸು. ಶಾಮರಾಯ

# ಕನ್ನಡದ ಕಾರಣಪುರುಷ

ಯಾವ ಮಹಾನುಭಾವ ಶತಮಾನದಷ್ಟು ಕಾಲ ನಿಂತನೀರಾಗಿದ್ದ ಕನ್ನಡ ಸಾಹಿತ್ಯಕ್ಕೆ ಹೊಸ ಪಾತ್ರವೊಂದನ್ನು ಸೃಷ್ಟಿಸಿ, 'ಕನ್ನಡದ ಕಣ್ವ'ರೆಂದು ಖ್ಯಾತನಾಮರಾದರೋ, ಯಾವ ಪುಣ್ಯ ಪುರುಷರು ಮೈಮರೆತು ಮಲಗಿದ್ದ ಕನ್ನಡಿಗರನ್ನು ತಮ್ಮ ಬರೆಹ ಭಾಷಣಗಳ ಮಂತ್ರಶಕ್ತಿಯಿಂದ ಎಚ್ಚರಗೊಳಿಸಿ, 'ಕನ್ನಡದ ಕಾರಣಪುರುಷ'ರೆಂದು ಖ್ಯಾತನಾಮರಾದರೋ, ಯಾವ ಮಹದ್ವ್ಯಕ್ತಿ ವಿಶ್ವಸಾಹಿತ್ಯದ ಅಗಾಧಜ್ಞಾನದ ಹೊಂಬಿಸಿಲಿನಲ್ಲಿ ಹೊಸಗನ್ನಡ ಸಾಹಿತ್ಯವನ್ನು ಉಳಿಸಿ ಬೆಳಸಿ, ಆ ಸಾಹಿತ್ಯದಲ್ಲಿ ಹಿರಿ-ಕಿರಿಯರ ಆಸಕ್ತಿಯನ್ನು ಕೆರಳಿಸಿ 'ನೂತನ ಸಾಹಿತ್ಯದ ಚತುರ್ಮುಖ'ರೆಂದು ಕೀರ್ತಿವೆತ್ತರೋ, ಯಾರು ತಮ್ಮ ಸೃಷ್ಟಿಶಕ್ತಿಯಲ್ಲಿ ಅಭಿಮಾನದಷ್ಟೇ ಆತ್ಮಪ್ರತ್ಯಯವನ್ನೂ ಇಟ್ಟುಕೊಂಡು ತಮ್ಮ ರಾಜಗಾಂಭೀರ್ಯದಿಂದ 'ಪುರುಷ ಸರಸ್ವತಿ' ಎಂಬ ಹೊಗಳಿಕೆಗೆ ಪಾತ್ರರಾದರೋ ಆ ಕನ್ನಡ ಪಂಚಾನನ, ದಿವಂಗತ ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯನವರನ್ನು ಒಮ್ಮೆ ನೆನೆಯುವುದೂ ಪುಣ್ಯಕರ; ತಮ್ಮ ಕನ್ನಡ ಸಾಹಿತ್ಯಾಭಿಮಾನವನ್ನು ಧರ್ಮದ ಮಟ್ಟಕ್ಕೆ ಏರಿಸಿದ ಆ ಸಾರ್ಥಕ ಜೀವಿ ಪ್ರಾತಃಸ್ಮರಣೀಯರಾಗಿದ್ದಾರೆ.

ಇಂಗ್ಲಿಷ್ ಅಧ್ಯಾಪಕರಾಗಿದ್ದ ಶ್ರೀಯವರು ಕನ್ನಡದ ಕ್ರಾಂತಿಪುರುಷಾದುದರ ಹಿನ್ನೆಲೆ ಹೀಗಿದೆ—ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸದಲ್ಲಿ—ಏಕೆ, ಕನ್ನಡ ನಾಡು, ನುಡಿಗಳ ಇತಿಹಾಸದಲ್ಲಿಯೆ—೧೯೩೦ನೇ ಇಸವಿಯೆಂಬುದು ಒಂದು ಅತ್ಯಂತ ಸ್ಮರಣೀಯವಾದ ವರ್ಷ. ಶ್ರೀ ಶ್ರೀಯವರು ಆ ವರ್ಷ ಮೈಸೂರು ವಿಶ್ವವಿದ್ಯಾನಿಲಯದ 'ರಿಜಿಸ್ಟ್ರಾರ್' ಪಟ್ಟಕ್ಕೇರಿದರು. ಅವರ ಕನ್ನಡದ ಕಟ್ಟಭಿಮಾನ ಸುತ್ತುಮುತ್ತಿನ ಸನ್ನಿವೇಶಗಳಿಂದ ಹೊರಹೊಮ್ಮಲಾರದೆ ಒಳಗೊಳಗೇ ಕುದಿಯುತ್ತಿದ್ದುದು, ಆಗ ಹೊರಹೊಮ್ಮುವ ಸದವಕಾಶವನ್ನು ಪಡೆಯಿತು. ಆ ಕಾಲದಲ್ಲಿ ನಮ್ಮ ವಿಶ್ವವಿದ್ಯಾನಿಲಯದ ಉಪಕುಲಪತಿ(Vice-chancellor)ಗಳಾಗಿದ್ದ ಡಾ. ಬ್ರಜೇಂದ್ರನಾಥ ಸೀಲರು ಅಸದೃಶ ಪಾಂಡಿತ್ಯದೊಡನೆ ಅಪಾರವಾದ ಮಾತೃಭಾಷಾ ಪ್ರೇಮವನ್ನೂ ಬೆಳೆಸಿ

ಕೊಂಡಿದ್ದವರು ; ಜನ್ಮತಃ ಬಂಗಾಳಿಯಾಗಿದ್ದ ಅವರು ತಮ್ಮ ಅಧಿಕಾರಸ್ಥಾನವಾದ ಕರ್ಣಾಟಕದಲ್ಲಿ ಕನ್ನಡಕ್ಕಿದ್ದ ದುರವಸ್ಥೆಯನ್ನು ಕಂಡು ಕರುಳು ಕರಗಿದವರಾದರು. ಆಳುವ ಮಹಾಸ್ವಾಮಿಯವರೆನಿಸಿದ್ದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಆಗ ನಮ್ಮ ವಿಶ್ವವಿದ್ಯಾನಿಲಯದ ಕುಲಪತಿ (Chancellor)ಗಳಾಗಿದ್ದರು. ಕನ್ನಡ ನಾಡು, ನುಡಿ, ಜನದಲ್ಲಿ ಅವರಿಗೆ ಅಪಾರ ಪ್ರೇಮ; ೧೯೧೯ರಷ್ಟು ಹಿಂದೆಯೇ ಮೈಸೂರು ವಿಶ್ವ ವಿದ್ಯಾನಿಲಯದ ಪದವೀದಾನ ಸಮಾರಂಭದಲ್ಲಿ, ವಿಶ್ವವಿದ್ಯಾನಿಲಯದ ಜ್ಞಾನ, ಹಳ್ಳಿಗಳ ಜನಸಾಮಾನ್ಯರನ್ನು ಮುಟ್ಟಬೇಕೆಂದು ನಿರ್ದೇಶನ ನೀಡಿದ್ದರು. ಈ ತ್ರಿಮೂರ್ತಿಗಳೂ ಸೇರಿದ ಆ ಪರ್ವಕಾಲದಲ್ಲಿ ಕನ್ನಡದ ಶುಕ್ರದೆಸೆ ಪ್ರಾರಂಭವಾಯಿತು. ಅದುವರೆಗೆ ಕನ್ನಡ ತನ್ನ ಮನೆಯಲ್ಲಿಯೆ ತಾನು ಕಾಲ ಕಸವಾಗಿತ್ತು. ಇಂಗ್ಲಿಷ್ ಇತ್ಯಾದಿ ಇತರ ಶಾಖೆಗಳು ಹಾಗಿರಲಿ, ಸಂಸ್ಕೃತ, ಉರ್ದು ಭಾಷೆಗಳಿಗೆ ಪ್ರಾಧ್ಯಾಪಕರಿದ್ದರು, ಎಂ. ಎ. ವಿದ್ಯಾರ್ಥಿಗಳಿದ್ದರು ; ಕನ್ನಡಕ್ಕೆ ಆ ಸೌಲಭ್ಯವಿಲ್ಲವಾಗಿತ್ತು. ಶ್ರೀಯವರು ತಮ್ಮ ಮೇಲಿನವರ ಸಹಾಯ ಸಹಕಾರಗಳನ್ನು ಪಡೆದು ಕನ್ನಡ ಬಿ.ಎ. (ಆನರ್ಸ್) ಮತ್ತು ಎಂ.ಎ. ತರಗತಿಗಳನ್ನು ವಿಶ್ವವಿದ್ಯಾನಿಲಯದಲ್ಲಿ ಅಂದು ಪ್ರಾರಂಭಿಸಿದರು. ಕನ್ನಡಕ್ಕೆ ಪ್ರಾಧ್ಯಾಪಕರೊಬ್ಬರ ನೇಮಕವಾಯಿತು. ಶ್ರೀಯವರು ಕನ್ನಡ ವಿಭಾಗದ ಗೌರವ ಪ್ರಾಧ್ಯಾಪಕರೂ ಆ ವಿಭಾಗದ ಮುಖ್ಯಸ್ಥರೂ ಆದರು. ಆ ಕಾಲದಲ್ಲಿಯೆ ಅವರ "ಇಂಗ್ಲಿಷ್ ಗೀತಗಳು" ಹೊರಬಂದು, ಕನ್ನಡ ನುಡಿ ದೇವಿಯ ಗುಡಿಯ ಹೆಬ್ಬಾಗಿಲನ್ನು ಹಾರ ಹೊಡೆಯಿತು ; ಆಕೆಯ ದರ್ಶನ ಪೂಜನಗಳು ಸರ್ವರಿಗೂ ಸಾಧ್ಯವಾಯಿತು. ಶ್ರೀಯವರು ನವೋದಯ ಸಾಹಿತ್ಯದ ಆಚಾರ್ಯಪುರಃಸರಾದರು.

ಶ್ರೀಯವರ ಪರಿಚಯವಾಗುವ ಭಾಗ್ಯ ನನಗೆ ಬಹು ಸುಲಭವಾಗಿಯೆ ದೊರೆಯಿತು. ಅದಕ್ಕೆ ಮುಖ್ಯವಾದ ಕಾರಣ ನಾನು ದಿವಂಗತ ಪ್ರೊ. ವೆಂಕಣ್ಣಯ್ಯ ನವರ ತಮ್ಮನಾಗಿರುವುದು. ದಿ. ವೆಂಕಣ್ಣಯ್ಯನವರು ಶ್ರೀಯವರ ಶಿಷ್ಯರಂತೆ ! ಅವರು ತಮ್ಮ 'ಬಸವರಾಜ ರಗಳೆ'ಯನ್ನು ಶ್ರೀಯವರಿಗೆ ಅರ್ಪಿಸುತ್ತಾ ಇದನ್ನು ತಿಳಿಸಿದ್ದಾರೆ. ಹಿಂದಿನ ತಲೆಮಾರಿಗೆ ಸಹಜವಾದ ರೀತಿಯಲ್ಲಿ ಅವರು ಶ್ರೀಯವರಲ್ಲಿ ಅಪಾರವಾದ ಭಕ್ತಿಯನ್ನು ತಳೆದಿದ್ದರು. ತಾವೇ ಪ್ರಾಧ್ಯಾಪಕರಾಗಿದ್ದರೂ, ಇನ್ನೂ ವಿದ್ಯಾರ್ಥಿ ದೆಸೆಯಲ್ಲಿರುವವರಂತೆ ಬಹು ನಮ್ರತೆಯಿಂದ ನಡೆದುಕೊಳ್ಳುತ್ತಿದ್ದರು. [೧೯೩೦ರ ವೇಳೆಗೆ ಶ್ರೀಯವರು ಸೆಂಟ್ರಲ್ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಬೆಂಗಳೂರಿಗೆ ಹೊರಟು ಹೋದರಾದರೂ ಆಗಾಗ ಕಾರಣಾಂತರಗಳಿಂದ ಮೈಸೂರಿಗೆ ಬರುತ್ತಿದ್ದರು. ಆಗ ಅವರು ಸಾಮಾನ್ಯವಾಗಿ ತಮ್ಮ ಬಂಧುಗಳಾದ ಕೃಷ್ಣಸ್ವಾಮಿಯವರ (ನಿವೃತ್ತ ನ್ಯಾಯಾಧೀಶರು) ಮನೆಯಲ್ಲಿ ಇಳಿದುಕೊಳ್ಳುತ್ತಿದ್ದರು.] ಆ ಸಮಯದಲ್ಲಿ ದಿ.

ವೆಂಕಣ್ಣಯ್ಯನವರು ತಪ್ಪದೆ ಅವರನ್ನು ಭೇಟಿ ಮಾಡುತ್ತಿದ್ದರು. ಹಾಗೆ ಭೇಟಿಮಾಡ ಹೊರಟಾಗ ಒಮ್ಮೊಮ್ಮೆ ನನ್ನನ್ನೂ ಜೊತೆಯಲ್ಲಿ ಕರೆದೊಯ್ಯುತ್ತಿದ್ದರು. ಅವರು ಬಂದಿರುವ ಸುದ್ದಿ ಗೊತ್ತಾಗುತ್ತಲೆ ಶ್ರೀಯವರು ತಾವೇ ಬಾಗಿಲಿಗೆ ಬಂದು ಮುಗುಳ್ನಗೆಯಿಂದ ಅವರನ್ನು ಆದರಿಸಿ, ಕೈಹಿಡಿದು ಒಳಗೆ ಕರೆದೊಯ್ಯುತ್ತಿದ್ದರು. ಯಾರು ಮೊದಲು ಕುರ್ಚಿಯ ಮೇಲೆ ಕುಳಿತುಕೊಳ್ಳಬೇಕೆಂಬ ಚರ್ಚೆ ನಡೆದು, ಕೊನೆಗೆ ಶ್ರೀಯವರೇ "ಶಿಷ್ಯಾದಿಚ್ಛೇತ್ ಪರಾಜಯಂ" ಎಂದು ಹೇಳಿ ಕುಳಿತುಕೊಳ್ಳುತ್ತಿದ್ದರು. 'ನಾನು ವೆಂಕಣ್ಣಯ್ಯನವರ ತಮ್ಮ, ಒಳ್ಳೆಯ ವಿದ್ಯಾರ್ಥಿ'—ಎಂಬುದನ್ನು ಕೇಳಿ 'ಸಂತೋಷ' ಎಂದು ಹೇಳಿ ಮುಗುಳ್ನಗೆಯ ಬಹುಮಾನವನ್ನು ನನಗೆ ನೀಡುತ್ತಿದ್ದರು. ಅವರ ಶ್ರೀಮದ್ಗಾಂಭೀರ್ಯ ಇದಕ್ಕೂ ಹೆಚ್ಚಾದ ಸಲಿಗೆಯನ್ನು ನನಗೆ ಎಂದೂ ನೀಡಲಿಲ್ಲ. ನಾನಿದ್ದಾಗ ಗುರು-ಶಿಷ್ಯರ ಪರಸ್ಪರ ಕುಶಲವಾರ್ತೆಯಷ್ಟೇ ಹೊರತು ಮತ್ತೇನನ್ನೂ ಚರ್ಚಿಸುತ್ತಲೂ ಇರಲಿಲ್ಲ.

ಎಂದಾದರೊಮ್ಮೆ ಅಪರೂಪವಾಗಿ ಶ್ರೀಯವರೇ ತಮ್ಮ ಶಿಷ್ಯನ ಮನೆಗೆ ಬರುತ್ತಿದ್ದುದೂ ಉಂಟು. ಅಂತಹ ಸಂದರ್ಭಗಳಲ್ಲಿ ಅವರಿಬ್ಬರ ಸಂಭಾಷಣೆಯನ್ನು ಸ್ವಲ್ಪ ದೂರದಿಂದ ಕದ್ದು ಕೇಳುವ ಅವಕಾಶ ನನಗೆ ದೊರೆಯುತ್ತಿತ್ತು. ಅವರ ಮಾತೆಲ್ಲ ಕನ್ನಡ ಎಂ.ಎ. ವಿದ್ಯಾರ್ಥಿಗಳ ಮತ್ತು ಅವರ ಪಠ್ಯ ವಿಷಯಗಳನ್ನು ಕುರಿತುದಾಗಿರುತ್ತಿತ್ತು; ಅಥವಾ ಕನ್ನಡ ಪ್ರಕಟಣೆಗಳು, ಪ್ರಚಾರೋಪನ್ಯಾಸ, ಪಠ್ಯಪುಸ್ತಕ, ಪರೀಕ್ಷೆ—ಇತ್ಯಾದಿಗಳನ್ನು ಕುರಿತುದಾಗಿರುತ್ತಿತ್ತು. ಈ ಸಂಭಾಷಣೆಗಳಲ್ಲಿ ಶ್ರೀಯವರ ಅಪಾರ ಪಾಂಡಿತ್ಯ, ಉತ್ಸಾಹ, ವಿಚಾರಪರತೆ, ಸಾರಗ್ರಹಣಶಕ್ತಿ, ನಿಷ್ಪಕ್ಷಪಾತ ಬುದ್ಧಿಗಳನ್ನು ಕಂಡು ನಾನು ದಂಗಾಗಿ ಹೋಗುತ್ತಿದ್ದೆ.

ನಾನು ಶ್ರೀಯವರ ನೇರವಾದ ವಿದ್ಯಾರ್ಥಿಯಲ್ಲದಿದ್ದರೂ ಅವರ ಪಾಠವನ್ನು ಕೇಳುವ ಸುಯೋಗ ನನಗೆ ಒಮ್ಮೆ ಲಭಿಸಿತು. ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು, ವಿಶ್ವವಿದ್ಯಾನಿಲಯದ ಗೌರವ ಕನ್ನಡ ಪ್ರಾಧ್ಯಾಪಕರೂ ಆಗಿದ್ದ ಅವರು ೧೯೩೩ನೇ ಇಸವಿಯಲ್ಲಿ ಮಹಾರಾಜಾ ಕಾಲೇಜಿನ ಕನ್ನಡ ಎಂ. ಎ. ಮತ್ತು ಆನರ್ಸ್ ವಿದ್ಯಾರ್ಥಿಗಳಿಗೆ ವಿಶೇಷೋಪನ್ಯಾಸಗಳನ್ನು ನೀಡಲೆಂದು ದಯಮಾಡಿಸಿದರು. ನಾನು ಆಗ ಕನ್ನಡ ಆನರ್ಸ್‌ನ ಕಡೆಯ ವರ್ಷದಲ್ಲಿದ್ದೆ. ದಿ|| ಪ್ರೊಫೆಸರ್ ಎ.ಆರ್. ಕೃಷ್ಣಶಾಸ್ತ್ರಿಗಳು ಆಗ ಕನ್ನಡ ಪ್ರಾಧ್ಯಾಪಕರಾಗಿದ್ದರು. ಶ್ರೀ ಶ್ರೀಯವರ ಉಪನ್ಯಾಸವನ್ನು ಅತ್ಯಂತ ಶ್ರದ್ಧೆಯಿಂದ ಗಮನಿಸಬೇಕೆಂದೂ, ಸಾಧ್ಯವಾದಷ್ಟು 'ನೋಟ್ಸ್' ತೆಗೆದುಕೊಳ್ಳಬೇಕೆಂದೂ ನನಗೆ ಮೊದಲೇ ಅವರು ಎಚ್ಚರಿಕೆ ನೀಡಿದ್ದರು. ನಾನು ಮೈಯೆಲ್ಲಾ ಕಣ್ಣಾಗಿ ಬೆಳಗ್ಗೆ ಎಂಟೂವರೆ ಘಂಟೆಯ ವೇಳೆಗೇ ಪ್ರಾಧ್ಯಾಪಕರ ಕೊಠಡಿ

ಯಲ್ಲಿ ಕುಳಿತೆ, ಇತರ ನನ್ನ ಸಹಾಧ್ಯಾಯಿಗಳೊಡನೆ. ಒಂಬತ್ತು ಘಂಟೆಗೆ ಸರಿಯಾಗಿ ಶ್ರೀಯವರು ಎಡಗೈಯಲ್ಲಿ ಒಂದು ಕಾಗದದ ಚೂರನ್ನೂ, ಬಲಗೈಯಲ್ಲಿ ಒಂದು ಸೀಮೆಯಸುಣ್ಣವನ್ನೂ ಹಿಡಿದು ತರಗತಿಯನ್ನು ಪ್ರವೇಶಿಸಿದರು. ಅವರ ಉಪನ್ಯಾಸದ ವಿಷಯ "ಕನ್ನಡ ವ್ಯಾಕರಣದ ಪುನರ್‍ರಚನೆ" (Reconstruction of Kannada grammar). ಬಂದವರೆ ತಮ್ಮ ಭಾಷಣವನ್ನು ಪ್ರಾರಂಭಿಸಿದರು. ಮಧ್ಯಾಹ್ನ ಎರಡು ಘಂಟೆಗೆ ಅಂದಿನ ಪಾಠ ಮುಗಿಯಿತು. ಹೀಗೆಯೆ ಮತ್ತೆ ಎರಡು ದಿನ. ಅವರು ಎತ್ತಿಕೊಂಡ ಅತಿ ನೀರಸ ವಿಷಯ ಅವರ ಬೋಧನ ವಿಧಾನದಲ್ಲಿ ಎಷ್ಟು ಹೃದಯಂಗಮವಾಗಿತ್ತೆಂದರೆ, ಕೇಳುತ್ತಿದ್ದ ನಮಗೆ ಅದೊಂದು ರಮ್ಯ ಕಾದಂಬರಿಯಂತೆ ಇತ್ತು. ಅವರು ಕೈಲಿ ಹಿಡಿದ ಕಾಗದದ ಚೂರಿನತ್ತ ಒಮ್ಮೆಯೂ ದೃಷ್ಟಿ ಹಾಯಿಸಲಿಲ್ಲ. ಮತ್ತೊಂದು ಕೈಲಿದ್ದ ಸೀಮೆಯ ಸುಣ್ಣದಿಂದ ಮಾತ್ರ ಆಗಾಗ ಕಪ್ಪುಹಲಗೆಯ ಮೇಲೆ ಉದ್ದುದ್ದವಾಗಿಯೋ, ಅಡ್ಡಡ್ಡಲಾಗಿಯೋ ಒಂದು ಗೆರೆ ಎಳೆಯುತ್ತಿದ್ದರು. ಪಾಠ ಮಾಡಿ ಹೋಗುವಾಗ ಕೈಲಿದ್ದ ಕಾಗದವನ್ನು ಅಲ್ಲಿಯೇ ಬಿಸುಟು ಹೋಗುತ್ತಿದ್ದರು. ಅದನ್ನು ನೋಡಿದರೆ ಅದೊಂದು ಖಾಲಿ ಕಾಗದ!

ಶ್ರೀಯವರು ಒಂದು ಜಂಗಮ ವಿಶ್ವಕೋಶ, ಜಂಗಮಜ್ಞಾನಭಂಡಾರ. ಅವರು ಇಂಗ್ಲಿಷ್ ಮತ್ತು ಕನ್ನಡಗಳ ಪ್ರಾಧ್ಯಾಪಕರೇ ಆಗಿದ್ದರಲ್ಲ! ಇವೆರಡಲ್ಲದೆ ಗ್ರೀಕ್, ಸಂಸ್ಕೃತ, ತಮಿಳು, ತೆಲುಗುಗಳ ಆಳವಾದ ಜ್ಞಾನವಿತ್ತು. ಪಾಲಿ, ಮಾಗಧಿಗಳೂ ಬೆಂಗಾಲಿಯೂ ಅವರಿಗೆ ಗೊತ್ತಿದ್ದವೆಂದು ಹೇಳುತ್ತಿದ್ದರು. ಅದೆಷ್ಟು ನಿಜವೋ ನನಗೆ ಗೊತ್ತಿಲ್ಲ. ಆದರೆ ಪಾಠ ಹೇಳುವಾಗ ಮಾತ್ರ ಅವರು ಮೆರೆಯುತ್ತಿದ್ದ ಜ್ಞಾನ ನಮ್ಮನ್ನು ದಂಗುಬಡಿಸುತ್ತಿತ್ತು. ಶಿಕ್ಷಣದಲ್ಲಿ ವ್ಯಾಕರಣಕ್ಕಿರುವ ಸ್ಥಾನ, ವೈದಿಕ ವ್ಯಾಕರಣ, ಸಂಸ್ಕೃತ ವ್ಯಾಕರಣ, ಅವಕ್ಕೂ ದ್ರಾವಿಡ ಭಾಷಾ ವ್ಯಾಕರಣಗಳಿಗೂ ಇರುವ ಹೋಲಿಕೆ ಮತ್ತು ವ್ಯತ್ಯಾಸಗಳು, ದ್ರಾವಿಡ ಭಾಷಾ ಸಾಹಿತ್ಯಗಳ ಮೇಲೆ ಸಂಸ್ಕೃತದ ಪ್ರಭಾವ ಮತ್ತು ಅದರಿಂದ ಆಯಾ ವ್ಯಾಕರಣಗಳಲ್ಲಿ ಕಾಣಬರುವ ಸಂದಿಗ್ಧತೆಗಳು, ಕನ್ನಡ ವ್ಯಾಕರಣದ ವೈಶಿಷ್ಟ್ಯ, ಹಳಗನ್ನಡದ ಮೂವರು ವ್ಯಾಕರಣಕಾರರು, ಅವರಲ್ಲಿ ಕೇಶಿರಾಜನ ಪ್ರಾಮುಖ್ಯತೆ, ಭಾಷಾಶಾಸ್ತ್ರದ ಹುಟ್ಟು ಮತ್ತು ಬೆಳವಣಿಗೆ, ಅದಕ್ಕೂ ವ್ಯಾಕರಣ ಶಾಸ್ತ್ರಕ್ಕೂ ಇರುವ ಸಂಬಂಧ, ವ್ಯಾಕರಣದ ಬೋಧನಾ ವಿಧಾನ— ಇತ್ಯಾದಿ, ಇತ್ಯಾದಿ ಎಷ್ಟೋ ವಿಷಯಗಳನ್ನು ಅವರು ಕೂಲಂಕಷವಾಗಿ ಚಿತ್ರಿಸಿದರು. ಪಂಪ, ರನ್ನ, ನಾಗಚಂದ್ರ, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶ—ಇತ್ಯಾದಿ ಗ್ರಂಥಗಳೆಲ್ಲವೂ ಅವರಿಗೆ ವಾಚೋವಿಧೇಯವಾಗಿದ್ದವೋ ಏನೋ! ಅಡೆತಡೆಯಿಲ್ಲದೆ ಅವುಗಳಿಂದ ಪದ್ಯಗಳನ್ನು ಉದಾಹರಣೆಯಾಗಿ ಉದ್ಧರಿಸುತ್ತಿದ್ದರು. ಮಿಂಚಿನ ಸಂಚಲದಂತೆ

ಹೊಳೆಯುತ್ತಿದ್ದ ಅವರ ವಾಗ್ಧೋರಣೆಯನ್ನು ಬರೆಹದಲ್ಲಿ ಹಿಡಿದಿಟ್ಟುಕೊಳ್ಳುವುದು ಅಸಾಧ್ಯವಾಗಿತ್ತು. ಆದರೂ ತಕ್ಕಷ್ಟು ಮುಖ್ಯವೆನಿಸಿದ ವಿಷಯಗಳನ್ನು ಗುರುತು ಹಾಕಿಕೊಂಡುದೇ ಮೂರು ದಿನಗಳಲ್ಲಿ ೧೨೦ ಪುಟಗಳ ಎಕ್ಸರ್‌ಸೈಜ್ ಪುಸ್ತಕ ವನ್ನು ನುಂಗಿಹಾಕಿತ್ತು. ಆ ಟಿಪ್ಪಣಿಯ ಪುಸ್ತಕವನ್ನು ದಿ|| ಡಾ. ನರಸಿಂಹಯ್ಯ ನವರು ನೋಡಿ ಕೊಡುವೆನೆಂದು ತೆಗೆದುಕೊಂಡರು. ಅದನ್ನು ಹಿಂದಕ್ಕೆ ತೆಗೆದು ಕೊಳ್ಳುವುದಾಗಲಿಲ್ಲ.

ಶ್ರೀಯವರು ಮಾಡಿದ ಪಾಠದ ಬಹು ಭಾಗ ಈಗ ನನ್ನ ಮರವೆಯ ಮಹಾ ಸಾಗರದಲ್ಲಿ ಮುಳುಗಿ ಹೋಗಿದೆ. ಆದರೆ ಆನುಷಂಗಿಕವಾಗಿ ಹೇಳಿದ ಕೆಲವು ಮಾತು ಗಳು ನನ್ನ ಹೃದಯದಲ್ಲಿ ನಾಟಿ ನಿಂತಿವೆ. ಅವುಗಳಲ್ಲಿ ಬಹು ಮುಖ್ಯವಾದುದು ನಮ್ಮ ಶಿಕ್ಷಣದಲ್ಲಿ ತ್ರಿಭಾಷಾ ಸೂತ್ರ ಅತ್ಯಗತ್ಯವೆಂದು ಒತ್ತಿ ಹೇಳಿದುದು. ಆ ತ್ರಿಭಾಷೆಗಳೆಂದರೆ ಇಂಗ್ಲಿಷ್, ಸಂಸ್ಕೃತ ಮತ್ತು ಮಾತೃಭಾಷೆ. ಬಹು ಭಾಷೆಗಳು ಬಳಕೆಯಲ್ಲಿರುವ ನಮ್ಮ ರಾಷ್ಟ್ರದಲ್ಲಿ ಸಂಪರ್ಕ ಭಾಷೆಯೊಂದು ಅತ್ಯಗತ್ಯ. ಅದಕ್ಕೆ ತಕ್ಕುದೆಂದರೆ ಇಂಗ್ಲಿಷ್. ಆ ಭಾಷೆಯಿಂದ ದೇಶೀಯ ಭಾಷೆಗಳಿಗೆ ಆಗಿರುವ, ಆಗಬೇಕಾಗಿರುವ ಸಹಾಯ ಅಪಾರವಾದುದು. ಪಶ್ಚಿಮದ ಕಿಟಕಿಯನ್ನು ಮುಚ್ಚಬೇಡಿ. ಈಗಾಗಲೆ ರೂಢಿಗೆ ಬಂದಿರುವ ಇಂಗ್ಲಿಷ್ ಪದಗಳನ್ನು ಹಾಗೆಯೇ ಉಳಿಸಿಕೊಳ್ಳಿ, ಅವುಗಳನ್ನು ಭಾಷಾಂತರ ಮಾಡಬೇಡಿ. ಜೀವಂತವಾದ ಭಾಷೆ ಶ್ರೀಮಂತವಾಗುವುದು ಹೀಗೆಯೆ. ಎರಡನೆಯ ದಾಗಿ, ನಮ್ಮ ಜ್ಞಾನಭಂಡಾರದ ಗಣಿಯಾದ ಸಂಸ್ಕೃತವನ್ನು ನಾವೆಲ್ಲರೂ ಕಲಿಯಲೇ ಬೇಕು. ಆದರೆ ಅದು ಕನ್ನಡದ ಶ್ರೇಯಸ್ಸಿಗೆ ಮಾತ್ರ ಎಂಬುದನ್ನೂ ಮರೆಯಬಾರದು. ಸಂಸ್ಕೃತ ಪದಗಳನ್ನು ಬಳಸುವಾಗ ತದ್ಭವಗಳನ್ನು ಆದಷ್ಟು ದೂರದಲ್ಲಿಡಿ. ಶುದ್ಧ ಸಂಸ್ಕೃತ ಪದಗಳನ್ನೆ ಎತ್ತಿಕೊಳ್ಳಿ. ಇನ್ನು ಕನ್ನಡ—ನಮ್ಮ ಮಾತೃಭಾಷೆ—ವನ್ನು ಕುರಿತು ಒಂದು ಮಾತು. ಉತ್ತಮ ವರ್ಗದವರು ಆಡುವ ಭಾಷೆಯನ್ನೆ ಬಳಸಿ ಪ್ರಚಾರವಾಗುವಂತೆ ಮಾಡಿ. ಗ್ರಾಮ್ಯಭಾಷೆಯಲ್ಲಿನ ಸುಂದರವಾದ ಅಚ್ಚಕನ್ನಡ ಶಬ್ದ ಗಳನ್ನು ಮತ್ತೆ ಬಳಕೆಗೆ ತನ್ನಿರಿ. ಕನ್ನಡದಲ್ಲಿ ಸ್ಥಾನಮಾನಗಳನ್ನೂ ಪಡೆಯುವವರಾದ ನೀವು, ನಮ್ಮ ನುಡಿತಾಯಿಯನ್ನು ಕಾಪಾಡಿ, ಆಕೆಯನ್ನು ದೊಡ್ಡವಳನ್ನಾಗಿ ಮಾಡಿ—ಎಂದರು.

ಇದೇ ಸಂದರ್ಭದಲ್ಲಿ ಶ್ರೀ ಶ್ರೀಯವರು ಅಪ್ರಾಸಂಗಿಕವಾಗಿ ಆಡಿದ ಒಂದೆರಡು ಮಾತುಗಳೂ ನನ್ನ ಜ್ಞಾಪಕಕ್ಕೆ ಬರುತ್ತವೆ. ಅವರು ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧಿಯವರ ಹೆಸರನ್ನೆತ್ತಿಕೊಂಡು, ನೇರವಾಗಿ ಅಲ್ಲದಿದ್ದರೂ ಸುತ್ತು ಬಳಸಾಗಿ ಸ್ವಲ್ಪ ಲಘುವಾಗಿಯೆ ಮಾತನಾಡಿದರು. ಮರು ನಿಮಿಷದಲ್ಲಿ ಮೈಸೂರು ಮಹಾರಾಜರನ್ನು

ಜಾಯ್ಕುಂಬ ಹೊಗಳಿ ಹಾಡಿದರು. ರಾಷ್ಟ್ರಪ್ರೇಮ ಹುಚ್ಚು ಹೊಳೆಯಾಗಿ ಹರಿಯು ತ್ತಿದ್ದ ಆ ಕಾಲದಲ್ಲಿ ಈ ಮಾತುಗಳಿಂದ ಮನನೊಂದವರೂ ಉಂಟು. ಆದರೇನು ಮಾಡುವುದು? ಶ್ರೀಯವರಿಗೆ ಆಳುವ ಮಹಾಸ್ವಾಮಿಯವರೆಂದರೆ ಎಲ್ಲಿಲ್ಲದ ಅಭಿಮಾನ, ಗೌರವ, ಭಕ್ತಿ. ಇದು ಒಮ್ಮೊಮ್ಮೆ ಅತಿರೇಕಕ್ಕೆ ಹೋಗುತ್ತಿದ್ದುದೂ ಉಂಟು. ಶ್ರೀಯವರ ಸಾಹಿತ್ಯಶಕ್ತಿ, ಪ್ರೇಮ, ಸೇವೆಗಳನ್ನು ಕಂಡು ಮೆಚ್ಚಿದ ಮಹಾರಾಜರು ಅವರಿಗೆ 'ರಾಜಸೇವಾಸಕ್ತ' ಎಂಬ ಬಿರುದನ್ನು ದಯಪಾಲಿಸಿದರು. ಅದರ ಅಂಗವಾಗಿ ಶಾಲುಜೋಡಿ, ಜರೀ ಪೇಟಗಳೊಡನೆ ಪಚ್ಚೆ, ಕೆಂಪು, ಬಿಳಿಯರತ್ನ ಗಳಿಂದ ಕೂಡಿದ ಗಂಡಭೇರುಂಡ ಪದಕದ ಬಂಗಾರದ ಹಾರವನ್ನು ನೀಡಿದರು. ಶ್ರೀಯವರಿಗೆ ಇದರಿಂದ ಆದ ಆನಂದ ಅನಿರ್ವಚನೀಯ. ಮಹಾಪಂಡಿತರಾದರೂ ಮುಗ್ಧ ಹೃದಯಿಯಾದ ಅವರು ಅದನ್ನು ಕಂಠದಲ್ಲಿ ಧರಿಸಿಯೇ ಕಾಲೇಜಿಗೆ ಬಂದರು; ಅಧ್ಯಾಪಕರ ಕೊಠಡಿಯನ್ನು ಪ್ರವೇಶಿಸಿ, ಅಲ್ಲಿನ ಪ್ರತಿಯೊಬ್ಬ ಅಧ್ಯಾಪಕನಿಗೂ ತಮಗಾದ ಸನ್ಮಾನವನ್ನು ಹೇಳಿಕೊಂಡು, ಹಾರವನ್ನೂ ಪ್ರದರ್ಶಿಸಿದರು; ತಮಗಾಗಿರುವ ಅಮಿತಾನಂದವನ್ನೂ ಬಾಯ್ಬಿಟ್ಟು ಹೇಳಿದರು. ಆಗ ಅವರ ಸ್ವಾಭಾವಿಕ ರಾಜ ಗಾಂಭೀರ್ಯ ಅದೆಲ್ಲಿ ಮಾಯವಾಗಿತ್ತೊ! ಅಧ್ಯಾಪಕರಿಗೆ ಮಾತ್ರವೇ ಅಲ್ಲ, ತಮ್ಮ ವಿದ್ಯಾರ್ಥಿಗಳಿಗೂ ಅದರ ಪ್ರದರ್ಶನವಾಯಿತು.

ಭಾಷಣಕಲೆ ಶ್ರೀಯವರನ್ನು ಒಲಿದಿತ್ತು. ಅವರ ಹತ್ತಾರು ಭಾಷಣಗಳನ್ನು ಕೇಳುವ ಭಾಗ್ಯ ನನ್ನದಾಗಿತ್ತು. ಅವರ ಭಾಷಣವೆಂದರೆ ಅದೊಂದು ವಿದ್ವದ್ಗಂಗಾ ಪ್ರವಾಹ. ಒಂದೇ ಅರ್ಥ ಕೊಡುವ ಹಲವು ಪದಗಳನ್ನು ಪುಂಖಾನುಪುಂಖವಾಗಿ ಬಳಸು ತ್ತಿದ್ದುದು ಅವರ ಒಂದು ವೈಶಿಷ್ಟ್ಯ. ತುಂಟ ಹುಡುಗರು ಇದನ್ನು "ಪಲ್ಲವಶೈಲಿ" ಎಂದು ಅವರ ಬೆನ್ನ ಹಿಂದೆ ಆಡಿಕೊಂಡು ಗೇಲಿ ಮಾಡುತ್ತಿದ್ದುದುಂಟು. ಆದರೆ ಕೇಳುಗರ ಮನಸ್ಸಿನಲ್ಲಿ ಅದರಿಂದ ಆಗುತ್ತಿದ್ದ ಪ್ರಭಾವ ಅಸದೃಶವಾದುದು. ಸ್ವಭಾವ ಗಂಭೀರರಾದ ಅವರ ಬಾಯಿಂದ ಲೇವಡಿ ಮಾತುಗಳು ಬಂದುದನ್ನು ನಾನೆಂದೂ ಕಂಡಿಲ್ಲ. ಮಾತ ನಾಡಲು ನಿಂತರೆ ಅವರು ವೈಮರೆಯುತ್ತಿದ್ದರು. ಅವರಿಗಾಗಲಿ, ಅವರ ಮಾತಿನ ರಸಪ್ರವಾಹದಲ್ಲಿ ತೇಲಿ ಹೋಗುತ್ತಿದ್ದ ಸಭಿಕರಿಗಾಗಲಿ ಕಾಲದ ಪರಿವೆ ಮರೆತುಹೋಗು ತ್ತಿತ್ತು. ಹೇಳುವವರ ಉತ್ಸಾಹಕ್ಕೆ ಭಂಗವಿಲ್ಲ, ಕೇಳುವವರ ತಾಳ್ಮೆಗೆ ತಣಿವಿಲ್ಲ. ಭಾಷಣ ಕಲೆಗೆ ಅಗತ್ಯವಾದ ಸಮಯಸ್ಫೂರ್ತಿಯಂತೂ ಅವರ ಇಚ್ಛಾನುಸಾರಿ. ಕರ್ಣಾಟಕದ ಏಕೀಕರಣಕ್ಕಾಗಿ ಅವರು ಕನ್ನಡನಾಡನ್ನೆಲ್ಲ ಬಿರುಗಾಳಿಯಂತೆ ಸುತ್ತಿ, ಒಂದೇ ದಿನ ಹಲವಾರು ಕಡೆಗಳಲ್ಲಿ ಭಾಷಣ ಮಾಡಿದರಂತೆ! ಶ್ರೀಕಂಠಯ್ಯನವರ ಭಾಷಣವೆಂದರೆ ರಾತ್ರಿ ಹನ್ನೆರಡು ಘಂಟೆ, ಬೆಳಗು ಮುಂಜಾನೆ ಮೂರು ಘಂಟೆ ಹೊತ್ತಿನಲ್ಲಿ ಜನ

ತಂಡತಂಡವಾಗಿ ಬಂದು ತುಂಬುತ್ತಿತ್ತಂತೆ! ಶಿವಮೊಗ್ಗೆ ಕಾಲೇಜಿನಲ್ಲಿ ನಾನು ಕನ್ನಡ ಅಧ್ಯಾಪಕನಾಗಿದ್ದಾಗ ಶ್ರೀಯವರು ಇಂಗ್ಲಿಷ್ ಶಾಖೆಯ ಪರೀಕ್ಷೆಗೆಂದು ಒಮ್ಮೆ ಬಂದಿದ್ದರು. ಅದಾದ ಮೇಲೆ ಕನ್ನಡ ತರಗತಿಗಳ ಮೇಲೂ ಒಮ್ಮೆ ಕಣ್ಣು ಹಾಯಿಸಿದರು. ಅಂದು ಸಂಜೆ ಕಾಲೇಜು ಕರ್ಣಾಟಕ ಸಂಘದ ಆಶ್ರಯದಲ್ಲಿ ಅವರ ಭಾಷಣ. ಇಡೀ ನಗರದ ವಿದ್ವಜ್ಜನರೆಲ್ಲರೂ ಬಂದಿದ್ದರು. ಅಂದಿನ ಅವರ ಭಾಷಣ ಒಂದು ಸುಧಾಸರಿತ್ ಸಾಗರ. ಭಾಷಣದ ವಿಷಯ "ಸಾಹಿತ್ಯ ಮತ್ತು ಜೀವನ." "ಇಂಗ್ಲಿಷ್—ಕನ್ನಡಗಳು ನನ್ನೆರಡು ಕಣ್, ಮೂರ್ತಿರಾವ್ ಮತ್ತು ಶಾಮರಾವ್ ನನ್ನೆರಡು ಭುಜಗಳು" ಎಂದು ಪ್ರಾರಂಭವಾದ ಭಾಷಣ ಎರಡು ಘಂಟೆಯ ಕಾಲ ಅವ್ಯಾಹತವಾಗಿ ನಡೆಯಿತು. ಅವರ ಮುಗುಳ್ನಗೆಯ ನರ್ತನಕ್ಕೆ ಅವರ ನಯವಿನಯಗಳು ತಾಳ ಹಾಕುತ್ತಿದ್ದವು. ಸಭಿಕರೆಲ್ಲರೂ ಆನಂದದಲ್ಲಿ ಮೈಮರೆತಿದ್ದರು.

ಶ್ರೀಯವರು ನಯ ವಿನಯದ ಮೂರ್ತಿಯಾದರೂ ಸತ್ಯನಿಷ್ಠುರರು. ಕನ್ನಡದ ಓಟಕ್ಕೆ ಅಡ್ಡಗಾಲು ಹಾಕುತ್ತಿರುವುದೆಂದು ಅವರು ಭಾವಿಸಿದ್ದ ಹಿಂದಿಯನ್ನು ಅವರು ಕಟುವಾಗಿ ಟೀಕಿಸುತ್ತಿದ್ದರು. ಕನ್ನಡದ ಮೇಲಿನ ಅವರ ಕಳಕಳಿ ಅವರನ್ನು ಹಿಂದಿಯ ದ್ವೇಷಿಯೆಂಬಂತೆ ಕಾಣಿಸುತ್ತಿತ್ತು; ಸಂಸ್ಕೃತದ್ವೇಷಿಯೆಂಬಂತೆಯೂ ಕಾಣಿಸುತ್ತಿತ್ತು. ಸಂಪ್ರದಾಯಶೀಲರಾದ ಜನ ಅವರ ಮಾತುಗಳಿಂದ ಕೆರಳುವರು ; ಇದಿರಿಗೆ ಮಾತನಾಡಲು ಧೈರ್ಯವಿಲ್ಲದೆ ಒಳಗೊಳಗೆ ಕುದಿಯುವರು, ಅವರ ಬೆನ್ನ ಹಿಂದೆ ಅವರನ್ನು ತಿರಸ್ಕರಿಸುವರು. ಶ್ರೀಯವರು ಇದಕ್ಕೆಲ್ಲ ಸೊಪ್ಪು ಹಾಕುವ ಜೀತನವಲ್ಲ. ಎಲ್ಲೇ ಮಾತಾಡಲಿ ಅವರಿಗೆ ಕನ್ನಡದ ಕಳಕಳಿ. ಗಹನವಾದ ವಿಷಯಗಳನ್ನೂ ಜನಸಾಮಾನ್ಯರಿಗೆ ತಿಳಿಯುವಂತೆ ಹೇಳುವುದರಲ್ಲಿ ಅವರು ಬೈಬಲ್ ಗ್ರಂಥವಿದ್ದಂತೆ! ಅವರ ಭಾಷೆ, ಶೈಲಿ, ರೀತಿ, ಧ್ವನಿಎ—ಲ್ಲವೂ ಅವರದೆ.

ಶ್ರೀಯವರನ್ನು ನೆನೆದಾಗಲೆಲ್ಲ ನನ್ನ ಕಣ್ಣಮುಂದೆ ಕಟ್ಟಿನಿಲ್ಲುವ ಒಂದು ಚಿತ್ರವೆಂದರೆ, ಭಾಷಣ ಮಾಡುವಾಗ, ಅಥವಾ ಪಾಠ ಮಾಡುವಾಗ ಅವರು ಒಮ್ಮೊಮ್ಮೆ ಅರ್ಧನಿಮೀಲಿತ ನೇತ್ರರಾಗಿರುತ್ತಿದ್ದುದು. ಅತ್ಯಂತ ಸಾರವತ್ತಾದ ಭಾಗವನ್ನು ಹೇಳುವಾಗ ಬಹುಶಃ ಅವರು ತಮ್ಮ ಮನೋನೇತ್ರದಿಂದ ಆ ರಸಮಯ ಸನ್ನಿವೇಶಗಳನ್ನು ನೋಡುತ್ತಾ ಆನಂದಾನುಭವದಿಂದ ಮೈಮರೆಯುತ್ತಿದ್ದರೋ, ಏನೊ! ರಸಾಭಿಜ್ಞರಾದ ಅವರು ಕೇಳುವವರನ್ನೂ ರಸಾಭಿಜ್ಞರಾಗಿ ಮಾಡಬಲ್ಲವರಾಗಿದ್ದರು. ಅವರು ಮಹಾ ವಿಮರ್ಶಕರು, ಇತರರನ್ನೂ ಮಹಾ ವಿಮರ್ಶಕರನ್ನಾಗಿ ಮಾಡಬಲ್ಲವರು. 'ಕರ್ಣಾಟಕ-ಕರ್ನಾಟಕ'ದ ಗೊಂದಲವೆದ್ದಾಗ, ಶ್ರೀಯವರು 'ಕರ್ನಾಟಕ'ದ

ಪರವಾಗಿ ಮಾಡಿದ ವಾದ ಎಂತಹ ಮೇಧಾವಿಯಾದ ವಕೀಲನನ್ನೂ ತಲೆದೂಗಿಸುವಂತಿತ್ತು.

'True magnanimity consists in deviating from the beaten path' ಎಂದು ಹೇಳುತ್ತಾರೆ. ಸವೆದ ಹಾದಿಯನ್ನು ಬಿಟ್ಟು, ಹೊಸ ಹೆದ್ದಾರಿಯೊಂದನ್ನು ನಿರ್ಮಿಸುವುದೇ ಹಿರಿತನದ ಕುರುಹಂತೆ. ಶ್ರೀಯವರು ಅಂತಹ ಒಂದು ಹೊಸ ಹೆದ್ದಾರಿಯನ್ನು ನಿರ್ಮಿಸಿಕೊಟ್ಟ ಮಹಿಮಾನ್ವಿತರು. ಅವರನ್ನು ಕುರಿತು "ಆತನ ಭಾಷಣಗಳನ್ನು ಕೇಳಬೇಕು, ಆತನ ಒಡನಾಡಿ ವ್ಯವಹರಿಸಬೇಕು, ಆತನ ಗ್ರಂಥಗಳನ್ನು ಓದಬೇಕು" ಎಂದು ಹಿರಿಯ ಸಾಹಿತಿಯೊಬ್ಬರು ಹೇಳಿರುವ ಮಾತು ಸರ್ವಸತ್ಯ. ಆದರೆ ನಮಗೀಗ ಉಳಿದಿರುವುದು ಅವರ ಗ್ರಂಥಗಳು ಮಾತ್ರ. ಅವುಗಳನ್ನು ಮತ್ತೆ ಮತ್ತೆ ಓದಿ ಭಾಷಾ ಸಂಪತ್ತನ್ನು ಬೆಳೆಸಿಕೊಳ್ಳಬೇಕು, ಆನಂದಾನುಭವವನ್ನು ಪಡೆಯಬೇಕು. ಭೂದೇವಿ ಶತಶತಮಾನಗಳ ಕಾಲ ಮಾಡುವ ತಪಸ್ಸಿನಿಂದ ಇಂತಹ ದಿವ್ಯಶಕ್ತಿಯ ಭವ್ಯವ್ಯಕ್ತಿಯೊಬ್ಬರು ಉದಿಸುತ್ತಾರೆ. ಅವರ ಗ್ರಂಥಗಳ ಪಠನೆಯೆ ನಾವು ಅವರಿಗೆ ಸಲ್ಲಿಸಬಹುದಾದ ಪೂಜೆ.



ಬಿ. ಎಂ. ಶಿವರಾಮಯ್ಯ



# ನನ್ನ ಅಣ್ಣಂದಿರು

ಬಿ. ಎಂ. ಶ್ರೀಯವರು ಗುಬ್ಬಿ ಬಳಿ ಇರುವ ಸಂಪಿಗೆಯಲ್ಲಿ, ಭಾರತ ಪುರಾಣೇತಿಹಾಸಗಳಲ್ಲಿ 'ಚಂಪಕಾಪುರಿ' ಎಂದು ಹೇಳಲ್ಪಟ್ಟ ಸುಧನ್ವಾರ್ಜುನ ಕಾಳಗದಲ್ಲಿ ಶ್ರೀಕೃಷ್ಣನನ್ನು ಪ್ರತ್ಯಕ್ಷ ಮಾಡಿಕೊಂಡ ಪ್ರಸಿದ್ಧ ಪವಿತ್ರ ಕ್ಷೇತ್ರದಲ್ಲಿ ಅವರ ತಾತ ಮಲ್ಲಣ್ಣನವರ ಮಗಳು ಭಾಗೀರಥಮ್ಮನವರ ಮೊದಲ ಗರ್ಭದಲ್ಲಿ (೩–೧–೧೮೮೪ರಲ್ಲಿ) ಜನಿಸಿದರು. ಅವರ ಶೈಶವ ಅಲ್ಲೇ ಕಳೆಯಿತು. ಅವರ (ನಮ್ಮ) ತಂದೆ ಮೈಲಾರಯ್ಯನವರು ನಾಗಮಂಗಲದ ತಾಲ್ಲೂಕು ಬೆಳ್ಳೂರಿನವರು. ಅವರು ಮೆಟ್ರಿಕ್ಯುಲೇಷನ್ ಓದಿ ವಕೀಲರಾಗಿ ಶ್ವೇತಪುರವನ್ನು (ಬೆಳ್ಳೂರನ್ನು) ಬಿಟ್ಟು ಅಷ್ಟು ಹೊತ್ತಿಗೆ ಶ್ರೀರಂಗಪಟ್ಟಣವನ್ನು ಸೇರಿದ್ದರು. ಶ್ರೀಯವರ ಬಾಲ್ಯವೆಲ್ಲಾ ಶ್ರೀರಂಗಪಟ್ಟಣದಲ್ಲಿ ತಂದೆಯವರು ಇದ್ದ ಬಳಿ ಕಳೆದುಹೋಯಿತು. ನಾನು ಶ್ರೀರಂಗಪಟ್ಟಣದಲ್ಲಿ ೧೦-೫-೧೮೯೫ರಲ್ಲಿ ಹುಟ್ಟಿದವನು. ನನಗೂ ನನ್ನ ಅಣ್ಣಂದಿರಿಗೂ ಮಧ್ಯೆ ಅವರ ತಂಗಿಯರಿಬ್ಬರು (ನನಗೆ ಅಕ್ಕಂದಿರು) ಇದ್ದರು. ನನ್ನ ನಂತರ ನನ್ನ ತಮ್ಮ ಒಬ್ಬ ಹುಟ್ಟಿದನು. ನನಗೂ ನನ್ನ ಅಣ್ಣಂದಿರಿಗೂ ವಯೋಧಿಕ್ಯದಿಂದ ಸಂಬಂಧ ಸ್ವಲ್ಪ ಹೆಚ್ಚು ಕಡಿಮೆ ತಂದೆ ಮಗನಂತೆ ಇತ್ತು; ಮತ್ತು ನನಗೂ ನನ್ನ ತಮ್ಮನಿಗೂ ವಯಸ್ಸಿನ ಅಂತರ ಕಮ್ಮಿ ಆದ್ದರಿಂದ ನಾವಿಬ್ಬರೂ ಲವ–ಕುಶರಂತೆ ಇದ್ದೆವು. ಹೀಗೆ ನಮ್ಮ ತಂದೆ ಮೈಲಾರಯ್ಯನವರ ಸಂಸಾರ ಶ್ರೀರಂಗಪಟ್ಟಣದಲ್ಲಿ ಬಹು ಮರ್ಯಾದೆಯಿಂದ ಗಂಭೀರವಾಗಿ ನಡೆದು ಬಂದಿತ್ತು. ನಮ್ಮ ತಂದೆ ಆಗಿನ ಕಾಲಕ್ಕೆ ಅಲ್ಲಿ ಬಹಳ ಗಣ್ಯ ವ್ಯಕ್ತಿಯಾಗಿದ್ದರು. ಊರಿಗೇ ಹೆಸರಾಗಿದ್ದರು.

ಶ್ರೀಯವರ ಬಾಲ್ಯ, ನಮ್ಮ ಮನೆಯವರು ಹೇಳುತ್ತಿದ್ದಂತೆ, ಬಹಳ ಜಟಿಲವಾಗಿತ್ತು. ಅವರ ತುಂಟಾಟ, ಇತರ ಹುಡುಗರನ್ನು ಕಟ್ಟಿಕೊಂಡು ಬೀದಿ, ಹಿತ್ತಲು, ತೋಟ, ಕೋಟೆ ಸಂದುಗಳು, ನದೀ ತೀರ ಇಲ್ಲೆಲ್ಲಾ ಸಿಕ್ಕಾಪಟ್ಟೆ ತಿರುಗಿಕೊಂಡು ಅಲ್ಲಲ್ಲಿ ಹೂವು, ಹಣ್ಣು, ಕಾಯಿ ಲೂಟಿ ಮಾಡಿಕೊಂಡು ಮನೆಯವರಿಗೂ ತೊಂದರೆ ಕೊಟ್ಟು ಇವರ ದೂರು ತಂದೆ ತಾಯಿಗಳಿಗೂ ಮುಟ್ಟುತ್ತಿತ್ತು, ತಂದೆ ಶಿಕ್ಷಿಸುತ್ತಿದ್ದರು.

ತಾಯಿ ಬುದ್ಧಿ ಹೇಳುತ್ತಿದ್ದರು. ಬಾಲಗೋಪಾಲನ ಚೇಷ್ಟೆಗಳಲ್ಲಿ ಪ್ರಾಯಶಃ ಎಲ್ಲವೂ ಅನುಕರಿಸಲ್ಪಡುತ್ತಿದ್ದವು. ಶೃಂಗಾರ ಚೇಷ್ಟೆಮಾತ್ರ ಆಗ್ಗೆ ಅಂತರ್ಲೀನವಾಗಿದ್ದು ಆ ಕಪಿಚೇಷ್ಟೆ ಮುಂದೆ ಕವಿಚೇಷ್ಟೆಯಾಗಿ ಪರಿಣಮಿಸಿ ಶೃಂಗಾರ ರಸಕವನದಲ್ಲಿ ಕಾಣಿಸಿಕೊಂಡಿತು. "ಅವಳ ಲಂಗ ಇವಳಿಗೆ ತೊಡಿಸಿ, ಇವಳ ಸೀರೆ ಅವಳಿಗೆ ಉಡಿಸಿ, ನಾ ನೋಡ ಒಯಸುವೆ, ಹಾಡ ಒಯಸುವೆ," ಎಂಬಂತಹ ಕವನಗಳು ಅವರ ಶಿಷ್ಯ ಸಹಸ್ರವನ್ನು ಮತ್ತು ಓದು ಕೇಳುಗರನ್ನು ತಲೆತೂಗುವಂತೆ ಮಾಡಿತು. ಆ ಮೊಳಕೆಯೇ ಎದ್ದು ಚಿಗುರಾಗಿ ಹಸುರೆಲೆಯಾಯಿತು!

ಅವರ ವಿದ್ಯಾಭ್ಯಾಸ ಆರಂಭದಲ್ಲಿ ಶ್ರೀರಂಗಪಟ್ಟಣದಲ್ಲಿ ಆಗಿ, ಪ್ರೌಢಶಾಲೆ ಪಾಠ ಮೈಸೂರಿನಲ್ಲಿ ಆಗಿ, ಕಾಲೇಜಿನ ವ್ಯಾಸಂಗಕ್ಕೆ ಬೆಂಗಳೂರು ಸೆಂಟ್ರಲ್ ಕಾಲೇಜಿನ ಪ್ರಾ. ಟೆಯ್ಟರ ಅಧೀನಕ್ಕೆ ಬಿದ್ದರು. ಟೆಯ್ಟರಿಗೆ ಅವರು ಅಚ್ಚುಮೆಚ್ಚಿನವರು ಆಗಿದ್ದರು. ಪದವೀ ಶಿಕ್ಷಣಕ್ಕೆ ಮದರಾಸಿಗೆ ಹೋದರು. ಅಲ್ಲಿ ಅವರ ಇಮ್ಮಡಿ ಪದವಿ, ಪ್ರೌಢತೆ ಅವರಿಗೆ ದೊರೆಯಿತು. ಆಗ ತಂದೆ ತೀರಿದರು, ಸಂಸಾರಕ್ಕೆ ಸಿಕ್ಕಿದರು, ನಂತರ ಅವರು ಯಾವ ಪರೀಕ್ಷೆಯಲ್ಲೂ ಉತ್ತೀರ್ಣರಾಗಲಿಲ್ಲ.

ಈ ಮಧ್ಯೆ ಅವರಿಗೆ ಅವರು ಹುಟ್ಟಿದ ಸ್ಥಳವಾದ ಸಂಪಿಗೆಯಲ್ಲೇ (ಒಬ್ಬ ಅಕ್ಕನಿಗೆ ಸಹ) ದೇವಮ್ಮ ಎಂಬ ಸುಕನ್ಯೆ ಕೊಟ್ಟು ವಿವಾಹವಾಯಿತು. ನಾನು ಆಗ ಚಿಕ್ಕ ಹುಡುಗ, ಆದರೂ ಆ ಸನ್ನಿವೇಶ ನನಗೆ ಇನ್ನೂ ಜ್ಞಾಪಕದಲ್ಲಿದೆ. ಹೀಗೆ ಸಂಪಿಗೆ ಗ್ರಾಮ ಶ್ರೀಯವರಿಗೆ ಜನ್ಮವಿತ್ತು ವಿವಾಹ ಮಾಡಿಸಿದ ಎರಡು ಮುಖ್ಯ ಜೀವನ ಸಂದರ್ಭಗಳಿಗೆ ಕಾರಣವಾಗಿರುತ್ತೆ. ಬೆಳ್ಳೂರು ಕೇವಲ ಪಿತೃಕ್ಷೇತ್ರವಾಗಿದೆ. ಮಾತೃಭೂಮಿ, ಪಿತೃಸ್ಥಾನ ಎನ್ನುತ್ತೇವೆ. ಇದರಲ್ಲಿ ಸ್ವರ್ಗಕ್ಕಿಂತಲೂ ದೊಡ್ಡದು ಯಾವುದು? ಪಿತೃವಂಶಕ್ಕೆ ಹಿರಿಮೆಯಾದರೂ ಮಾತೃಭೂಮಿಗೆ ಪ್ರಾಶಸ್ತ್ಯ. ಇದರ ಒಂದು ವಿಶೇಷವೇನೆಂದರೆ ಅಷ್ಟು ವಿದ್ಯಾವಂತರಾದ 'ಶ್ರೀ'ಯವರ ತಾಯಿ ಹಿಂದಿನಕಾಲದ ನಿರಕ್ಷರಕುಕ್ಷಿಯಾಗಿದ್ದರು. ಸ್ತ್ರೀ ವಿದ್ಯಾಪರರಾಗಿದ್ದ ಶ್ರೀಯವರು ಮನೆಯೊಳಗಿನ ಈ ಶೂನ್ಯತೆಯನ್ನು ಹೇಗೆ ಸಹಿಸಿದರು? ಅವರ ಸಹಚರರಿಗೂ ಯಾಕೋ ಅಂಥ ವಿದ್ಯಾಪ್ರಗತಿ ಇರಲಿಲ್ಲ. ಅವರ ಪತ್ನಿಗೂ ಹೆಚ್ಚು ವಿದ್ಯೆಯಿರಲಿಲ್ಲ. ಮಕ್ಕಳೂ ಯಾರೂ ಹೆಚ್ಚು ವಿದ್ಯೆಯಲ್ಲಿ ಮುಂದುವರಿಯಲಿಲ್ಲ. ಬೆಳ್ಳೂರು ಹುಟ್ಟಿನಲ್ಲಿ ಶ್ರೀಯವರೊಬ್ಬರು ದಿಗ್ಗಜರಾದರು. ಅದು ಇತರರಿಗೂ ಗೌರವ ತಂದಿತು. ಹೊರಗೆಲ್ಲ ಅವರ ಸುಂದರ ಇಂಗ್ಲಿಷ್‌ನ ಒಳಮರೆಯಲ್ಲಿ ಕನ್ನಡಾಭಿಮಾನ ಎದ್ದೆದ್ದು ಮುಳುಗುತ್ತಿತ್ತು. ಮನೆಯಲ್ಲಿ ಮಕ್ಕಳು, ಮೊಮ್ಮಕ್ಕಳು, ನಾವು ತಮ್ಮಂದಿರು ಸಹ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನ ಕೊಡುತ್ತಿದ್ದೆವು. ಹಾಗೂ ಇಂಗ್ಲಿಷ್ ಬರವಣಿಗೆ ಹೆಚ್ಚು ಇತ್ತು. ಶ್ರೀಯವರೇ

ಕನ್ನಡದಲ್ಲಿ ಕಾಗದ ಬರೆಯುತ್ತಿದ್ದುದು ವಿರಳ! ಭಾಷಾ ಸೇವೆಗಾಗಿ ದೇಶಕ್ಕಾಗಿ ಕನ್ನಡ ಜ್ಞಾನ ಬೇಕಾಯಿತು.

ಯಾರದೇ ವಿಷಯದಲ್ಲೂ ಹೇಳಬೇಕಾದದ್ದು ಇರುತ್ತೆ, ಹೇಳಬಹುದಾದದ್ದು ಇರುತ್ತೆ, ಹೇಳಬಾರದ್ದೂ ಇರುತ್ತೆ. ಶ್ರೀಯವರು ಇದಕ್ಕೇನೂ ಹೊರತಲ್ಲ. ಅವರ ವಿಷಯದಲ್ಲಿ ಹೇಳಬೇಕಾದ್ದು ಮತ್ತು ಹೇಳಬಹುದಾದ್ದು ಈಗ ನಾನು ನನ್ನ ಒಮ್ಮೆ ವಿದ್ಯಾರ್ಥಿನಿಯಾಗಿದ್ದ ಪಂಕಜಳನ್ನು ಕೂರಿಸಿಕೊಂಡು ನನ್ನ ಅಣ್ಣನವರ ವಿಷಯವನ್ನು ಜ್ಞಾಪಕಕ್ಕೆ ಬಂದ ಹಾಗೆ ನನ್ನ ನಾಲಿಗೆ ಆಡಿದ ಹಾಗೆ ತಿಳಿಸುತ್ತಾ ಬರೆಸಿದ್ದೇನೆ. ಕಾರಣ ನನ್ನ ದೃಷ್ಟಿ ದೌರ್ಬಲ್ಯದಿಂದಲೂ, ಹತ್ತಿರ ಎಂಬತ್ತೊಂಬತ್ತನೇ ವಯಸ್ಸಿನಿಂದಲೂ, ನಾನೇ ಹೆಚ್ಚು ಸ್ಪಷ್ಟತೆಯಿಂದ ಬರೆಯಲಾರೆ. ಹೀಗಾಗಿ ಈ ಲೇಖನದಲ್ಲಿ ಒಂದು ಪೂರ್ವ ನಿಯೋಜಿತ ಕ್ರಮವನ್ನಾಗಲೀ, ಸೂಕ್ತ ಅಕ್ಕಪಕ್ಕ ಜೋಡಣೆಯನ್ನಾಗಲೀ ನೀವು ಕಾಣವೆ ಶ್ರೀಯವರ ಅಲ್ಲೊಂದು ಇಲ್ಲೊಂದು ವಿಚಾರ ಮನಬಂದಂತೆ ಗೀಚಿರುವುದು ಕಾಣುತ್ತೆ. ಶ್ರೀಯವರ ವಿಷಯದಲ್ಲಿ ಹೇಳಬಾರದ್ದು ಅಂತಹದೇನೂ ಇಲ್ಲವೆಂದೂ ಹೇಳಿಬಿಟ್ಟು ಮುಂದೆ ಸಾಗುತ್ತೇನೆ. ನೀವು ಆಪ್ತ ಯಥಾರ್ಥವಾದೀ ಎಂದು ಕೇಳಿದ್ದೀರಷ್ಟೆ. ನಾನು ಶ್ರೀಯವರ ಆಪ್ತನಾಗಿದ್ದು ಇಲ್ಲಿ ಎಲ್ಲವನ್ನೂ ಇದ್ದದ್ದು ಇದ್ದ ಹಾಗೆಯೇ ಮುಚ್ಚುಮರೆ ಇಲ್ಲದೆ ಹೇಳಿರುತ್ತೇನೆ. ಅದನ್ನು ನೀವು ಮೊದಲು ಕಾಣಬೇಕು.

ಶ್ರೀಯವರು ವಿಶ್ವವಿದ್ಯಾನಿಲಯದಲ್ಲಿ ತಮ್ಮ ಸಹೋದ್ಯೋಗಿಗಳೊಂದಿಗೆ ಹೇಗೆ ಇದ್ದರು, ತಮ್ಮ ಶಿಷ್ಯವರ್ಗದವರಲ್ಲಿ ಹೇಗೆ ಇದ್ದರು ಮತ್ತು ತಾವು ಸಂಧಿಸಿದ ಇತರೇ ಹೊರಗಿನ ಜನರಲ್ಲಿ ಹೇಗೆ ಇದ್ದರು, ಅವರವರ ಮಧ್ಯೆ ಯಾವ ತರಹ ಸಂಪರ್ಕ ಪರಿಣಾಮ ಇದ್ದಿತು, ಇದೆಲ್ಲವೂ ಈಗಾಗಲೇ ಬಹಳ ಪ್ರಚಾರವಾಗಿ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಾಗಿ ಅವರ ಬೋಧನ ರಂಗ ವಿಶದವಾಗಿರುವುದರಿಂದ, ಮತ್ತು ಅದಕ್ಕೆ ನನ್ನ ಸ್ವತಃ ಅರಿವು ಹೆಚ್ಚು ಇರುವುದಿಲ್ಲವಾದ್ದರಿಂದ ನಾನು ಇಲ್ಲಿ ಆ ಕ್ಷೇತ್ರಕ್ಕೆ ಕೈ ಹಾಕುವುದಿಲ್ಲ. ನನಗೂ ನನ್ನ ಅಣ್ಣನಿಗೂ ನಮ್ಮ ಮನೆಯವರಿಗೂ, ಮನೆ ಒಳಗೂ ಹೊರಗೂ ಅವರ ಜೊತೆ ಇದ್ದಾಗ ನಾನು ಕಂಡು ತಿಳಿದಿರುವುದನ್ನು ಮಾತ್ರ ಇಲ್ಲಿ ಆದಷ್ಟು ಶೇಖರಿಸಿ ಬರೆಸಿದ್ದೇನೆ.

ಇಪ್ಪತ್ತೆಂಟು ಜ್ಞಾಪಕಗಳಿಗಿಂತ ಒಂದು ತೊಟ್ಟು ಶಾಯಿ ಬೀಳುವುದು ಲೇಸು ಎನ್ನುತ್ತೆ ಚೀಣಿಯರ ಒಂದು ಗಾದೆ. ಬರೆದಿಟ್ಟ ಮಾತು ಎಂದಿಗೂ ಮಾಸಲಾರದು. ಬರೇ ಜ್ಞಾಪಕ ಅಳಿಸಿಹೋಗಬಹುದು, ಎಂದು ಅದರ ಅರ್ಥ. ನಾನು ಹೇಳಿ ಬರೆಸಿ ಅಚ್ಚು ಹಾಕುವ ಶ್ರೀಯವರ ನೆನಪುಗಳೂ ಸಂದರ್ಭಗಳೂ, ಹಾಗೆಯೇ ಸರಿ. ಆದರೆ ಓದುಗರು

ಅವನ್ನು ಅಲ್ಲೊಂದು, ಇಲ್ಲೊಂದು, ಹಾಗೊಂದು, ಹೀಗೊಂದು, ಕಾಣುತ್ತಾರೆ, ನನ್ನ ಈ ಹಿಂದಿನ ಲೇಖನ ಭಾಷಣಗಳಲ್ಲಿ ಹೇಳಿರಬಹುದಾದ ಘಟನೆಗಳು ಪುನರುಕ್ತಿಯೂ ಆಗುತ್ತವೆ.

ಶ್ರೀಕಂಠ ಬಾಲ್ಯದಲ್ಲಿ ತಂದೆಯವರು ಇಟ್ಟಿದ್ದ ಒಂದು ನೂರು ರೂಪಾಯಿಯ ನೋಟನ್ನು, ಆಟಕ್ಕೆಂದು ತೆಗೆದುಕೊಂಡು ಅದನ್ನು ಚೂರುಚೂರಾಗಿ ಹರಿದು ಆಟವಾಡಿದ ಮೇಲೆ ಅವನ್ನೆಲ್ಲಾ ಪಠ್ಯಪುಸ್ತಕದಲ್ಲಿ ಸೇರಿಸಿಟ್ಟಿದ್ದು ತಂದೆಯವರು ಹುಡುಕಿ ಪತ್ತೆಮಾಡಿ ತುಂಟ ಮಗನನ್ನು ಶಿಕ್ಷಿಸಿ ಆ ನೋಟಿನ ಚೂರುಗಳನ್ನು ಹಾಗಾಗೇ ಅಂಟಿಸಿ ಖಜಾನೆಗೆ ಕೊಟ್ಟರಂತೆ. ಪಾಪ, ಆ ಬಾಲಕನಿಗೆ ಅದರ ಬೆಲೆ ಏನು ಗೊತ್ತಿತ್ತು! ಅದರಲ್ಲಿ ಅಪರಾಧವೇನಿತ್ತು? ಅವನನ್ನು ಶಿಕ್ಷಿಸಿದ್ದು ಯಾಕೆ? ಲಾಯರೇ ಆಗಿದ್ದ ತಂದೆಗೆ ಅಷ್ಟು ಗೊತ್ತಾಗಲಿಲ್ಲವೆ?

ನಾನು ನಾಲ್ಕೈದು ವರ್ಷದ ಮಗುವಾಗಿದ್ದಾಗ ಅದೇ ಶ್ರೀರಂಗಪಟ್ಟಣದಲ್ಲಿನ ಮನೆಯ ಮುಂಭಾಗದ ಮೆಟ್ಟಲಿನ ಇಬ್ಭಾಗದಲ್ಲಿ ಕಟ್ಟಿದ್ದ ಆನೆ ಕೈಪಿಡಿ ಗೋಡೆಯ ಮೇಲೆ ಇಳಿಜಾರು ಆಟ ಆಡುತ್ತಿದ್ದು ಕಲ್ಲುಮೆಟ್ಟಿಲ ಮೇಲೆ ಬಿದ್ದು ನನ್ನ ಹಣೆಗೆ ಕಲ್ಲು ಹೊಡೆದು ಗಾಯವಾಗಿ ಆ ಗುರುತು ಈಗಲೂ ನನ್ನ ಹಣೆಯಲ್ಲಿ ಕಾಣುತ್ತಿದೆ. ಆಗ ಅಣ್ಣಯ್ಯ ಬಂದು ನನ್ನನ್ನು ಬಿದ್ದುದೇಕೆ ಎಂದು ಹೊಡೆದದ್ದು ಜ್ಞಾಪಕವಿದೆ. ಇದೇನು ಅಪ್ಪನಿಂದ ಕಲಿತಿದ್ದೋ? ಆಗ ಅಣ್ಣಯ್ಯ ತಲೆಯ ಮೇಲೆ ಹಾಕಿಕೊಂಡು ಓಡಾಡುತ್ತಿದ್ದ ಹಾಸನದ ಟೋಪಿ ನನಗೆ ಇನ್ನೂ ಈಗ ಕಂಡಂತೆ ಇದೆ. ಅವನ ಕತ್ತು ಮುಚ್ಚಿದ ಅಂಗಿ ಆಗ ಇದ್ದುದು ಕೊನೆಯವರೆಗೂ ಅವನು ಕತ್ತು ತೆರೆದ ಪಟ್ಟಿಯ ಅಂಗಿಯನ್ನು ಧರಿಸಲೇ ಇಲ್ಲ. ಅವನ ಕತ್ತು ಯಾವಾಗ್ಲೂ ಬಟ್ಟೆಯಲ್ಲಿ ನೇಣುಗಂಟು ಬಿದ್ದಿರಲಿಲ್ಲ. ಕತ್ತಿನಗಂಟು (Neck-Tie) ಹಾಕುವಷ್ಟು ಅವನಿಗೆ ಆಗ ಸಾಮರ್ಥ್ಯವೂ ಇರಲಿಲ್ಲ ಎಂದು ಕಾಣುತ್ತೆ! ಸದ್ಯ ಇತ್ತೀಚೆಗೆ ಕತ್ತಿನ ಮೇಲಿನ ಹಾವಳಿ ಬಲು ಕಮ್ಮಿಯಾಗಿದೆ.

ಬಾಲಕೃಷ್ಣನ ಚೇಷ್ಟೆಗಳ ದೂರು ಯಶೋದಾದೇವಿಯವರೆಗೂ ಹೋದದ್ದಾದರೆ, 'ಶ್ರೀ' ಬಾಲನ ಚೇಷ್ಟೆಗಳು ಮುಂದೆ ಯಶೋದೇವಿವರೆಗೂ ಹೋಗಲು ಮಾರ್ಗವಾಯಿತು. ಬೆಣ್ಣೆ ಕಳ್ಳನಿಗೂ, ಗೋಪಿಕೆಯರ ಕೀಟಲೆಗಳಿಗೂ, ಮಾತಿನ ವೈಖರಿಗೂ, ವ್ಯತ್ಯಾಸವಿಲ್ಲವೆ? ಆಗಿನ ಹುಡುಗಾಟವೆಲ್ಲವೂ ಮುಂದೆ ದೊಡ್ಡಾಟಕ್ಕೆ ಜ್ಞಾನಕ್ರೀಡೆಗೆ, ಸಾಹಿತ್ಯದಲ್ಲಿ ಚೆಲ್ಲಾಟಕ್ಕೆ ದಾರಿಕೊಟ್ಟಿತು. ಕಪಿಚೇಷ್ಟೆ ಕವಿಚೇಷ್ಟೆಯಾಯಿತು. ಸಾಹಿತ್ಯದಲ್ಲಿ ಶೃಂಗಾರ ಕರಗಿ ಅಡಗಿತು!

ಯೌವನದಲ್ಲಿ 'ಶ್ರೀ'ಯವರ ಬಾಳು ಚೆನ್ನಾಗಿತ್ತು. ಅದರಲ್ಲಿ ಅವಿವೇಕತೆಯೇನೂ ಕಂಡುಬಂದಿಲ್ಲ. ಮದರಾಸಿನಲ್ಲಿ ಸಹಪಾಠಿಗಳ ಜೊತೆ ಸೇರಿ ಸ್ಟೋವೊಲೆಯ ಮೇಲೆ ತಾವೇ ಆಗಾಗ್ಗೆ ರುಚಿಕರವಾದ ತಿಂಡಿತಿನಿಸುಗಳನ್ನು ಮಾಡಿಕೊಂಡು ಸರಸಸಲ್ಲಾಪದಲ್ಲಿರುತ್ತಿದ್ದರು. ಆಗಲೂ ಶ್ರೀಯವರ ಕೈಯಲ್ಲಿ ಬೆರಳು ಸಿಕ್ಕಿಸಿದ್ದ ಒಂದು ಪುಸ್ತಕವಿರುತ್ತಿತ್ತು. ಅವರ ಸಹಪಾಠಿಗಳೇ ಒಬ್ಬರು ಈಚೆಗೆ ನನಗೆ ಹೇಳಿದ್ದರು. ಅವರು ಪುಸ್ತಕ ತಿನ್ನುವ ಜಂತುವಾಗಿದ್ದುದನ್ನು ನಾನೂ ಈಚೆಗೆ ನೋಡಿದ್ದೆ. ಊಟಕ್ಕೆ ಬರುವುದು ಕಷ್ಟ, ಕಾಣಲು ಬಂದವರನ್ನು ನೋಡುವುದು ಕಷ್ಟ, ಪುಸ್ತಕದಲ್ಲೇ ಅಷ್ಟು ಮಗ್ನತೆ. ಹೊಸದಾಗಿ ಎಂ.ಎ. ಪಾಸುಮಾಡಿದ ಶಿಷ್ಯರೊಬ್ಬರು ಗುರುಗಳ ಆಶೀರ್ವಾದ ಬುದ್ಧಿವಾದಕ್ಕಾಗಿ ಬಂದು ಅರ್ಧ ತಾಸು ಕಾದು ಒಳಹೊಕ್ಕಾಗ 'ನೀವೂ ಈಗ ನನ್ನಂತೆ ಒಬ್ಬ ಎಂ.ಎ. ನಾನು ನಿಮಗೆ ಏನು ತಾನೇ ಹೇಳಬಲ್ಲೆ' ಎಂದರು. ಶಿಷ್ಯರಿಗೆ ನಾಚಿಕೆ ಆಯಿತು. ಮುಂದೆ ಆತ ಒಂದು ನಗರದ ಗ್ರಂಥಾಲಯದ ಅಧಿಕಾರಿಯಾಗುವರಿದ್ದರು. ಅವರಿಗೆ ಪುಸ್ತಕಗಳನ್ನು ಹೆಚ್ಚು ಓದಿ ಅಂತಲಾದರೂ ಹೇಳಬಾರದಾಗಿತ್ತೆ ? ನಾನು ಒಂದು ದಿನ ಚಿಂತಿಸುತ್ತಿದ್ದಾಗ ನನ್ನ ಅಣ್ಣ ನನ್ನ ಬಳಿಗೆ ಬಂದು ಚಿಂತನೆ ಏಕೋ ? ಷೇಕ್ಸ್‌ಪಿಯರ್ ಓದು, ಹೊಸ ಬೈಬಲ್ ಓದು, ನಿನಗೆ ಪ್ರಪಂಚ ಜ್ಞಾನ ಬಂದು ಲಘುವಾಗಿರುತ್ತೆ, ನಿನ್ನ ಇಂಗ್ಲಿಷ್ ಭಾಷೆಯೂ ಉತ್ತಮವಾಗುತ್ತೆ ಎಂದರು. ಇಂತಹವರು ಮುಂದೆ ಕನ್ನಡ ಭಾಷೆಯ ಬೆಳಕುಗಾರರಾದರು. ನನ್ನನ್ನೂ ಕನ್ನಡ ಭಾಷಣಗಳಿಗೂ ಬರವಣಿಗೆಗಳಿಗೂ ಪ್ರಚೋದಿಸಿದರು. ಇದರ ಅಂತಿಮ ಫಲಿತಾಂಶ ನಾನೂ ಒಬ್ಬ ಕನ್ನಡ ಗ್ರಂಥಕರ್ತನಾದೆ. ನನ್ನಿಂದ 'ವಿವಿಧ ಜನಪ್ರಿಯ ವಿಜ್ಞಾನ' ಲೇಖನಗಳ ಎರಡು ಸಂಪುಟಗಳು ಹೊರಬಿದ್ದವು, ಜನಪ್ರಿಯವಾದವು. ಅಷ್ಟೇ ಅಲ್ಲ, 'ಶ್ರೀ'ಯವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಅವರ ಭಾವಚಿತ್ರದೊಡನೆ ಅವರಿಗೇ ಅರ್ಪಿಸಿರುವ ಆ ಎರಡೂ ಸಂಪುಟಗಳ ಸುಮಾರು ಸಾವಿರ ಪ್ರತಿಗಳು ಶ್ರೀಯವರ ಪ್ರೇಮಿಗಳಿಗೆ ಇಡೀ ಕರ್ನಾಟಕದಲ್ಲಿ (ಕೊಂಚ ಹೊರಗೂ ಸಹ) ಉಚಿತವಾಗಿ ಹಂಚಲ್ಪಟ್ಟಿರುವುದು 'ಶ್ರೀ'ಯವರ ಸ್ಮರಣೆಗೆ ಮಾಡಿದ ಒಂದು ವಿಶೇಷ ಸೇವೆಯಾಗಿದೆ. ಶ್ರೀಯವರಲ್ಲಿ ಇಂಗ್ಲಿಷ್‌ನ ಪ್ರತಿಭೆ ಕನ್ನಡದ ಪ್ರೀತಿ ಎರಡೂ ಕೂಡಿತ್ತು. ನಾನು ಎಣಿಸುವುದು 'ಶ್ರೀ'ಯವರ ಇಂಗ್ಲಿಷ್ ಸ್ವಂತಕ್ಕೆ ಸ್ವಜನಕ್ಕೆ ಉಳಿದು, ಕನ್ನಡಾಭಿಮಾನ ಕರ್ನಾಟಕ ದೇಶಕ್ಕೆ ಮತ್ತು ಜನರಿಗೆ ಮೀಸಲಾಯಿತು. ಹೊರಗೆ ತಾನೇ ಅವರು ದಾಸಯ್ಯನಂತೆ ಓಡಾಡಿದರು.

ಒಮ್ಮೆ ಅಣ್ಣಯ್ಯ ನನ್ನನ್ನು ಮಗು ಮನುಷ್ಯನ ಅಪ್ಪ ಬಲ್ಲೆಯೇನು ಅಂತ ಕೇಳಿದರು. 'ಓಹೋ, ಅದು ದೊಡ್ಡದಾದ ಮೇಲೆ, ನಾನು ಬಲ್ಲೆ ಎಂದೆ ; ಅವರೆಂದರು–

ಅಲ್ಲಕಣೋ, ಅದು ಚಿಕ್ಕಂದಿನಲ್ಲಿಯೇ, ಎಂದು ನನಗೆ ಇಂಗ್ಲಿಷ್ ಪದ್ಯದ ಸಾರವನ್ನು ತಿಳಿಸಿದರು. ಪುಸ್ತಕಗಳನ್ನು ಪ್ರೀತಿಸುತ್ತಿದ್ದ ಅವರು ನಾನು ಪ್ರೌಢಶಾಲೆ ಸೇರಿದಾಗ ಪುಸ್ತಕಗಳನ್ನು ಎಷ್ಟುಬೇಕೋ ಅಷ್ಟು ತೆಗೆದುಕೊ ಹೆಚ್ಚಿಗೆ ಬೇಡ ಎಂದರು, ಏಕೆ? ಪುಸ್ತಕಗಳ ಮೇಲೆ ಪ್ರೀತಿ ನನಗೆ ಇರಲಿಲ್ಲವೆ?

ಮಹಾರಾಜಾಕಾಲೇಜಿನ ನಾಟಕ ಸಂಘದಲ್ಲಿ ನಾನು ಆಗಿನ ಮಹಾರಾಜರ ಮುಂದೆ ಷೇಕ್ಸ್‌ಪಿಯರ್ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದೆ. ಪ್ರಿನ್ಸಿಪಾಲ್ ಡೆನ್‌ಹ್ಯಾಮ್‌ರ ತರಬೇತು. ನಾಟಕವನ್ನು ನಗುನಗುತ್ತಾ ನೋಡುತ್ತಿದ್ದ ಅಣ್ಣಯ್ಯ ಮನೆಗೆ ಬಂದಮೇಲೆ ಏನೂ ಕಾಣದವರಂತೆ ಇದ್ದರು. ಏಕೆ? ನನ್ನ ಪಾತ್ರ ಚೆನ್ನಾಗಿತ್ತು ಎನ್ನಬಾರದಾಗಿತ್ತೆ? ಮಹಾರಾಜರು ಕೂಡ ನನ್ನ ಪಾತ್ರ ಮೆಚ್ಚಿ ನನಗೆ ಕೊಟ್ಟಿದ್ದ ಷೇಕ್ಸ್‌ಪಿಯರ್ ಪುಸ್ತಕ ನೋಡಿ ಚೆನ್ನಾಗಿದೆ ಅಂದರು. ಆದರೆ ಅದನ್ನು ಪಡೆದು ಕೊಂಡ ನನ್ನನ್ನು ಹೊಗಳಬಾರದೋ?

ಈಗ ಒಂದು ಅಡ್ಡ ಮಾತು ಹೇಳಿರುತ್ತೇನೆ—ತಮ್ಮನಾದ ನಾನು ಅಣ್ಣನ ವಿಚಾರ ಬರೆಸಿರುವುದರಲ್ಲಿ ಅಂತ ಮೆಚ್ಚುಗಾರಿಕೆ ಏನೂ ಇಲ್ಲ. ಪ್ರಾಯಶಃ ಇಂತಹ ಅಣ್ಣನನ್ನು ಹೊಂದಿರುವ ಇನ್ನೊಬ್ಬ ತಮ್ಮನು ಹೀಗೆಯೇ ನೆನಪುಗಳನ್ನೇ ಕೊಡುತ್ತಾನೆ 'ಶ್ರೀ'ಯವರದ್ದು. ಇವುಗಳಲ್ಲಿ ವಿಶೇಷವೇನಿಲ್ಲ. ಅದು ಅವರ ವೈಯಕ್ತಿಕತೆಯನ್ನು ಚಿತ್ರಿಸುತ್ತದೆ ಅಷ್ಟೆ.

ಗಾಂಧೀಜಿಯನ್ನು ಒಮ್ಮೆ 'ಶ್ರೀ'ಯವರು ತಮ್ಮ ವಿದ್ಯಾರ್ಥಿಗಳ ಮುಂದೆ ಅವರ ವಾಕ್ಯ ಅತಿಸ್ತುತಿಕಾರಕ ಎಂದು ಟೀಕಿಸಿದ್ದರು. ಸರಿ, ಪತ್ರಿಕೆಗಳಲ್ಲಿ ಹುಯ್ಲೋ ಹುಯ್ಲೋ. ಶ್ರೀಕಂಠಯ್ಯನವರು ಇಂಗ್ಲಿಷ್ ರಾಜತ್ವಪರ; ಅವರನ್ನೇ ಏಕೆ ವೈಸ್ರಾಯ್ ಮಾಡಿಬಿಡಬಾರದು ಎಂದೆಲ್ಲಾ ಕೂಗಿದರು. ಶ್ರೀಯವರು ಅದಕ್ಕೆ ಮೌನವೇ ಪರಮ ಉತ್ತರ ಎಂದು ಸುಮ್ಮನಿದ್ದರು. ಅದು ಹಾಗೇ ಮಲಗಿಕೊಂಡಿತು! ನಾನೊಮ್ಮೆ ಗಾಂಧೀಜಿಯವರನ್ನು ಒಂದು ಸಿನಿಮಾ ಮಾಸಪತ್ರಿಕೆಯಲ್ಲಿ ಟೀಕಿಸಿದ್ದೆ. ಅವರು, ಸಿನಿಮಾ ನಾನು ನೋಡೇ ಇಲ್ಲ, ಅದರ ವಿಚಾರ ಏನೂ ಹೇಳಲಾರೆ ಎಂದಿದ್ದರು. ಅಂತಹವರು ಏಕೆ ನೋಡಬಾರದಾಗಿತ್ತು, ನೋಡಿ ಏನಾದರೂ ಹೇಳಬಾರದಾಗಿತ್ತೆ? ಇದೆಂತಹ ಧೋರಣೆ ಎಂದು ನಾನು ಅಂದಿದ್ದೆ. ಶ್ರೀಯವರು ಅದನ್ನು ನೋಡಿ, ಸರಿ, ಧೈರ್ಯವಾಗಿ ನೀನು ಹಾಗೆ ದೊಡ್ಡವರ ವಿಷಯದಲ್ಲಿ ನಿನಗೆ ಸರಿ ತೋರಿದ್ದನ್ನು ಹೇಳ ಬೇಕು ಅಂದರು. ಈ ಉತ್ತೇಜನದಿಂದ ಈಗ್ಗೆ ೪೦ ವರ್ಷಗಳ ಹಿಂದೆ ಬೆಂಗಳೂರಿನ ಕರ್ನಾಟಕ ಪರಿಷತ್ತಿನಲ್ಲಿ ನಾನು ಒಂದು ಸಚಿತ್ರ ಉಪನ್ಯಾಸ ಮಾಡುತ್ತಾ ಆರಂಭದಲ್ಲಿ ಕರ್ನಾಟಕ ವರ್ಣಮಾಲೆಯ ಹಿರಿಮೆಯನ್ನು ಹೇಳುತ್ತಾ 'ಶ್ರೀ'ಯವರು ಆಗ ಕೈ

ಹಾಕಿದ್ದ ಲಿಪಿ ಸಂಸ್ಕರಣವನ್ನು ಅಪಮಾರ್ಗವೆಂದು ಟೀಕಿಸಿದ್ದೆ. ಅವರೂ, ಡಿ.ವಿ.ಜಿ. ಯವರೂ ಎದುರಿಗೇ ಅಕ್ಕಪಕ್ಕದಲ್ಲಿ ಕೂತಿದ್ದು ಕೇಳಿ ನನ್ನನ್ನು ದುರುಗುಟ್ಟಿಕೊಂಡು ನೋಡುತ್ತಿದ್ದರು. ಅವರ ಲಿಪಿ ಸಂಸ್ಕರಣ ಇಂದಿಗೂ ಸಫಲವಾಗಿಲ್ಲ—ಎಂದಿಗೂ ಸಫಲವಾಗುವುದಿಲ್ಲ.

ಒಮ್ಮೆ ಬದನವಾಳದಲ್ಲಿ (೧೯೩೪) ಗಾಂಧೀಜಿಯವರು ಬಂದಿದ್ದಾಗ ನಾನು ಅವರ ಬರವಣಿಗೆ ಕಾರ್ಯದರ್ಶಿಯಾಗಿದ್ದೆ. ಅವರಲ್ಲಿ ಒಂದು ತಪ್ಪನ್ನು ಕಂಡೆ. ಒಬ್ಬ ಹುಡುಗ ಹಸ್ತಾಕ್ಷರಕ್ಕೆಂದು ಅವರ ಕೈಗೆ ಎಂಟಾಣೆ ಕೊಟ್ಟ. ಅವರು ನಾನು ಒರಿಯ ಒನಿಯ; ಹಸ್ತಾಕ್ಷರಕ್ಕೆ ಒಂದು ರೂಪಾಯಿ ಕೊಡಬೇಕು ಎಂದರು. ಹುಡುಗ ನನ್ನಲಿಲ್ಲವೆಂದು ಮುಖ ಮುಖ ನೋಡಿದ. ಗಾಂಧೀಜಿ ಹಾಗಾದರೆ ಹಸ್ತಾಕ್ಷರವಿಲ್ಲ, ಈ ಎಂಟಾಣೆ ಹರಿಜನರಿಗಾಗಿ ಕೊಟ್ಟುಬಿಡು ಎಂದು ಅದನ್ನು ಗೋಲಕಕ್ಕೆ ಹಾಕಿಕೊಂಡರು. ಹುಡುಗ ಅದಕ್ಕೆ ಸಮ್ಮತಿಸಲಿಲ್ಲ. ಇದು ತಪ್ಪಾಯಿತು ಎಂದು ನಾನು ನಂತರ ಗಾಂಧೀಜಿ ಯವರಿಗೆ ತಿಳಿಸಿದೆ. ಆಲೋಚಿಸುತ್ತೇನೆ ಎಂದು ಕೊತೂರಿನಿಂದ ಬರೆಸಿದ್ದವರು ಒಂದೆರಡು ತಿಂಗಳ ನಂತರ ಪುಣೆಯಿಂದ ಅವರ ಕಾರ್ಯದರ್ಶಿ ಪ್ಯಾರೆಲಾಲ್‌ರಿಂದ ಇದು ಸಣ್ಣ ವಿಷಯ ಅಲ್ಲಿಗೆ ಬಿಡಿ, ಎಂದು ಕೋರಿದ್ದರು. ಸಣ್ಣ ವಿಷಯದಲ್ಲೂ ಧರ್ಮ, ನೀತಿ, ಇಲ್ಲವೆ ? ಎಂದು ಈಗಲೂ ನನ್ನನ್ನು ಬಾಧಿಸುತ್ತಿದೆ.

ಕೊಡಗಿನ ನಾಪೊಕ್ಲುವಿನಲ್ಲಿ ಅಖಿಲ ಕೊಡಗು ಉಪಾಧ್ಯಾಯರ ಸಮ್ಮೇಳನದಲ್ಲಿ 'ಶ್ರೀ'ಯವರು ಅಧ್ಯಕ್ಷರು, ನಾನು ಉಪನ್ಯಾಸಕ. ಶಿವರಾಮಕಾರಂತರು ಪ್ರದರ್ಶನ ತೆರೆದವರು. 'ಶ್ರೀ'ಯವರ ಆ ವಿಭಾಷಣ ವಿಶ್ವವಿದ್ಯಾಲಯವನ್ನು ಗುಡಿಸಲ ಬಳಿಗೆ ಒಯ್ಯುವ ವಿಷಯ. ನಿರರ್ಗಳವಾಗಿ ಎರಡು ಘಂಟೆಗಳ ಕಾಲ ಭಾಷಣಮಾಡಿದರು. ಸಾವಿರಾರು ಜನರು ಮರಗಳಡಿ ನಿಂತು ಬೆಪ್ಪಾಗಿ ಕೇಳಿದರು. ಅರ್ಥವಾದ್ದು ಅವರ ಶಿಷ್ಯಂದರು ಮೂವತ್ತು ಮಂದಿಗೆ ! ಕಾರಂತರು ನಂತರ ಎರಡೇ ನಿಮಿಷದಲ್ಲಿ ಚಿಟಕಿ ಹೊಡೆದು ಪ್ರದರ್ಶನ ಅನಾವರಣ ಮಾಡಿದರು. ಸಾಯಂಕಾಲ ಜಪಾನರ ಸಂಸ್ಕೃತಿ, ಜನ ಮತ್ತು ದೇಶ ಈ ವಿಷಯವಾಗಿ ನಾನು ಸಚಿತ್ರ ಉಪನ್ಯಾಸ ಮಾಡಿದೆ. ಮೂರನೇ ದಿನವೂ ಜ್ವಾಲಾಮುಖಿಗಳೂ ಭೂಕಂಪಗಳೂ ಎಂಬ ವಿಷಯ ಚಿತ್ರ ತೋರಿಸಿ ಹೇಳಿದೆ. ಕತ್ತಲಲ್ಲಿ ನನ್ನನ್ನು ನೋಡಲಾರದೆ ಕೊನೆಯಲ್ಲಿ ಎರಡು ದೀಪಗಳ ಮಧ್ಯದಲ್ಲಿ ನನ್ನನ್ನು ನಿಲ್ಲಿಸಿ ನೋಡಿ ಜಯಕಾರ ಮಾಡಿದರು. ಮೂರನೇ ದಿನ ಮಧ್ಯಾಹ್ನ ಕಣ್ಣು ಬೆಳಕಿನಲ್ಲಿ ನನ್ನ ಒಂದು ವಿಶೇಷ ಭಾಷಣವಿಟ್ಟಿದ್ದರು. ಅದರ ನಂತರ ಶ್ರೀಯವರ ಮುಕ್ತಾಯ ಭಾಷಣವಿತ್ತು. ಆ ದೊಡ್ಡ ಚಪ್ಪರ ಮಂದಿರದಲ್ಲಿ ಸೇರಿದ್ದ ಸಾವಿರಾರು ಜನರು ನನ್ನ

ಭಾಷಣವನ್ನು ಕೇಳಿದ ನಂತರ ಒಬ್ಬೊಬ್ಬರಾಗಿ ಎದ್ದುಬಿಟ್ಟರು. ಶ್ರೀಯವರ ಭಾಷಣಕ್ಕೆ ಜನ ನಿಲ್ಲಲಿಲ್ಲ. ಅಲ್ಲಿಯ ಕಾರ್ಯಕರ್ತರು ಜನರನ್ನು "ಕೂಗಿದಂಡ್ರಾ", ಎನ್ನುತ್ತಿದ್ದರೂ ಅವರು "ಒರ್ಪೇವು" ಎನ್ನುತ್ತಾ ಎದ್ದುಬಿಟ್ಟರು. ಶ್ರೀಯವರು ಹಾಗೂ ಹೀಗೂ ಗಂಭೀರವಾಗಿ ತಮ್ಮ ಭಾಷಣಕ್ಕೆ ಮಂಗಳ ಕೊಟ್ಟರು. ನಂತರ ಅಲ್ಲಿ ಕಾವೇರೀ ದಡದಲ್ಲಿ ಪುಟ್ಟ ಗುಡ್ಡದ ಮೇಲೆ ವಿಶ್ರಾಂತಿ ಗೃಹದಲ್ಲಿ ಟೀ ಸತ್ಕಾರವಾಯಿತು. ಆಗ ಅದರಲ್ಲಿ ಕಾರಂತರು ಸುಮ್ಮನಿರದೆ ಶ್ರೀಯವರನ್ನು ಇಂದು ನಿಮ್ಮ ತಮ್ಮ ನಿಮಗೆ ಒಳ್ಳೆ 'ಬೇಸ್ತು' ಕೊಟ್ಟರು! ಎಂದು ಕೆಣಕಿದರು. ಅದಕ್ಕೆ ಶ್ರೀಯವರು ಇರಲಿ, ಅವನ ಯೋಗ್ಯತೆ ತಿಳಿದಂತಾಯಿತು, ಮುಂದೆ ಅವನು ನಾನು ಹೀಗೆ ಒಟ್ಟಿಗೆ ಸೇರಿದರೆ ಅವನ ಭಾಷಣ ವನ್ನು ಕೊನೆಗೆ ಇಟ್ಟು ಎಲ್ಲರೂ ಕಾದು ಕೂತಿದ್ದು ನನ್ನ ಭಾಷಣವನ್ನು ಕೇಳುವಂತೆ ಮಾಡಿಕೊಳ್ಳುತ್ತೇನೆ ಎಂದರು. ನನಗೆ ಪ್ರಸಂಗ ಹಿತಕರವಾಗಿರಲಿಲ್ಲ.

ನಾಯಿಯನ್ನು ಹೊಡೆಯಲು ಬಣ್ಣದ ಕೋಲು ಎಂಬ ಮಾತಿದೆ. ಒಂದು ರೀತಿಯಲ್ಲಿ 'ಶ್ರೀ'ಯವರು ಅಜ್ಞಾನಶ್ವಾನವನ್ನು ಹೊಡೆಯಲು ಜ್ಞಾನ ಬಣ್ಣದ ಕೋಲಾಗಿದ್ದರು. ಮೇಲೆ ಹೇಳಿದ ನಾಪೊಕ್ಲು ಬಳಿ ಹಳ್ಳಿಗರಿಗೆ ವಿಶ್ವವಿದ್ಯಾ ಜ್ಞಾನ ಮುಟ್ಟಿಸಲು ಜ್ಞಾನಗೋಲಾಗಿದ್ದುದು ಒಂದು ನಿದರ್ಶನ. ಇನ್ನೊಂದು ಸಲ ಅವರು ಎಸ್.ಎಸ್.ಎಲ್.ಸಿ. ಇಂಗ್ಲಿಷ್ ಪರೀಕ್ಷಕರಾಗಿ ನೇಮಿಸಲ್ಪಟ್ಟಾಗ ಅರಿಯದ ಹುಡುಗರು ತಮ್ಮ ಉತ್ತರ ಪತ್ರಿಕೆಗಳಲ್ಲಿ ಬರೆದಿದ್ದಕ್ಕೆ 5ಕ್ಕೆ 1¼. ½. 1½, ಹೀಗೆಲ್ಲಾ ಅಂಕಗಳನ್ನು ಕೊಟ್ಟಿದ್ದರು. ಶ್ರೀಯವರು ಉತ್ತಮ ಬೋಧಕರು ಎಂದಿದ್ದರೂ ಕೆಟ್ಟ ಪರೀಕ್ಷಕರು ಎಂದು ಹೆಸರುವಾಸಿ ಪಡೆದಿದ್ದರು. ಅವರು ಅಂಕ ಕೊಟ್ಟಿದ್ದ ಈ ಎಸ್.ಎಸ್.ಎಲ್.ಸಿ. ಪರೀಕ್ಷೆಯ ಒಂದು ತೆಕ್ಕೆ ಉತ್ತರ ಪತ್ರಿಕೆಗಳು ಮೇಲಿನಿಂದ ಧಾರಾಳವಾದ ಪುನರ್ ವಿಮರ್ಶೆಗಾಗಿ ವಾಪಸ್ಸು ಬಂದವು. ಬೇಸಿಗೆ ರಜದಲ್ಲಿ ಮನೆಗೆ ಬಂದಿದ್ದ ನನಗೆ ಅಣ್ಣಯ್ಯ ಅವನ್ನು ತೋರಿಸಿ ಸರಿಯಾಗಿಲ್ಲವೇ ಎಂದರು. ನಾನು ಅವರು ಕೊಟ್ಟಿದ್ದ ಅಂಕಗಳಿಗೆ 3–4–5ರಷ್ಟು ಅಂಕಕೊಟ್ಟು ತೋರಿಸಿದೆ. ಅವರು ಅವನ್ನು ಒಪ್ಪದೆ ಅಂಕಗಳು ಏನು ಬಿಟ್ಟಿ ಬಿಸಾಕಿ ಹೋಗಿದೆಯೇನೋ ಎಂದರು. ಅದಕ್ಕೆ ನಾನು ಈ ಪರೀಕ್ಷೆಗೆ ನಿನ್ನನ್ನು ಅವರು ನೇಮಿಸಿದ್ದೇ ತಪ್ಪು, ಅದನ್ನು ನೀನು ಒಪ್ಪಿಕೊಂಡದ್ದೂ ತಪ್ಪು ಎಂದೆ. ಅವರು ನನ್ನನ್ನು ಅರ್ಥಮಾಡಿಕೊಂಡು ಹೆಚ್ಚು ಕಡಿಮೆ ನಾನು ಕೊಟ್ಟಿದ್ದ ಅಂಕಗಳಷ್ಟೆ ಕೊಟ್ಟು ಕಳುಹಿಸಿಕೊಟ್ಟರು. ಅದರ ಮುಂದೆ ಅವರು ಎಸ್. ಎಸ್. ಎಲ್. ಸಿ. ಪರೀಕ್ಷಕರಾಗಲಿಲ್ಲ. ಹುಡುಗರು ಬದುಕಿಕೊಂಡರು. ಇಸೊಂದು ನಿದರ್ಶನ. ಒಕ್ಕಡೆ ವಿಶ್ವವಿದ್ಯಾಲಯದ ಪ್ರಭಾವಿ ಪ್ರಾಧ್ಯಾಪಕರು ಹಳ್ಳಿಗರಿಗೆ ಕೊಚ್ಚಲು ಹೋಗಿದ್ದರೆ

ಇನ್ನೊಕ್ಕಡೆ ಅದೇ ಮೇಧಾವಿಗಳು ಅರಿಯದ ಮಕ್ಕಳ ಜ್ಞಾನವನ್ನು ಒರೆಹಚ್ಚಲು ದೀಕ್ಷೆ ವಹಿಸಿದ್ದಾರೆ!

ಶ್ರೀರಂಗಪಟ್ಟಣದಲ್ಲಿ ಮತ್ತು ಹತ್ತಿರ ಗ್ರಾಮದಲ್ಲಿ ನಮ್ಮ ತಂದೆಗಿದ್ದ ಆಸ್ತಿಪಾಸ್ತಿಗಳನ್ನು ನಾವೆಲ್ಲರೂ ಹಂಚಿಕೊಂಡಾಗ ಅಣ್ಣಯ್ಯ ಏನೂ ಪಾಲನ್ನು ತೆಗೆದುಕೊಳ್ಳದೆ ಎಲ್ಲವನ್ನೂ ನನಗೂ ನನ್ನ ತಮ್ಮನಿಗೂ ಬಿಟ್ಟು ಬಿಟ್ಟು ವಿಭಾಗಪತ್ರಕ್ಕೆ ಹಾಗೇ ರುಜು ಹಾಕಿದರು. ಅವರ ಅಭಿಪ್ರಾಯದಲ್ಲಿ ಅವರ ತಂದೆ ತಾಯಿಗಳ ಆಶೀರ್ವಾದವೇ ಅವರಿಗೆ ಸಾಕಾಗಿತ್ತು. ಅವರ ಔದಾರ್ಯ ಅಲ್ಲಿಗೇ ನಿಲ್ಲಲಿಲ್ಲ. ನಾನು ಸಹಕಾರ ನಿಧಿಯಿಂದ ಸಾಲ ಪಡೆದು ನಂಜನಗೂಡಿನಲ್ಲಿರುವ ನನ್ನ ಮನೆಯನ್ನು ಕಟ್ಟಿಸಿಕೊಂಡಿದ್ದೆ. ಅಲ್ಲಿಗೆ ಬಂದಾಗ ಅಣ್ಣಯ್ಯ ಅದರ ಸಾಲವೆಲ್ಲ ತೀರಿತೆ ಎಂದು ನನ್ನನ್ನು ಕೇಳಿದರು. ನಾನು ಇನ್ನೊಂದು ಸಾವಿರ ಉಳಿದಿದೆ. ಇನ್ನಾರು ತಿಂಗಳಲ್ಲಿ ತೀರುತ್ತೆ ಅಂದೆ. ಹೋಗುವಾಗ ಅವರು ೧೦೦೦ ರೂ.ನ ಚೆಕ್ಕನ್ನು ನನ್ನ ಕೈಗಿತ್ತು ಆ ಸಾಲ ಯಾಕಿರಬೇಕು, ತೀರಿಸಿಬಿಡು, ಸ್ಲೇಟ್ ಒರೆಸಿಬಿಡು ಎಂದರು. ನಾನು ಹಾಗೇ ಮಾಡಿದೆ. ನನ್ನನ್ನೂ ನನ್ನ ತಮ್ಮನನ್ನೂ ಬಾಲ್ಯದಲ್ಲಿ ನಮ್ಮ ತಂದೆಯನ್ನು ಕಳೆದುಕೊಂಡ ನಂತರ ವಿದ್ಯಾಬುದ್ಧಿ ಕಲಿಸಿ ಮುಂದಕ್ಕೆ ತಂದವರೇ ಅವರು.

ಹಿಂದೆ ನಾವು ಹುಡುಗರಾಗಿ ಅವರೊಂದಿಗೆ ಇದ್ದಾಗ ಅಂಗಡಿಯಿಂದ ಮನೆಗೆ ಸಾಮಾನು ತರುವಾಗ ಸ್ವಲ್ಪ ತಿಂಡಿಪಂಡಿ ತಿಂದು ಅದರ ಬೆಲೆಯನ್ನು ಸಾಮಾನಿನೊಳಗೆ ಸೇರಿಸಿಬಿಡುತ್ತಿದ್ದೆವು. ಒಂದು ದಿನ ಮನೆಗೆ ಬಂದು ಅವರಿಗೆ ಚಿಲ್ಲರೆ ಕೊಟ್ಟರೆ ಅವರು ತಿಂಡಿ ಏನಾದರೂ ತೆಗೆದುಕೊಳ್ಳಲಿಲ್ಲವೇನೋ, ತೆಗೆದುಕೊಳ್ಳಬೇಕಾಗಿತ್ತು ಎಂದು ನಸುನಗುತ್ತಾ ಹೇಳಿದರು. ನಾವು (ನಾನು ಮತ್ತು ನನ್ನ ತಮ್ಮ) ಸುಮ್ಮನಿರುತ್ತಿದ್ದೆವು. ಎಲಾ, ಹುಡುಗರು ಮಾಡುವ ಕೆಲಸ ಅವರಿಗೆ ಗೊತ್ತು? ಅವರ ಬಾಲ್ಯದ ಅನುಭವವೇ ಇರಬೇಕು! ಅನ್ನಿಸಿತು.

'ಶ್ರೀ'ಯವರ ಸ್ವಭಾವ ಬಹಳ ಖಂಡಿತ ಮತ್ತು ಸಿಟ್ಟುಗಾರರು ಎನ್ನಬಹುದು. ಮೊದಮೊದಲು ಉರಿಮುಖರಾಗಿದ್ದರೂ ಅವರು ಬರಬರುತ್ತಾ ಶಾಂತಮುಖರೂ ಹೆಚ್ಚು ಹಸನ್ಮುಖಿಗಳೂ ಆದರು. ಇದ್ದ ಒಬ್ಬ ಮಗನ ಕಣ್ಣುಗಳು ವರುಷದ ಮಗುವಿನಲ್ಲಿ ನಾವೆಲ್ಲ ಹಿರೋಡೇ ತೋಟದ (ತಂದೆಯವರ) ಮನೆಯಲ್ಲಿದ್ದಾಗ ಕಣ್ಣು ನೋವು ಬಂದು, ಮನೆಯವರ (ನಮ್ಮ ದೊಡ್ಡಮ್ಮನ) ಅಜಾಗರೂಕತೆಯಿಂದ, ಕಣ್ಣಿನ ಔಷಧವಾದ ಮೈಲ್‌ತುತ್ತವನ್ನು ಮಗುವಿನ ಕಣ್ಣಿಗೆ ಒತ್ತಿ ತಿಕ್ಕಿದ್ದರಿಂದ (ಮಗು ಹಟಮಾಡಿ ಒರಟುತನ ಮಾಡಿದ್ದರಿಂದ) ಎರಡೂ ಕಣ್ಣುಗಳೂ (ಔಷಧಾಧಿಕ್ಯದಿಂದ) ಒರುಬರುತ್ತಾ ಹಾಗೆ ಕೊಳೆದುಹೋಗಿಬಿಟ್ಟವು. ಅನಂತರ ನಿಪುಣ ವೈದ್ಯ ಚಿಕಿತ್ಸೆಗಾಗಿ

ದಂಪತಿಗಳು ಮಗುವನ್ನು ಮದ್ರಾಸಿಗೆ ಕೊಂಡೊಯ್ದರು. ಕಾಲ ಮಿಂಚಿಹೋಗಿತ್ತು ಮಗುವನ್ನು ತೋಟದಮನೆಗೆ ಹಿಂದಕ್ಕೆ ಕರೆದು ಒಯ್ದಾಗ ಶ್ರೀಯವರ ಕಣ್ಣುಗಳಲ್ಲಿ ನೀರು ಪಳಪಳನೆ ಬಿದ್ದುದನ್ನು ಅವರು ಕರವಸ್ತ್ರದಲ್ಲಿ ಒರೆಸಿಕೊಂಡದ್ದನ್ನು ನೆನ್ನೆ ನೋಡಿದಂತೆ ಈಗಲೂ ಕಾಣುತ್ತಿದ್ದೇನೆ. ಕೆಲವೇ ವರ್ಷಗಳಲ್ಲಿ ಅವರ ಹೆಂಡತಿ (ನಮ್ಮ ಅತ್ತಿಗೆ) ಸಾಕುತ್ತಿದ್ದ ಒಂದು ಹೆಣ್ಣುಮಗುವನ್ನು ಬಿಟ್ಟುಹೋಗಿಬಿಟ್ಟರು. ನಾನು ಆಗ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದವನು ಓಡಿಬಂದು 'ಶ್ರೀ'ಯವರ ಮುಂದೆ ನಿಂತು ಬಿಕ್ಕಿ ಬಿಕ್ಕಿ ಅತ್ತುಬಿಟ್ಟೆ. ಆಗ ಅಣ್ಣಯ್ಯ ನಗುನಗುತ್ತಾ ನನ್ನನ್ನು ಸಮಾಧಾನಪಡಿಸಿದರು. ಆ ಸಮಯದಲ್ಲಿ ಹೆಂಡತಿಯನ್ನು ಕಳೆದುಕೊಂಡಿದ್ದವನು ಅವರಲ್ಲ ನಾನೇ ಆಗಿಬಿಟ್ಟಿದ್ದೆ! ಅವರ ಮನೋಭಾವ, ಸ್ಥೈರ್ಯ, ಶಾಂತತೆ ಅಷ್ಟರ ಮಟ್ಟಿಗಿತ್ತು. ಅಲ್ಲಿಂದೀಚೆಗೆ ಅವರ ಖಂಡಿತ, ಸಿಟ್ಟು, ಎಲ್ಲಾ, ಎಲ್ಲೋ ಮಾಯವಾಯಿತು. ಅವರು ಶಾಂತ ತತ್ವಜ್ಞತೆಗೆ ಇಳಿದುಬಿಟ್ಟರು. ತಾವು ಪತ್ನಿಯನ್ನು ಕಳೆದುಕೊಂಡ ಮೇಲೆ, ಪತಿ ವಿಯೋಗವಾಗಿದ್ದ ಅವರ ಹಿರಿಯ ಮಗಳು ಶಾರದಮ್ಮ ಅವರೊಂದಿಗಿದ್ದು ಗೃಹಕೃತ್ಯವನ್ನೆಲ್ಲಾ ಬಹಳ ಬಿಗಿಯಾಗಿ ಜಾಣತನದಿಂದ ನೋಡಿಕೊಂಡಿದ್ದು ಅವರಿಗೆ ಅಚ್ಚುಮೆಚ್ಚಾಗಿ ಅವರ ಹಿಂದಿನ ಕಷ್ಟಸುಖಗಳನ್ನೆಲ್ಲಾ ಮರೆಸಿಕೊಂಡಿದ್ದಳು. ಆಗ ಶ್ರೀಯವರು ತಮ್ಮ ತಪೋ ಮನೋಧರ್ಮವೋ ಎಂಬಂತೆ ಒಂದು ಹುಲ್ಲೆಕರುವನ್ನು ಸಾಕಿದ್ದರು. ಅದು ರಾತ್ರಿವೇಳೆ ಅವರ ಬಳಿಯೇ ಮಲಗುತ್ತಿತ್ತು. ಆ ಜಿಂಕೆಯ ಮರಿ ಒಂದು ದಿನ ಅವರ ಕಿರಿಯಮಗಳು ತಂಗಮ್ಮನನ್ನು ತನ್ನ ಕೊಂಬಿನಿಂದ ತಿವಿದು ಗಾಯಪಡಿಸಿತ್ತು. ಅದಕ್ಕೆ ಔಷಧೋಪಚಾರವೇನೋ ಆಯಿತು. ಆದರೆ ಶ್ರೀಯವರು ಮರಿಯನ್ನು ಬಳಿಗೆ ಸೆಳೆದುಕೊಂಡು ಬುದ್ಧಿ ಹೇಳಿದರು. ನೀನು ಇನ್ನು ಮೇಲೆ ಹೀಗೆ ಮಾಡಬೇಡ, ಅದು ನಿನ್ನಂಥ ಸಾಧು ಪ್ರಾಣಿಗೆ ಯೋಗ್ಯವಲ್ಲ ಅಂದರು. ಆ ವನ್ಯ ಪ್ರಾಣಿ ತನ್ನ ತಲೆಯನ್ನು ಕೊಡವಿತು. ತಾನು ಸಾಧು ಪ್ರಾಣಿ ಏನೂ ಅಲ್ಲ ಎಂಬರ್ಥವೋ? ಇರಬಹುದು! ಅಥವಾ ನೀವು ನನಗೆ ಹೇಳುವುದು ಬೇಡ ಎಂದಿರಬಹುದು!

ಶ್ರೀಯವರು ಕನ್ನಡಹಿತ ಸಮಾರಂಭಗಳಿಗೆ ಕರೆಸಿಕೊಳ್ಳಲು ತವಕಿಸುತ್ತಿದ್ದರು. ಅದು ನನಗೆ ಹಿಡಿಸಲಿಲ್ಲ. ಆದರೆ ಅವರ ದೃಷ್ಟಿಯೇ ಬೇರೆಯಾಗಿತ್ತು. ಅದು ಸರಿ ಎನ್ನಬಹುದಾಗಿತ್ತು.

ಶ್ರೀಯವರು ಲಾ ಡಿಗ್ರಿ ಪಡೆದಿದ್ದರೂ ತಮ್ಮ ತಂದೆಯಂತೆ ಲಾಯರಾಗಲಿಲ್ಲ. ಅವರು ಲಾಯರಾಗಿದ್ದರೂ ಅವರು ತಂದೆಯಷ್ಟೇ ಏಕೆ, ನನ್ನಷ್ಟೂ ಮುಂದೆ ಬರುತ್ತಿರಲಿಲ್ಲ! ಅವರಿಗೆ ಲಾ ಚಾಣಕ್ಯತನ ಇರಲಿಲ್ಲ! ನಮ್ಮ ತಂದೆ ಸತ್ತಾಗ ಬೆಳ್ಳೂರಿನ ಒಬ್ಬ ಜೈನ ವರ್ತಕರು ಅವರು ನಮ್ಮ ತಂದೆಗೆ ಕೊಟ್ಟಿದ್ದ ಫೀಜು ಹಣವನ್ನು

ವಾಪಸ್ಸು ಕೊಡುವುದಾಗಿ ಮಾತುಕೊಟ್ಟು ಅವರಿಗೆ ಒಂದು ಕಾಗದ ಬರೆದು ಕೊಟ್ಟು ಬಿಟ್ಟರು. ನಂತರ ನಮ್ಮ ದೊಡ್ಡಪ್ಪನ ಅಳಿಯನ ಬಾಗೆಪಳ್ಳಿ ರಾಮಣ್ಣನವರು ಅವರಿಗೆ ಬುದ್ಧಿ ಹೇಳಿದರು ಅದನ್ನು ವಾಪಸ್ಸು ಕೊಡಬೇಕಾದ್ದಿಲ್ಲವೆಂದು—ಆಗ ನಮ್ಮ ಅಣ್ಣ ಕಣ್ಣು ಕಣ್ಣು ಬಿಟ್ಟದ್ದನ್ನೂ ನಾನು ನೋಡಿದ್ದೆ—ಹಿರೋಡೆ ತೋಟದ ಮನೆಯಲ್ಲಿ ! ಶ್ರೀಯವರು ಜಡ್ಜಿಯಾಗಿದ್ದರೆ ಶೋಭಿಸುತ್ತಿದ್ದರು. ಆದರೆ ಸಾಹಿತ್ಯವೇ ಅವರಿಗೆ ಅಪ್ರತಿಮ ಕೀರ್ತಿ ತಂದಿತು. ಅದಕ್ಕೇ ಇರಬಹುದು ಅವರು ಲಾಯರಾಗಬಯಸಲಿಲ್ಲ. ಕಾನೂನಿನ ಅಥವಾ ವ್ಯವಹಾರದ ಪ್ರಶ್ನೆ ಬಂದರೆ ತಮ್ಮ ಲಾಯರ್ ಸ್ನೇಹಿತರನ್ನು ಕೇಳುತ್ತಿದ್ದರು, ನನ್ನನ್ನು ಯಾವಾಗಲೂ ಅವರು ಕೇಳಿದ್ದಿಲ್ಲ—ಕೇಳಬಾರದೇಕೋ?

ಶ್ರೀಯವರು ಪೋಸ್ಟುಕಾರ್ಡನ್ನೇ ತಮ್ಮ ಪತ್ರವ್ಯವಹಾರಗಳಲ್ಲಿ ವಿಶಿಷ್ಟವಾಗಿ ಉಪಯೋಗಿಸುತ್ತಿದ್ದರು. ಲಕ್ಕೋಟೆ (ಕವರು) ಉಪಯೋಗ ಬಹಳ ಕಡಮೆ. ಅದರ ಕಾರಣ—ಕಾರ್ಡಿನಲ್ಲಾದರೆ ಎಷ್ಟು ಬೇಕೋ ಅಷ್ಟು ಸ್ಪಷ್ಟವಾಗಿ ಬರೆದು ತಿಳಿಸಿಬಿಡಬಹುದು. ಕಾರ್ಡು ಬಂದ ಕೂಡಲೆ ಅದರ ಅಡಕ ಓದಿ ಕೂಡಲೇ ಗೊತ್ತಾಗಿ ಸಮಾಧಾನವಾಗುತ್ತೆ. ಲಕ್ಕೋಟೆ (ಕವರು) ಬಂದರೆ ಅದನ್ನು ಒಡೆದು, ಒಳಗಿನ ಕಾಗದ ಈಚೆಗೆ ತೆಗೆದು ಬಿಚ್ಚಿ ಓದಿ ನೋಡಿಕೊಳ್ಳುವವರೆಗೆ ಆತಂಕ. ಏನೋ ಉತ್ತರವೋ ಅಂತ ಅಲ್ಲದೆ ಕಾಗದದಲ್ಲಿ ಅನಾವಶ್ಯಕ ಹೆಚ್ಚಿನ ಮಾತುಗಳಿಗೂ ಅಧಿಕತನಕ್ಕೂ ಅವಕಾಶವಿರುತ್ತೆ— ಕಾಗದ ನಷ್ಟ, ಕಾಲನಷ್ಟ, ಹೆಚ್ಚು ವೆಚ್ಚ ಪ್ರಸಂಗ.

ಕೊನೆಯದಾಗಿ ಅವರ ಐಚ್ಛಿಕ ಸ್ವಭಾವವೊಂದನ್ನು ಬರೆದಿಡಲು ಮತ್ತು ಓದುಗರಿಗೆ ಅದರಲ್ಲೂ ಅವರ ಅನುಯಾಯಿಗಳೆಲ್ಲರಿಗೂ ತಿಳಿಸಲು ಅಪೇಕ್ಷಿಸುತ್ತೇನೆ. ಅವರು ತಮ್ಮ ಹೆಸರನ್ನು ಬರೆಯುವ ರೀತಿಯಲ್ಲಿ ಅದರೊಳಗಿನ ಅಕ್ಷರಗಳು ಹೀಗೇ ಇರಬೇಕೆಂದು ಪಟ್ಟುಹಿಡಿದು ಆಶಿಸುತ್ತಿದ್ದರು. ಶ್ರೀಕಂಠಯ್ಯ ಸರಿಯೋ ಶ್ರೀಕಂಠೈಯ್ಯ ಸರಿಯೋ? ಅವರು ತಮ್ಮ ರುಜು ಕನ್ನಡದಲ್ಲಿ ಮಾಡಿರುವ ಯಾವುದಾದರೊಂದು ಅವರ ಭಾವಚಿತ್ರ ನೋಡಿದರೆ ಗೊತ್ತಾಗುತ್ತೆ. ಮೈಲಾರಯ್ಯ ಸರಿಯೋ? ಮೈಲಾರೈಯ ಸರಿಯೆ? ಇಂಗಿಷಿನಲ್ಲಿ ತಮ್ಮ ಹಸ್ತಾಕ್ಷರ ದಸ್ತುಕತ್ತು Srikantia ಎಂದಿರುತ್ತಿತ್ತು. ನಾನು Srikantiah ಬರೆದರೆ ನನ್ನ ಮೇಲೆ ರೇಗುತ್ತಿದ್ದರು. ನಾನು ಅವರಿಗೆ ಹೇಳಿಬಿಟ್ಟೆ —ನಿನ್ನ ಹೆಸರನ್ನು ನೀನು ಹೇಗೆ ಬೇಕಾದರೂ ಬರೆದುಕೋ ! ನನ್ನ ಹೆಸರನ್ನು ನಾನು Sivaramiah ಎಂದೇ ಬರೆದುಕೊಳ್ಳುತ್ತೇನೆ. ಈ ಅಣ್ಣತಮ್ಮಂದಿರ ನಡುವಿನ ಜಿಜ್ಞಾಸೆ ನೋಡಿ !

ಸಾಹಿತ್ಯ ಬೆಳೆಯಬೇಕಾದರೆ ಬರಿಯ ಲಕ್ಷಣಗಳಿಗೆ, ಸೂತ್ರಗಳಿಗೆ ಕಟ್ಟುಬಿದ್ದಿರಬೇಕಾದುದಿಲ್ಲ. ಸಾಹಿತ್ಯದಿಂದ ಲಕ್ಷಣ ಸೂತ್ರಗಳೇ ಹೊರತು ಲಕ್ಷಣ ಸೂತ್ರಗಳಿಂದ ಸಾಹಿತ್ಯವಲ್ಲ. ನಮಗೆ ಯಾವುದು ಹೊಂದಿಕೊಳ್ಳುತ್ತದೆಯೋ ನಮ್ಮ ಜನರಿಗೆ ಯಾವುದರಿಂದ ತಿಳಿವಳಿಕೆಯನ್ನೂ ಜ್ಞಾನವನ್ನೂ ಸಾಹಿತ್ಯವನ್ನೂ ಸುಲಭವಾಗಿ ಕೊಡಬಹುದೋ ಅಂತಹ ಲಕ್ಷಣ ಸೂತ್ರವಿದ್ದರೆ ಇರಲಿ, ಇಲ್ಲದಿದ್ದರೆ ಹೋಗಲಿ. ಇದು ಕನ್ನಡತನದ ಒಳಗುಟ್ಟು, ಒಳಗೆ ಕುಳಿತಿರುವ ಕೆಚ್ಚು.

— 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೯೫

ಎಂ. ವಿ. ಸೀತಾರಾಮಯ್ಯ

# ವಿದ್ಯಾರ್ಥಿಯಾಗಿ ನಾನು ಕಂಡಂತೆ

ಭೈರವನ ಜವನ ಮಾರಿಯ
ಮೂರಿಯುವೊಲ್‌ನಿಂದ ಮಾರಿದತ್ತಂ ಲಲಿತಾ
ಕಾರರ ಧೀರರ ಬಂದ ಕು
ಮಾರರ ರೂಪಿಂಗೆ ತಕ್ಕುಗೊಂಡಂತಿರ್ದಂ

ಮೈಸೂರು ಮಹಾರಾಜರವರ ಕಾಲೇಜಿನ ಜೂನಿಯರ್ ಬಿ. ಎ. ತರಗತಿಯ ಗ್ಯಾಲರಿ ಸಭಾಂಗಣದಲ್ಲಿ ಕರ್ಣಾಟಕ ಸಂಘದ ಆಶ್ರಯದಲ್ಲಿ ಒಂದು ಅಪೂರ್ವವಾದ ಸಭೆ. ವಿದ್ಯಾರ್ಥಿಗಳು ಕಿಕ್ಕಿರಿದು ನೆರೆದಿದ್ದಾರೆ. ಕನ್ನಡದ ವಿದ್ಯಾರ್ಥಿಗಳಲ್ಲದೆ ಇತರ ಭಾಷೆ, ವಿಷಯಗಳ ವಿದ್ಯಾರ್ಥಿಗಳು ಸಹ ಕರ್ಣಾಟಕ ಸಂಘದ ವಿದ್ಯಾರ್ಥಿ ಸದಸ್ಯರಂತೂ ಇದ್ದೇ ಇದ್ದರು. ಮುಂಮುಂದಿನ ಕುರ್ಚಿ ಸಾಲಿನಲ್ಲಿ ಪ್ರೊ. ವೆಂಕಣ್ಣಯ್ಯ, ತೀ. ನಂ. ಶ್ರೀ, ಡಿ. ಎಲ್. ಎನ್, ರಾಳ್ಲಪಲ್ಲಿ ಅನಂತಕೃಷ್ಣ ಶರ್ಮ, ಇನ್ನೂ ಕೆಲವರು ಅಧ್ಯಾಪಕರು ಯಾರು ಯಾರು, ಸರಿಯಾಗಿ ನೆನಪಿಲ್ಲ. ಅಂದಿನ ಕಾರ್ಯಕ್ರಮದ ವಿಶೇಷ ಆಕರ್ಷಣೆಗೆ ಪ್ರೇರಕಶಕ್ತಿ ಬಿ.ಎಂ.ಶ್ರೀ ಎಂದು ಬೇರೆ ಹೇಳುವ ಕಾರಣವೇ ಇಲ್ಲ; ಹಾಗೂ ಅವರು ವಾಚನ ಮಾಡುವರು ಎಂದು ಪ್ರಕಟವಾಗಿದ್ದ ಕೃತಿಯ ಅಪೂರ್ವತೆ. ಆ ಕೃತಿ, ಜನ್ನನ 'ಯಶೋಧರ ಚರಿತೆ.' ಈ ಅಪೂರ್ವ ಕೃತಿ ಎಂ. ಎ. ರಾಮಾನುಜ ಅಯ್ಯಂಗಾರರ ಕರ್ಣಾಟಕ ಕಾವ್ಯ ಕಲಾನಿಧಿ ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದರೂ ನಾವು—ನನ್ನಂತಹ ಸಾಮಾನ್ಯ ಕನ್ನಡ ವಿದ್ಯಾರ್ಥಿಗಳು—(ಆಗ ನಾನು ಜೂನಿಯರ್ ಬಿ.ಎ. ವಿದ್ಯಾರ್ಥಿ ; ಕನ್ನಡವನ್ನು ಐಚ್ಛಿಕ ವಿಷಯವಾಗಿ ಆಯ್ಕೆ ಮಾಡಿಕೊಂಡಿದ್ದರೂ ಸಾಹಿತ್ಯ ಚರಿತ್ರೆಯ ಮಾತು ಹಾಗಿರಲಿ, ಆರ್. ನರಸಿಂಹಾಚಾರ್ಯರ ಕವಿಚರಿತ್ರೆಯ ಹಾಳೆಗಳನ್ನೂ ತಿರುವಿಹಾಕಿರಲಿಲ್ಲ) ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶರಂತಹ ಪ್ರಸಿದ್ಧ ಕವಿಗಳ ಹೆಸರುಗಳನ್ನು ಕೇಳಿದ್ದೇವೇ ಹೊರತು ಯಶೋಧರ ಚರಿತೆಯ ಕರ್ತೃ ಜನ್ನನ ಹೆಸರನ್ನು ಕೇಳಿಕೂಡ ಅರಿಯೆವು. ಅಷ್ಟು ಪರಿಚಿತವಲ್ಲದ ಕೃತಿಯನ್ನು

ವಾಚನಕ್ಕಾಗಿ ಬಿ.ಎಂ.ಶ್ರೀ ಆರಿಸಿಕೊಳ್ಳಬೇಕಿದ್ದರೆ ಅದರಲ್ಲಿ ವಿಶೇಷ ಮಹತ್ವ ಇರಲೇಬೇಕು ಎಂದು ನಮ್ಮ ಸಕಾರಣವಾದ ಕಲ್ಪನೆ.

ಈಚಿನ ದಿನಗಳಲ್ಲಿ ಜನ್ನನ ಯಶೋಧರ ಚರಿತೆಯ ಸಂಗ್ರಹ ಕಾವ್ಯಪ್ರೇಮಿಗಳಿಗೆ ಅತ್ಯಂತ ಪ್ರಿಯವಾದ ಕಾವ್ಯವಾಗಿ ಪರಿಣಮಿಸಿದೆ. ಇದರ ಶ್ರೇಯಸ್ಸು ಶ್ರೀ ಅವರಿಗೆ ಸಲ್ಲಬೇಕು. ಶ್ರೀಯವರು ಕೃತಿಯ ಕಾವ್ಯಗುಣವನ್ನೂ, ನಾಟಕೀಯತೆಯನ್ನೂ ಗುರುತಿಸಿ, ತಾವು ಸವಿದ ಕಾವ್ಯರಸವನ್ನು ಇತರರೊಂದಿಗೆ ಹಂಚಿಕೊಂಡಲ್ಲದೆ ಅವರಿಗೆ ಸಮಾಧಾನವಾಗುತ್ತಿರಲಿಲ್ಲ ಎಂದು ಕಾಣುತ್ತದೆ. ಹಳಗನ್ನಡ ಕಾವ್ಯಗಳ ರಸವತ್ತಾದ ಭಾಗಗಳನ್ನು ಸಹೃದಯರೊಂದಿಗೆ ಹಂಚಿಕೊಳ್ಳುವ ಉದ್ದೇಶದಿಂದ ಕಾವ್ಯವಾಚನ ಮಾಡುವುದನ್ನು ತಮ್ಮ ಬದುಕಿನ ಒಂದು ನೇಮವಾಗಿ ಸ್ವೀಕರಿಸಿದ್ದರು. ನಾನು ಬಲ್ಲ ಮಟ್ಟಿಗೆ, ನಾನು ಮೇಲೆ ಪ್ರಸ್ತಾಪಿಸಿದ ಕಾರ್ಯಕ್ರಮವೇ ಅವರ ಸಾರ್ವಜನಿಕ ಕಾವ್ಯವಾಚನ ಕಾರ್ಯಗಳಲ್ಲಿ ಮೊತ್ತಮೊದಲನೆಯದು. ವೇದಿಕೆಯ ಮೇಲೆ ಮುಖಾಮುಖಿಯಾಗಿ ಶ್ರೀಯವರನ್ನು ನಾನು ಕಂಡದ್ದು ಅದೇ ಮೊದಲ ಸಲ. ಅದಕ್ಕೂ ಮೊದಲು ನಾನು ಮೈಸೂರಿನ ಡಿ. ಬನುಮಯ್ಯನವರ ಕೊಲಿಜಿಯೆಟ್ ಹೈಸ್ಕೂಲಿನಲ್ಲಿ ಜೂನಿಯರ್ ಇಂಟರ್‌ಮೀಡಿಯೆಟ್ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ (೧೯೨೮) ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದ ಬಿ.ಎಂ. ಶ್ರೀಕಂಠಯ್ಯನವರು ಕನ್ನಡ ಪಾಠ ಪ್ರವಚನದ ಪರೀಕ್ಷಕರಾಗಿ ಬಂದಿದ್ದರು. ಆಗ ನಮಗೆ ಪಾಠ ಮಾಡುತ್ತಿದ್ದವರು ಕಾನಕಾನಹಳ್ಳಿ ವರದಾಚಾರ್ಯರು. ಅವರು 'ಶ್ರೀ'ಯವರ ಗುರುವೂ ಆಗಿದ್ದರು ಎನ್ನುವುದು ಆ ಸಂದರ್ಭದಲ್ಲಿಯೇ ನನಗೆ ಮನವರಿಕೆಯಾದದ್ದು. ಆ ಸಂದರ್ಭದಲ್ಲಿ ಶ್ರೀಯವರು ನಡೆದುಕೊಂಡ ರೀತಿ ಅವರ ಗುರುಭಕ್ತಿಯನ್ನು ಕಣ್ಣಿಗೆ ಕಟ್ಟುವಂತೆ ಪ್ರದರ್ಶಿಸಿತು. ಆ ಸನ್ನಿವೇಶದ ನೆನಪು ಅರ್ಧಶತಮಾನವಾದ ಮೇಲೂ ನಿನ್ನೆ ನಡೆದ ಸಂಗತಿ ಎನ್ನುವ ಹಾಗೆ ಹಚ್ಚಹಸುರಾಗಿ ಉಳಿದು ಬಂದಿದೆ. ಅದನ್ನು ತಿಳಿಸದೆ ಮುಂದುವರಿದರೆ ಈ ಸ್ಮೃತಿಚಿತ್ರ ಪರಿಪೂರ್ಣ ಎನಿಸದು.

ಪ್ರಾತಃಸ್ಮರಣೀಯರಾದ ಗುರುವರ್ಯ ಕಾನಕಾನಹಳ್ಳಿ ವರದಾಚಾರ್ಯರು ಜೈಮಿನಿ ಭಾರತದ 'ಚಂದ್ರಹಾಸನ' ಬಾಲ್ಯವನ್ನು ವರ್ಣಿಸುವ ಕಾವ್ಯ ಭಾಗವನ್ನು ಪಾಠ ಮಾಡುವುದಕ್ಕೆ ತೊಡಗಿದ್ದಾರೆ. ವರದಾಚಾರ್ಯರು ಇತರ ಅಧ್ಯಾಪಕರುಗಳಂತೆ ನಿಂತುಕೊಂಡಾಗಲಿ ಕುರ್ಚಿಯ ಮೇಲೆ ಕುಳಿತಾಗಲಿ ಪಾಠಮಾಡುವುದು ಅವರ ರೂಢಿಯಲ್ಲ. ಆಗಿನ ಕಾಲದ ಪಂಡಿತರ ವೇಷ ಎಂದರೆ, ಪಂಚೆ ಉಟ್ಟು ಶಾಲು ಹೊದೆದು, ತಲೆಗೂ ಒಂದು ಶಾಲನ್ನೇ ಬಿಗಿದುಕೊಳ್ಳುವುದು. ತಲೆಯ ಶಾಲು ರುಮಾಲು ಬಿಚ್ಚಿಹೋಗುವ ಪ್ರಸಂಗಗಳೂ ಇಲ್ಲದಿರುತ್ತಿರಲಿಲ್ಲ. ನಮ್ಮ ವರದಾಚಾರ್ಯರ ವೇಷ

ಭೂಷಣ ಪುರಾತನ ನೂತನಗಳ ಸಂಗಮ; ಶಾಲನ್ನು ಹೊಸೆಯುವ ಬದಲು ಯಾರದ್ದೋ ಯಾವುದೋ ಹಳೆಯ 'ಓಪನ್ ಕಾಲರ್'ನ ಅಂಗಿಯನ್ನೇ ಕಾಲರಿಗೆ ಸೇಫ್ಟಿಪಿನ್ನು ಚುಚ್ಚಿಕೊಂಡು ಮುಚ್ಚುಕಾಲರಿನ (Close-Collar) ಅಂಗಿ ಮಾಡಿಕೊಂಡು ಅದನ್ನು ನಮ್ಮ ಗುರುಗಳು ತಗುಲಿಹಾಕಿಕೊಂಡಿರುವರು. ಉಡಿಗೆ ಉತ್ತರೀಯಗಳಿಗೆ ಮೇಲು ಕೋಟೆ ಅಂಚಿನ 'ಪತ್ತಾರು'. ತಲೆಗೆ, ಯಥಾಪ್ರಕಾರ, ಜಿರಲೆತಿಂದ, ಜರಿ ಕಿತ್ತುಬಂದ ಅಚ್ಚಗೆಂಪಿನ ಶಾಲೀ ಮುಂಡಾಸು. ತಿಂಗಳ ಮೇಲೆ ಬೆಳೆದು ಕಟಾವಾಗದೆ ನಿಂತ, ಉಪ್ಪುಮೆಣಸು ಬೆರೆತ ಬಣ್ಣದ, ಕೆಳಮೊಗದ ಕೂದಲ ಬೆಳೆ—ಹಣೆತುಂಬ ನೋಡುವವರ ಕಣ್ಣಿಗೆ ತಾಡಿಸುವ ಊರ್ಧ್ವಪುಂಡ್ರ. ತುಂಟ ವಿದ್ಯಾರ್ಥಿಗಳ ಲೇವಡಿ ಕುಚೋದ್ಯಗಳಿಗೆ ಪಕ್ಕಾಗದ ಕನ್ನಡ ಮುನಿಷಿಗಳೇ ಆಗಿನ ದಿನಗಳಲ್ಲಿ ವಿರಳ. ಹೀಗಿರುವಲ್ಲಿ, 'ಅಣ್ಣಯ್ಯ' ಎಂಬ ಮಾತು ವರದಾಚಾರ್ಯರ ಬಾಯಿಂದ ಹೊರಬೀಳುವುದೇ ತಡ, ತುಂಟ ಪ್ರಶ್ನೆ ಕೇಳಲು ಎದ್ದು ನಿಂತ ತುಂಟ ಪೋರ ಯಾವನೇ ಆದರೂ ಬಾಲ ಮುದುಡಿ ಕುಳಿತುಬಿಡುತ್ತಿದ್ದ !

ಅನನ್ಯಸಾಧಾರಣ ವ್ಯಕ್ತಿತ್ವದ ಪೂಜ್ಯ ಗುರುಗಳ ಪಾಠ ಪ್ರವಚನವನ್ನು ಪರೀಕ್ಷೆಮಾಡಲು ಶಿಷ್ಯ ಬಿ. ಎಂ. ಶ್ರೀ, ಮೊದಲೇ ತಿಳಿವಳಿಕೆ ಕೊಟ್ಟಿದ್ದ ಪ್ರಕಾರ, ಶಾಲೆಯ ಮಹಡಿಯ ಮೇಲೆ ನಡೆಯುತ್ತಿದ್ದ ನಮ್ಮ ತರಗತಿಗೆ ಬಂದರು. ವರದಾಚಾರ್ಯರು ಎಂದಿನಂತೆ ವೇದಿಕೆಯ ಮೇಲಿದ್ದ ಮೇಜಿನ ಮೇಲೆ ಕುಳಿತು ಜೈಮಿನಿ ಭಾರತದ ಪದ್ಯವನ್ನು ತಮ್ಮದೇ ಆದ ಧಾಟಿಯಲ್ಲಿ ರಾಗವಾಗಿ ವಾಚನ ಮಾಡುತ್ತಿದ್ದಾರೆ. ಬಿ.ಎಂ.ಶ್ರೀ. ಅಂದು ಬರುವುದು ಆಚಾರ್ಯರಿಗೆ ಗೊತ್ತಿದ್ದಿತ್ತೆ. ಯಾವ ವೇಳೆಗೆ ಎನ್ನುವುದು ಗೊತ್ತಿರಲಿಲ್ಲವೇನೋ. ಪಾಠ ಪ್ರಾರಂಭವಾಗಿ ಹತ್ತು ನಿಮಿಷ ಆಗಿರಬಹುದು. ಬಿ. ಎಂ. ಶ್ರೀಯವರು ತರಗತಿಯೊಳಕ್ಕೆ ಗಂಭೀರವಾಗಿ ನಡೆದು ಬಂದರು. ಅವರು ಬಂದದ್ದನ್ನು ಗಮನಿಸಿ, ಆಚಾರ್ಯರು ತಟ್ಟನೆ ಮೇಜಿನಿಂದ ಕೆಳಕ್ಕಿಳಿದು, ಬಿ.ಎಂ.ಶ್ರೀಯವರನ್ನು ಸ್ವಾಗತಿಸಿ ಅವರಿಗಾಗಿಯೇ ಹಾಕಿಸಿದ್ದ ಇನ್ನೊಂದು ಕುರ್ಚಿಯಲ್ಲಿ ಕುಳಿತುಕೊಳ್ಳಬೇಕೆಂದು ಕೇಳಿಕೊಂಡರು. ಬಿ.ಎಂ.ಶ್ರೀ ಆಚಾರ್ಯರಿಗೆ ಕೈಮುಗಿದು ಕುಳಿತುಕೊಂಡರು. ಆಗ ಅವರ ಮುಖದ ಮೇಲೆ ಮುಗುಳುನಗೆ ಹಾದು ಹೋಗಿತ್ತು. ಕಾರಣ ಆಚಾರ್ಯರು ಮೇಜಿನ ಮೇಲಿಂದ ಇಳಿಯುವ ರಭಸದಲ್ಲಿ ತಲೆಗೆ ಸುತ್ತಿದ್ದ ಶಾಲು ರುಮಾಲು ನಸು ಬಿಚ್ಚಿ ಹೋಗಿತ್ತು. ನಾವು ವಿದ್ಯಾರ್ಥಿಗಳು ಒಳಗೊಳಗೇ ನಗುತ್ತಿದ್ದೆವು. ಬಹುಶಃ ಬಿ. ಎಂ. ಶ್ರೀಗೂ ಅದೇ ಕಾರಣಕ್ಕಾಗಿ ನಗೆ ಮೂಡಿರಬೇಕು. ವರದಾಚಾರ್ಯರು ರುಮಾಲನ್ನು ಸರಿಪಡಿಸಿಕೊಂಡ ಮೇಲೆ, ಬಿ.ಎಂ.ಶ್ರೀಯವರು "ನಮಗೂ ತಾವು ಹೀಗೆಯೇ ಅಲ್ಲವೇ ಪಾಠ ಹೇಳುತ್ತಿದ್ದದ್ದು,

ತಾವು ದಯವಿಟ್ಟು ಮೊದಲಿನ ಹಾಗೆಯೇ ಪಾಠ ಮುಂದುವರಿಸಬೇಕು. ನಾನು ತಮ್ಮ ಪಾಠವನ್ನು ಕೇಳುವುದಕ್ಕೆ ಬಂದಿದ್ದೇನೆಯೇ ಹೊರತು ಪರೀಕ್ಷೆ ಮಾಡುವುದಕ್ಕಲ್ಲ" ಎಂದರು. ಪಾಠ ಮುಂದುವರಿಯಿತು. ಬಿ. ಎಂ. ಶ್ರೀ. ಪಕ್ಕದಲ್ಲಿ ಕುಳಿತಿರುವುದರ ಅರಿವೇ ಇಲ್ಲವೋ ಏನೋ ಎಂಬಂತೆ ಗುರುಗಳು ಪಾಠ ಮಾಡಿದರು. ಬಿ.ಎಂ.ಶ್ರೀ. ಪೀರಿಯಡ್ ಮುಗಿಯುವವರೆಗೂ ಕುಳಿತಿದ್ದರು. ಎದ್ದು ಹೋಗುವಾಗ—"ನಿಮ್ಮ ಪಾಠ ಕೇಳಿದ ಯಾವ ಶಿಷ್ಯರಿಗೆ ತಾನೆ ಕನ್ನಡ ಕಾವ್ಯದಲ್ಲಿ ಪ್ರೀತಿ ಹುಟ್ಟುವುದಿಲ್ಲ ?" ಎಂದು ನಮಸ್ಕರಿಸಿ, ಗುರುಗಳನ್ನು ಬೀಳ್ಕೊಂಡರು. ಬಿ. ಎಂ. ಶ್ರೀ. ಅವರಿಗೆ ವರದಾಚಾರ್ಯರು ಕನ್ನಡ ಪಾಠ ಹೇಳಿ, ಅವರಿಗೆ ಹಳಗನ್ನಡ ಕಾವ್ಯದಲ್ಲಿ ಅಕ್ಕರೆ ಹುಟ್ಟಿಸಿದರು ಎಂದು ಈ ಪ್ರಸಂಗದಿಂದ ನನಗೆ ಮನವರಿಕೆಯಾಯಿತು. ಅಂದು, ಗುರುಗಳ ಪಾಠವನ್ನು ಎಂದಿನಂತೆಯೇ ನಾನು ಗಮನವಿಟ್ಟು ಕೇಳುತ್ತಿದ್ದೆನಾದರೂ ನಾನು ಆಗಾಗ್ಗೆ ಬಿ.ಎಂ.ಶ್ರೀಯವರ ಮುಖದ ಕಡೆಗೆ ದೃಷ್ಟಿ ಹಾಯಿಸುತ್ತಿದ್ದೆ. ೧೯೨೭ರಲ್ಲಿ ನಾನು ಎಸ್. ಎಸ್. ಎಲ್. ಸಿ. ತರಗತಿಯ ವಿದ್ಯಾರ್ಥಿಯಾಗಿದ್ದಾಗ ತೀ. ನಂ. ಶ್ರೀ ಅವರಿಂದ ನನ್ನ ಹುಟ್ಟು ಹಬ್ಬದ ಉಡುಗೊರೆಯಾಗಿ ಕೈಗೆ ಬಂದಿದ್ದ "ಇಂಗ್ಲಿಷ್‌ಗೀತ" ಗಳನ್ನು ಓದಿ ಪ್ರಭಾವಿತನಾಗಿದ್ದ ನನಗೆ* ಅದರ ಕರ್ತೃವನ್ನು ನೋಡುವ ಹೆಬ್ಬಯಕೆ. ಅದು ತೀರಿತು ಅಂದು. ಕವಿ ಚೆಲುವನಾಗಿರಲೇ ಬೇಕು, ಅವನ ಮುಖದಲ್ಲಿ ದಿವ್ಯವಾದ ಕಳೆ ತುಂಬಿರಬೇಕು ಎನ್ನುವ ನನ್ನ ತಾರುಣ್ಯದ ಕಲ್ಪನೆ ಹುಸಿಯಾಗಲಿಲ್ಲ. ಅವರ ಮುಖದ ಸೊಬಗಿನ ವಿವರಗಳನ್ನು ವರ್ಣಿಸಬಹುದು. ಈ ಮಾತಿನ ಚಿತ್ತಾರ ಬಿಡಿಸುವ ಕುಸುರಿ ಕೆಲಸವನ್ನು 'ಶ್ರೀ'ಯವರ ಪರಮ ಶಿಷ್ಯರಲ್ಲಿ ಒಬ್ಬರಾದ, ನನ್ನ ಗುರು ಸ್ಥಾನೀಯರಾದ ಡಾ. ಎಸ್. ವಿ. ರಂಗಣ್ಣನವರು ಈಗಾಗಲೇ ಅನನುಕರಣೀಯವಾಗಿ ಮಾಡಿಬಿಟ್ಟಿರುವುದರಿಂದ ನಾನು ಅದಕ್ಕೆ ಕೈಹಾಕಿ ಸೋಲುವುದಕ್ಕೆ ಇಷ್ಟಪಡುವುದಿಲ್ಲ. ಆದ್ದರಿಂದ ಅವರ ಎದೆ ತುಂಬಿ ಬಂದ ಮಾತುಗಳನ್ನೆ ಉದ್ಧರಿಸಿ, ಅವರ ಮಾತಿನಲ್ಲಿ ಅತ್ಯುಕ್ತಿ ಇಲ್ಲ, ಅದು ಸ್ವಭಾವೋಕ್ತಿ, ಎಂದು ಹೇಳಿ ಅವನ್ನು ಸಮರ್ಥಿಸಿ ಸಂತೋಷಪಡುತ್ತೇನೆ.

"ದುಂಡುದುಂಡಾದ, ಮಧ್ಯ ಎತ್ತರದ, ಭವ್ಯ ದೇಹಾಕೃತಿ ; ಅಗಲವಾದ, ನಸುಗೆಂಪಿನ, ಗಂಭೀರ ಹಣೆ ; ಉಬ್ಬಿದ ತಿಳಿಗೆಂಪಿನ ಲವಲವಿಕೆಯ ಕೆನ್ನೆಗಳು;

---

* ಇಂಗ್ಲಿಷ್ ಗೀತಗಳ ಪ್ರಭಾವಕ್ಕೆ ಒಳಗಾಗಿ ನಾನು ೧೯೨೮, ೧೯೨೯ ರಲ್ಲಿ ಬರೆದ ಅನುವಾದಿತ ಹಾಗೂ ಸ್ವತಂತ್ರ ಕವನಗಳು ಹಲವನ್ನು 'ಮೊದಲ ಹೆಜ್ಜೆ' (೧೯೮೨) ಎಂಬ ಹೆಸರಿನಲ್ಲಿ ಪ್ರಕಟಿಸಿದ್ದೇನೆ. (ರಾಘವ ಪ್ರಕಾಶನ, ಬೆಂಗಳೂರು-೧೯, ಬೆಲೆ ರೂ. ೫).

ತೀಕ್ಷ್ಣವೂ ಆಲೋಚನಾಪೂರಿತವೂ ಅತ್ಯುತ್ಸಾಹ ಸೂಚಕವೂ ನಗುವನ್ನು ಸೂಸುವುದೂ ಆದ ಉಜ್ವಲ ಕಾಂತಿಯ ಕಣ್ಣುಗಳು; ಸ್ವಲ್ಪ ಸಣ್ಣದಾದರೂ ಮುಖಕ್ಕೆ ಮುದ್ದಾಗಿ ಹೊಂದಿಕೊಂಡ ನಾಸಿಕ; ಮಂದಸ್ಮಿತದಿಂದ ಕೂಡಿದ್ದರೂ ದೃಢತೆ ಕಾಠಿಣ್ಯಗಳನ್ನು ವ್ಯಕ್ತಪಡಿಸುವ ಸ್ಪಷ್ಟ ತುಟಿಗಳು; ಕೆಳಗಲ್ಲದ ಹಿಂಬದಿಯಿಂದ ಮೇಲಕ್ಕೆದ್ದು, ಕೆಳಗುಳಿಯೊಂದರಿಂದ ಕೊಂಚ ಇಬ್ಬಗೆಯಾದ ನುಣ್ಣನೆಯ ರಂಜಕ ಗಲ್ಲ; ಎಲ್ಲಕ್ಕಿಂತ ಮಿಗಿಲಾಗಿ, ಲೋಚನಾಗ್ರದಿಂದ ಅವುಡಿನವರೆಗೆ ಇಳಿದು ಬಂದು, ಕವುಳುಗಳನ್ನು ಮೂಗು ಬಾಯಿಗಳಿಂದ ಪ್ರತ್ಯೇಕಿಸುತ್ತ, ಗೆಲವಿನಿಂದ ಕೂಡಿದ ಎರಡು ಗೀರುಗಳು; ಒಟ್ಟಿನಲ್ಲಿ ಒಂದು ಸಾರಿ ನೋಡಿದರೆ ಸಾಕು, ಪ್ರೇಕ್ಷಕನ ಚಿತ್ತಭಿತ್ತಿಯಲ್ಲಿ ಕೊರೆದು ನಿಲ್ಲುವ, ಅಂಬಾರಿ ಆನೆಯಂದದ ಠೀವಿಯ ಮುಖಮುದ್ರೆ; ಏರಲೂ ಬಲ್ಲ ಇಳಿಯಲೂ ಬಲ್ಲ, ಇಂಪಾದ ಕುಗ್ಗದ ದನಿ; ಆಗಾಗ ಮೇಲಕ್ಕೆದ್ದು, ಪ್ರತಿಪಾದಿಸುವ ಅಂಶವನ್ನು ಒತ್ತಿ ಹೇಳುವ ಭಂಗಿಯನ್ನು ತಾಳುವ, ಉಚಿತಾಕಾರದ ದುಂಡಾದ ಕೈಗಳು; ತಾವರೆಯಂತೆ ಕೆಂಪಾಗಿ ಕೋಮಲವಾದ ಅಂಗೈ; ಹಾಗೆಯೇ ರಕ್ತ ಸೋರುತ್ತದೆಯೋ ಎನ್ನುವಂತೆ ಕಾಣುತ್ತಿದ್ದ ಶುಭ್ರಸುಂದರವಾದ ಹೆಜ್ಜೆಗಳು;....ಆ ಅಂಗೈ ಆ ಅಂಗಾಲನ್ನು ಹತ್ತಿರ ಕುಳಿತು ದರ್ಶಿಸಿದವನು ಧನ್ಯ; ಏತಕ್ಕೆಂದರೆ ಅವುಗಳ ಮೇಲೆ ನಿಷ್ಕಳಂಕಿಯ ಸಂಯಮಶಾಲಿಯ ತಪಸ್ವಿಯ, ಗುರುತು ಸ್ವಚ್ಛವಾಗಿ ಒತ್ತಿದಂತಿದ್ದಿತು."*

ರಂಗಣ್ಣನವರ ವರ್ಣನೆ 'ಶ್ರೀ'ಯವರು ತೀರಿಕೊಂಡ ಮೇಲೆ ೧೯೪೮ರಲ್ಲಿ ಬರೆದದ್ದು. ನೆನಪಿನಿಂದ ಬರೆದದ್ದು. ಆದರೆ, ಮಾಸದ ನೆನಪು. ಯಾರೇ ಆಗಲಿ, ಒಂದು ಸಲ ನೋಡಿದರೆ ಸಾಕು, 'ಶ್ರೀ'ಯವರ ಮುಖಮುದ್ರೆ ನೋಡಿದವರ ಮನಃಪಟಲದ ಮೇಲೆ ಅಚ್ಚೊತ್ತಿ ನೆನಪಿನಲ್ಲಿ ನಿಲ್ಲುವಂಥದು. ಅವರ ನೆಚ್ಚಿನ ಶಿಷ್ಯರು ಅವರನ್ನು ನೂರಾರು ಸಲ ನೋಡಿರತಕ್ಕವರು. ಕನ್ನಡ ತಾಯ ಕೃಪೆಯಿಂದ ನನಗೂ ಈ ಭಾಗ್ಯ ಲಭಿಸಿದೆ. "ಆರಂಕುಸಮಿಟ್ಟೊಡಂ ನೆನೆವುದೆನ್ನ ಮನಂ, ಗುರುವರ್ಯ ನಾಸ್ಯಮಂ". ಈ ಆಸ್ಯವನ್ನು, ಕೆಂದಾವರೆಮೊಗಮಂ, ನೋಡಿದಾಗ, "ತಾವರೆಯ ಹೊಸ ಕೆಂಪು, ತಾವರೆಯ ಹೊಸ ಅರಳ ಹೊಳೆವ ಕೆಂಪು" ಎಂಬ ಶ್ರೀಯವರ ಗೀತವೊಂದರ ಸಾಲು ನೆನಪಿಗೆ ಬರುತ್ತದೆ. ಮುಖದ ಕೆಂಪು ಸರಿಯೆ. ಅವರ ಅಂಗೈ ಅಂಗಾಲುಗಳ ರಕ್ತ ಚಿಮ್ಮುವ ಕೆಂಪನ್ನು ಕಾಣಬೇಕಾದರೆ ಅವರು ಸಾಧಾರಣ ಮನೆಯುಡುಪಿನಲ್ಲಿ ಕುಳಿತಿದ್ದಾಗಲೋ ಶತಪಥ ತಿರುಗುತ್ತಿದ್ದಾಗಲೋ ನೋಡಬೇಕಿತ್ತು. ಮನೆಯಲ್ಲಿ ಅವರ ಉಡುಪು ಎಂದರೆ, ಅಚ್ಚ ಬಿಳಿಯ ಟ್ವಿಲ್ ಬಟ್ಟೆಯ

* 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' (ಭಾಗ-೧), ಮೈಸೂರು; ೧೯೪೮; ಪೀಠಿಕೆ, ಪು. ೧೪.

ಷರಟು ; ಮೇಲುಕೋಟೆ ಗುಂಡಂಚಿನ ತಡಪುಸುತ್ತಿದ್ದ ಪಂಚೆ. ಅವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ನಾನು ಅಲ್ಲಿ ಸಹಾಯಕ ಕಾರ್ಯದರ್ಶಿ. ಕಚೇರಿಯ ಕೆಲಸಕ್ಕಾಗಿ ಅವರ ಮನೆಗೆ ಹೋದಾಗಲೆಲ್ಲ ಅವರನ್ನು ನಾನು ಕಾಣುತ್ತಿದ್ದದ್ದು ಇದೇ ಉಡುಪಿನಲ್ಲಿ. ಇಂಥ ಸನ್ನಿವೇಶದಲ್ಲಿ ಅವರ ನಡೆ ನುಡಿ ಎಲ್ಲ ತೀರ ಸರಳ ; ಸಲಿಗೆಯ ಮಾತು, ಎಷ್ಟು ಬೇಕೋ ಅಷ್ಟು ; "ಇನ್ನೇನೂ ಇಲ್ಲವಲ್ಲ", ಎಂದಾಗ, ಅವರ ಇಂಗಿತ ಅರಿತ ನಾನು, 'ಬರ್‍ತೀನಿ' ಎಂದು ಹೇಳಿ, ಹೊರಟುಬಿಡುತ್ತಿದ್ದೆ.

ವೇದಿಕೆಯ ಮೇಲೆ ನಿಂತು ತರಗತಿಯ ಪಾಠವೇ ಆಗಲಿ, ಸಾರ್ವಜನಿಕ ಭಾಷಣವೇ ಆಗಲಿ, ಜರಿಯ ಪೇಟ ಧರಿಸಿ ಸೂಟು-ಧಾರಿಯಾದ ಅವರ ಜರ್ಬೇ ಜರ್ಬು. ಜಂಬವಿಲ್ಲದ ಜರ್ಬು. ರಾಜಗಾಂಭೀರ್ಯ. ವಾಗ್ವಿಲಾಸವನ್ನು ಮೆರೆಯಲು ಧರೆಗಿಳಿದ ವಾಚಸ್ಪತಿ.

ಬಿ.ಎಂ.ಶ್ರೀ ಅವರು ಯಶೋಧರ ಚರಿತ್ರೆಯನ್ನು ವಾಚನ ಮಾಡಿದ ಸಂಗತಿಯನ್ನು ಈ ಮೊದಲೇ ಪ್ರಸ್ತಾಪ ಮಾಡಿದ್ದೇನೆ. ಆಗಲೇ ನಾನು ಅವರನ್ನು ವೇದಿಕೆಯ ಮೇಲೆ ಮೊದಲಸಲ ಕಂಡದ್ದು. "ಮಾರಿದತ್ತಂ ಲಲಿತಾಕಾರದ ಬಂದ ಕುಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ" ಎಂಬ ಮಾತನ್ನು ಅವರು ವಾಚಿಕಾಭಿನಯವಾಗಿ ಉಚ್ಚರಿಸಿದ ಬಗೆ ಇಂದಿಗೂ ನನ್ನ ಕಿವಿಯಲ್ಲಿ ಮೊರೆಯುತ್ತಿದೆ. 'ಠಕ್ಕು' ಎಂಬ ಪದದ ಉಚ್ಚಾರಣೆಯ ಕಾಕುವಿನಲ್ಲಿ ಕುಮಾರರ ರೂಪನ್ನು ಕಂಡು ಬೆರಗಾಗಿ ಮೂಗುವಟ್ಟು ಕರವಾಳದಿಂದ ಪೊಯ್ಯದೆ ನಿಂತ ಮಾರಿದತ್ತನ ಚಿತ್ರ ನನ್ನ ಬಗೆಗಣ್ಣ ಮುಂದೆ ನಿಚ್ಚಳವಾಗಿ ಸುಳಿಯಿತು. ಯಶೋಧರ ಚರಿಯ ಈ ಪದ್ಯವನ್ನು ಓದಿದಾಗಲೆಲ್ಲ ಮಾರಿದತ್ತನ ಭಂಗಿಯೊಂದಿಗೆ 'ಶ್ರೀ'ಯವರ ಕಂಠಶ್ರೀಯ ಪಲುಕುಗಳೂ .ಮನಸ್ಸಿನಲ್ಲಿ ಮರುಕೊಳಿಸುತ್ತವೆ. ಅಂತೆಯೇ, ಮೃತ್ಯುಸಂಮುಖದಲ್ಲಿ ನಿಯತಿಯ ಅನಿವಾರ್ಯತೆಯ ಬಗೆಗೆ ಅಭಯರುಚಿ ಅಭಯಮತಿಗೆ—"ನಿಯತಿಯನಾರ್ ಮೀರಿದಪರ್, ಭಯವೇವುದೊ, ಮುಟ್ಟಿದೆಡೆಗೆ ಸ್ಥೈರಿಸುವುದೆ"—ಎಂದು ಹೇಳಿದ ಸಮಾಧಾನದ ಮಾತನ್ನಾಗಲಿ, 'ಅಣ್ಣನ ಮಾತಂ ಮನಸೊಳ್ ತಿಣ್ಣನೆ ತಳೆದು', "ಭವಪ್ರಕೃತಿ ವಿಕೃತಿ"ಯನ್ನು ಅರಿತ ತಂಗಿ ಅಣ್ಣನಿಗೆ—

ಎನಿತೊಳವಪಾಯ ಕೋಟಿಗ
ಳನಿತರ್ಕಂ ಗೇಹಮಲ್ತೆ ದೇಹಮಿದಂ ನೆ
ಟ್ಟನೆ ಪೊತ್ತು ಸುಖಮನಱಸುವ
ಮನುಜಂ ಮೊರಡಿಯೊಳೆ ಮಾದುಪಲಮನಱಸದಿರಂ

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಬೇಡಿದ ಕಾಡೊಳ್ ಮಱಿಯಾ
ಯ್ತೀಡಾಡುವವಿದಱ ಪೊಱಿಯನೆನಗಂ ನಿನಗಂ
ಮೂಡುವ ಮುೞುಗುವ ದಂದುಗ
ಮಾಡಿದ ಪೊಲನುಂಡ ಮರ್ದು ಕಂಡ ವಿಚಾರಂ

ಎಂದು ಅಣ್ಣನಿಗೆ ಹೇಳಿದ ವೈರಾಗ್ಯದ ಮಾತನ್ನಾಗಲಿ, "ಪುಳಿಂದನ

"ಕಣೆಗಟ್ಟಿನಿಂದ ವನಹರಿಣಿ" ಅಮೃತಮತಿ—
ಕರಿದಾದೊಡೆ ಕತ್ತುರಿಯುಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
ಸುರಚಾಪಮನಿಳಿಕ್ಕೆವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್

ಒಲವಾದೊಡೆ ರೂಪಿನ ಕೋ
ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ
ಫಲಮೇನ್ ಇಂದೆನಗಾತನೆ
ಕುಲದೈವಂ ಕಾಮದೇವನಿಂದ್ರಂ ಚಂದ್ರಂ

ಎಂದು, ಗೆಳತಿ, ಅಷ್ಟವಂಕನ ಕುರೂಪನ್ನು ವರ್ಣನೆ ಮಾಡಿದಾಗ ಒಲವಿಗೆ ತೆತ್ತ ಮನಸ್ಸನ್ನು ಗಟ್ಟಿಮಾಡಿ ತನ್ನ ನಿಲುವನ್ನು ಸಮರ್ಥಿಸಿ ಆಡಿದ ತರ್ಕಬದ್ಧವಾದ ಮಾತನ್ನು ತಾವೂ ಒಪ್ಪುವಂತೆ ಒತ್ತುಕೊಟ್ಟು ಓದಿದಾಗ ಆಗಲಿ; ಪ್ರಿಯಪತ್ನಿಯ ಅಪಾತ್ರಪ್ರಣಯದ ದುರ್ವ್ಯವಹಾರವನ್ನು ಕಣ್ಣಾರೆ ಕಂಡು, ಮನಸ್ಸು ರೋಸಿ, ಅವಳನ್ನೂ ಅವಳ ಮಿಂಡನನ್ನೂ ತನ್ನ ಖಡ್ಗದಿಂದ ಎರಡು ತುಂಡು ಮಾಡಬೇಕೆಂದು ಮನದಂದ "ಆಗಳ್ ಬಾಳ್ ನಿಮಿರ್ದುದು ತೋಳ್ ತೂಗಿದುದು," ಆದರೂ ಧೃತಿ ಬಂದು, ಆ ಹುಳುಕರನ್ನು ಇರಿಯಲೊಲ್ಲದೆ ಹೇಸಿ ಹಿಂದಿರುಗಿದ ಸನ್ನಿವೇಶವನ್ನು ಸಾಭಿನಯವಾಗಿ ಓದಿದಾಗ ಆಗಲಿ; ಇಂಥ ಯಾವ ಯಾವ ರಸವತ್ಸನ್ನಿವೇಶಗಳು ಕಾವ್ಯದಲ್ಲಿ ಉಂಟೋ ಅವನ್ನು ಮಾತ್ರ ಆಯ್ದುಕೊಂಡು, ನಡುನಡುವೆ ಕಥೆಯ ಸರಣಿಯ ಕುಣಿಕೆಗಳನ್ನು ಪರಿಚಯ ಮಾಡಿಕೊಡುತ್ತ, ರಸ ಭಾವಾನುಗುಣವಾಗಿ ದನಿಯನ್ನು ಏರಿಸುತ್ತಾ ತಗ್ಗಿಸುತ್ತಾ, ತಾವೇ ಸ್ವತಃ ರಸಾನಂದವನ್ನು ಅನುಭವಿಸಿದಾಗ ಕ್ಷಣಕಾಲ ಕಣ್ಣನ್ನು ಮುಚ್ಚುತ್ತ, ಇಡಿಯ ಕಾವ್ಯವನ್ನು ಓದಿದ ರೀತಿ, ಸಾಹಿತ್ಯ ವಿದ್ಯಾರ್ಥಿಯಾದ ನನ್ನ ಬದುಕಿನಲ್ಲಿ ನಾನು ಪಡೆದ, ಮರೆಯಲಾಗದ, ಸಂಗತಿ.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಕೆಲವು ವರ್ಷಗಳಾದರೂ ಅವರು ಜನ್ನನ ಯಶೋಧರ ಚರಿತೆಯನ್ನು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ನಡುವೆ ಮಾತ್ರವಲ್ಲದೆ ಸಾಮಾನ್ಯ ಜನಕ್ಕೂ ಓದಿ ತಿಳಿಯ ಹೇಳುವ ಕರ್ತವ್ಯವನ್ನು ಹೊತ್ತಂತೆ ಕಾಣುತ್ತದೆ. ಅವರು ರಿಜಿಸ್ಟ್ರಾರ್ ಮತ್ತು ಗೌರವ ಕನ್ನಡ ಪ್ರಾಧ್ಯಾಪಕರಾಗಿದ್ದ ಕಾಲದಲ್ಲಿಯೇ UTA 'ಊಟ' (ಊಟ: ಯೂನಿವರ್ಸಿಟಿ ಟೀಚರ್ಸ್ ಅಸೋಸಿಯೇಷನ್) ಪ್ರಾರಂಭವಾದದ್ದು. 'ಊಟ' ಹೆಸರು ಎರಡು ಅರ್ಥಗಳಲ್ಲಿ ಸಾರ್ಥಕವಾಯಿತು. ಕನ್ನಡ ಕಾವ್ಯ ಪ್ರಸಾರ, ಜ್ಞಾನ ಪ್ರಸಾರ, ಇವೆರಡೂ ಅದರ ಕಾರ್ಯಗಳು. ಬಹಳ ಕಾಲ ದಿವಂಗತ ಜಿ. ಹನುಮಂತ ರಾಯರು 'ಊಟ'ದ ನೇತಾರರಾಗಿದ್ದುಕೊಂಡು ಭರ್ಜರಿಯಾದ ಊಟದ ವ್ಯವಸ್ಥೆ ಮಾಡುತ್ತಿದ್ದರು ; ಉಪನ್ಯಾಸಗಳು ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ನಡೆಯುತ್ತಿದ್ದುವು. ಊಟದ ವ್ಯವಸ್ಥೆ ಬಲವಾದ ಆಕರ್ಷಣೆ; ಪೂರ್ವ ವಯಸ್ಸಿನ ಅಧ್ಯಾಪಕರು ಪ್ರವಾಸಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಬಿ.ಎಂ.ಶ್ರೀಯವರು ಕಾರ್ಯ ಗೌರವದಿಂದ ಹೆಚ್ಚಾಗಿ ಈ ಕಾರ್ಯಗಳಲ್ಲಿ ಭಾಗವಹಿಸುತ್ತಿರಲಿಲ್ಲವೆಂದು ಕಾಣುತ್ತದೆ. ಈಚೆಗೆ ನಾನು ದೊಡ್ಡಬಳ್ಳಾಪುರಕ್ಕೆ ಒಂದು ಶಾಲೆಯ ವಾರ್ಷಿಕೋತ್ಸವದಲ್ಲಿ ಉಪನ್ಯಾಸ ಮಾಡಲು ಹೋಗಿದ್ದಾಗ ಅಲ್ಲಿನ ಪ್ರಮುಖರೊಬ್ಬರು, ಬಹಳ ವರ್ಷಗಳ ಹಿಂದೆ ಬಿ. ಎಂ. ಶ್ರೀ ಅವರು ದೊಡ್ಡಬಳ್ಳಾಪುರಕ್ಕೆ ಬಂದಿದ್ದು 'ಯಶೋಧರ ಚರಿತೆ' ಯನ್ನು ಕುರಿತು ಭಾಷಣ ಮಾಡಿದರೆಂದೂ ದೊಡ್ಡ ಸಭೆ ನೆರೆದಿತ್ತೆಂದೂ ತಿಳಿಸಿದರು. ಈ ಕೃತಿ ಕುರಿತು ಬಿ.ಎಂ.ಶ್ರೀ ಇನ್ನೂ ಎಷ್ಟೋಕಡೆ ಭಾಷಣ ಮಾಡಿರಬೇಕು ಎಂದು ಕೊಂಡೆ. ಅದು ಹೇಗಿದ್ದರೂ, ಯಶೋಧರ ಚರಿತೆ ಅವರ ಅಚ್ಚುಮೆಚ್ಚಿನ ಕಾವ್ಯಗಳಲ್ಲಿ ಒಂದು. ನಮಗೆ ಸಾಹಿತ್ಯ ಚರಿತ್ರೆಯನ್ನು ಕುರಿತು ಪಾಠ ಮಾಡುವಾಗಲೂ ಯಶೋಧರ ಚರಿತೆಯನ್ನು ಕಂಡರೆ ಅವರಿಗೆ ಒಂದು ಬಗೆಯ ಪಕ್ಷಪಾತ ಇತ್ತು ಎಂದು ವ್ಯಕ್ತ ಪಟ್ಟಿತ್ತು. ಕಾವ್ಯದ ಬೆಲೆ ಕಟ್ಟುವ ಮಾತು ಬಂದಾಗ ಅವರ ಅಗ್ರವೀಳ್ಯ ಪಂಪನಿಗೆ. ರನ್ನನ ಗದಾಯುದ್ಧದ ಪ್ರಸ್ತಾಪ ಬಂದಾಗ, ಅಜಿತಪುರಾಣ ಪಂಪನ ಆದಿಪುರಾಣಕ್ಕೆ ಸರಿಸೂರೆ ಎನ್ನಿಸದು, ಆದರೆ ಗದಾಯುದ್ಧದ ವಿಷಯ ಬೇರೆ, ಎಂದು ಪಂಪನನ್ನೂ ಮರೆಯುವಂತೆ ಮಾಡಿ ದುರ್ಯೋಧನಪಾತ್ರಸೃಷ್ಟಿಗಾಗಿ ರನ್ನನಿಗೆ ಮುಕ್ತಕಂಠದ ಮಣಿಹಾರ. ಕುಮಾರವ್ಯಾಸನ ಬಗೆಗೆ ಹೇಳುವಾಗ ಅವರಿಗೆ ಒಂದು ಬಗೆಯ ಆವೇಶ, ಭಾವುಕ ಪ್ರಶಂಸೆ. ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದ ಆಶ್ರಯದಲ್ಲಿ ಕುಮಾರವ್ಯಾಸ ಜಯಂತಿಯ ವ್ಯವಸ್ಥೆ, ಪ್ರಸಿದ್ಧ ಗಮಕಿಗಳಿಂದ ಕುಮಾರವ್ಯಾಸ ಭಾರತ ಪ್ರಕರಣಗಳ ವಾಚನ ಸಪ್ತಾಹ, ಉಪನ್ಯಾಸಗಳು—ಇವೆಲ್ಲವುಗಳ ಯಶಸ್ವೀ ನಿರ್ವಹಣೆಗೆ ವೆಂಕಣ್ಣಯ್ಯ

ನವರು ಸೂತ್ರಧಾರರು; ಪ್ರೇರಣೆ, ಸ್ಫೂರ್ತಿ, ಬಿ. ಎಂ. ಶ್ರೀ. ಅದೇ ವರ್ಷ (೧೯೩೦) ಕುಮಾರವ್ಯಾಸ ಭಾರತದ ಸಂಗ್ರಹವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಿದ್ಧಪಡಿಸಿ ಕೊಡಬೇಕೆಂದು ವೆಂಕಣ್ಣಯ್ಯನವರು ಮತ್ತು ಪಂಜೆ ಮಂಗೇಶರಾಯರಿಗೆ ಶ್ರೀಯವರ ಕೋರಿಕೆ. ಈ ಸಂಗ್ರಹಕಾರ್ಯದ ಹಿಂದೆ ಒಂದು ಸಣ್ಣ ಚರಿತ್ರೆ ಅಡಗಿದೆ. ಅದು ಈಚೆಗೆ ತಿಳಿದುಬಂದ ಸಂಗತಿ; ಇಲ್ಲಿಗೆ ಅಪ್ರಸ್ತುತ. ಸಿದ್ಧವಾದ ಸಂಗ್ರಹದ ಹಸ್ತ ಪ್ರತಿಯಲ್ಲಿ ಪಾಠಾಂತರ ಸಂಕಲವನ್ನು ಪರಿಶೀಲಿಸಿ, ಉಚಿತ ಪಾಠವನ್ನು ಆಯ್ಕೆ ಮಾಡಿದವರು ಬಿ. ಎಂ. ಶ್ರೀ. ಪಂಪಭಾರತದ ಸಂಪಾದನ ಕಾರ್ಯದಲ್ಲಿಯೂ ಬಿ. ಎಂ. ಶ್ರೀ ಅವರದ್ದು ಕೊನೆಯ ಮಾತು. ಒಂದು ಮಾತಿನಲ್ಲಿ, ಪಂಪ ಹೆಚ್ಚೋ ಕುಮಾರವ್ಯಾಸ ಹೆಚ್ಚೋ, ಕನ್ನಡ ಕವಿ ಕುಲದಲ್ಲಿ? ಒಮ್ಮೆ ಅವನ ಕಡೆಗೆ, ಒಮ್ಮೆ ಇವನ ಕಡೆಗೆ, ಶ್ರೀಯವರ ಮೆಚ್ಚುಗೆ—ವಿಮರ್ಶನಪ್ರಜ್ಞೆಯ ಫಲಿತವಾದ ಮೆಚ್ಚುಗೆ—ಒಲಿದಾಡುತ್ತಿತ್ತು. ಈ ಇಬ್ಬರು, ಕನ್ನಡ ಶಾರದೆಯ ಎರಡು ಕಣ್ಣು. ಅವರ ನಿಲುವು ಇದು. ದುರಂತ ರಾವಣನ ಚಿತ್ರಣಕ್ಕಾಗಿ ನಾಗಚಂದ್ರ ಅವರಿಗೆ ಪ್ರಿಯ. ಬಸವಣ್ಣ, ಪುರಂದರರಿಗೆ, ಸಮಾನೋನ್ನತಿಯ ಪೀಠಗಳು, ಕವಿಗಳಲ್ಲದಿದ್ದರೂ ಸಾಹಿತ್ಯಕ್ಕೆ, ಕನ್ನಡಿಗರ ಬದುಕಿಗೆ, ಇವರ ಕೊಡುಗೆ ವಿಶಿಷ್ಟ—ಆದರೂ ಬಸವಣ್ಣನವರ ಕಡೆಗೆ ಒಂದು ಗುಲಗಂಜಿ ತೂಕದಷ್ಟು ಹೆಚ್ಚಿನ ಒಲವು. ಹರಿಹರ, ರಾಘವಾಂಕ, ಚಾಮರಸ, ಲಕ್ಷ್ಮೀಶ, ರತ್ನಾಕರ—ಇವರ ಕಾವ್ಯಗಳ ಬಗೆಗೆ ಹೇಳುವ ಹೊತ್ತಿಗೆ, ಶ್ರೀಯವರ ಆವೇಶದ ಕಾವು ಇಳಿಮುಖ. ಮಹಾದೇವಿಯಕ್ಕ, ಹೊನ್ನಮ್ಮ—ಇವರ ವಿಷಯದಲ್ಲಿ ರಿಯಾಯಿತಿ ತೋರಿಯೂ ಪ್ರಾಮಾಣಿಕವಾದ ಮೆಚ್ಚುಗೆ. ಇತರ ಕವಿಗಳ, ಕೃತಿಗಳ, ಕಾಲಗಳ, ಉಲ್ಲೇಖಯೋಗ್ಯ—ಬೋರ್ಡಿನ ಮೇಲೆ ಸೀಮೆಯ ಸುಣ್ಣದ ಬರಹ ಮಾತ್ರ ಇವರಿಗೆ ಅವರ ಕೈಯಿಂದ ಸಂದ ಮನ್ನಣೆ.

ಮೇಲಿನ ಕೊನೆಯ ವಾಕ್ಯದಿಂದಲೇ ಊಹಿಸಿಕೊಳ್ಳಬಹುದು ಓದುಗರು—'ಶ್ರೀ' ಯವರು ಎಂ. ಎ. ತರಗತಿಯ ನಾವು ಮೂವರು ವಿದ್ಯಾರ್ಥಿಗಳು ಆಗತಾನೆ, ಪ್ರಾರಂಭ ವಾಗಿದ್ದ ಕನ್ನಡ ಆನರ್ಸ್ ಪರೀಕ್ಷೆಯ ಏಳೆಂಟು ವಿದ್ಯಾರ್ಥಿಗಳು—ಇವರನ್ನು ಒಟ್ಟು ಗೂಡಿಸಿ ಹೇಳಿದ ಸಾಹಿತ್ಯ ಚರಿತ್ರೆಯ ಪಾಠಕ್ಕೆ ಸಂಬಂಧಪಟ್ಟ ವಿಷಯ ಅದು ಎಂದು. ಹೌದು, ನಮಗೆ ಮಾತ್ರವಲ್ಲ, ಬಹುಶಃ ಎಲ್ಲ ಎಂ. ಎ. ತರಗತಿಯ ವಿದ್ಯಾರ್ಥಿಗಳಿಗೆ ಮಾಡಿರಬಹುದಾದ ಸಾಹಿತ್ಯ ಚರಿತ್ರೆಯ ಪಾಠದ ಒಂದು ದಿಗ್ದರ್ಶನ ಅದು. ಕಿಟೆಲ್ ಅವರು ಸಂಪಾದಿಸಿರುವ ಛಂದೋಂಬುಧಿಯ ಮುದ್ರಣಕ್ಕೆ ಇಂಗ್ಲಿಷಿನಲ್ಲಿ ಕನ್ನಡ ಸಾಹಿತ್ಯದ ಒಗ್ಗೆ ಬರೆದ ಮುನ್ನುಡಿ, ಇ. ಪಿ. ರೈಸ್ ಅವರ Heritage of India ಪುಸ್ತಕ ಮಾಲೆಯ 'ಕನ್ನಡ ಸಾಹಿತ್ಯ', ಆರ್. ನರಸಿಂಹಾಚಾರ್ಯರ 'ಕವಿ ಚರಿತೆ'

ಸಂಪುಟಗಳು—ಇವು ಹೊರತಾಗಿ, ಕವಿಕೃತಿಗಳ ಬಗೆಗೆ ವಿಮರ್ಶಾತ್ಮಕ ಮೌಲ್ಯಮಾಪನ ಮಾಡುವ ಒಂದು ಸಾಹಸದ ಪ್ರಥಮ ಪ್ರಯತ್ನ, ತಕ್ಕಮಟ್ಟಿಗೆ ವಿಸ್ತಾರವಾದದ್ದು, ಅವುಗಳಲ್ಲಿ ಇಲ್ಲ. 'ಶ್ರೀ' ಅವರ ಸೂಚನೆಯ ಮೇರೆಗೆ ಇವುಗಳನ್ನು ನಾನಂತೂ ನೋಡಿದ್ದೆ. ಕವಿಗಳ ಸ್ಥಳ, ಕಾಲ, ಮತ ವಿಷಯಗಳ ಕುರಿತಾದ ಚರ್ಚೆಗೆ ಆಗಿನ ದಿನಗಳಲ್ಲಿ ಪ್ರಾಮುಖ್ಯ. ಆದ್ದರಿಂದ, ನರಸಿಂಹಾಚಾರ್ಯರ ಕವಿಚರಿತೆಯನ್ನೂ, ಪ್ರಬುದ್ಧ ಕರ್ಣಾಟಕದಲ್ಲೂ ಪರಿಷತ್‌ಪತ್ರಿಕೆಗಳಲ್ಲೂ ಪ್ರಕಟವಾಗಿದ್ದ ಲೇಖನಗಳನ್ನೂ ಓದಿಕೊಂಡಿದ್ದೆ. ಆದರೆ, ಬಿ. ಎಂ. ಶ್ರೀ ತಮ್ಮ ಪಾಠಪ್ರವಚನದಲ್ಲಿ ಕವಿಕೃತಿಗಳಲ್ಲಿ ಹಿಂಡಿ ತೆಗೆದು ಎರೆಯುತ್ತಿದ್ದ ಕಾವ್ಯಸುಧಾಸಾರ; ತೆರೆದು ತೋರಿಸುತ್ತಿದ್ದ ಕಾವ್ಯ ಮೌಲ್ಯಗಳು; ಮಿಂಚಿಸುತ್ತಿದ್ದ, ಕಟುವಾದರೂ ಸತ್ಯವಾದ ಎದೆಗಾರಿಕೆಯ ನಿಷ್ಪಕ್ಷಪಾತ ವಿಮರ್ಶೆಯ ಮಾತುಗಳು; ಕವಿಹೃದಯವನ್ನು ಒಳಹೊಕ್ಕು ನೋಡಬಲ್ಲ ಚುರುಕಾದ ಒಳನೋಟ; ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಒಮ್ಮೊಮ್ಮೆ ಮೇಲುಗೈಯಾಗಿ ವಿಜೃಂಭಿಸುತ್ತಿದ್ದ ವಿಭಿನ್ನಮತಧರ್ಮಗಳ ಬಗ್ಗೆ ಸಮಾನ ಗೌರವ; ಕಾವ್ಯದಲ್ಲಿ ಗ್ರಹಿಸಬೇಕಾದ ಜೀವನದರ್ಶನ, ಸಾರ್ವತ್ರಿಕ ಮೌಲ್ಯಗಳು—ಇವನ್ನೆಲ್ಲಾ, ಇವಲ್ಲದೆ ಇನ್ನೂ ಅನೇಕ ಆನುಷಂಗಿಕ ವಿಚಾರಗಳನ್ನು—ಪ್ರತಿ ಕವಿಯ ಭಾಷಾ ಶೈಲಿ, ಛಂದಸ್ಸಿನ ಪ್ರಯೋಗ ಕೌಶಲ, ಅಲಂಕಾರ ಪ್ರಿಯತೆ, ಕೆಲವು ಕವಿಗಳ ಸಂಸ್ಕೃತ ವ್ಯಾಮೋಹ, ಅಷ್ಟಾದಶ ವರ್ಣನೆ ಮತ್ತು ಕವಿ ಸಮಯಗಳ ಅನಗತ್ಯ ಭಾರ,— ಮುಂತಾದುವನ್ನೆಲ್ಲಾ ನಾಗಾಲೋಟದ ಅಶ್ವಧಾಟಿಯಲ್ಲಿ ಪಾಠಪ್ರವಚನಸಪ್ತಾಹದಲ್ಲಿ ಮುಗಿಸಿ, ಒಂದು ಹೊಸ ಸಾಹಿತ್ಯಪ್ರಪಂಚವನ್ನೇ ಸೃಷ್ಟಿಮಾಡಿ ಬಿಟ್ಟರು. ಆ ದಿನಗಳಲ್ಲಿ ಅವರು ಹೇಳಿದ ಪಾಠವೇ ಮುಂದೆ 'ಕನ್ನಡ ಕೈಪಿಡಿ'ಯ ಎರಡನೆಯ ಸಂಪುಟವಾಗಿ ೧೯೪೭ರಲ್ಲಿ, ಅವರು ತೀರಿಕೊಂಡ ಮೇಲೆ, ಪ್ರಕಟವಾಯಿತು. ಈ ಪುಸ್ತಕ ಅವರು ಬರೆಯಬೇಕೆಂದಿದ್ದ ಸಮಗ್ರ ಸಾಹಿತ್ಯ ಚರಿತ್ರೆಯ ಒಂದು ಭಾಗ, ಅಷ್ಟೆ; ನಾಗಚಂದ್ರನವರೆಗೆ ಮಾತ್ರ ಸಾಗಿದೆ. ಪೂರ್ಣ ಗ್ರಂಥ ನಮಗೆ ಲಭಿಸಲಿಲ್ಲ. ಎಂಥ ದುರ್ದೈವ ನಮ್ಮದು!

ಮೇಲೆ, ಪಾಠಪ್ರವಚನ ಸಪ್ತಾಹ ಎಂದು ಹೇಳಿದ್ದೇನೆ. ಈ ಕುರಿತು ವಿವರಣ ರೂಪದಲ್ಲಿ ನಾಲ್ಕು ಮಾತು ಹೇಳಬೇಕು. ನಮಗೆ ಬಿ.ಎಂ.ಶ್ರೀ ಸಾಹಿತ್ಯ ಚರಿತ್ರೆಯ ಪಾಠ ಮಾಡಿದ್ದು ೧೯೩೪ರ ಮಾರ್ಚಿ ತಿಂಗಳಿನಲ್ಲಿ ಎಂದು ನೆನಪು. ಆಗ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು. ಅಲ್ಲಿ ತಮ್ಮ ಪಾಠಪ್ರವಚನ ಕರ್ತವ್ಯವನ್ನು ನೆರವೇರಿಸಿ, ಮೊದಲೇ ಗೊತ್ತಾಗಿದ್ದಂತೆ, ನಮಗೆ ಸಾಹಿತ್ಯ ಚರಿತ್ರೆಯನ್ನು ಬೋಧಿಸಲು ಮೈಸೂರಿಗೆ ಬಂದರು. ಕಾಲೇಜಿನ ಮಹಡಿಯ

ಮೇಲಿನ ಉತ್ತರ ದಿಕ್ಕಿನ ಕಡೆಯ ಮೂಲೆ ಕೋಣೆಯಲ್ಲಿ ಪಾಠ. ಪ್ರತಿದಿನವೂ ಬೆಳಗ್ಗೆ ೧೧ ಗಂಟೆಯಿಂದ ಸಂಜೆ ೫ರ ವರೆಗೂ ಅವಿಶ್ರಾಂತ ಉಪನ್ಯಾಸ. ಅವರಿಗೂ ವಿಶ್ರಾಂತಿಯಿಲ್ಲ, ವಿದ್ಯಾರ್ಥಿಗಳಿಗೂ ವಿಶ್ರಾಂತಿ ಇಲ್ಲ. ಮಧ್ಯೆ ವಿರಾಮವೂ ಇಲ್ಲ, ಕಾಫಿಯೂ ಇಲ್ಲ. ನಡು ನಡುವೆ ಬೋರ್ಡಿನ ಮೇಲೆ ಆಗೊಮ್ಮೆ ಈಗೊಮ್ಮೆ ಕವಿ–ಕೃತಿಗಳ ಕಾಲ ಮುಂತಾದ ನೆನಪಿಡಬೇಕಾದ ಸಂಗತಿಗಳನ್ನು ಗುರುತಿಸುತ್ತಿದ್ದರು — ಒಡ ವಿದ್ಯಾರ್ಥಿಗಳ ಬಳಿ ಕವಿಚರಿತೆಯ ಸಂಪುಟಗಳು ಇರಲಾರವು ಎಂಬ ಎಣಿಕೆಯಿಂದ. ಕಡೆಯ ಪಕ್ಷ ಐದು ಗಂಟೆಗಳ ಅಖಂಡ ವಾಗ್ಧಾರೆ; ಕನ್ನಡಕಾವ್ಯ–ಕಾವೇರಿಯ ಪ್ರವಾಹ. ರಸಸಮಾರಾಧನ ಸಪ್ತಾಹ. ಅದೆಂತಹ ಧೈತ್ಯ ಶಕ್ತಿ! ಅದೆಂತಹ ವೇಗದ ಮಾತುಗಾರಿಕೆ! ಟಿಪ್ಪಣಿ ತೆಗೆದುಕೊಳ್ಳುವುದಕ್ಕಂತೂ ಸಾಧ್ಯವೇ ಇರಲಿಲ್ಲ. ಪರೀಕ್ಷಾನಿಷ್ಠ ವಿದ್ಯಾರ್ಥಿಗಳು ಟಿಪ್ಪಣಿ ತೆಗೆದುಕೊಳ್ಳುವ ಸಾಹಸವನ್ನೇನೋ ಮಾಡಿದರು. ಜಗತ್ತಿನಲ್ಲಿ ಎಲ್ಲಿಯೇ ಆಗಲಿ ಈ ರೀತಿ ಏಳು ದಿನ ಅಖಂಡ ಪಾಠಪ್ರವಚನವನ್ನು ಮಾಡಿದ ದಾಖಲೆ ಇದೆಯೋ ಇಲ್ಲವೋ ನಾನು ಕಾಣೆ. ಗಿನ್ನೆಸ್ ಬುಕ್‌ನಲ್ಲಿ ದಾಖಲೆಯಾಗಲು ಯೋಗ್ಯವಾದ ಪರಮ ದಾಖಲೆ.

ಬಿ.ಎಂ.ಶ್ರೀ ನಮಗೆ ಮಾತ್ರ ಉಪಾಧ್ಯಾಯರಾಗಿರಲಿಲ್ಲ, ಕನ್ನಡ ನಾಡಿಗೇ ಉಪಾಧ್ಯಾಯರು ; ನಾಡೋಜರು. ಕನ್ನಡ ತಲೆ ಎತ್ತಿ 'ಅಕ್ಕತಂಗಿಯರೊಡನೆ ನಾನು ಸಮ ನಿಮಗೆಂದು' ನಿಲ್ಲುವುದಕ್ಕಾಗಿ, ಕನ್ನಡ ಜನ ಒಂದು ಕುಲವಾಗಿ ಒಂದುಗೂಡಿ ಬದುಕುವುದಕ್ಕಾಗಿ, ಕನ್ನಡದ ಎಲ್ಲ ಮಕ್ಕಳು ಹಳಗನ್ನಡ ಸಾಹಿತ್ಯವನ್ನು ಓದಿಕೊಂಡು ಮೆಚ್ಚಿಕೊಂಡು ಹೆಮ್ಮೆಪಡುವುದಕ್ಕಾಗಿ, ಹೊಸ ಸಾಹಿತ್ಯವನ್ನು ಸೃಷ್ಟಿಸಲು ಸ್ಫೂರ್ತಿ ಪಡೆಯುವುದಕ್ಕಾಗಿ, "ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ ನಿಬೋಧತ" ಎಂದು ಕನ್ನಡ ಕುಲಕೋಟಿಯನ್ನು ಎಚ್ಚರಿಸುವುದಕ್ಕಾಗಿ, ಕನ್ನಡ ನಾಡನ್ನೆಲ್ಲಾ ಸುತ್ತಿ ಹಾಸುಹೊಕ್ಕು ಹರಿದು, ಕನ್ನಡ ಕಾವ್ಯ ಸಂಪತ್ತನ್ನು ಕುರಿತು, ಕನ್ನಡ ಸಮಸ್ಯೆಗಳನ್ನು ಕುರಿತು, ನಾಡಹಬ್ಬಗಳಲ್ಲಿ ಸಂಘ ಸಂಸ್ಥೆಗಳ ವಾರ್ಷಿಕ ಸಭೆ ಸಮಾರಂಭಗಳಲ್ಲಿ, ಗಂಟೆಗಟ್ಟಲೆ ಉಪನ್ಯಾಸ ಮಾಡಿದರು ; ಕನ್ನಡ ಬಳಗಗಳನ್ನು ಕಟ್ಟಿದರು, ಸಂಘಗಳನ್ನು ಹುಟ್ಟುಹಾಕಿದರು, ಮುಗುಳರಳುತ್ತಿದ್ದ ಕವಿಗಳ ಬೆನ್ನು ತಟ್ಟಿದರು, ನಲಿವನ್ನು ಊಡಿದರು, ತಿಳಿವನ್ನು ನೀಡಿದರು, ಕನ್ನಡ ತಾಯ ಹಿರಿಮೆಯನ್ನು ಕೊಂಡಾಡಿದರು. ಧನ್ಯೋಸ್ಮಿ ಎಂದು ನಲಿದಾಡಿದರು.

ಹಳಗನ್ನಡದ ನಾಡೋಜ, ಪಂಪ
ಹೊಸಗನ್ನಡದ ನಾಡೋಜ, ಬಿ.ಎಂ.ಶ್ರೀ

**ಎಂ. ಗೋವಿಂದ ಪೈ**

# ಸ್ನೇಹಪೂರ್ಣ ಹಣತೆ*

"ಸಂಭಾವ್ಯರಾದ ಶ್ರೀಯವರನ್ನು ಕುರಿತು ಒಂದೆರಡು ಮಾತುಗಳಲ್ಲಿ ಹೇಳಬಹುದಾದರೆ, ಪುಣ್ಯ ಶ್ಲೋಕಳಾದ ಸಾವಿತ್ರಿದೇವಿ ಗತಪ್ರಾಣನಾದ ತನ್ನ ಪ್ರಾಣಪತಿಗೆ ಪ್ರಾಣವನ್ನೂ, ಜ್ಯೋತಿಹೀನನಾದ ತನ್ನ ಮಾವನ ಕಣ್ಣುಗಳಿಗೆ ಜ್ಯೋತಿಯನ್ನೂ ದೊರಕಿಸಿ ಕೊಟ್ಟಂತೆ, 'ಶ್ರೀ'ಯವರು ಕನ್ನಡ ಸಾಹಿತ್ಯಕ್ಕೆ ಪುನರುಜ್ಜೀವನವನ್ನೂ, ಕನ್ನಡ ನಾಡಿಗೆ ತನ್ನನ್ನು ತಾನು ಎಂಬ ಹೊಸ ದೃಷ್ಟಿಯನ್ನೂ ದೊರಕಿಕೊಳಿಸಲಿಕ್ಕೆ ಸಾಧಿಸುತ್ತಾರೆನ್ನಬಹುದು. ಈ ಸಾಧನೆಯಲ್ಲಿ ಅವರ ತ್ಯಾಗವೂ ಉದ್ಯೋಗವೂ ಒಂದನ್ನೊಂದು ಮಿಂಚುವುದರಿಂದ ಶ್ರೀಕಂಠಯ್ಯನವರೆಂದರೆ ಕನ್ನಡ, ಕನ್ನಡವೆಂದರೆ ಶ್ರೀಕಂಠಯ್ಯನವರು ಎಂಬಷ್ಟರಮಟ್ಟಿಗೆ ಅವರ ಹೆಸರು ಕರ್ನಾಟಕದ ಉದ್ದಗಲಕ್ಕೂ ತುಂಬಿ ತುರುಗುತ್ತವೆ...." ನನ್ನ ಅಭಿನಂದನದ ಈ ಸ್ನೇಹಪೂರ್ಣವಾದ ಹಣತೆಯನ್ನೂ ತುಳುನಾಡಿನಿಂದ ತಮ್ಮಲ್ಲಿಗೆ ತೇಲಿಬಿಡುತ್ತೇನೆ.




* ೧೪-೯-೧೯೪೧ನೇ ದಿನಾಂಕದಂದು ಶ್ರೀಯವರ ೫೭ನೇ ಹುಟ್ಟುಹಬ್ಬಕ್ಕೆ ಮಂಜೇಶ್ವರ ಗೋವಿಂದ ಪೈಗಳು ಕಳುಹಿಸಿದ ಸಂದೇಶ. 'ಕನ್ನಡ ನುಡಿ' ವಾರಪತ್ರಿಕೆ ೧೯-೯-೧೯೪೧



ಡಾ. ಎನ್. ಅನಂತರಂಗಾಚಾರ್

# ಶ್ರೀಯವರು ಮತ್ತು ಪ್ರಬುದ್ಧ ಕರ್ಣಾಟಕ

'ಪ್ರಬುದ್ಧ ಕರ್ಣಾಟಕ'ವು ೧೯೧೯ ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳ ತ್ರೈಮಾಸಿಕ ಪತ್ರಿಕೆಯಾಗಿ ಪ್ರಾರಂಭವಾಯಿತು. ಅದರ ಸ್ಥಾಪಕ ಸಂಪಾದಕರಾದ ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ಆಪ್ತ ಮಿತ್ರರಾದ ಟಿ. ಎಸ್. ವೆಂಕಣ್ಣಯ್ಯನವರ ಸಹಾಯದಿಂದ ಸವ್ಯಸಾಚಿಯಾಗಿ ೧೩ ವರ್ಷಗಳ ಕಾಲ ಅದನ್ನು ನಡೆಸಿಕೊಂಡು ಬಂದರು. ವಿಶೇಷ ಪ್ರಯತ್ನದಿಂದ ಕನ್ನಡದಲ್ಲಿ ಉದ್ದಾಮ ಲೇಖಕರಾದ ಶ್ರೀಗಳಾದ ಡಿ.ವಿ. ಗುಂಡಪ್ಪ, ಮಾಸ್ತಿ, ವೆಂಕೋಬರಾವ್, ಸಿ.ಕೆ. ವೆಂಕಟರಾಮಯ್ಯ ಮುಂತಾದವರ ಲೇಖನಗಳನ್ನು ಸಂಗ್ರಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿದರು. ಆ ಲೇಖಕ ವರ್ಗದಲ್ಲಿ ಆಚಾರ್ಯ ಬಿ.ಎಂ.ಶ್ರೀಯವರೂ ಒಬ್ಬರು. ಪ್ರಬುದ್ಧ ಕರ್ಣಾಟಕದಲ್ಲಿ ಅವರ ಹಲವಾರು ಕೃತಿಗಳು ಪ್ರಕಟವಾಗಿದ್ದು, ಪತ್ರಿಕೆಯ ಗೌರವವನ್ನು ಬಹುಮಟ್ಟಿಗೆ ಹೆಚ್ಚಿಸಿದುವು. ಉತ್ತಮ ಲೇಖನಗಳು ಪ್ರಕಟವಾಗಿ ಪತ್ರಿಕೆ ಕ್ಲುಪ್ತಕಾಲದಲ್ಲಿ ಹೊರ ಬರುತ್ತಿತ್ತು. ಸಂಪಾದನೆಯ ಕಾರ್ಯ ಬಹು ತೃಪ್ತಿಕರವಾಗಿ ನಡೆಯುತ್ತಿದ್ದರೂ ಪತ್ರಿಕೆಯ ಆರ್ಥಿಕ ಪರಿಸ್ಥಿತಿ ಬಿಗಡಾಯಿಸಿಕೊಂಡು ಬಂದಿತು. ಸಂಪಾದಕರ ಪ್ರಯತ್ನವಾವುದೂ ಫಲಕಾರಿಯಾಗಲಿಲ್ಲ. ತುಂಬ ಕಷ್ಟಪಟ್ಟು ೧೩ ಸಂಪುಟಗಳನ್ನು ಬಹು ತೃಪ್ತಿಕರವಾಗಿ ನಡೆಸಿ ಮುಂದೆ ಪತ್ರಿಕೆಯನ್ನು ಅನಿವಾರ್ಯವಾಗಿ ತಮಗೆ ಇಷ್ಟವಿಲ್ಲ ದಿದ್ದರೂ ನಿಲ್ಲಿಸಿಬಿಡಲು ಯೋಚಿಸುತ್ತಿದ್ದರು.

೧೯೩೧ರಲ್ಲಿ ಬಿ.ಎಂ.ಶ್ರೀಯವರು ಬೆಂಗಳೂರು ಸೆಂಟ್ರಲ್ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಹೋಗಿ ಸೇರಿದರು. ಆಗ ಪತ್ರಿಕೆಯು ಕಾಲೇಜಿನ ಪತ್ರಿಕೆಯಾಗಿತ್ತು. ಅದನ್ನು ನಿಲ್ಲಿಸಲು ಅವರಿಗೂ ಇಷ್ಟವಿರಲಿಲ್ಲ. ಅದಕ್ಕಿಂತ ಮೇಲಾಗಿ ವಿಶ್ವವಿದ್ಯಾಲಯದ ಮಟ್ಟದ ಕನ್ನಡ ಪತ್ರಿಕೆಯೊಂದು ಪ್ರಕಟವಾಗುವುದು ಸೂಕ್ತವೆಂದು ಅವರಿಗೂ ಅನಿಸಿತ್ತು. ಆ ಸಂದರ್ಭದಲ್ಲಿ ಎ.ಆರ್.ಕೃ. ಅವರು ಪ್ರಬುದ್ಧ ಕರ್ಣಾಟಕವನ್ನು ವಿಶ್ವವಿದ್ಯಾನಿಲಯವು ವಹಿಸಿಕೊಳ್ಳುವುದು ಸೂಕ್ತವೆಂದೂ ಅದರಿಂದ ಪತ್ರಿಕೆಯ ಮುನ್ನಡೆಯನ್ನು ಸಾಧಿಸುವುದು ಸುಲಭವೆಂದೂ ಸೂಚಿಸಿದರು. ಆಗ ಶ್ರೀಯವರು ಮೈಸೂರು ಮತ್ತು

ಬೆಂಗಳೂರು ಕಾಲೇಜುಗಳ ಕರ್ಣಾಟಕ ಸಂಘಗಳ ಅಧ್ಯಕ್ಷರಾಗಿದ್ದರು. ಈ ಪತ್ರಿಕೆಯು ಉಭಯಸಂಘಗಳ ಪತ್ರಿಕೆಯಾಗಿ ವಿಶ್ವವಿದ್ಯಾನಿಲಯದಿಂದಲೇ ಪ್ರಕಟವಾಗುವುದು ಸಾಧುವೂ ಗೌರವವೂ ಎಂದು ನಿಷ್ಕರ್ಷಿಸಿದರು. ತಕ್ಷಣವೇ ಮೈಸೂರು ಸಂಘದ ಮುಖ್ಯಾಧಿಕಾರಿಗಳಾಗಿದ್ದ ವೆಂಕಣ್ಣಯ್ಯನವರನ್ನೂ ಬೆಂಗಳೂರು ಸಂಘದ ಪ್ರಧಾನಾಧಿಕಾರಿಗಳಾಗಿದ್ದ ಎ.ಆರ್. ಕೃಷ್ಣಶಾಸ್ತ್ರಿಗಳನ್ನೂ ಒಟ್ಟುಗೂಡಿಸಿ ಅವರಿಂದ ಈ ಸೂಚನೆಯನ್ನು ಪ್ರಾರ್ಥನಾರೂಪದಲ್ಲಿ ವಿಶ್ವವಿದ್ಯಾನಿಲಯಕ್ಕೆ ಕಳುಹಿಸಿಕೊಟ್ಟರು. ಆಗ ಉಪಕುಲಪತಿಗಳಾಗಿದ್ದವರು ಇ. ವಿ. ಮೆಟ್‌ಕಾಫ್ ಎಂಬ ಪಾಶ್ಚಾತ್ಯ ಅಧಿಕಾರಿಗಳು. ಅವರು ಸುಲಭವಾಗಿ ಒಪ್ಪಲಿಲ್ಲ. ಅದರ ಖರ್ಚುವೆಚ್ಚಗಳು, ಆಡಳಿತವಿಚಾರ ಮೊದಲಾದ ಅನೇಕ ವಿಷಯಗಳನ್ನು ಕುರಿತು ದೀರ್ಘ ಚರ್ಚೆ ನಡೆಸಿದರು. ಶ್ರೀಯವರು ಅದಕ್ಕೆಲ್ಲ ಸೂಕ್ತ ಸಮಾಧಾನವನ್ನು ಕೊಟ್ಟು ಒಪ್ಪಿಸಿದರು. ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಬಂದ ಮೇಲೆ ಅಂದರೆ ೧೪ನೆಯ ಸಂಪುಟದಿಂದ (೧೯೩೨ನೆಯ ವರ್ಷದಿಂದ) ಅದರ ಪ್ರಕಟಣೆ, ಯೋಗ್ಯತೆ ಮೊದಲಾದವುಗಳು ಬಹುಮಟ್ಟಿಗೆ ಹೆಚ್ಚಿದೆ. ಅಂದಿನಿಂದ ೧೦ ವರ್ಷಗಳ ಕಾಲ (೧೯೩೨ ರಿಂದ ೧೯೪೨ರವರೆಗೆ) ಬಿ. ಎಂ. ಶ್ರೀಯವರೇ ಪ್ರಧಾನ ಸಂಪಾದಕರಾಗಿಯೂ ಸಂಪಾದಕ ಮಂಡಳಿಯ ಅಧ್ಯಕ್ಷರಾಗಿಯೂ ಪತ್ರಿಕೆಯನ್ನು ನಡೆಸಿದರು. ಇಷ್ಟು ಮಹತ್ವದ ಕೆಲಸ ಯಾವ ಖಾಸಗಿ ಸಂಸ್ಥೆಗೂ ಸಾಧ್ಯವಾಗುತ್ತಿರಲಿಲ್ಲ. ಇವಿಷ್ಟೂ ಸಾಧ್ಯವಾದುದು ಬಿ. ಎಂ. ಶ್ರೀಯವರ ಪ್ರತ್ಯಕ್ಷ ಮತ್ತು ಪರೋಕ್ಷ ವ್ಯವಸಾಯದಿಂದ.

# ಶ್ರೀಯವರು ಮತ್ತು ಕನ್ನಡ ಪ್ರಚಾರ

ಈ ಶತಮಾನದ ಪ್ರಾರಂಭದ ವರ್ಷಗಳು. ಕನ್ನಡಕ್ಕೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಸ್ಥಾನವನ್ನು ಇಂಗ್ಲಿಷ್ ಆಕ್ರಮಿಸಿಕೊಂಡು ಬಿಟ್ಟಿತ್ತು. ಆಡಳಿತ ವ್ಯವಹಾರಗಳಲ್ಲಾಗಲಿ, ಶಿಕ್ಷಣರಂಗದಲ್ಲಾಗಲಿ ಕನ್ನಡ ಭಾಷೆಗೆ ಹೆಚ್ಚಿನ ಸ್ಥಾನ-ಮನ್ನಣೆಗಳಿರಲಿಲ್ಲ. ಕನ್ನಡ ಸಾಹಿತ್ಯವೂ ಸಂಪ್ರದಾಯದ ಸಂಕೋಲೆಗಳಲ್ಲಿ ಸಿಲುಕಿ ನಿಸ್ತೇಜವಾಗಿತ್ತು. ಹೊಸ ವಿದ್ಯಾಭ್ಯಾಸಕ್ರಮದ ಪರಿಣಾಮವಾಗಿ ಒದಗಿದ ಪಾಶ್ಚಾತ್ಯ ಸಾಹಿತ್ಯ ಕೃತಿಗಳ ಸಂಪರ್ಕದಿಂದ ಕನ್ನಡದಲ್ಲಿ ಅನುವಾದಗಳೂ ರೂಪಾಂತರಗಳೂ ಬರುತ್ತಿದ್ದವು; ಆದರೆ ಸ್ವತಂತ್ರವಾದ ಹೊಸಗನ್ನಡ ಸಾಹಿತ್ಯ ರಚನೆಗೆ ಸಂಬಂಧಿಸಿದಂತೆ ಹೇಳುವುದಾದರೆ ಪರಿಸ್ಥಿತಿ ತುಂಬ ನಿರಾಶಾದಾಯಕವಾಗಿತ್ತು. ಇಂಗ್ಲಿಷ್ ಗಳಿಸಿದ ಸ್ಥಾನವನ್ನು ಕನ್ನಡಕ್ಕೆ ಮರಳಿ ದೊರಕಿಸಿಕೊಡಲು, ಕನ್ನಡಕ್ಕೆ ಸ್ವಾತಂತ್ರ್ಯ ಸಂಪಾದಿಸಿಕೊಟ್ಟು ಅದರ ಪುನರುಜ್ಜೀವನಕ್ಕೆ ಅವಕಾಶ ಮಾಡಿಕೊಡಲು ಸಮರ್ಥ ಚೇತನವೊಂದರ ಅಗತ್ಯವಿತ್ತು. ಇಂಥ ಚೇತನ ಬಿ.ಎಂ.ಶ್ರೀಯವರಲ್ಲಿ ಮೈದಾಳಿದುದು ಕನ್ನಡನಾಡು-ನುಡಿಯ, ಕನ್ನಡಿಗರ ಸೌಭಾಗ್ಯವೆಂದೇ ಹೇಳಬೇಕು.

ಕನ್ನಡದ ಪ್ರಚಾರ ಕಾಯಕವನ್ನು ಕೈಗೊಳ್ಳುವ ಹಂಬಲ ಶ್ರೀಯವರಿಗೆ ಬಾಲ್ಯದಿಂದಲೂ ಇತ್ತು. ಮದ್ರಾಸಿನಲ್ಲಿ ಎಂ. ಎ. ಶಿಕ್ಷಣ ಪಡೆಯುತ್ತಿದ್ದಾಗಲೇ (ಕ್ರಿ.ಶ. ೧೯೦೬-೧೯೦೭) ಅವರ ಮನಸ್ಸನ್ನು ಕನ್ನಡ ಪೂರ್ತಿಯಾಗಿ ಆಕ್ರಮಿಸಿಕೊಂಡು ಬಿಟ್ಟಿತ್ತು. ಅವರೂ ಅವರ ಕೆಲವು ಮಿತ್ರರೂ ಸಂಜೆಯ ಹೊತ್ತು ಸಮುದ್ರ ತೀರದಲ್ಲಿ ಕುಳಿತು "ಕನ್ನಡ ಬಹಳ ಶೋಚನೀಯವಾದ ಸ್ಥಿತಿಗೆ ಇಳಿದಿದೆ; ಅದಕ್ಕೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನವನ್ನು ದೊರಕಿಸಿಕೊಳ್ಳಬೇಕು; ಅದರ ಸಾಹಿತ್ಯ ಸಂಪತ್ತನ್ನು ಹೆಚ್ಚಿಸಬೇಕು; ಷೇಕ್ಸ್‌ಪಿಯರ್, ಪ್ಲೇಟೋ ಮುಂತಾದವರ ಕೃತಿಗಳನ್ನು ಕನ್ನಡಕ್ಕೆ ತರಬೇಕು ಇತ್ಯಾದಿ ವಿಚಾರಗಳನ್ನು ನಡೆಸುತ್ತಿದ್ದರಂತೆ ಎಂದಿದ್ದಾರೆ ಶ್ರೀ ಎ. ಎನ್. ಮೂರ್ತಿರಾವ್. ಶ್ರೀಯವರ ಮನಸ್ಸಿನಲ್ಲಿ ಮೂಡಿದ್ದ ಯೋಚನೆಗಳು ಬಹುಬೇಗ ನಿಸ್ಪಷ್ಟರೂಪ ತಳೆದುವು. ಒಂದು ಕಡೆ ಇಂಗ್ಲಿಷ್, ಇನ್ನೊಂದು ಕಡೆ ಸಂಸ್ಕೃತ—

ಇವೆರಡರ ಅಬ್ಬರ-ಆಡಂಬರಗಳಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ'ಯನ್ನು ಕುರಿತು ಶ್ರೀಯವರು ೧೯೧೧ರಲ್ಲಿ, ಧಾರವಾಡದ ಕರ್ಣಾಟಕ ವಿದ್ಯಾವರ್ಧಕ ಸಂಘದ ಆಶ್ರಯಲ್ಲಿ ಮಾಡಿದ ಉಪನ್ಯಾಸ, ಅವರಿಗೆ ಕನ್ನಡದ ಬಗೆಗಿದ್ದ ಕಳಕಳಿಗೆ ಜೀವಂತ ಸಾಕ್ಷಿಯಾಗಿದೆ.

ಮುಂದೆ ಕನ್ನಡದ ಕೆಲಸ ಮಾಡುವ ಸದವಕಾಶವೂ ಶ್ರೀಯವರಿಗೆ ತಾನಾಗಿ ದೊರೆಯಿತು. ತಾವು ಕಂಡ ಕನಸುಗಳನ್ನು ನನಸುಮಾಡಲು ಅನುಕೂಲಕರವಾದ ಅಧಿಕಾರ ಸ್ಥಾನಗಳೂ ಅವರಿಗೆ ದೊರೆತುವು. ಮುಖ್ಯವಾಗಿ, ಮೈಸೂರು ವಿಶ್ವವಿದ್ಯಾ ನಿಲಯದ ರಿಜಿಸ್ಟ್ರಾರ್ (೧೯೨೬-೩೦), ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷ (೧೯೩೮-೪೨)—ಈ ಅಧಿಕಾರಸ್ಥಾನಗಳೂ, ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷ (೧೯೪೨-೪೪) ಸ್ಥಾನವೂ ದೊರೆತುದರ ಫಲವಾಗಿ ಶ್ರೀಯವರಿಗೆ ಕನ್ನಡದ ಕೆಲಸ ಮಾಡುವುದು ಸಹಜವಾಗಿಯೇ ಸುಲಭ-ಸಾಧ್ಯವಾಯಿತು.

ಕನ್ನಡ ಭಾಷೆ-ಸಾಹಿತ್ಯಗಳ ಪ್ರಚಾರಕ್ಕೆ ಹಾಗೂ ಕರ್ನಾಟಕದ ಏಕೀಕರಣಕ್ಕೆ ಸಂಬಂಧಿಸಿದಂತೆ ಶ್ರೀಯವರು ಕೈಕೊಂಡ ಕಾರ್ಯಗಳನ್ನು ಈ ಕೆಳಗಿನಂತೆ ಸಂಕ್ಷೇಪವಾಗಿ ನಿರೂಪಿಸಬಹುದು.

ಎಲ್ಲಕ್ಕಿಂತ ಮುಖ್ಯವಾದುದೆಂದರೆ ಕನ್ನಡ ಸ್ನಾತಕೋತ್ತರ ತರಗತಿಗಳ ಪ್ರಾರಂಭ. ಈ ಶತಮಾನದ ಮೊದಲೆರಡು ದಶಕಗಳಲ್ಲಿ ಕನ್ನಡಿಗರಿಗೆ ಕನ್ನಡದಲ್ಲಿ ಪ್ರೌಢ ಅಧ್ಯಯನ ನಡೆಸುವ ಅವಕಾಶವೇ ಇರಲಿಲ್ಲ. ಇತರ ಭಾರತೀಯ ಭಾಷೆಗಳಂತೆ ದೇಶದಲ್ಲಿ ಕನ್ನಡಕ್ಕೂ ಪ್ರತಿಷ್ಠಿತವಾದ ಸ್ಥಾನಮಾನಗಳು ದೊರಕಬೇಕಾದರೆ, ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಕನ್ನಡಕ್ಕೆ ಪ್ರತ್ಯೇಕ ಪೀಠವೊಂದು ಸ್ಥಾಪನೆಯಾಗಬೇಕು ಎಂಬುದನ್ನು ಶ್ರೀಯವರು ಎಂದೋ ಮನಗಂಡಿದ್ದರು. ಅವರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿ ನೇಮಕಗೊಂಡಾಗ ಆ ಸದವಕಾಶ ಒದಗಿಬಂತು. ಆಗ ವೈಸ್ ಛಾನ್ಸಲರ್ ಆಗಿದ್ದ ಡಾ. ಬ್ರಜೇಂದ್ರನಾಥ ಶೀಲರು ಬಂಗಾಳಿಯಾಗಿದ್ದರೂ ಅವರಿಗೆ ದೇಶಭಾಷೆಗಳ ಬಗ್ಗೆ ಗೌರವವಿತ್ತು. ಅವರ ಮೇಲೆ ಪ್ರಭಾವ ಬೀರುವುದರಲ್ಲಿ ಶ್ರೀಯವರು ಸಂಪೂರ್ಣ ಯಶಸ್ವಿಯಾದರು. ೧೯೨೭ರಲ್ಲಿ ಕನ್ನಡ ಎಂ. ಎ. ತರಗತಿ ಪ್ರಾರಂಭವಾಯಿತು. ಕನ್ನಡ ಭಾಷಾಧ್ಯಯನದ ಇತಿಹಾಸದಲ್ಲಿಯೇ ಇದೊಂದು ಮಹತ್ವದ ಘಟನೆ ಎನ್ನಬಹುದು. ಇದರಿಂದಾಗಿ ಕನ್ನಡ ಕವಿಗಳ ವಿದ್ವಾಂಸರ ಒಂದು ಪಡೆಯೇ ನಿರ್ಮಾಣವಾಗಲು ಸಾಧ್ಯವಾಯಿತು.

ಕನ್ನಡದ ಪ್ರೌಢ ಅಧ್ಯಯನ ನಡೆಸುವ ವಿದ್ಯಾರ್ಥಿಗಳಿಗೆ ಅಗತ್ಯವಾಗಿರುವ ಆಕರ ಗ್ರಂಥಗಳ ಪ್ರಕಟಣೆಯ ಬಗೆಗೂ ಶ್ರೀಯವರು ಗಮನ ಹರಿಸಿದರು. ಪೀಠಿಕೆ, ಟಿಪ್ಪಣಿ,

ಶಬ್ದಕೋಶಗಳಿಂದ ಕೂಡಿದ, ಶುದ್ಧ ಪಾಠಗಳನ್ನೊಳಗೊಂಡ ಹಳಗನ್ನಡ ನಡುಗನ್ನಡ ಸಾಹಿತ್ಯಕೃತಿಗಳನ್ನೂ ಆಧುನಿಕ ವಿಜ್ಞಾನ–ಶಾಸ್ತ್ರ ವಿಚಾರಗಳ ತಿಳಿವಳಿಕೆಯನ್ನು ನೀಡುವ ಹೊಸಗನ್ನಡ ಕೃತಿಗಳನ್ನೂ ಪ್ರಕಟಿಸುವುದು ಅವರ ಉದ್ದೇಶವಾಗಿತ್ತು. ಇದಕ್ಕಾಗಿ ಅವರು ೧೯೩೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಪ್ರಾರಂಭಿಸಿದರು.

ಕನ್ನಡದ ಮೊದಲ ಗೌರವ ಪ್ರಾಧ್ಯಾಪಕರಾಗಿಯೂ ದಣಿವಿಲ್ಲದೆ ದುಡಿದ ಶ್ರೀಯವರಿಂದ ಕನ್ನಡ ಭಾಷಾಭ್ಯಾಸಿಗಳಿಗೆ ಇತರ ಅನೇಕ ಪ್ರಯೋಜನಗಳೂ ಆಗಿವೆ. ಕನ್ನಡ ವ್ಯಾಸಂಗಕ್ಕೆ ಇಂದಿಗೂ ಪ್ರಮಾಣಭೂತವಾಗಿ ಉಳಿದು ಬಂದಿರುವ 'ಕನ್ನಡ ಕೈಪಿಡಿ'ಯನ್ನು ಬರೆಯಿಸಿ ಪ್ರಕಟಿಸಿದುದು, ಹೊಸಗನ್ನಡದಲ್ಲಿ ಕಾವ್ಯರಚನೆಗಾಗಿ ಚಿನ್ನದ ಪದಕವನ್ನೂ ಸಾಹಿತ್ಯ ಅಧ್ಯಯನಕ್ಕಾಗಿ ವಿದ್ಯಾರ್ಥಿವೇತನವನ್ನೂ ಕಲ್ಪಿಸಿಕೊಟ್ಟುದು— ಇವುಗಳಲ್ಲಿ ಕೆಲವು ಮಾತ್ರ.

ಶ್ರೀಯವರಿಗೆ ನೇರವಾಗಿ ಸಂಬಂಧಿಸದೆ ಇದ್ದರೂ ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳಬಹುದಾದ ಇನ್ನೊಂದು ವಿಚಾರವಿದೆ. ಶ್ರೀಯವರ ಶಿಷ್ಯರಲ್ಲೊಬ್ಬರಾದ ಶ್ರೀ ಜಿ. ಹನುಮಂತರಾಯರ ನೇತೃತ್ವದಲ್ಲಿ 'ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘ' ಅಸ್ತಿತ್ವಕ್ಕೆ ಬಂದಿತ್ತು. ಈ ಸಂಘದ ಸದಸ್ಯರು ಆಗಾಗ ಜಿಲ್ಲೆ ಹಾಗೂ ತಾಲ್ಲೂಕು ಕೇಂದ್ರಗಳಲ್ಲಿ ವಿವಿಧ ವಿಷಯಗಳ ಮೇಲೆ ಸರಳವಾದ ಕನ್ನಡದಲ್ಲಿ ಉಪನ್ಯಾಸ ಮಾಡುತ್ತಿದ್ದರು ; ಅನಂತರ ಆ ಉಪನ್ಯಾಸಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಿ ಎರಡಾಣೆ ಬೆಲೆಗೆ ಮಾರುತ್ತಿದ್ದರು. ಹೀಗೆ ವಿವಿಧ ಶಾಸ್ತ್ರ–ವಿಜ್ಞಾನ ವಿಷಯಗಳ ಮೇಲೆ ಉಪನ್ಯಾಸ ನಡೆಸುವುದಾಗಲಿ ಬರೆಯುವುದಾಗಲಿ ಆವರೆಗೆ ತುಂಬ ಅಪರೂಪವಾಗಿತ್ತು. ಇಂಥದೊಂದು ಕೆಲಸ ಯಶಸ್ವಿಯಾಗಿ ನಡೆದುದರ ಬಹುಪಾಲು ಕೀರ್ತಿ ಹನುಮಂತರಾಯರಿಗೇ ಸಲ್ಲುತ್ತಿದ್ದರೂ ಇದರ ಹಿನ್ನೆಲೆಯಲ್ಲಿ ಶ್ರೀಯವರ ಸ್ಫೂರ್ತಿ ಕೆಲಸ ಮಾಡಿತ್ತೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಶ್ರೀಯವರಲ್ಲಿ ಕನ್ನಡ ಪ್ರಚಾರದ ಉತ್ಸಾಹ-ಲವಲವಿಕೆಗಳೂ, ಉದ್ವೇಗ— ಆವೇಶಗಳೂ ನಿಜವಾಗಿ ಸಂಚರಿಸತೊಡಗಿದ್ದು ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆಗೊಂಡಾಗಲೇ ಎನ್ನಬಹುದು. ಆ ಅವಧಿಯಲ್ಲಿ ಅವರು ಸಂಪೂರ್ಣವಾಗಿ ಕನ್ನಡನಾಡಿನ, ಕನ್ನಡನಾಡವರ ಸ್ವತ್ತಾದರು. ಆ ನಾಲ್ಕು ವರ್ಷಗಳ ಅವಧಿಯನ್ನು ಅವರು ಕನ್ನಡವೇ ತಮ್ಮ ಉಸಿರೆಂಬಂತೆ ಕಳೆದರು ; ಕನ್ನಡನಾಡಿನ ಮೂಲೆಮೂಲೆಗಳನ್ನೂ ಬೇಸರವಿಲ್ಲದೆ ಸುತ್ತಿ ಜನರ ಹೃದಯದಲ್ಲಿ ಕನ್ನಡದ ಬಗ್ಗೆ ಪ್ರೀತಿ–ಅಭಿಮಾನಗಳನ್ನು ಉಕ್ಕಿಸಿದರು ; ಕನ್ನಡ ಸಾಹಿತ್ಯ ಪರಿಷತ್ತಿನ ಧ್ಯೇಯಗಳನ್ನು

ಸ್ಪಷ್ಟಪಡಿಸಿ ಅನೇಕ ಬಗೆಯ ಸಾಹಿತ್ಯ ಚಟುವಟಿಕೆಗಳನ್ನು ಪ್ರಾರಂಭಿಸಿದರು; ಪರಿಷತ್ತಿನ ಹೆಸರು ಎಲ್ಲೆಲ್ಲಿಯೂ ಕೇಳಿಬರುವಂತೆ ಮಾಡಿದರು;

"ಕನ್ನಡಿಗರ ಪುನರುಜ್ಜೀವನವೇ ಪರಿಷತ್ತಿನ ಧ್ಯೇಯ. ಪರಿಷತ್ತು ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠವಾಗಬೇಕು" ಎಂಬುದನ್ನು ತಮ್ಮ ಹಂಬಲವಾಗಿರಿಸಿಕೊಂಡ ಶ್ರೀಯವರು ಆ ದಿಸೆಯಲ್ಲಿ ಕಾರ್ಯಪ್ರವೃತ್ತರಾದರು. ಪರಿಷತ್ತಿನ ಅಚ್ಚುಕೂಟಕ್ಕಾಗಿ ೬೦೦೦ ರೂಪಾಯಿಗಳ ಉದಾರ ಕೊಡುಗೆ ನೀಡಿದರಲ್ಲದೆ, 'ಕನ್ನಡನುಡಿ' ಮಾಸಪತ್ರಿಕೆ ಪ್ರಕಟವಾಗುವುದಕ್ಕೆ ಕಾರಣರಾದರು. ರಾಜ್ಯಾದ್ಯಂತ ಸುತ್ತಿ ಪರಿಷತ್ತಿನ ಶಾಶ್ವತನಿಧಿಗೆ ಹಣ ಸಂಗ್ರಹಿಸಿದರು; ಪರಿಷತ್ತಿಗೆ ಹೊಸ ಹೊಸ ಸದಸ್ಯರನ್ನು ಸೇರಿಸಿದರು; ಅಕ್ಷರ ಸಂಸ್ಕರಣ, ಲಿಪಿ ಸುಧಾರಣೆಗಳಿಗೆ ಸಂಬಂಧಿಸಿದಂತೆ ಅನೇಕ ಉಪಯುಕ್ತ ಸಲಹೆ-ಸೂಚನೆಗಳನ್ನು ಮಂಡಿಸಿದರು; ಸಾಹಿತ್ಯೋತ್ಸವ ಸಭೆ-ಸಮ್ಮೇಳನಗಳನ್ನು ನಡೆಸಿದರು; ಕನ್ನಡ ಕಾವ ಜಾಣ ಪರೀಕ್ಷೆಗಳ ವ್ಯವಸ್ಥೆ ಮಾಡಿದರು; 'ಕನ್ನಡ ಬಾವುಟ'ವೆಂಬ ಕವನ ಸಂಕಲನವನ್ನು ಸಂಪಾದಿಸಿ ಪ್ರಕಟಿಸಿದರು.

ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಪ್ರಥಮ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ ಅವಧಿಯಲ್ಲಿಯೂ ಅಕ್ಷರತೆಯ ಪ್ರಸಾರ, ಅಕ್ಷರಮಾಲೆಯ ಪಟಗಳ ಸಿದ್ಧತೆ, ವಯಸ್ಕರ ತಿಳಿವಳಿಕೆಯ ಪುಸ್ತಕಮಾಲೆ, ಮೊದಲ ತರಗತಿಗಳ ಸರಳ ಪುಸ್ತಕಗಳ ಪ್ರಕಟಣೆ—ಮೊದಲಾದ ಕ್ಷೇತ್ರಗಳಲ್ಲಿ ಶ್ರೀಯವರು ಕೈಗೊಂಡ ಕಾರ್ಯ ಮಹತ್ವದ್ದಾಗಿದೆ. ಅವರ ಪ್ರಯತ್ನದಿಂದಾಗಿ ಆ ಹಿಂದೆ ವಯಸ್ಕರ ಶಿಕ್ಷಣ ಸಮಿತಿಗೆ ಸರ್ಕಾರ ನೀಡುತ್ತಿದ್ದ ಸಹಾಯಧನವ ಪ್ರಮಾಣ ೧೨ ಸಾವಿರ ರೂಪಾಯಿಗಳಿಂದ ಒಂದು ಲಕ್ಷ ರೂಪಾಯಿಗಳಿಗೆ ಏರಿತು. ತಾವು ಅಧ್ಯಕ್ಷರಾಗಿದ್ದ ಕಾಲದಲ್ಲಿ ಅವರು ಒಂದು ಗ್ರಂಥಾಲಯವನ್ನೂ ಸ್ಥಾಪಿಸಿದರು.

ಕನ್ನಡವ ಹಾಗೂ ಕನ್ನಡಿಗರ ಹಿತರಕ್ಷಣೆಯೇ ಶ್ರೀಯವರ ಮುಖ್ಯ ವಿಚಾರವಾಗಿತ್ತು; ಪರಮ ಆಕಾಂಕ್ಷೆಯಾಗಿತ್ತು. ಕನ್ನಡದ ಹಾಗೂ ಕನ್ನಡಿಗರ ಏಳ್ಗೆ ಅವರ ಜೀವನದ ಮುಖ್ಯ ಧ್ಯೇಯವಾಗಿತ್ತು. ಕನ್ನಡ ನಾಡನ್ನು ಒಂದುಗೂಡಿಸಿ ಒಂದೇ ಆಡಳಿತಕ್ಕೆ ಒಳಪಡಿಸಿದಲ್ಲದೆ, ಕನ್ನಡಿಗರ ಸರ್ವಾಂಗೀಣ ಪ್ರಗತಿಯಾಗಲಾರದೆಂಬುದು ಅವರ ಖಚಿತ ಅಭಿಪ್ರಾಯವಾಗಿತ್ತು. ಆದ್ದರಿಂದ ಕನ್ನಡಿಗರಲ್ಲಿ ಸ್ವಾಭಿಮಾನವನ್ನು ಜಾಗೃತಿಗೊಳಿಸಿ, ಅವರಲ್ಲಿ ಕನ್ನಡ ಪ್ರೇಮವನ್ನು ಬಿತ್ತಿ, ಅವರನ್ನು ಕನ್ನಡ ಸೇವೆಗೆ ಸಿದ್ಧಪಡಿಸುವ ಉದ್ದೇಶದಿಂದ ಶ್ರೀಯವರು ಬಿಡುವಿಲ್ಲದೆ ಕನ್ನಡನಾಡಿನ ಉದ್ದಗಲದಲ್ಲೂ ಪ್ರವಾಸ ಮಾಡಿದರು, ಜನರನ್ನು ಒಡಿದೆಬ್ಬಿಸುವಂತಹ ಉಪನ್ಯಾಸಗಳನ್ನು ಮಾಡಿದರು. 'ಕರ್ನಾಟಕದಲ್ಲಿ ಪ್ರವಾಸ ಮಾಡುವುದು ಅವರಿಗೆ ತೀರ್ಥಯಾತ್ರೆಯಾಗಿತ್ತು; ಭಾಷಣ

ಮಾಡುವುದು ಅರ್ಚನೆಯಾಗಿತ್ತು ! ಮೈಸೂರು ರಾಜ್ಯಕ್ಕೂ ಕರ್ನಾಟಕದ ಇತರ ಭಾಗಗಳಿಗೂ ಸಂಪರ್ಕವೇ ಕಡಮೆಯಾಗಿದ್ದ ಕಾಲದಲ್ಲಿ ಶ್ರೀಕಂಠಯ್ಯನವರು ಎಲ್ಲೆಡೆ ಸುತ್ತಾಡಿ ಎಲ್ಲ ಕಡೆಯ ಜನರೊಡನೆಯೂ ಸ್ನೇಹಬೆಳೆಸಿ, ಎಲ್ಲರ ಗೌರವ ಆದರಗಳಿಗೂ ಪಾತ್ರರಾದರು. ರಾಜಕೀಯದಲ್ಲಿ ಪ್ರವೇಶಿಸದೆಯೇ, ಕರ್ನಾಟಕ ಒಂದಾಗಬೇಕು ಎಂಬ ಬಯಕೆಯನ್ನು ಎಲ್ಲರಲ್ಲಿ ಮೂಡಿಸುವುದಕ್ಕಾಗಿ ದುಡಿದರು. ಹೀಗೆ ಕರ್ನಾಟಕದ ಸಂಸ್ಕೃತಿಯ ಪ್ರತಿನಿಧಿಯಾದರು ; ಏಕೀಕರಣವೆಂಬ ಬಯಕೆಯ ಪ್ರತೀಕವಾದರು.

ತಮ್ಮ ವಿಪುಲ ಉಪನ್ಯಾಸಗಳಿಂದ ಶ್ರೀಯವರು ಸಾಧಿಸಿದ ಕಾರ್ಯ ಅವರ ಸಾಹಿತ್ಯ ನಿರ್ಮಿತಿಗಿಂತ ಕಡಮೆಯದೇನೂ ಅಲ್ಲ. "ಕನ್ನಡ ಜನವೆಲ್ಲ ಒಂದು, ಕನ್ನಡ ಕುಲವೆಲ್ಲ ಒಂದು, ಕನ್ನಡಿಗರು ಎಲ್ಲಿದ್ದರೂ ಒಂದೇ ಕುಟುಂಬಕ್ಕೆ ಸೇರಿದವರು" ಎಂಬ ಭಾವನೆಯನ್ನು ಜನರಲ್ಲಿ ಮೂಡಿಸುವಲ್ಲಿ ಶ್ರೀಯವರ ಉಪನ್ಯಾಸಗಳು ಸಂಪೂರ್ಣ ಯಶಸ್ಸುಗಳಿಸಿದುವು. ಅವರು ಹಳ್ಳಿ ಹಳ್ಳಿಗಳನ್ನೂ ಸಂದರ್ಶಿಸಿ, ಕರ್ನಾಟಕ ಸಂಘಗಳಿದ್ದೆಡೆಯೆಲ್ಲ ಉಪನ್ಯಾಸ ಮಾಡಿ, ಕರ್ನಾಟಕ ಸಂಸ್ಕೃತಿ-ಹಿರಿಮೆ-ವೈಭವಗಳನ್ನು ತಿಳಿಯಪಡಿಸಿ ಜನರಲ್ಲಿ ಕನ್ನಡ ಅಭಿಮಾನ ಬೆಳೆಸಿದರು. ಕರ್ನಾಟಕ ಏಕೀಕರಣದ ಅಗತ್ಯವನ್ನು ಸಾರಿ ಹೇಳಿದರಲ್ಲದೆ ತಾವೇ ಏಕೀಕೃತ ಕರ್ನಾಟಕದ ಚಿತ್ರವೊಂದನ್ನು ತಯಾರಿಸಿ, ಅದರಂತೆ ಒಂದು ಬಾವುಟವನ್ನೂ ಸಿದ್ಧಪಡಿಸಿ, ಅದನ್ನು ಹಿಡಿದುಕೊಂಡೇ ಪ್ರಚಾರ ಕಾರ್ಯಕ್ಕೆ ಹೊರಟರು. ಗಡಿನಾಡಿನಲ್ಲಿ ಹೊರನಾಡುಗಳಲ್ಲಿ ಕರ್ನಾಟಕ ಸಂಘಗಳು ಉದಯಿಸಲು ಕಾರಣರಾದರು; "ಕನ್ನಡಿಗರಿಗೆ ಕನ್ನಡವೇ ಗತಿ, ದಿಕ್ಕು" ಎಂದು ಘೋಷಿಸಿದರು; "ಸಿರಿಗನ್ನಡಂ ಗೆಲ್ಗೆ, ಕನ್ನಡ ತಾಯ್ ಬಾಳ್ಗೆ" ಎಂಬ ಬೀಜಮಂತ್ರಗಳನ್ನು ಕನ್ನಡಿಗರಿಗೆ ಉಪದೇಶಿಸಿದರು ; ಸಮಗ್ರ ಕರ್ನಾಟಕದ ಭಾವನೆಯನ್ನು ರೂಪಿಸಿ, ತಮ್ಮ ಕನ್ನಡ ತೇಜಸ್ಸನ್ನು ಸಾವಿರಾರು ಹೃದಯಗಳಲ್ಲಿ ಹರಿಯಬಿಟ್ಟರು.

ಕನ್ನಡಿಗರಲ್ಲಿ ಜಾಗೃತಿಯನ್ನು ಉಂಟುಮಾಡಿದ ದೃಷ್ಟಿಯಿಂದ ಶ್ರೀಯವರು "ಕನ್ನಡಕ್ಕಾಗಿ, ಯಾವ ಆಡಳಿತಕ್ಕೆ ಒಳಪಟ್ಟಿದ್ದರೂ ಕನ್ನಡ ಜನ ಒಂದು ಎಂಬ ಭಾವನೆಯನ್ನು ಬಿತ್ತಿ ಬೆಳೆಯಿಸುವುದಕ್ಕಾಗಿ, ಮಾಡಿದ ಕಾರ್ಯ ಹೊಸ ಸಾಹಿತ್ಯದ ನಿರ್ಮಾಣಕ್ಕೆ ಅವರು ಪ್ರೇರಣೆಯನ್ನು ಒದಗಿಸಿದ ಕಾರ್ಯಕ್ಕಿಂತ ಕಡಮೆ ಮಹತ್ವದ್ದು ಎಂದು ಸರ್ವಥಾ ಹೇಳಲಾಗುವುದಿಲ್ಲ" ಎನ್ನುತ್ತಾರೆ, ಶ್ರೀ ವಿ.ಎಂ. ಇನಾಂದಾರ್. ಸ್ವತಃ ಕೃತಿರಚನೆಗೆ ತೊಡಗುವುದಕ್ಕಿಂತ ಹೆಚ್ಚಾಗಿ ಉಳಿದವರೂ ಬರವಣಿಗೆಗೆ ತೊಡಗುವಂತೆ ಅವರು ಮಾಡಿದರು ; ಬರೆಯುವವರ ಒಂದು ಸೈನ್ಯವನ್ನೇ ನಿರ್ಮಿಸಿದರು.

ಕನ್ನಡದ ಬಗ್ಗೆ ಕನ್ನಡಿಗರೇ ಅಭಿಮಾನಶೂನ್ಯರಾಗಿದ್ದ ಕಾಲದಲ್ಲಿ, ಕನ್ನಡ ಭಾಷೆ ಇತರ ಯಾವುದೇ ಭಾಷೆಗಿಂತ ಕಡಮೆಯದಲ್ಲವೆಂದು ತೋರಿಸಿಕೊಟ್ಟು, ಕನ್ನಡಿಗರಲ್ಲಿ ಹೊಸ ಕೆಚ್ಚನ್ನು ಮೂಡಿಸಿದ ಕೀರ್ತಿ ಶ್ರೀಯವರಿಗೆ ಸಲ್ಲತಕ್ಕದ್ದಾಗಿದೆ. ಡಾ. ಹಾ. ಮಾ. ನಾಯಕರು ಹೇಳುವಂತೆ, "ಚಳವಳಿ ಎಂಬ ಮಾತಿನ ಅರ್ಥ ಈಗ ಸವೆದಿದೆ; ಕೆಟ್ಟಿದೆ. ಅದರ ನಿಜವಾದ ಅರ್ಥದಲ್ಲಿ ಶ್ರೀಕಂಠಯ್ಯನವರು ಕನ್ನಡದ ಮೊದಲನೆಯ ಚಳವಳಿಗಾರರು; ಕನ್ನಡ ಚಳವಳಿಯನ್ನು ಆರಂಭಿಸಿದವರೇ ಅವರು." ಅವರ ಲೇಖನಗಳಲ್ಲಿ, ಉಪನ್ಯಾಸಗಳಲ್ಲಿ ಈ ಕಾಲಕ್ಕೆ ಕೆಲವುಟ್ಟಿಗೆ ಅಸಹಜವೆನಿಸ ಬಹುದಾದ ಆವೇಶ ಕಂಡುಬರಬಹುದಾದರೂ, ಅವರ ಮಾತುಗಳು, ವಿಚಾರಗಳು, ಕನ್ನಡದ ಏಳ್ಗೆಗೆ, ಕನ್ನಡಿಗರ ಹಿತರಕ್ಷಣೆಗೆ, ಕರ್ನಾಟಕದ ಸಮಗ್ರ ಅಭಿವೃದ್ಧಿಗೆ ಮನಃಪೂರ್ವಕವಾಗಿ ಕೆಲಸಮಾಡಲು ಪ್ರಾಮಾಣಿಕವಾಗಿ ಅಪೇಕ್ಷಿಸುವ ಪ್ರತಿಯೊಬ್ಬ ವ್ಯಕ್ತಿ ಇಂದಿಗೂ ಮನನಮಾಡತಕ್ಕವಾಗಿವೆ; ಗೌರವಿಸತಕ್ಕವಾಗಿವೆ.

ಸಿ. ಪಿ. ಕೆ.

# ‘ಶ್ರೀ’ಯವರು ಮತ್ತು ಕನ್ನಡ ಇಲಾಖೆ

ಶ್ರೀಕಾರ ಬರೆದರು ಕನ್ನಡ ಕಣ್ವರು
ಆಕಾರಗೊಂಡೆವು ನಾವು
ಅದು ಪುನರುಜ್ಜೀವನದ ಕಥೆಯೆಂಬರು
ಅದು ಅವರೆಸಗಿದದ್ಭುತವು

—ಎಸ್. ವಿ. ಪರಮೇಶ್ವರ ಭಟ್ಟ

“ಶ್ರೀಯವರನ್ನು ನವಯುಗದ ಪ್ರವರ್ತಕರೆಂದರೆ ತಪ್ಪಾಗದು. ಅವರು ಬಯಲಿಗೆ ಬಂದುದೇನೋ ‘ಇಂಗ್ಲಿಷ್ ಗೀತಗಳು’ ಗ್ರಂಥರೂಪದಲ್ಲಿ ಹೊರಬಿದ್ದಮೇಲೆ. ಆದರೂ ಅವರ ಪ್ರಭಾವವು ಗುಪ್ತಗಾಮಿನಿಯಾದ ವಾಹಿನಿಯಂತೆ ಅನೇಕ ವೃಕ್ಷಗಳಿಗೆ ನೀರೆರೆದಿದೆ.”[1] ಹಾಗೆ ‘ಶ್ರೀ’ಯವರಿಂದ ನೀರೆರೆಸಿಕೊಂಡು, ಮುಂದೆ ಬೃಹತ್ತಾಗಿ ಶಾಖೋಪಶಾಖೆಯಾಗಿ ಬೆಳೆದು ಹಣ್ಣುಬಿಟ್ಟ ವೃಕ್ಷಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಇಲಾಖೆಯೂ ಒಂದು. ಈ ದಿಶೆಯಲ್ಲಿ ‘ಶ್ರೀ’ಯವರು ಮಾಡಿದ ಉಪಕಾರ ಬಹು ದೊಡ್ಡದು ; ಚಿರಸ್ಮರಣೆಗೆ ಯೋಗ್ಯವಾದದ್ದು.

‘ಶ್ರೀ’ಯವರಿಗೂ ಕನ್ನಡ ವಿಭಾಗಕ್ಕೂ ನಿಕಟ ಸಂಬಂಧ. ಅವರು ೧೯೦೯ರಲ್ಲಿ ಇಂಗ್ಲಿಷ್ ಮತ್ತು ಕನ್ನಡ ಅಧ್ಯಾಪಕರಾಗಿ ನೇಮಕಗೊಂಡರು[2] ; “ಆಗ ಕಾಲೇಜು ತರಗತಿಗಳಲ್ಲಿ ಎಷ್ಟು ಇಂಗ್ಲಿಷ್ ಪಾಠ ಹೇಳುತ್ತಿದ್ದರೋ ಅಷ್ಟು ಕನ್ನಡವನ್ನೂ—ಇಂಟರ್‌ಮೀಡಿಯೆಟ್ ತರಗತಿಗೆ, ಬಿ. ಎ. ತರಗತಿಗೆ—ಪಾಠ ಹೇಳುತ್ತಿದ್ದರು.” ಕನ್ನಡದಲ್ಲಿ ‘ಶ್ರೀ’ಯವರು ಪ್ರೌಢ ಶಿಕ್ಷಣ ಪಡೆದವರಲ್ಲವಾದರೂ, ಭಾಷೆ ಸಾಹಿತ್ಯ

---

1 ಕುವೆಂಪು, ತೀ. ನಂ. ಶ್ರೀಕಂಠಯ್ಯನವರಿಂದ ಉದ್ಧೃತ, ಪ್ರಸ್ತಾವನೆ, ‘ಇಂಗ್ಲಿಷ್ ಗೀತಗಳು’, ಪು. ೪೩.

2 ‘ಶ್ರೀ’ಯವರನ್ನು ಕರೆದು ಕಾಲೇಜಿನಲ್ಲಿ ಉದ್ಯೋಗ ಕೊಟ್ಟವರು ವಿಯರ್ ಸಾಹೇಬರು. ಅವರಿಂದಾಗಿ, ವಕೀಲರಾಗಬೇಕಿದ್ದ ‘ಶ್ರೀ’ಯವರು ಅಧ್ಯಾಪಕರಾದರು. ಅದು ಕನ್ನಡದ ಭಾಗ್ಯವಾಯಿತು.

ವ್ಯಾಕರಣ ಛಂದಸ್ಸು ಭಾಷಾಶಾಸ್ತ್ರ ಮುಂತಾದುವುಗಳಲ್ಲಿ ಹೇಗೊ ಪ್ರಗಾಢ ಪಾಂಡಿತ್ಯ ಸಂಪಾದಿಸಿದ್ದರು ; ತಮಿಳನ್ನೂ ಚೆನ್ನಾಗಿ ಬಲ್ಲವರಾಗಿದ್ದರು. ಈ ಎಲ್ಲದರ ಲಾಭವನ್ನು ಅವರು ತಮ್ಮ ಅಧ್ಯಾಪನ, ಬರವಣಿಗೆಗಳ ಮೂಲಕ ಕನ್ನಡಕ್ಕೆ, ಕನ್ನಡಿಗರಿಗೆ ದೊರಕಿಸಿಕೊಟ್ಟರು.

೧೯೧೪ ರಲ್ಲಿ 'ಶ್ರೀ'ಯವರು ಇಂಗ್ಲಿಷ್ ಉಪಪ್ರಾಧ್ಯಾಪಕರಾದರು ; ೧೯೧೯ರಲ್ಲಿ ಹಂಗಾಮಿಯಾಗಿ ದ್ವಿತೀಯ ದರ್ಜೆ ಇಂಗ್ಲಿಷ್ ಪ್ರಾಧ್ಯಾಪಕರಾದರು. ಅದಕ್ಕೆ ಮುನ್ನ, ಕನ್ನಡದಲ್ಲಿ ಪ್ರಥಮ ದರ್ಜೆ ಪ್ರಾಧ್ಯಾಪಕ ಹುದ್ದೆ ಬೇಕೊ, ಇಂಗ್ಲಿಷಿನಲ್ಲಿ ದ್ವಿತೀಯ ದರ್ಜೆ ಪ್ರಾಧ್ಯಾಪಕ ಹುದ್ದೆ ಬೇಕೊ ಎಂದು ಆಗಿನ ದಿವಾನರು ಅವರನ್ನು ಕೇಳಿದ್ದರಂತೆ. 'ಶ್ರೀ'ಯವರು ಎರಡನೆಯದನ್ನೆ ಆರಿಸಿಕೊಂಡರು. ಇದಕ್ಕೆ ಅಂದಿನ ಪರಿಸ್ಥಿತಿ ಕಾರಣ ವೆನ್ನಬೇಕು. "ಅಂದು ಕನ್ನಡ ಇದ್ದ ಸ್ಥಿತಿಯನ್ನು ನೆನಸಿಕೊಂಡರೆ ಅದಕ್ಕೆ ಬಂದಿರುವ ಇಂದಿನ ಗೌರವ ಆಶ್ಚರ್ಯಾವಹವಾಗಿದೆ. ಆಗ ಇಂಗ್ಲಿಷಿಗೆ, ಇಂಗ್ಲಿಷ್ ಉಪಾಧ್ಯಾಯರಿಗೆ ಅಗ್ರಸ್ಥಾನ ; ಅದನ್ನು ಪಾಠ ಹೇಳಲು ಇಂಗ್ಲಿಷರೇ ಆಗಬೇಕೆಂದು ನಮ್ಮ ಜನರು ವಾದಿಸುತ್ತಿದ್ದರು. ಆ ಭ್ರಮೆ ನಿರ್ಮೂಲವಾದದ್ದೆಂದು ಮೊದಲು ತೋರಿಸಿದವರು ದಿ|| ಬಿ.ಎಂ. ಶ್ರೀಕಂಠಯ್ಯನವರು."[3] ಹಾಗೆ ತೋರಿಸುವುದಕ್ಕಾಗಿ ಅವರು ದ್ವಿತೀಯ . ದರ್ಜೆ ಇಂಗ್ಲಿಷ್ ಪ್ರಾಧ್ಯಾಪಕ ಹುದ್ದೆಯನ್ನು ಅಂಗೀಕರಿಸಿದರು. ೧೯೨೬ರಲ್ಲಿ ಆ ಹುದ್ದೆ 'ಶ್ರೀ'ಯವರಿಗೆ ಖಾಯಂ ಆಯಿತು ; ಮುಂದೆ ೧೯೩೦ರಲ್ಲಿ ಅವರು ಪ್ರಥಮ ದರ್ಜೆ ಇಂಗ್ಲಿಷ್ ಪ್ರಾಧ್ಯಾಪಕರಾದರು.

ಈ ನಡುವೆ ೧೯೨೬ ರಿಂದ ೧೯೩೦ರ ವರೆಗೆ 'ಶ್ರೀ'ಯವರು ಮೈಸೂರು ವಿಶ್ವ ವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದರು. ಮೈಸೂರಿಗೆ ೧೯೧೬ರಲ್ಲಿ ಸ್ವತಂತ್ರ ವಿಶ್ವ ವಿದ್ಯಾನಿಲಯ ಎಂ. ವಿಶ್ವೇಶ್ವರಯ್ಯನವರ ಪ್ರಯತ್ನದಿಂದ ದೊರಕಿದ್ದರೂ, ಕನ್ನಡ ಎಂ. ಎ. ತರಗತಿ ಆರಂಭಗೊಂಡಿರಲಿಲ್ಲ. ಎಂ. ಎ. ಮಟ್ಟದ ಪ್ರೌಢ ವ್ಯಾಸಂಗಕ್ಕೆ ಕನ್ನಡ ಅರ್ಹವಲ್ಲ ಎಂಬುದು ಆ ಕಾಲದ ಭಾವನೆಯಾಗಿತ್ತು. ರಿಜಿಸ್ಟ್ರಾರ್ ಆಗಿದ್ದ 'ಶ್ರೀ'ಯವರು, ಆಗ ವೈಸ್‌ಛಾನ್ಸಲರ್ ಆಗಿದ್ದ ಬ್ರಜೇಂದ್ರನಾಥ ಶೀಲರೊಡನೆ ಕನ್ನಡ ಎಂ. ಎ. ಆರಂಭಿಸುವ ವಿಷಯದಲ್ಲಿ ಮಾತನಾಡಿದರು. ಬಂಗಾಳಿಯಾದ ಶೀಲರಿಗೆ ದೇಶಭಾಷೆಗಳ ಮೇಲೆ ಅಭಿಮಾನವಿದ್ದುದರಿಂದ, 'ಶ್ರೀ'ಯವರ ಸಲಹೆಯನ್ನವರು ಪುರಸ್ಕರಿಸಿದರು. ಈ ಇಬ್ಬರು ಮಹನೀಯರ ಸಾಹಸದಿಂದಾಗಿ ೧೯೨೭ರ ಜುಲೈ ತಿಂಗಳಲ್ಲಿ ಕನ್ನಡ ಎಂ.ಎ. ಶಿಕ್ಷಣ, ಸಾಕಷ್ಟು ವಿರೋಧದ ನಡುವೆ, ಆರಂಭವಾಯಿತು.

---

[3] ಎ.ಆರ್. ಕೃಷ್ಣಶಾಸ್ತ್ರೀ, 'ಭಾಷಣಗಳು ಮತ್ತು ಲೇಖನಗಳು' (೧೯೬೦), ಪು. ೨೯೫.

(ಅಂತೆಯೇ ಕನ್ನಡ ಆನರ್ಸ್ ಕೂಡ.) ಅದೊಂದು ಅಮೃತ ಮುಹೂರ್ತ. 'ಶ್ರೀ' ಯವರಿಂದ ತಳಹದಿಗೊಂಡ ಸ್ನಾತಕೋತ್ತರ ಕನ್ನಡ ವಿಭಾಗ ಇಂದು ಭವ್ಯ ಸೌಧವಾಗಿ ವರ್ಧಿಸಿದೆ. ಅದೊಂದು ಯಜ್ಞಕುಂಡ : ಅದರಿಂದ ಸಿಡಿದು ಹಾರಿದ ಕೆಂಡಗಳೆಷ್ಟು ! ಕಿಡಿಗಳೆಷ್ಟು ! ಅದರ ಆಶ್ರಯದಲ್ಲಿ ನಡೆದಿರುವ, ನಡೆಯುತ್ತಿರುವ ಕನ್ನಡದ ಕೆಲಸ ಅನಲ್ಪ. ಈ ಯಜ್ಞದ ಅಧ್ವರ್ಯು 'ಶ್ರೀ'.

ಕನ್ನಡ ಎಂ.ಎ. ನಿರುಪಯುಕ್ತವೆಂದೂ ಅದಕ್ಕೆ ತಗುಲುವ ವೆಚ್ಚ ವ್ಯರ್ಥವೆಂದೂ ಅನೇಕರು ವಾದಿಸುತ್ತಿದ್ದರು. ಆದ್ದರಿಂದ, 'ಶ್ರೀ'ಯವರು ಕನ್ನಡ ಎಂ. ಎ. ತರಗತಿಯನ್ನು ತೆರೆಯಲು ಏನೆಲ್ಲ ಉಪಾಯ ಮಾಡಬೇಕಾಯಿತು. ಅದನ್ನು ಎ. ಆರ್. ಕೃಷ್ಣಶಾಸ್ತ್ರಿಗಳು ಹೀಗೆ ತಿಳಿಸುತ್ತಾರೆ: "....ನಾನು ಏನೇನು ಮಾಡಬೇಕೆಂದು ತಿಳಿಸಿ, ಪ್ರೊ. ಹಿರಿಯಣ್ಣನವರೊಡನೆ ಮಾತನಾಡಿ ಒಂದು ಸಲಹೆಯನ್ನು ಬರೆದು ಕಳುಹಿಸುವಂತೆ ಮಾಡಿದರು—'ಹೆಚ್ಚು ಖರ್ಚು ತೋರಿಸಬೇಡ—ಈಗ ಇರುವ ಒಬ್ಬ ಅಸಿಸ್ಟೆಂಟ್ ಪ್ರೊಫೆಸರೇ ಇರಲಿ' ಎಂದು ಹೇಳಿದರು....ಕನ್ನಡಕ್ಕೆ ಸಂಸ್ಕೃತದ ಸಹಾಯ ಬೇಕೇ ಬೇಕೆಂದು ವ್ಯಾಸಂಗದಲ್ಲಿ ಅದನ್ನು ಕನ್ನಡದ ಭಾಗವಾಗಿ ಸೇರಿಸಿದವರು ಅವರು.... ಹಿರಿಯಣ್ಣನವರು ವ್ಯಾಸಂಗ ಕ್ರಮವನ್ನೆಲ್ಲಾ ಒಪ್ಪಿದರು. ಆದರೆ 'ಕನ್ನಡದ ಪ್ರಧಾನೋಪಾಧ್ಯಾಯರು, ಎಂ. ಎ. ತರಗತಿಗಳಿಗೆ ಪಾಠ ಹೇಳುವವರು ಅಸಿಸ್ಟೆಂಟ್ ಪ್ರೊಫೆಸರಾಗಿರುವುದೆಂದರೇನು, ಅವರು ಪ್ರೊಫೆಸರೇ ಆಗಿರಬೇಕು' ಎಂದು ಹಠ ಹಿಡಿದರು."[4] ಶಾಸ್ತ್ರಿಗಳು ಮುಂದುವರಿದು ಹೇಳುತ್ತಾರೆ: "ಕನ್ನಡದ ಪ್ರಾಧ್ಯಾಪಕರಾಗಿದ್ದ, ಆಗಿರುವ, ವೆಂಕಣ್ಣಯ್ಯನವರೂ, ನಾನೂ, ಪುಟ್ಟಪ್ಪನವರೂ, ತೀ. ನಂ. ಶ್ರೀಕಂಠಯ್ಯನವರೂ, ನರಸಿಂಹಾಚಾರ್ಯರೂ, ಎಲ್ಲರೂ ಹಿರಿಯಣ್ಣನವರಿಗೆ ಕೃತಜ್ಞರಾಗಿರಬೇಕು, ಬಿ. ಎಂ. ಶ್ರೀಯವರಿಗೆ ಕೃತಜ್ಞರಾಗಿರಬೇಕು. ಅವರು ಕನ್ನಡವನ್ನು ಎತ್ತದೆ ಇದ್ದಿದ್ದರೆ, ಇಂದೂ ಕನ್ನಡಕ್ಕೆ ಒಬ್ಬರೋ, ಇಬ್ಬರೋ, ಪಂಡಿತರು ಮಾತ್ರ ಇರುತ್ತಿದ್ದರೋ ಏನೋ !"[5]

ಬ್ರಜೇಂದ್ರನಾಥ ಶೀಲರು 'ಶ್ರೀ'ಯವರಿಗೊಂದು ಷರತ್ತು ಹಾಕಿಯೆ ಕನ್ನಡ ಎಂ. ಎ. ಮೊದಲು ಮಾಡಲು ಅನುಮತಿಸಿದ್ದು. 'ಶ್ರೀ'ಯವರು ನೂತನ ವಿಭಾಗದ ಮುಖ್ಯಸ್ಥರೂ ಗೌರವ ಪ್ರಾಧ್ಯಾಪಕರೂ ಆಗಿರಬೇಕೆಂಬುದು ಆ ಷರತ್ತು. 'ಶ್ರೀ' ಅದನ್ನೊಪ್ಪಿ, ಕನ್ನಡದ ಗೌರವ ಪ್ರಾಧ್ಯಾಪಕರಾಗಿ ಮನ್ನಣೆಗೊಂಡು ಕನ್ನಡ ಎಂ. ಎ. ತರಗತಿಗೆ ವಾರಕ್ಕೆ ಎರಡು ಗಂಟೆ ಪಾಠ ತೆಗೆದುಕೊಳ್ಳುತ್ತಿದ್ದರು. ಅವರು ಸೆಂಟ್ರಲ್

---

4 ಅದೇ, ಪು. ೨೯೮. 5 ಅದೇ, ಪು. ೨೯೮–೯೯.

ಕಾಲೇಜಿಗೆ ಹಿರಿಯ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಹೋದಮೇಲೂ, ವಿಶ್ವವಿದ್ಯಾನಿಲಯದ ಸಭೆಗಳಿಗಾಗಿ ಮೈಸೂರಿಗೆ ಬಂದಾಗ ಕನ್ನಡ ಪಾಠ ಹೇಳುತ್ತಿದ್ದರು.

'ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ'ಯನ್ನು ಯೋಜಿಸಿ, ಅದರ ಪ್ರಧಾನ ಸಂಪಾದಕರೂ 'ಕನ್ನಡ ಪ್ರಕಟನ ಸಮಿತಿ'ಯ ಅಧ್ಯಕ್ಷರೂ ಆಗಿ 'ಶ್ರೀ' ಯವರು ಮಾಡಿದ ಕಾರ್ಯವನ್ನಿಲ್ಲಿ ಅಗತ್ಯವಾಗಿ ನೆನೆಯಬೇಕು. ಗ್ರಂಥಮಾಲೆಯ ಸ್ವರೂಪವನ್ನು ಅವರೆ ಹೀಗೆ ನಿರೂಪಿಸಿದ್ದಾರೆ : (೧) ಈ ನವೀನ ಕಾಲಕ್ಕೆ ಬೇಕಾದ ಮತ್ತು ಜನಸಾಮಾನ್ಯಕ್ಕೆ ಜ್ಞಾನವನ್ನು ಹರಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ ಮುಂತಾದ ವಿಷಯಗಳನ್ನು ಲಲಿತವಾದ ಹೊಸಗನ್ನಡ ಶೈಲಿಯಲ್ಲಿ, ವಿವಾದಾಸ್ಪದವಲ್ಲದ ನಿಷ್ಪಕ್ಷವಾದ ರೀತಿಯಲ್ಲಿ ತಿಳಿಸತಕ್ಕವು. ಇವು ಸ್ವತಂತ್ರ ಗ್ರಂಥಗಳಾಗಿರಬಹುದು ; ಅಥವಾ ಭಾಷಾಂತರಗಳಾಗಿರಬಹುದು, ಸಂಕಲನಗಳಾಗಿರಬಹುದು. (೨) ಕನ್ನಡದ ಪೂರ್ವದ ಸಾಹಿತ್ಯವನ್ನು ಜನರಲ್ಲಿಯೂ ವಿದ್ಯಾರ್ಥಿ ವರ್ಗದಲ್ಲಿಯೂ ಹೆಚ್ಚು ಪ್ರಚಾರಕ್ಕೆ ತರುವುದಕ್ಕಾಗಿ, ಉತ್ತಮ ಕಾವ್ಯಗಳ ಸಂಗ್ರಹಗಳು. ಇವು ವಿದ್ಯಾರ್ಥಿಗಳ ಪಾಠಕ್ಕೆ ಅನುಕೂಲವಾಗಿರಬೇಕು ; ಮೂಲಪ್ರತಿಗಳನ್ನು ಪರಿಶೋಧಿಸಿದ ಶುದ್ಧಪಾಠವನ್ನು ಒಳಕೊಂಡು, ಪೀಠಿಕೆ, ಶಬ್ದಕೋಶ, ಆವಶ್ಯಕವಾದ ಟಿಪ್ಪಣಿಗಳೊಡನೆ ಕೂಡಿರಬೇಕು.

ಕನ್ನಡಿಗರಿಗೆ ಜ್ಞಾನವಿಜ್ಞಾನಗಳ ನವನಿಧಿಯೊಂದನ್ನು ಒದಗಿಸಬೇಕು ಎಂಬುದು ಮಾತ್ರವಲ್ಲವೆ, ಕನ್ನಡದಲ್ಲಿ ಎಲ್ಲವನ್ನೂ ಹೇಳುವುದು ಶಕ್ಯವೆಂಬುದನ್ನು ತೋರಿಸಿಕೊಡಬೇಕು ಎಂಬುದು, ಈ ಗ್ರಂಥಮಾಲೆಯನ್ನು ಆರಂಭಿಸುವಲ್ಲಿ 'ಶ್ರೀ'ಯವರ ಉದ್ದೇಶವಾಗಿತ್ತು. ಅದು ಎಷ್ಟು ಯಶಸ್ವಿಯಾಯಿತೆಂಬುದು ಇಂದು ಎಲ್ಲರಿಗೂ ತಿಳಿದ ವಿಷಯ. ಕನ್ನಡ ಮಾಧ್ಯಮದ ಆವಶ್ಯಕತೆಯನ್ನು 'ಶ್ರೀ'ಯವರು ಮನಗಂಡು, ಒತ್ತಿ ಹೇಳಿದರು. ಸರ್ವೋದಯಸಿದ್ಧಿಗೆ ದೇಶಭಾಷಾ ಮಾಧ್ಯಮವೊಂದು ಅನಿವಾರ್ಯ ಸಾಧನ. 'ಶ್ರೀ' ಯವರದು ಸರ್ವೋದಯ ದೃಷ್ಟಿ.

"ಕನ್ನಡ ಸಾಹಿತ್ಯವನ್ನು ಓದುವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಕನ್ನಡದಲ್ಲಿ ಒಂದು ಕೈಪಿಡಿಯನ್ನು" ಬರೆಯಿಸುವ ಏರ್ಪಾಟೂ 'ಶ್ರೀ' ಅವರದೇ. ಅದಕ್ಕಾಗಿ ರಚಿತವಾದ ಸಮಿತಿಗೆ ಅವರೇ ಅಧ್ಯಕ್ಷರು. ಐದು ಭಾಗಗಳನ್ನೊಳಗೊಂಡು, ೧೯೨೭ರಲ್ಲಿ ಹೊರಬಂದ 'ಕನ್ನಡ ಕೈಪಿಡಿ' ಉದ್ದಿಷ್ಟ ವಿದ್ಯಾರ್ಥಿಗಳಿಗೆ ಮಾತ್ರವಲ್ಲ, ಇತರರಿಗೂ ಅತ್ಯಂತ ಉಪಾದೇಯವಾಗಿದೆ. ಅದರ ಕನ್ನಡ ಸಾಹಿತ್ಯಚರಿತ್ರೆಯ ಭಾಗಕ್ಕೆ 'ಶ್ರೀ'ಯವರೇ ಲೇಖಕರು ; ಕನ್ನಡ ಛಂದಸ್ಸಿನ ಚರಿತ್ರೆಯೂ ಅವರದೇ. ಕನ್ನಡ

ಭಾಷೆಯ ಚರಿತ್ರೆಗೆ ಅವರು ಸಹ ಲೇಖಕರು. ಈ 'ಕನ್ನಡ ಕೈಪಿಡಿ'ಯ ಉಪಯುಕ್ತತೆ ಇಂದಿಗೂ ಕುಗ್ಗಿಲ್ಲ.

'ಶ್ರೀ'ಯವರು ಮಹಾರಾಜಾ ಕಾಲೇಜಿನ ಕರ್ಣಾಟಕ ಸಂಘದ ಅಧ್ಯಕ್ಷರೂ 'ಪ್ರಬುದ್ಧ ಕರ್ಣಾಟಕ'ದ ಸಂಪಾದಕ ಮಂಡಲಿಯ ಅಧ್ಯಕ್ಷರೂ ಆಗಿ ದುಡಿದರು. ಕೆಲವು ದತ್ತಿಗಳ ವ್ಯವಸ್ಥೆಯನ್ನೂ ಅವರು ಮಾಡಿದರು. ಅವರು ರಿಜಿಸ್ಟ್ರಾರ್ ಆಗಿದ್ದಾಗ ವಿದ್ಯಾರ್ಥಿಗಳನ್ನು ಸೇರಿಸಿ, ಅಧ್ಯಯನ ಗೋಷ್ಠಿ (Study Circle) ಗಳನ್ನು ರೂಪಿಸಿದರು. ಅಲ್ಲಿ ಕನ್ನಡ ಭಾಷಾ ಚರಿತ್ರೆ, ಕನ್ನಡ ಮತ್ತು ದ್ರಾವಿಡ ಛಂದಸ್ಸು ಮೊದಲಾದುವನ್ನು ಕುರಿತು ಖಾಸಗಿ ಉಪನ್ಯಾಸಗಳನ್ನು ಕೊಡುತ್ತಿದ್ದರು. ಮಹಾರಾಜಾ ಕಾಲೇಜಿನಲ್ಲಿ 'ಶ್ರೀ'ಯವರು ಮಾಡಿದ ಸಣ್ಣಪುಟ್ಟ ಕೆಲಸಗಳೆಷ್ಟೋ. ಉದಾಹರಣೆಗೆ, ಅವರು ಕಾಲೇಜಿನ ಕನ್ನಡ ಪುಸ್ತಕ ಸೂಚಿಕೆಯನ್ನು ಬರೆದುಕೊಟ್ಟರಂತೆ.

'ಶ್ರೀ'ಯವರ ಬೋಧನ ವಿಧಾನವನ್ನು ಕುರಿತು ಅವರ ಕೆಲವರು ಶಿಷ್ಯರು ಬರೆದಿದ್ದಾರೆ. ವಿ.ಸೀ. ಅವರು ಹೇಳುತ್ತಾರೆ: "ಕನ್ನಡ ಪಾಠ ಹೇಳುವಾಗ ಕನ್ನಡಕ್ಕೆ ಹೊಸದಾದ ಬೋಧನಮಾರ್ಗವನ್ನು ಹೊಸಕಾಲದ ದೃಷ್ಟಿ ಧ್ಯೇಯಗಳಿಂದ ಕಲಿಸಬೇಕೆಂಬ ಉದ್ದೇಶದಿಂದ 'ಶ್ರೀ'ಯವರು ಕನ್ನಡದ ಪಾಠವನ್ನು ಆವರೆಗೂ ಇಲ್ಲದಿದ್ದ ಒಂದು ರೀತಿಯಲ್ಲಿ ಮಾಡಿ, ಪ್ರತಿಷ್ಠೆಯನ್ನೂ ಕೀರ್ತಿಯನ್ನೂ ಜೊತೆಗೇ ಮೊದಲು ತಂದರು."[6] ಎ. ಆರ್. ಕೃ. ಅವರ ಹೇಳಿಕೆಯಿದು: "ಅವರ ಬೋಧನ ಕ್ರಮದಲ್ಲಿ ಇಂಗ್ಲಿಷ್ ತರಗತಿಗಳಿಗೆ ಕನ್ನಡದ ಉಪಯೋಗವೂ, ಕನ್ನಡ ತರಗತಿಗೆ ಇಂಗ್ಲಿಷಿನ ಉಪಯೋಗವೂ ಆಗುತ್ತಿತ್ತು. ಇಂಗ್ಲಿಷ್ ಪಾಠದಲ್ಲಿ ಒಂದು ರಸವತ್ತಾದ ಅಥವಾ ಮಹತ್ತಿನ ಸಂಗತಿ ಬಂದರೆ ಅದನ್ನು ಕನ್ನಡದಲ್ಲಿ ತರುವುದು ಹೇಗೆ ಎಂದು ಮೊದಲು ಯೋಚನೆ ಹೊರಡುತ್ತಿತ್ತು. ಸಾಹಿತ್ಯವನ್ನು ಐತಿಹಾಸಿಕ ದೃಷ್ಟಿಯಿಂದಲೂ ತುಲನಾತ್ಮಕ ದೃಷ್ಟಿಯಿಂದಲೂ ಓದಿದರೇ ನಿಜವಾದ ಬೆಲೆಕಟ್ಟುವ ವಿಮರ್ಶಬುದ್ಧಿ ಬರುವುದೆಂಬುದನ್ನು ಅವರು ತೋರಿಸಿಕೊಟ್ಟರು. ವ್ಯಾಸಂಗಮಾಡಿದ್ದನ್ನು ಜೀರ್ಣಿಸಿಕೊಂಡು ಉಪಯೋಗಿಸಿಕೊಳ್ಳುವುದನ್ನು ಹೇಳಿಕೊಟ್ಟವರು ಅವರು. ಸಾಹಿತ್ಯ ಸೌಂದರ್ಯವನ್ನು ಸವಿದು ಆನಂದಪಡುವುದನ್ನು ಹೇಳಿಕೊಟ್ಟವರು ಅವರು. ನಿಮ್ಮ ಓದುಮನೆಯ ಕಿಟಕಿಗಳನ್ನು ತೆರೆಯಿರಿ, ಎಲ್ಲೆಲ್ಲಿಂದ ಬೆಳಕು ಬಂದರೂ ಅದನ್ನು ಬರಮಾಡಿಕೊಳ್ಳಿ, ಸೂರ್ಯನನ್ನು ಎಲ್ಲೆಲ್ಲಿ ಕಂಡರೆ ಅಲ್ಲಲ್ಲಿ ಕೈ ಮುಗಿಯಿರಿ ಎಂದು ಸಂಸ್ಕೃತಿ ಪ್ರಪಂಚದಲ್ಲಿ ಒಂದು ವಿಶ್ವವಿಶಾಲ ಭಾವನೆಯನ್ನು ಬೆಳೆಸಿದವರು ಅವರು;

---

6 ವಿ.ಸೀ., ಪರಿಚಯ–ಕಾಣಿಕೆ, 'ಶ್ರೀ ಸಾಹಿತ್ಯ', ಪು. ೬

ಹೀಗೆ ಪಾಶ್ಚಾತ್ಯ ಸಾಹಿತ್ಯವೆಂದರೆ ಬರಿಯ ಇಂಗ್ಲಿಷ್ ಸಾಹಿತ್ಯವಲ್ಲ, ಅವೆಲ್ಲಕ್ಕೂ ಮೂಲವಾದ, ಮೇಲಾದ, ಗ್ರೀಕ್ ಸಾಹಿತ್ಯವಿದೆ ಎಂದು ಅದನ್ನು ಶಿಕ್ಷಣಕ್ಷೇತ್ರಕ್ಕೆ, ಸೃಷ್ಟಿ ಕ್ಷೇತ್ರಕ್ಕೆ ತಂದವರು ಅವರು. ಈ ಕೆಲಸವನ್ನು ಅವರು 'ಅಶ್ವತ್ಥಾಮನ್' 'ಪಾರಸಿಕರು'ಗಳನ್ನು ಬರೆದು ಮಾಡಿದ್ದಕ್ಕಿಂತ ಹೆಚ್ಚಾಗಿ ಪಾಠ ಹೇಳಿ ಮಾಡಿದರು. ಕನ್ನಡದ ಕಡೆಯಲ್ಲಿಯೂ ಹೀಗೆಯೇ ತಮಿಳಿನ ಪ್ರಾಶಸ್ತ್ಯವನ್ನು ತೋರಿಸಿದರು—ಮೈಸೂರು ವಿಶ್ವವಿದ್ಯಾನಿಲಯದಲ್ಲಿ, ನಮಗೆ ತಿಳಿದಮಟ್ಟಿಗೆ, ಗ್ರೀಕ್ ಸಾಹಿತ್ಯ ತಮಿಳು ಸಾಹಿತ್ಯಗಳ ಪ್ರಚಾರ ಮಾಡಿದವರು, ಅವರಂಥವರು ಇನ್ನೊಬ್ಬರಿಲ್ಲ."[7]

ಕನ್ನಡ ಇಲಾಖೆಯ ಕಿರಿಯರನ್ನು 'ಶ್ರೀ' ಹೇಗೆ ಪ್ರೋತ್ಸಾಹಿಸುತ್ತಿದ್ದರು, ಅವರ ಬರವಣಿಗೆಗೆ ಹೇಗೆ ಉತ್ತೇಜನ ಕೊಟ್ಟು ಕನ್ನಡದ ಕಾಯಕಕ್ಕೆ ಅವರನ್ನು ಹುರಿದುಂಬಿಸುತ್ತಿದ್ದರು ಎಂಬುದಕ್ಕೆ ಹಲವಾರು ನಿದರ್ಶನಗಳಿವೆ. ಎ.ಆರ್.ಕೃ. ಕೃತಜ್ಞತೆಯಿಂದ ಹೇಳುತ್ತಾರೆ: "ನಾನು ೫೦ ರೂ. ಸಂಬಳಕ್ಕೆ ಸೆಂಟ್ರಲ್ ಕಾಲೇಜಿನಲ್ಲಿ ಕೆಲಸಕ್ಕೆ ಸೇರಿದೆ. ನನ್ನನ್ನು ಅಲ್ಲಿ ಸೇರಿಸಿದವರು ಶ್ರೀಮಾನ್ ಬಿ.ಎಂ. ಶ್ರೀಕಂಠಯ್ಯನವರು ; ಅವರ ಹೃದಯ ಒಳ್ಳೆಯದು. ಅವರು ಕೊಡಿಸಿದ ೫೦ ರೂ. ಕಾಲಕ್ರಮದಲ್ಲಿ ೫೦೦ ರೂ. ಆಯಿತು. ಅಂಥ ಅದೃಷ್ಟ ನನಗೊಬ್ಬನಿಗೇ ಲಭಿಸಿದ್ದು. ಅಂಥ ಅಭಿಮಾನ ಅವರೊಬ್ಬರಿಗೇ ಇದ್ದದ್ದು."[8] ; "ಕನ್ನಡಕ್ಕೆ ನನ್ನನ್ನು ಸೇರಿಸಿದವರು ಅವರು. ಧೈರ್ಯ ಹೇಳಿ ಪ್ರೋತ್ಸಾಹ ಕೊಟ್ಟು ಕೆಲಸ ಮಾಡಿಸಿದವರು ಅವರು. ಇಂದು ನಾನು ಬರೆದಿರುವ ಬಹುಭಾಗದ ಬರವಣಿಗೆ ಅವರ ನಿರ್ಬಂಧವಿಲ್ಲದಿದ್ದರೆ ಬರುತ್ತಿತ್ತೋ ಇಲ್ಲವೋ !"[9] ; "....ಚರಿತ್ರೆಯನ್ನು ಬಿಟ್ಟು ಐಚ್ಛಿಕ ಕನ್ನಡ ಸಂಸ್ಕೃತಗಳ ತರಗತಿಗೆ ಸೇರಬೇಕೆಂದು ನಿರ್ಧರಿಸಿದೆ. ಪಠ್ಯವಾಗಿಟ್ಟಿದ್ದ ಪುಸ್ತಕಗಳನ್ನು ಕೇಳಿ ಕನ್ನಡ ಪಂಡಿತರು ಹೆದರಿದವರು, ಹೆದರಿಸಿದರು. ನಾನು ಶ್ರೀಕಂಠಯ್ಯನವರನ್ನು ಕಂಡು ಕೇಳಿದೆ. ಅವರು 'ಅಗತ್ಯವಾಗಿ ಈ ವಿಭಾಗಕ್ಕೆ ಸೇರಿಕೋ !' ಎಂದರು. ನಾನು ಶಬ್ದಮಣಿದರ್ಪಣ ಇಟ್ಟಿದ್ದಾರಲ್ಲ, ಅದು ತುಂಬ ಕಷ್ಟವಂತಲ್ಲ, ಸೂತ್ರ ವೃತ್ತಿಗಳನ್ನೆಲ್ಲಾ ಉರುಹಚ್ಚಬೇಕಂತಲ್ಲ ! ' ಎಂದು ಕೇಳಿದೆ. ಅವರು 'ಹೆದರಬೇಡ, ಬಾ ! ನಾನು ಎಲ್ಲಾ ಸುಲಭ ಮಾಡಿಕೊಡುತ್ತೇನೆ ! ' ಎಂದು ಧೈರ್ಯ ಹೇಳಿದರು. ಅವರ ಈ ಧೈರ್ಯ ಪ್ರೋತ್ಸಾಹಗಳು ನನಗೆ ಅವರಿರುವವರೆಗೂ ಇದ್ದುವು."[10]

---

7 ಎ.ಆರ್.ಕೃ., ಪೂರ್ವೋಕ್ತ, ಪು. ೪೫೧-೫೨.

8 ಅದೇ, ಪು. ೨೯೫—೯೬. 9 ಅದೇ, ಪು. ೨೯೯. 10 ಅದೇ, ಪು. ೩೦೦.

ಕುವೆಂಪು ಅವರ ಅನುಭವವೂ ಈ ಬಗೆಯದೇ. ತಮ್ಮ 'ಕೊಳಲು' ಕೃತಿಗೆ ಮುನ್ನುಡಿ ಬರೆಸುವುದಕ್ಕಾಗಿ ಕುವೆಂಪು ಸಂಕೋಚದಿಂದ 'ಶ್ರೀ'ಯವರ ಬಳಿಗೆ ಹೋದಾಗ, ಹೀಗಾಯಿತು : "ಅವರು ನನ್ನನ್ನು ಒಳಕ್ಕೆ ಕರೆದು, ಓದುವ ಕೊಠಡಿಯಲ್ಲಿಯೆ ಕುರ್ಚಿ ಕೊಟ್ಟು ಕುಳ್ಳಿರಿಸಿ, ನನ್ನ ಹತ್ತಿರಕ್ಕೆ ತಮ್ಮ ಕುರ್ಚಿ ಎಳೆದುಕೊಂಡು ಕುಳಿತು, ಅತ್ಯಂತ ಆತ್ಮೀಯವಾಗಿ ಮಾತಾಡಿಸಿದರು! ...ಅವರ ಮುಂದೆ ಹಸ್ತಪ್ರತಿ ಇಟ್ಟೆ. ಕನ್ನಡದ ಅಭ್ಯುದಯಕ್ಕಾಗಿ ಸೊಂಟ ಕಟ್ಟಿ ದುಡಿದು ತಪಸ್ಸು ಮಾಡುತ್ತಿದ್ದ ಅವರಿಗೆ ತುಂಬ ಸಂತೋಷವಾಗಿ ಒಡನೆಯೆ ಮುನ್ನುಡಿ ಬರೆಯಲು ಒಪ್ಪಿದರು.... ಅತ್ಯಂತ ಆತ್ಮೀಯವಾದ, ಅತ್ಯಂತ ಪ್ರೋತ್ಸಾಹಕರವಾದ, ಅತ್ಯಂತ ಹೃತ್ಪೂರ್ವಕವಾದ ಪ್ರಶಂಸೆಯ ಆ ಮುನ್ನುಡಿ, ಅವರ ಆಶೀರ್ವಾದದೊಡನೆ ನನ್ನ ಕೈ ಸೇರಿತು."[11] "ರೂಢಿಯ ಸಾಮಾನ್ಯ ನಿಯಮಗಳನ್ನು ಬದಿಗೊತ್ತಿ" ಕುವೆಂಪು ಅವರನ್ನು ಅಧ್ಯಾಪಕರನ್ನಾಗಿ ನೇಮಿಸಿದವರು ರಿಜಿಸ್ಟ್ರಾರ್ ಆಗಿದ್ದ 'ಶ್ರೀ' ಅವರು. ಆಗ ನಡೆದ ಸಂಗತಿಯೊಂದು ಉಲ್ಲೇಖನೀಯ : "ನನ್ನ ನೇಮಕದ ಆರ್ಡರನ್ನು ನನಗೆ ಕಳಿಸುವ ಮುನ್ನ ಆಫೀಸಿನ ಮುಖ್ಯ ಕರಣಿಕನು—ಆತ ಜಾತಿ ಬ್ರಾಹ್ಮಣ—ರಿಜಿಸ್ಟ್ರಾರ್ ಬಳಿಗೆ ನೇಮಕಾಜ್ಞೆಯನ್ನು ತೆಗೆದುಕೊಂಡು ಹೋಗಿ, ನಿಯಮಭಂಗವಾದದ್ದನ್ನು ತೋರಿಸಿ, 'ಸಾರ್, ರೂಲ್ಸಿನ ಪ್ರಕಾರ ಎಲ್ಲರನ್ನೂ ತಿಂಗಳಿಗೆ ೭೫ ರೂ. ನಂತೆ ನೇಮಕ ಮಾಡಬೇಕು. ಇವರಿಗೆ ೧೦೦ ರೂಪಾಯಿ ಮಾಡಿಬಿಟ್ಟಿದ್ದೀರಿ, ಆಮೇಲೆ 'ಅಬ್ಜೆಕ್ಷನ್' ಬರುತ್ತೆ .. ....' ಎಂದೆಲ್ಲ ತನ್ನ ಕರ್ತವ್ಯಪ್ರಜ್ಞೆ ಪ್ರದರ್ಶನ ಮಾಡಿದನಂತೆ. ಅದಕ್ಕೆ ಅವರು ಮುಗುಳುನಗುತ್ತಾ ಹೇಳಿದರಂತೆ : 'ಮಿಸ್ಟರ್.. ಯ್ಯ, ಎಲ್ಲಿ ಸಿಗುತ್ತಾರ್ರಿ ನಿಮಗೆ ಅವರಂಥವರು, ಸಾವಿರ ರೂಪಾಯಿ ಕೊಟ್ಟರೂ ?....ಇವೊತ್ತೆ ಆರ್ಡರ್ ಕಳಿಸಿಬಿಡಿ'."[12]

ಈ ಹೇಳಿಕೆಯನ್ನೂ ಗಮನಿಸಬಹುದು : "೧೯೨೭ರ ಜುಲೈಯಿಂದ ೧೯೨೯ರ ಮಾರ್ಚ್‌ವರೆಗೆ ಮೈಸೂರಿನಲ್ಲಿ ಕಳೆದ ಕನ್ನಡ ಅಧ್ಯಯನ ಕಾಲ ನನ್ನ ಜೀವನದಲ್ಲಿ ಎಂದೂ ಮರೆಯಲಾಗದ ಕಾಲ. ಕನ್ನಡದ ಎಂ. ಎ. ತರಗತಿಯಲ್ಲಿ ನನ್ನ ಪುಣ್ಯವಿಶೇಷದಿಂದ ಸಹಪಾಠಿಗಳಾಗಿದ್ದ ವಿದ್ಯಾರ್ಥಿಗಳು ಶ್ರೀಗಳಾದ ಕೆ. ವಿ. ಪುಟ್ಟಪ್ಪ, ಡಿ.ಎಲ್. ನರಸಿಂಹಾಚಾರ್ಯ, ಕೆ. ವೆಂಕಟರಾಮಪ್ಪ ಮುಂತಾದವರು. ಜೊತೆಗೆ ಶ್ರೀ ಟಿ.ಎನ್. ಶ್ರೀಕಂಠಯ್ಯ ತರಗತಿಗೆ ಬರುತ್ತಿದ್ದರು. ಒಬ್ಬೊಬ್ಬರ ಹೃದಯಾಕಾಶ

---

11 ಕುವೆಂಪು, 'ನೆನಪಿನ ದೋಣಿಯಲ್ಲಿ,' ಪು. ೯೦೨.

12 ಅದೇ, ಪು. ೭೫೭.

ದಲ್ಲಿ ಅನರ್ಘ್ಯವಾದ ಕನ್ನಡದ ಕೃತಿರತ್ನಗಳು ಅಮೂರ್ತ ಸ್ಥಿತಿಯಲ್ಲಿ ಹುದುಗಿಕೊಂಡಿದ್ದವು. ಅವುಗಳಿಗೆ ಮೂರ್ತಸ್ವರೂಪವನ್ನು ಕೊಟ್ಟು ಪ್ರಕಟವಾಗುವಂತೆ ಮಾಡಿದ ಕುಶಲಕರ್ಮಿಗಳು ಮೂವರು ಪ್ರಾಧ್ಯಾಪಕರು : ಪ್ರೊ. ಬಿ. ಎಂ. ಎಸ್. ಅವರು, ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು, ಪ್ರೊ. ಕೃಷ್ಣಶಾಸ್ತ್ರಿಗಳು."[13]

ಇದು ಕನ್ನಡ ಇಲಾಖೆಯ ಶ್ರೀ ಪರಂಪರೆಯ ನಾಂದಿಯ ಸಂಕ್ಷಿಪ್ತ ಕಥೆ. ಎ.ಆರ್.ಕೃ. ಹೇಳುತ್ತಾರೆ : "ಬಿ. ಎಂ. ಶ್ರೀಯವರಂಥ ಒಬ್ಬ ಸಮರ್ಥರಾದ ವ್ಯಕ್ತಿ ಸರಿಯಾದ ಸ್ಥಾನಕ್ಕೆ ಬಂದಿದ್ದರಿಂದ ಐವತ್ತು ವರ್ಷ ನಾವು ಅದರ ಸತ್ಫಲವನ್ನು ಅನುಭವಿಸಿದ್ದೇವೆ. ಮುಂದೆ ಇನ್ನೂ ಐವತ್ತು ವರ್ಷವಾದರೂ ಆ ಫಲ ದೊರಕುತ್ತಿರುತ್ತದೆ."[14] ಇನ್ನು ಐವತ್ತು ವರ್ಷ ಮಾತ್ರವಲ್ಲ, ನೂರು ವರ್ಷವಾದರೂ ಅಷ್ಟೆ.

---

13 ಡಿ.ಕೆ. ಭೀಮಸೇನರಾವ್, 'ಎ.ಆರ್.ಕೃ: ಜೀವನ-ಸಾಧನೆ', ಸಂ. ಹಾ.ಮಾ. ನಾಯಕ್, ಎಚ್. ತಿಪ್ಪೇರುದ್ರಸ್ವಾಮಿ, ಪು. ೧೯೪.

14 ಎ.ಆರ್.ಕೃ., ಪೂರ್ವೋಕ್ತ, ಪು. ೩೦೫.

ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ

# ಶ್ರೀಯವರು ಮತ್ತು ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರ ಆಶೋತ್ತರಗಳನ್ನು ಪ್ರತಿನಿಧಿಸುವ ಹಾಗೂ ಪ್ರತಿಬಿಂಬಿಸುವ ಒಂದು ಮಾತೃಸಂಸ್ಥೆ. ಅದನ್ನು ಕಟ್ಟಿ ಬೆಳಸಿದ ಮಹನೀಯ ವ್ಯಕ್ತಿಗಳಲ್ಲಿ ಬಿ. ಎಂ. ಶ್ರೀಕಂಠಯ್ಯನವರ ಹೆಸರು ಒಂದು ಉಜ್ಜ್ವಲವಾದ ಹೆಸರು. ಪರಿಷತ್ತಿಗೆ ಅವರಿಂದ ಸಂದಿರುವ ಸೇವೆ ಸಹಾಯುಗಳು ಶಾಶ್ವತ ಪ್ರಯೋಜನಗಳನ್ನು ನೀಡಿರುವಂಥವು; ಅದರ ಕೀರ್ತಿ ಸಂಪತ್ತನ್ನೂ ಅರ್ಥ ಸಂಪತ್ತನ್ನೂ ಹೆಚ್ಚಿಸಿರುವಂಥವು. ಸುತ್ತಲೂ ಉದಾಸೀನ ತಿರಸ್ಕಾರಗಳ ಕತ್ತಲು ಹಬ್ಬಿದ್ದಾಗ, ತ್ಯಾಗದ ತೈಲಧಾರೆಯನ್ನೆರೆದು ಅವರು ಹಚ್ಚಿಟ್ಟ ಕನ್ನಡದ ದೀಪ, ಈಗ ನಂದಾದೀಪವಾಗಿದೆ. ಇದನ್ನು ನೆನೆಯುವುದು 'ಶ್ರೀ' ಉತ್ಸವದ ಸಂದರ್ಭದಲ್ಲಿ ಸಮುಚಿತವಾದುದು.

ಪರಿಷತ್ತು ವಿಧಿವತ್ತಾಗಿ ಸ್ಥಾಪಿತವಾದುದು ೧೯೧೫ ರ ಮೇ ೫ ರಂದು. ಅದರ ಪ್ರಥಮ ಕಾರ್ಯನಿರ್ವಾಹಕ ಮಂಡಲಿಯಲ್ಲಿದ್ದವರು ಎಂದರೆ ಎಚ್.ವಿ. ನಂಜುಂಡಯ್ಯನವರು (ಅಧ್ಯಕ್ಷರು), ಎಂ. ಶಾಮರಾಯರು (ಉಪಾಧ್ಯಕ್ಷರು), ಡಾ. ಪಿ. ಎಸ್. ಅಚ್ಯುತರಾಯರು (ಕೋಶಾಧ್ಯಕ್ಷರು) ಮತ್ತು ಬಿ. ಕೃಷ್ಣಪ್ಪನವರು (ಕಾರ್ಯದರ್ಶಿಗಳು). ಜೊತೆಗೆ ಮೈಸೂರು ಸಂಸ್ಥಾನ, ಬೊಂಬಾಯಿ ಮತ್ತು ಮದರಾಸು ಆಧಿಪತ್ಯಗಳು, ದಕ್ಷಿಣ ಮಹಾರಾಷ್ಟ್ರ ಸಂಸ್ಥಾನ, ಹೈದರಾಬಾದು ಸಂಸ್ಥಾನ, ಕೊಡಗು ಪ್ರಾಂತ ಇವನ್ನು ಪ್ರತಿನಿಧಿಸುವಂತೆ ಹಲವರು ಸದಸ್ಯರೂ ಇದ್ದರು. ಹೀಗೆ ಆರಂಭಗೊಂಡ ಈ ಸಂಸ್ಥೆಯ ಚಟುವಟಿಕೆಗಳು ವರ್ಷದಿಂದ ವರ್ಷಕ್ಕೆ ಬೆಳೆಯುತ್ತ ಹೋಗಿ ಮುಂದೆ ಕರ್ಪೂರ ಶ್ರೀನಿವಾಸರಾಯರು, ಬೆಳ್ಳಾವೆ ವೆಂಕಟನಾರಣಪ್ಪನವರು, ಎಂ. ಎಸ್. ಪುಟ್ಟಣ್ಣ ಮೊದಲಾದವರ ಪರಿಶ್ರಮದಿಂದ ಬಲಗೊಳ್ಳುತ್ತ ಹೋಯಿತು. ಆದರೂ ಆಗಿನ ಕಾಲಧರ್ಮಕ್ಕೆ ಅನುಗುಣವಾಗಿ ಒಂದು ಪರಿಮಿತ ವ್ಯಾಪ್ತಿಯ ಪಂಡಿತ ಮಂಡಲಿಯೆಂಬಂತೆ ವಿದ್ವಾಂಸರು, ಹಿರಿಯ ಸಾಮಾಜಿಕರು, ಸರ್ಕಾರದ ಉನ್ನತಾಧಿಕಾರಿಗಳು ಇವರ ಸಂಪರ್ಕ ಸಹಯೋಗಗಳಲ್ಲಿಯೇ ಅದು ತನ್ನ ಧ್ಯೇಯಸಾಧನೆಗೆ ಶ್ರಮಿಸುತ್ತಿತ್ತು. ಹಲವು ವರ್ಷಗಳ ಕಾಲ ಕಾರ್ಯದರ್ಶಿಗಳಾಗಿ, ಕೋಶಾಧಿಕಾರಿ

ಗಳಾಗಿ ಬೆಳ್ಳಾವೆ ವೆಂಕಟನಾರಣಪ್ಪನವರು ಮಾಡಿದ ಸೇವೆಯಂತೂ ಪರಿಷತ್ತಿಗೆ ಒಂದು ಸ್ಥೈರ್ಯವನ್ನೂ ವ್ಯಾಪ್ತಿಯನ್ನೂ ತಂದುಕೊಟ್ಟದು ನಿಶ್ಚಯ. ಅನಂತರದಲ್ಲಿ ಡಿ. ವಿ. ಗುಂಡಪ್ಪನವರು ಉಪಾಧ್ಯಕ್ಷರಾಗಿದ್ದಾಗ (೧೯೩೪-೩೭) ಪರಿಷತ್ತು ಹೆಚ್ಚು ಹೆಚ್ಚಾಗಿ ಸಾರ್ವಜನಿಕ ಸ್ವರೂಪವನ್ನು ಪಡೆದುಕೊಂಡು, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ವ್ಯಾಪಕಗೊಳಿಸುವುದು ಅದಕ್ಕೆ ಸಾಧ್ಯವಾಯಿತು. ಬೋಧಪ್ರದವೂ ಮನೋರಂಜಕವೂ ಆದ ಉಪನ್ಯಾಸಗಳು, ಗಮಕ ಕಾವ್ಯವಾಚನಗಳು, ನೃತ್ಯಗೀತ ಗಳು, ನಾಟಕಗಳು, ಸಾಹಿತ್ಯೋತ್ಸವಗಳು ಮುಂತಾದುವು ನಡೆಯತೊಡಗಿ, ಭಾಷಾ ಪ್ರೇಮಿಗಳನ್ನೂ ಸಾಹಿತಿಗಳನ್ನೂ ಹತ್ತಿರ ತರುವುದು ಸುಲಭವಾಯಿತು. ಈವರೆಗಿನ ಪರಿಷತ್ತಿನ ಕಾರ್ಯಚಟುವಟಿಕೆಗಳ ಸ್ವರೂಪ ಹಾಗೂ ಕಾರ್ಯಕರ್ತರ ಸಾಧನೆಗಳು ಬೇರೆಬೇರೆಯ ಸಂದರ್ಭದ ಬರೆಹಗಳಲ್ಲಿ ಕೆಲಮಟ್ಟಿಗೆ ವಿವರದಲ್ಲಿ ಉಲ್ಲೇಖ ಗೊಂಡಿವೆ.

ಡಿ.ವಿ.ಜಿ. ಅವರ ತರುವಾಯದಲ್ಲಿ ಬಿ.ಎಂ. ಶ್ರೀ ಅವರು ಪರಿಷತ್ತಿನ ಉಪಾಧ್ಯಕ್ಷ ರಾಗಿ ಜವಾಬ್ದಾರಿ ವಹಿಸಿಕೊಂಡು, ಸು. ಐದು ವರ್ಷಕಾಲ (೧೯೩೮-೪೨) ಅದನ್ನು ಅಭಿವೃದ್ಧಿಗೆ ತರಲು ಶ್ರಮವಹಿಸಿದರು. ಆದರೆ ಇದಕ್ಕೆ ಮೊದಲೇ, ಪರಿಷತ್ತಿನ ಸ್ಥಾಪನೆಯ ಕಾಲದಿಂದಲೂ ಅವರು ಈ ಸಂಸ್ಥೆಯ ಚಟುವಟಿಕೆಗಳನ್ನು ಬಲ್ಲವರಾಗಿಯೇ ಇದ್ದಿರಬೇಕು; ಆಗಾಗ ಅವುಗಳಲ್ಲಿ ಭಾಗವಹಿಸುತ್ತಲೂ ಇದ್ದಿರಬೇಕು. ೧೯೨೮ರ ಜೂನ್ ೧, ೨ ಮತ್ತು ೩ನೆಯ ತಾರೀಖುಗಳಂದು ಕಲ್ಬುರ್ಗಿಯಲ್ಲಿ ನಡೆದ ೧೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಅವರನ್ನು ಪರಿಷತ್ತು ಹಾಗೂ ಕನ್ನಡ ಜನ ಆಯ್ಕೆಮಾಡಿ ಆಹ್ವಾನಿಸಿ ಗೌರವಿಸಿದ್ದು, ಅವರ ಕನ್ನಡ ಸೇವೆಯನ್ನು ಹೃತ್ಪೂರ್ವಕವಾಗಿ ಒಪ್ಪಿಕೊಂಡುದರ ಸಂಕೇತವಾಗಿದೆ. ಅಲ್ಲದೆ ೧೯೩೧ರ ಡಿಸೆಂಬರ್ ೩೦ ರಂದು ಕಾರವಾರದಲ್ಲಿ ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ, ಶ್ರೀ ಯವರನ್ನು ಮೈಸೂರು ಅರಮನೆಯ ಪರವಾಗಿ ಎಂದು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೆ ಆಯ್ಕೆ ಮಾಡಿಕೊಳ್ಳಲಾಯಿತು. ಆಗ್ಗೆ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. ೧೯೩೨ರ ಡಿಸೆಂಬರ್ ೨೦ರಂದು, ಅಂದಿನ ಕಾರ್ಯದರ್ಶಿಗಳು "ಒಂದೂವರೆಕೋಟಿ ಕನ್ನಡಿಗರಿರುವ ಕರ್ನಾಟಕದಲ್ಲಿ, ಪರಿಷತ್ತಿನ ಜೀವಾವಧಿ ಸದಸ್ಯರಾಗಿರುವವರು ೮೨ ಮಂದಿಯೆಂದೂ, ಸಾಧಾರಣ ಸದಸ್ಯರಾಗಿರುವವರು ೪೨ ಮಂದಿಯೆಂದೂ, ಪರಿಷತ್ಪತ್ರಿಕೆಗೆ ಚಂದಾದಾರರಾಗಿರುವವರು ೩೯ ಮಂದಿಯೆಂದೂ, ಈ ಸದಸ್ಯರಲ್ಲಿಯೂ ಚಂದಾದಾರರಲ್ಲಿಯೂ ಅನೇಕ ಮಂದಿ ತಮ್ಮ ಚಂದಾಹಣವನ್ನು ಕೊಡದೆ ನಿರ್ಲಕ್ಷ್ಯದಿಂದಿರುವರೆಂದೂ ಹೇಳುವಂತಾಗಿರುವುದು

ಕನ್ನಡದ ದೌರ್ಭಾಗ್ಯವೆನ್ನಬೇಕು."—ಎಂಬುದಾಗಿ ಬರೆದಿರುವ ವರದಿಯ ಕೊನೆಯ ಭಾಗವನ್ನು ಓದಿದಾಗ ಆ ಸಂಸ್ಥೆಗಾಗಿ ಕೆಲಸ ಮಾಡುವವರ ಪಾಡು ಆಗ ಹೇಗಿದ್ದಿತೆಂಬು ದನ್ನು ಬಿಡಿಸಿ ಹೇಳಬೇಕಾಗಿಲ್ಲ. ಈ ಸ್ಥಿತಿಯಲ್ಲಿ ಪದಾಧಿಕಾರಿಗಳಾಗಿ ಬಂದ ಡಿ.ವಿ.ಜಿ. ಅವರಿಗೂ ಬಿ.ಎಂ.ಶ್ರೀ. ಅವರಿಗೂ ಇದು ಎಂತಹ ಶ್ರಮಸಾಧ್ಯವಾದ ಆಹ್ವಾನದ ಕೆಲಸವಾಗಿತ್ತು ಎನ್ನುವುದು ವಿದಿತವೇ ಇದೆ.

ಶ್ರೀಯವರು ಪರಿಷತ್ತಿನ ಉಪಾಧ್ಯಕ್ಷರಾದ ಮೇಲೆ, ಡಿ.ವಿ.ಜಿ. ಯವರ ಕಾಲದಲ್ಲಿ ಆರಂಭಗೊಂಡಿದ್ದ ಕೆಲಸಗಳು ಮುನ್ನಡೆದುವು. ಚಟುವಟಿಕೆಗಳು ಸಾರ್ವಜನಿಕ ಗೊಳ್ಳುವ ಕಾರ್ಯ ಇನ್ನಷ್ಟು ಉನ್ಮುಖಗೊಂಡಿತು, ಪರಿಷತ್ತಿಗೂ ಸಾಮಾನ್ಯ ಪ್ರಜಾ ವರ್ಗಕ್ಕೂ ಸಂಪರ್ಕ ಬಲಗೊಳ್ಳಲು ಶ್ರೀಯವರು ಕನ್ನಡ ಪ್ರಚಾರದ ಕೆಲಸಕ್ಕೆ ತಕ್ಕ ಕಾರ್ಯಕ್ರಮಗಳನ್ನು ರೂಪಿಸಿದರು. ಕನ್ನಡ ಭಾಷೆ ಸಾಹಿತ್ಯಗಳಲ್ಲಿ ಜನಸಾಮಾನ್ಯರಿಗೆ ಅಭಿಮಾನ ಹುಟ್ಟುವಂತಾಗಬೇಕು, ಕರ್ನಾಟಕದ ಏಕೀಕರಣ ಸಾಧ್ಯವಾಗಬೇಕು ಎಂಬ ಧ್ಯೇಯವನ್ನು ಎದುರಿಗಿಟ್ಟುಕೊಂಡು ಶ್ರೀಯವರು ಕನ್ನಡದ ಅಗ್ರಗಣ್ಯ ಪ್ರಚಾರಕ ರಾಗಿ, ನಾಡಿನ ಮೂಲೆ ಮೂಲೆಗಳನ್ನು ಸುತ್ತಿ ಭಾಷಣಗಳನ್ನು ಮಾಡಿದರು; ಲೇಖನ ಗಳನ್ನು ಬರೆದರು; ಕಾರ್ಯಕರ್ತರನ್ನು ಹುರಿದುಂಬಿಸಿದರು. ಅವರು ಪರಿಷತ್ತನ್ನು ಯಾವ ಯಾವ ಮುಖಗಳಲ್ಲಿ ಬೆಳೆಸಲು ಸಾಧ್ಯವೆಂಬುದನ್ನು ಕೆಲವು ವರ್ಷಗಳ ಮೊದಲಿ ನಿಂದಲೇ ವಿಚಾರಮಾಡುತ್ತಿದ್ದರೆಂದು ತೋರುತ್ತದೆ. ಮೈಸೂರಿನಲ್ಲಿ ಸೇರಿದ ೧೬ನೆಯ ಕನ್ನಡ ಸಾಹಿತ್ಯಸಮ್ಮೇಳನದಲ್ಲಿ (೧೯೩೦) ಭಾಷಣಮಾಡುತ್ತ, ಅಲ್ಲಿ ಪರಿಷತ್ತಿನ ಚಟುವಟಿಕೆಗಳನ್ನು ಪ್ರಸ್ತಾಪಿಸುತ್ತ, "ಸರ್ಕಾರದವರು ಪರಿಷತ್ತನ್ನು ಏರ್ಪಡಿಸಿ ಸಾಹಿತ್ಯ ಕಾರ್ಯವನ್ನು ಒಂದು ನಿಬಂಧನೆಗೆ ತಂದರು" ಎಂಬುದಾಗಿ ಹೇಳಿ, ಅದು ಇನ್ನೂ ಹೆಚ್ಚು ಪೋಷಣೆ ಪಡೆಯುವಂತಾಗಬೇಕು ಎಂದು ಆಸೆಪಟ್ಟರು. 'ಕನ್ನಡದ ಪುನರುಜ್ಜೀವನ' ಎಂಬ ಒಂದು ಉಪನ್ಯಾಸದಲ್ಲಿ (೨೬-೪-೧೯೩೫), ಪರಿಷತ್ತಿನ ವೇದಿಕೆಯಲ್ಲಿಯೇ, ಭಾಷೆ ಸಾಹಿತ್ಯಗಳ ಬೆಳವಣಿಗೆಗೆ ಅದರ ಕಾರ್ಯವನ್ನು ಉಲ್ಲೇಖಿಸಿ "ಪರಿಷತ್ತಿನ ಮುಖ್ಯವಾದ ಕೆಲಸ ಕನ್ನಡದ ಸ್ಥಾನವನ್ನು ಕಾದಿರುವುದು; ಕನ್ನಡದ ಶ್ರೇಷ್ಠತೆಯನ್ನು ಹೆಚ್ಚಿಸುವುದು; ಕನ್ನಡದ ಹೆಚ್ಚು ಹೆಚ್ಚು ಸೇವೆಗೆ ಕನ್ನಡಿಗರನ್ನು ಒಲಿಸುವುದು" ಎಂಬುದಾಗಿ ಘೋಷಿಸಿದರು.

ಶ್ರೀಯವರು ಪರಿಷತ್ತಿನ ಉಪಾಧ್ಯಕ್ಷರಾದುದರ ಪ್ರಯುಕ್ತ, ಅವರ ಅಭಿನಂದನೆಗೆ ನಡೆದ ಒಂದು ಸಮಾರಂಭದಲ್ಲಿ (೨೬-೧-೧೯೩೮), ಕನ್ನಡದ ಕೆಲಸ ಹಾಗೂ ಏಳಿಗೆ ಯೆಂಬ ಪರಿಷತ್ತಿನ ಧ್ಯೇಯವನ್ನು ಕೈಗೂಡಿಸಲು ತಾವು ಸಿದ್ಧರಾಗಿರುವುದನ್ನು ಮೊದಲ ಸಲ ಅವರು ಮಹಾಜನರೆದುರಿಗೆ ಸ್ಪಷ್ಟಪಡಿಸಿದರು. ಪರಿಷತ್ತನ್ನು 'ಕನ್ನಡ ತಾಯ

ಗುಡಿ' ಎಂದರು ; ಹಿರಿಯರು ತಮ್ಮ ಕೈಗೆ 'ಕನ್ನಡ ಬಾವುಟ'ವನ್ನು ಒಪ್ಪಿಸಿರುವುದಾಗಿ ವಿನಯದಿಂದ ಹೇಳಿಕೊಂಡರು. ತಮ್ಮ ಸೇನೆಗೆ ಕನ್ನಡಿಗರ ಬೆಂಬಲವನ್ನು ಬೇಡಿ "ಸಿರಿಗನ್ನಡಂ ಗೆಲ್ಗೆ, ಕನ್ನಡ ತಾಯ್ ಬಾಳ್ಗೆ" ಎಂಬ ಘೋಷಣೆಯನ್ನು ಸಾರಿದರು. ಪರಿಷತ್ತಿನ ಗುರಿಗಳನ್ನು ಒಂದು ಪ್ರಣಾಳಿಕೆಯ ರೂಪದಲ್ಲಿ ಪ್ರಕಟಪಡಿಸಿದರು. ಹೀಗೆ ಸ್ಪಷ್ಟಪಡಿಸಿದ ಗುರಿಗಳನ್ನು ಕ್ರೋಢೀಕರಿಸಿ "ಒಂದು ಮಾತಿನಲ್ಲಿ ಕನ್ನಡಿಗರ ಪುನರುಜ್ಜೀವನ, ಒಟ್ಟಿನಲ್ಲಿ ಪರಿಷತ್ತು ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠ" ಎಂದರು. ಹೀಗೆ ಘೋಷಿಸಿದ ಕೆಲವು ದಿನಗಳಲ್ಲಿಯೇ, ಅಂದಿನ ದಿವಾನರಾಗಿದ್ದ ಮಿರ್ಜಾ ಅವರ ಸಂತೋಷ ಕೂಟವೊಂದರಲ್ಲಿ ಮಾತನಾಡುತ್ತ "ನಾವು ಈ ಪರಿಷತ್ತನ್ನು ಮಹಾಜನರ ವಿಶ್ವವಿದ್ಯಾನಿಲಯವಾಗಿಯೂ ಮಹಾಜನರ ವಿದ್ಯಾಭ್ಯಾಸ ಖಾತೆಯಾಗಿಯೂ ಪರಿಣಾಮಗೊಳಿಸಬೇಕೆಂದು ಸಂಕಲ್ಪ ಮಾಡಿದ್ದೇವೆ" ಎಂದರು. ಅಲ್ಲಿಯೇ "ತಾಯ್ ನುಡಿಯಾದ ಕನ್ನಡ ಭಾಷೆಯಲ್ಲಿ ಮಾತನಾಡುವವರೆಲ್ಲರೂ ಸ್ವಾತಂತ್ರ್ಯದಿಂದಲೂ ಸಮಾನ್ಯತೆಯಿಂದಲೂ ಒಂದೇ ಕುಟುಂಬದ ಜನರಂತೆ ಒಟ್ಟುಗೂಡಲು ಸಾಧಕವಾಗುವಂತೆ ಕೆಲಸ ನಡೆಸುವ ಯೋಚನೆ ಮಾಡಿದ್ದೇವೆ. ಪರಿಷತ್ತು ಈ ವಿಧವಾದ ಕಾರ್ಯ ಕಲಾಪಗಳಿಗೆಲ್ಲ ಕೇಂದ್ರಸ್ಥಾನವಾಗಿದ್ದುಕೊಂಡು" ಕನ್ನಡಿಗರ ಸೇವೆಮಾಡಬೇಕೆಂಬುದು ತಮ್ಮ ಹೆಬ್ಬಯಕೆಯೆಂಬುದಾಗಿಯೂ ಸಾರಿದರು.

ವಾಸ್ತವವಾಗಿ ಪರಿಷತ್ತಿನ ಬೆಳವಣಿಗೆಯ ಬಗೆಗೆ ಶ್ರೀಯವರ ಆಲೋಚನೆಗಳು ಹೆಚ್ಚು ಸ್ಫುಟವಾದುದು ಎಂದರೆ ೧೯೩೮ರ ಏಪ್ರಿಲ್ ತಿಂಗಳ, ಜನೆಯ ವಸಂತ ಸಾಹಿತ್ಯೋತ್ಸವದ ಸಮಯದಲ್ಲಿ ಎನ್ನಬೇಕು. ಇಲ್ಲಿ ಅವರು ಪರಿಷತ್ತಿನ ಗುರಿ, ಸರ್ಕಾರದ ಬೆಂಬಲ, ತಮಗೆ ಮೊದಲು ಪರಿಷತ್ತನ್ನು ಕಟ್ಟಿ ಬೆಳಸಿದವರ ಉಪಕಾರ ಸ್ಮರಣೆ, ಅರಮನೆ ಗುರುಮನೆಗಳ ಬೆಂಬಲ, ಸಮಾರಂಭಗಳು ಮತ್ತು ಪ್ರಚಾರಕಾರ್ಯ, ಮಹಿಳೆಯರ ಪಾತ್ರ, ಕನ್ನಡ ಸಾಹಿತ್ಯ ಪರೀಕ್ಷೆಗಳು, ಗ್ರಂಥಪ್ರಕಟನೆ, ಅಚ್ಚುಕೂಟ, ಪುಸ್ತಕ ಪ್ರದರ್ಶನ ಇತ್ಯಾದಿ ಸಂಗತಿಗಳನ್ನು ವಿವರವಾಗಿ ಪ್ರಸ್ತಾಪಿಸಿದ್ದಾರೆ.

ಕರ್ಣಾಟಕ ಏಕೀಕರಣದಲ್ಲಿ ವಿಶ್ವಾಸವಿಟ್ಟಿದ್ದ ಶ್ರೀಯವರು ಪರಿಷತ್ತಿಗೆ ತನ್ನದಾದ ಒಂದು ಕನ್ನಡದ ಬಾವುಟವಿರಬೇಕೆಂದು ಭಾವಿಸಿದರು. ಕನ್ನಡನಾಡಿನ ಭೂಪಟದ ನಕ್ಷೆಯುಳ್ಳ ಲಾಂಛನವೊಂದನ್ನು ಕಲ್ಪಿಸಿ, ಪರಿಷತ್ತಿನ ಪುಸ್ತಕ ಪ್ರಕಟಣೆಗಳಲ್ಲಿ ಅದು ಮುದ್ರಿತವಾಗುವಂತೆ ಏರ್ಪಾಡು ಮಾಡಿದರು. ತಮ್ಮ ಭಾವನೆಗೆ ಮೂರ್ತಸ್ವರೂಪವನ್ನು ಕೊಡುವಂತೆ ಅಲ್ಪ ಕಾಲಾವಧಿಯಲ್ಲಿಯೇ ಕನ್ನಡ ಕಾವ್ಯಸಾರವಾದ 'ಕನ್ನಡದ ಬಾವುಟ' ಎಂಬ ಕಾವ್ಯಸಂಕಲನವನ್ನು ತಮ್ಮ ವಿದ್ಯಾರ್ಥಿಗಳ ನೆರವಿನಿಂದ ಹೊರ ತಂದರು (೧೯೩೮). ಆಧುನಿಕ ಕವಿತೆಗಳನ್ನೂ ಒಳಗೊಂಡು ಹೊಸಗನ್ನಡ ಕವಿತೆಯ

ಬೆಳವಣಿಗೆಗೆ ಪ್ರೋತ್ಸಾಹಕರ ಸನ್ನಿವೇಶವನ್ನು ನಿರ್ಮಿಸಿದ ಆರಂಭದ ಕೆಲವೇ ಕಾವ್ಯ ಸಂಕಲನಗಳಲ್ಲಿ ಇದರ ಪಾತ್ರ ಗಣ್ಯವಾದುದು. ಈ ಗ್ರಂಥವನ್ನು ಐದನೆಯ ವಸಂತ ಸಾಹಿತ್ಯೋತ್ಸವದಲ್ಲಿ, ಪರಿಷತ್ತಿನ ಸ್ಥಾಪಕರಲ್ಲಿ ಒಬ್ಬರಾದ ಎಂ. ಶಾಮರಾಯರ ಮೂಲಕ ಬಿಡುಗಡೆ ಮಾಡಿಸಲಾಯಿತು. ಈಚೆಗೆ ಈ ಕಾವ್ಯಸಂಕಲನ ಹಲವು ಸಲ ಪುನರ್ಮುದ್ರಣಗೊಂಡಿದೆ.

ಪರಿಷತ್ತು ಗ್ರಂಥಗಳನ್ನು ಪ್ರಕಟಿಸುವ ಚಟುವಟಿಕೆಗೆ ಬೆಳ್ಳಾವೆಯವರ ಕಾಲ ದಲ್ಲಿಯೇ ಬೀಜಾವಾಪವಾಗಿತ್ತು. ಈಗ ಶ್ರೀಯವರು ಅದನ್ನು ಹುರಿಗೊಳಿಸಲು ಯತ್ನಿಸಿದರು. ತಜ್ಞ ವಿದ್ವಾಂಸರಿಂದ ಮೂರು ಭಾಗಗಳಲ್ಲಿ 'ಕನ್ನಡನಾಡಿನ ಚರಿತ್ರೆ'ಯನ್ನು ಬರೆಸಲು ಹಂಚಿಕೆ ಹಾಕಿದರು. ಅಂದು ಪರಿಷತ್ತಿನ ಅಧ್ಯಕ್ಷರಾಗಿದ್ದ ಯುವರಾಜರು ನೀಡಿದ್ದ ಗ್ರಂಥಪ್ರಕಟನ ನಿಧಿಯ ಹಣವನ್ನು ಅವರ ಅಪ್ಪಣೆ ಪಡೆದು ಈ ಕೆಲಸಕ್ಕೆ ಬಳಸಿಕೊಂಡರು. ಪರಿಷತ್ತಿನ ಬೆಳ್ಳಿಯ ಹಬ್ಬದ (೧೯೪೦) ನೆನಪು ಸ್ಥಿರವಾಗುವಂತೆ ಮಾಡಲು, ಮೊದಲ ಭಾಗವನ್ನು ೧೯೪೧ ರಲ್ಲಿ ಹೊರತಂದರು. ಈಚೆಗೆ (೧೯೪೪) ಉಳಿದೆರಡು ಭಾಗಗಳು ಪ್ರಕಟವಾಗಿ ಈ ಯೋಜನೆ ಪೂರ್ಣಗೊಂಡಿತು. ಅಲ್ಲಿಯವರೆಗೆ ಈ ಬಗೆಯ ಕೆಲಸ ಕನ್ನಡದಲ್ಲಿ ಆಗಿರಲಿಲ್ಲ. ಕನ್ನಡ ನಾಡಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಕಲಾತ್ಮಕ ಸಾಧನೆಗಳ ಒಂದು ಹಕ್ಕಿನೋಟ ಈ ಭಾಗಗಳಲ್ಲಿ ದೊರೆಯುತ್ತದೆ.

ಇದಕ್ಕಿಂತ ಮಹತ್ವದ ಕೆಲಸವೆಂದರೆ, ಶ್ರೀಯವರು 'ಕನ್ನಡ ನುಡಿ' ಪತ್ರಿಕೆಯನ್ನು ಹುಟ್ಟುಹಾಕಿದ್ದು. ತಾವು ಉಪಾಧ್ಯಕ್ಷರಾದ ತರುಣದಲ್ಲಿಯೇ ಶ್ರೀಯವರು ಈ ಕೆಲಸವನ್ನು ಕೈಗೆತ್ತಿಕೊಂಡರು. ೧೯೩೮ರ ಅಕ್ಟೋಬರ್ ೪ನೆಯ ತಾ॥ ವಿಜಯದಶಮಿಯ ದಿನ 'ಕನ್ನಡ ನುಡಿ'ಯ ಪ್ರಕಟನೆ ಆರಂಭಗೊಂಡಿತು. ಮೊದಲ ಸಂಪಾದಕರು ಅ. ನ. ಕೃಷ್ಣರಾಯರು. ಸಾಹಿತ್ಯ ಪರಿಷತ್‌ಪತ್ರಿಕೆಯನ್ನು ಮೇಲು ಮಟ್ಟದ ಸಾಹಿತ್ಯ ವಿಚಾರಗಳ ಹಾಗೂ ಪರಿಶೋಧನೆಗಳ ಪ್ರಕಟನೆಗೆ ಮೀಸಲಾದುದೆಂದು ಸ್ಪಷ್ಟಪಡಿಸಿ, ಸಾರ್ವಜನಿಕರಿಗೆ, ಸಾಹಿತ್ಯ ಸಂಸ್ಕೃತಿಗಳ ಸಾಮಾನ್ಯ ತಿಳಿವಳಿಕೆಯನ್ನು ಅಪೇಕ್ಷಿಸುವರಿಗೆ 'ಕನ್ನಡ ನುಡಿ'ಯನ್ನು ರೂಢಿಸುವುದೆಂದು ಅವರು ನಿಶ್ಚಯಿಸಿದರು. ಅಲ್ಲದೆ ಪರಿಷತ್ತಿನ ಸುದ್ದಿ ಉತ್ಸವ ಉಪನ್ಯಾಸಾದಿಗಳನ್ನು ಮಹಾಜನರ ಗಮನಕ್ಕೆ ತರುವುದು ಇದರ ಉದ್ದೇಶವೆಂದು ಸ್ಪಷ್ಟಪಡಿಸಿದರು. ಈ ಪತ್ರಿಕೆಯಲ್ಲಿ ಶ್ರೀಯವರು ಸ್ವತಃ ಕೆಲವು ಪುಟ್ಟ ಲೇಖನಗಳನ್ನು ಸ್ಥಿರ ಶೀರ್ಷಿಕೆಯ ಅಡಿಯಲ್ಲಿ ಬರೆದುದೇ ಅಲ್ಲದೆ, ಹಿರಿಯರ ಉಪನ್ಯಾಸ ಭಾವಚಿತ್ರಗಳ ಅನಾವರಣ ಮುಂತಾದ ಸಂದರ್ಭಗಳು ಒದಗಿದಾಗೆಲ್ಲ ಕನ್ನಡ ಭಾಷೆ ಸಾಹಿತ್ಯಗಳ ಪ್ರಗತಿಗಾಗಿ ಪರಿಷತ್ತಿನ

ಯೋಜನೆಗಳನ್ನೂ ಧ್ಯೇಯಗಳನ್ನೂ ಪ್ರಸಂಗಿಸುತ್ತಲೇ ಇದ್ದರೆಂಬುದು ಅಂದಿನ ಸಂಚಿಕೆಗಳಲ್ಲಿಯ ಸುದ್ದಿ ಸಂಗ್ರಹಗಳನ್ನು ಓದಿದರೆ ತಿಳಿಯುತ್ತದೆ. ಇವುಗಳಲ್ಲಿ ಕೆಲವು ಈವರೆಗೆ ಒಟ್ಟಾಗಿ ಸಂಕಲನಲಗೊಂಡಿರುವಂತೆ ತೋರುವುದಿಲ್ಲ. ಈಗ್ಗೆ ಸು. ೪೦ ವರ್ಷಗಳಿಗೂ ಹಿಂದಿನ, ಆರು ಕಾಸಿನ ಈ ವಾರಪತ್ರಿಕೆ ಹತ್ತುವರ್ಷಗಳ ಕಾಲ ನಡೆದು ಬಂದ ರೀತಿಯನ್ನೂ ಆ ಬಳಿಕ ಮಾಸಪತ್ರಿಕೆಯಾಗಿ ಪಕ್ಷಪತ್ರಿಕೆಯಾಗಿ ಬೆಳೆದ ರೀತಿಯನ್ನೂ ಪರಿಶೀಲಿಸಿದರೆ, ಅದು ಪರಿಷತ್ತಿನ ಚರಿತ್ರೆಯೇ ಆಗಿ ಪರಿಣಮಿಸುತ್ತದೆ. ಈ ಪತ್ರಿಕೆ ಕರ್ಣಾಟಕದ ಗೆಜೆಟ್ ಆಗಬೇಕೆಂದು ಶ್ರೀಯವರು ಉದ್ದೇಶಿಸಿದಂತೆ ತೋರುತ್ತದೆ. ಅವರು ಸ್ವತಃ ಈ ಪತ್ರಿಕೆಯ ಸಂಪಾದಕರಾಗಿ ಫೆಬ್ರವರಿ ೧೯೪೧ ರಿಂದ ಡಿಸೆಂಬರ್ ೧೯೪೩ರ ವರೆಗೆ ಶ್ರಮಿಸಿ, ಪತ್ರಿಕೆಯನ್ನು ಚೊಕ್ಕವಾಗಿ ಸಂಪಾದಿಸಿದರು. ಈಗಲೂ ಈ ಪತ್ರಿಕೆ ಪರಿಷತ್ತಿನ ಮುಖವಾಣಿಯಾಗಿ, ಕನ್ನಡ ಚಟುವಟಿಕೆಗಳ ಸುದ್ದಿವಾಹಕವಾಗಿ ಮುನ್ನಡೆಯುತ್ತಿದ್ದರೂ ಅಂದಿನ ಅದರ ಅಂದಚೆಂದಗಳೂ ದರ್ಜೆಯೂ ಇಂದು ಕಾಣುತ್ತಿಲ್ಲವೆಂದು ಹೇಳಬೇಕಾಗಿದೆ. ಹೀಗೆಯೇ ಪರಿಷತ್ ಪತ್ರಿಕೆಯ ಸ್ವರೂಪದಲ್ಲಿಯೂ ವ್ಯತ್ಯಾಸಗಳನ್ನು ಅಳವಡಿಸಲಾಯಿತು.

ಶ್ರೀಯವರು ಪರಿಷತ್ತಿನ ಪತ್ರಿಕೆಗಳು, ಸುದ್ದಿ ಸಮಾಚಾರಗಳು ಹಾಗೂ ಸಾಹಿತ್ಯಿಕ ಪ್ರಕಟಣೆಗಳಿಗೆ ಬೇರೆ ಅಚ್ಚುಕೂಟಗಳ ಕೈಕಾಯದೆ, ಹಣ ಸುರಿಯದೆ, ಸ್ವತಃ ಒಂದು ಅಚ್ಚುಕೂಟವನ್ನು ಪಡೆದಿರುವುದು ಒಳ್ಳೆಯದು ಎಂಬುದಾಗಿ ಆಸೆಪಟ್ಟರು. ಸ್ವತಂತ್ರ ಮುದ್ರಣಾಲಯವೊಂದು ಇದ್ದರೆ ಪರಿಷತ್ತಿನ ಚಟುವಟಿಕೆಗಳು ವಿಸ್ತಾರಗೊಳ್ಳುವುದು ಸುಲಭವೆಂದು ಅವರು ಕನಸುಕಂಡರು. ಹೊರಗಿನ ಜನರಿಗೆ, ಶ್ರೀಮಂತರಿಗೆ ತಮ್ಮ ಅಪೇಕ್ಷೆಯನ್ನು ಅರಿಕೆಮಾಡಿದರು. ಅದು ಫಲ ಕೊಡಬಹುದೆಂದು ತೋರದೆಯೋ, ತಡವಾಗಬಾರದೆಂದು ವಿಚಾರ ಮಾಡಿಯೋ ತಾವೇ ೧೯೩೩ರಲ್ಲಿ ಆರುಸಾವಿರ ರೂಪಾಯಿಗಳನ್ನು ದಾನವಾಗಿ ಕೊಟ್ಟು ಕೆಲಸ ಆರಂಭವಾಗುವಂತೆ ಮಾಡಿದರು. ಅಂದಿನ ಸರ್ಕಾರಿ ಮುದ್ರಣಾಲಯದ ಅಧಿಕಾರಿಗಳಾಗಿದ್ದ ಬಿ. ಪುಟ್ಟಯ್ಯನವರು ಆರಂಭದಲ್ಲಿ ಅದರ ವ್ಯವಸ್ಥೆಗೆ ಸಹಾಯವಾದರು. ಅಂದು ಆ ಮುದ್ರಣಾಲಯದಲ್ಲಿ ಮುದ್ರಿತವಾದ ಪರಿಷತ್ತಿನ ಪತ್ರಿಕೆಗಳ ಮತ್ತು ಪ್ರಕಟಣೆಗಳ ಮುದ್ರಣದ ಸೊಗಸನ್ನೂ, ಅಚ್ಚುಕಟ್ಟನ್ನೂ ನೋಡಿಯೇ ತಿಳಿಯಬೇಕು. ಶ್ರೀಯವರು 'ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ' ಎಂದೇ ಅದನ್ನು ಸ್ಥಾಪಿಸಿದರೂ, ಅನಂತರ ಅದು ಸಹಜವಾಗಿಯೇ 'ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ' ಎಂದಾಯಿತು. ಈಗ ಈ ಅಚ್ಚುಕೂಟ ಪರಿಷತ್ತಿನ ಒಂದು ಹೆಮ್ಮೆಯ ವಿಭಾಗ, ಆಸ್ತಿ. ಈ ಮುದ್ರಣಾಲಯದ ಸ್ಥಾಪನೆಯು ಹೊಸದರಲ್ಲಿ ಶ್ರೀಯವರ ಮನಸ್ಸಿನ ಆಲೋಚನೆ

ಗಳೇನಿದ್ದುವು, ಪರಿಷತ್ತನ್ನು ಬೆಳೆಸುವುದರಲ್ಲಿ ಅವರ ತವಕ ಎಷ್ಟರ ಮಟ್ಟಿಗೆ ಇದ್ದಿತು ಎನ್ನುವುದನ್ನು ಈಚೆಗೆ ವಿ. ಸೀತಾರಾಮಯ್ಯನವರು ತಮ್ಮ ಒಂದು ಬರೆಹದಲ್ಲಿ ನೆನೆದಿದ್ದಾರೆ ('ಶ್ರೀಸಾಹಿತ್ಯ'ದಲ್ಲಿ "ಪರಿಚಯ-ಕಾಣಿಕೆ", ಪು. ೪೨-೪೩).

ಶ್ರೀಯವರು ಜನಸಾಮಾನ್ಯರಲ್ಲಿ, ವಿಶೇಷವಾಗಿ ಕನ್ನಡ ಭಾಷೆ ಸಾಹಿತ್ಯಗಳಲ್ಲಿ ಆಸಕ್ತರಾದ ತರುಣತರುಣಿಯರಲ್ಲಿ ಭಾಷಾ ಪ್ರೇಮವನ್ನೂ ಸಾಹಿತ್ಯ ಜ್ಞಾನವನ್ನೂ ಬೆಳೆಸಲು ಪರಿಷತ್ತಿನ ಮೂಲಕವಾಗಿ ಕನ್ನಡ ಸಾಹಿತ್ಯ ಪರೀಕ್ಷೆಗಳನ್ನು ವ್ಯವಸ್ಥೆಗೊಳಿಸಿದ್ದು ಒಂದು ಶ್ಲಾಘ್ಯವಾದ ಕಾರ್ಯ. ಈ ಪರೀಕ್ಷೆಗಳು ೧೯೪೦ರಲ್ಲಿ ಆರಂಭಗೊಂಡು ಅಣುಗ, ಕಾವ, ಮತ್ತು ಜಾಣ ಎಂಬುದಾಗಿ ಮೂರು ಹಂತಗಳಲ್ಲಿ ನಡೆಯುವಂತೆ ಏರ್ಪಾಡಾಯಿತು. ಸ್ವಲ್ಪಕಾಲದ ಮೇಲೆ ಮೊದಲನೆಯ ಹಂತವನ್ನು ನಿಲ್ಲಿಸಲಾಯಿತು; ಈಚೆಗೆ 'ರತ್ನ' ಎಂಬುದು ಅತ್ಯುಚ್ಚಮಟ್ಟವಾಗಿ ಹೊಸ ಸೇರ್ಪಡೆಯಾಗಿದೆ. ಕಾಲಕ್ರಮದಲ್ಲಿ ಕಾವ ಜಾಣ ಪರೀಕ್ಷೆಗಳು ಹೆಚ್ಚು ಹೆಚ್ಚು ಆಸಕ್ತರನ್ನು ಆಕರ್ಷಿಸಿ, ಕರ್ಣಾಟಕದ ಮೂಲೆ ಮೂಲೆಗಳಲ್ಲಿಯೂ ಕನ್ನಡ ವ್ಯಾಸಂಗ ಹಬ್ಬುವಂತಾಯಿತು.

ಶ್ರೀಯವರ ಅಧಿಕಾರಾವಧಿಯಲ್ಲಿ ನಡೆದ ಇನ್ನೊಂದು ಸಾಧನೆಯೆಂದರೆ ಮಹಿಳೆಯರು ಪರಿಷತ್ತಿನ ಚಟುವಟಿಕೆಗಳ ಬಗ್ಗೆ ಆಸಕ್ತಿ ತಳೆಯುವಂತೆ ಆದದು. ಇದಕ್ಕಾಗಿ ೧೯೩೮ರಲ್ಲಿಯೇ ಮಹಿಳೆಯರ ಸಹಾಯಕ ಸಮಿತಿಯೊಂದನ್ನು ಸ್ಥಾಪಿಸಲಾಯಿತು. ಇದೇ ಮಹಿಳಾಕೂಟವೆಂದಾಯಿತು. ಮುಂದೆ ಪರಿಷತ್ತಿನ ಮಹಿಳಾಶಾಖೆ ವ್ಯವಸ್ಥೆಗೊಂಡು ಬೆಳೆಯಲು ಇಂದು ನಾಂದಿಯಾಯಿತು. "ಹೆಂಗಸರು ದಯಮಾಡಿಸಿ ಪರಿಷತ್ತನ್ನು ತಮ್ಮದನ್ನಾಗಿ ಮಾಡಿಕೊಳ್ಳಬೇಕು. ಕನ್ನಡಕ್ಕೆ ಅವರ ಬೆಂಬಲ ದೊರೆತು ಕನ್ನಡದ ಮುನ್ನಡೆಗೆ ಅವರ ಸಹಕಾರ ದೊರೆಯಬೇಕು ಎಂಬ ಉದ್ದೇಶದಿಂದ ಮಕ್ಕಳನ್ನೂ ಅವರನ್ನೂ ಸೇರಿಸಿ, ಮಹಿಳೆಯರ ಗೋಷ್ಠಿ ಮತ್ತು ಮಕ್ಕಳ ಕೂಟವನ್ನು ಏರ್ಪಡಿಸಿದೆ." ಇದು ಶ್ರೀಯವರು ೫ನೆಯ ವಸಂತಸಾಹಿತ್ಯೋತ್ಸವದ ಸಂದರ್ಭದಲ್ಲಿ ಆಡಿದ ಮಾತು. ಮುಂದೆ ಸಾಹಿತ್ಯ ಪರಿಷತ್ತಿನಲ್ಲಿ, ಅದರ ವಾರ್ಷಿಕ ಸಾಹಿತ್ಯ ಸಮ್ಮೇಳನಗಳಲ್ಲಿ ಮಹಿಳಾ ಗೋಷ್ಠಿಗಳು ಏರ್ಪಡುವುದಕ್ಕೂ ಆ ಮೂಲಕ ಗಮಕ, ಸಾಹಿತ್ಯರಚನೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಮಹಿಳೆಯರು ವ್ಯವಸಾಯ ಮಾಡುವುದಕ್ಕೂ ಶ್ರೀಯವರ ಈ ಹಂಚಿಕೆ ನೆಲವನ್ನು ಚೆನ್ನಾಗಿ ಹದಮಾಡಿತೆನ್ನಬೇಕು. ಈಚೆಗೆ 'ಮಕ್ಕಳ ಕೂಟ'ಗಳು ನೆರೆಯುತ್ತಿರುವುದಕ್ಕೆ ಸಹ ಈ ಸಂದರ್ಭವೇ ಅಮೃತ ಮುಹೂರ್ತವೂ ಆರಂಭಬಿಂದುವೂ ಆಯಿತೆಂದು ತೋರುತ್ತದೆ. ಈ ಮೊದಲೇ ಡಿ.ವಿ.ಜಿ.ಯವರ ಕಾಲದಲ್ಲಿ ಆರಂಭವಾಗಿದ್ದ ಗಮಕ ಕಲಾಭ್ಯಾಸದ ತರಗತಿಗಳು ಮುಂದುವರಿದುವು. ಜೊತೆಗೆ ವಿರಾಮ ಕಾಲದಲ್ಲಿ ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳ

ಪರಿಚಯ ಮಾಡಿಕೊಳ್ಳಲು ಇಷ್ಟ ಪಡುವವರಿಗಾಗಿ ವ್ಯಾಸಂಗಗೋಷ್ಠಿಯನ್ನು ಆರಂಭಿಸಿದ್ದೂ ಶ್ರೀಯವರ ಕೆಲಸವೇ. ಇಲ್ಲಿ ಕನ್ನಡ ಮಾತ್ರವಲ್ಲದೆ ತಮಿಳು ತೆಲುಗು ಭಾಷೆಗಳನ್ನು ಕೂಡ ಕಲಿಸುವ ಯೋಜನೆಯನ್ನು ಅವರು ಹಾಕಿದರು; ಇದರಿಂದ ಬೇರೆಬೇರೆ ದ್ರಾವಿಡ ಭಾಷೆಗಳನ್ನಾಡುವವರ ನಡುವೆ ಪರಸ್ಪರ ಸಾಹಚರ್ಯ ಹೆಚ್ಚಲೆಂದು ಅವರು ಆಶಿಸಿದರು. "ವಿಶ್ವಭಾರತಿ ಶರಣು ಕಿರುತೀರ್ಥವಲ್ತು" ಎಂಬ ಅವರ ಧ್ಯೇಯಕ್ಕೆ ಅನುಗುಣವಾದುದು ಈ ಪ್ರಯತ್ನ. ಮರಾಠಿ, ಉರ್ದು ಮುಂತಾದ ಭಾಷೆಗಳ ಭಾಷಾ ಪಂಡಿತರ ಸಂಪರ್ಕವನ್ನು ಪರಿಷತ್ತಿಗೆ ಕಲ್ಪಿಸಲು ಅವರನ್ನು ಸದಸ್ಯರನ್ನಾಗಿ ಮಾಡಿಕೊಳ್ಳಲೂ ಶ್ರೀಯವರು ಶ್ರಮಿಸಿದರು.

ಸಾಹಿತ್ಯ ಪರಿಷತ್ತಿಗೆ ಕನ್ನಡ ಭಾಷಾ ಸೇವಕರಾದ ಹಿರಿಯ ಸಾಹಿತಿಗಳ ಭಾವ ಚಿತ್ರಗಳಲ್ಲಿ ಸೋಸಲೆ ಅಯ್ಯಾಶಾಸ್ತ್ರಿ, ಎಂ. ವೆಂಕಟಕೃಷ್ಣಯ್ಯನವರ ಭಾವಚಿತ್ರಗಳು ಪರಿಷತ್ತಿಗೆ ಸೇರುವಂತಾದುದೂ, ಇ. ಎ. ಭಾಸ್ಕರರಾಯರ ಹೆಸರಿನ ದತ್ತಿ ವ್ಯವಸ್ಥೆಯಾದುದೂ ಈ ಕಾಲದಲ್ಲಿಯೇ.

ಬಿ. ಎಂ. ಶ್ರೀಕಂಠಯ್ಯನವರು ಹೀಗೆ ಪರಿಷತ್ತಿನ ಪ್ರಭಾವವನ್ನೂ ಕಾರ್ಯ ವಿಧಾನವನ್ನೂ ಬೆಳೆಸಲು ತಮ್ಮ ಅಗಾಧವಾದ ವಿದ್ವತ್ತು, ಮೋಹಕವಾದ ವಾಗ್ವೈಖರಿ, ಪ್ರಬಲವೂ ಗೌರವಾಸ್ಪದವೂ ಆದ ತಮ್ಮ ವ್ಯಕ್ತಿತ್ವವನ್ನು ಪೂರ್ಣವಾಗಿ ವಿನಿಯೋಗಿಸಿದರು. ಆಗಿನ ಸ್ಥಿತಿಯಲ್ಲಿ ಪರಿಷತ್ತಿನ ಪೋಷಣೆಗೆ ಅವಶ್ಯವಾಗಿದ್ದ ಜನಬಲವನ್ನೂ ಧನಬಲವನ್ನೂ ಸಂಪಾದಿಸಿಕೊಟ್ಟರು. ಅವರು ನಿರೀಕ್ಷಿಸಿದ್ದಂತೆ ವರ್ತಕರಾಗಲಿ ಶ್ರೀಮಂತರಾಗಲಿ ಮುಂದೆ ಬಂದು ಪರಿಷತ್ತಿನ ಅಚ್ಚುಕೂಟಕ್ಕೆ ಹಣ ಒದಗಿಸದಿದ್ದಾಗ, ತಮ್ಮ ಸ್ವಂತ ಹಣವನ್ನು, ಇಂದಿನ ಲೆಕ್ಕದಲ್ಲಿ ೬೦ ಸಾವಿರಕ್ಕೂ ಹೆಚ್ಚಾಗ ಬಹುದಾದ ಪ್ರಮಾಣದಲ್ಲಿ ಪರಿಷತ್ತಿಗೆ ನೀಡಿ ಕೆಲಸವನ್ನು ಸಾಧ್ಯಮಾಡಿದರು. ಇವೆಲ್ಲ ಒಂದು ತೂಕವಾದರೆ, ಶ್ರೀಯವರು ಕರ್ಣಾಟಕದ ಮೂಲೆ ಮೂಲೆಗಳಲ್ಲಿ ಸಂಚಾರ ಮಾಡಿ, ತಮ್ಮ ಭಾಷಣ ಸಂಭಾಷಣಗಳಿಂದ ಜನರನ್ನು ಪರಿಷತ್ತಿನ ಕೆಲಸಗಳಿಗೆ ಒಲಿಸಿಕೊಂಡುದೇ ಇನ್ನೊಂದು ತೂಕ. ಕನ್ನಡ ಜನ ಅವರ ಲಲಿತ ಸುಂದರವಾದ ಗಂಭೀರ ವ್ಯಕ್ತಿತ್ವಕ್ಕೆ, ಮಧುರ ಮೋಹಕವಾದ ವಾಗ್ವೈಖರಿಗೆ ಮನಸೋತುದು ಸಹಜವೇ. ವಿಶ್ವವಿದ್ಯಾನಿಲಯದ ಶಿಕ್ಷಣಪಡೆದ ಅವರ ಪ್ರಿಯ ವಿದ್ಯಾರ್ಥಿಗಳೂ ಅವರಿಗೆ ಈ ಕೆಲಸದಲ್ಲಿ ಬಹುವಾಗಿ ನೆರವಾದರು. ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ, ವಿ. ಸೀತಾರಾಮಯ್ಯ, ಕ.ವೆಂ. ರಾಘವಾಚಾರ್, ಬಿ. ವೆಂಕೋಬರಾವ್ ಮುಂತಾದವರು ಪರಿಷತ್ತಿನ ಕೆಲಸಗಳು ಕುಂಠಿತವಾಗದಂತೆ, ಮುನ್ನಡೆಯುವಂತೆ ಶ್ರೀಯವರಿಗೆ ತಮ್ಮ ಪೂರ್ಣ ಸಹಕಾರವನ್ನು ನೀಡಿದರು; ಅವರ ಕೈಯನ್ನು ಬಲಪಡಿಸಿದರು.

ಪರಿಷನ್ಮಂದಿರದಲ್ಲಿ ಶ್ರೀಯವರ ಅಧಿಕಾರಾವಧಿಯಲ್ಲಿ ಹಲವು ಉಪನ್ಯಾಸಗಳು ನಡೆದುವು. ಈ ಸಂದರ್ಭಗಳಲ್ಲೆಲ್ಲ ಶ್ರೀಯವರು ಪ್ರಾಸ್ತಾವಿಕ ಹಾಗೂ ಸ್ವಾಗತ ಭಾಷಣಗಳನ್ನು ಮಾಡಿದ ವರದಿಗಳಿವೆ. ಇವು ಇನ್ನೂ ಸಂಕಲಿತವಾಗಿ ಒಗ್ಗೂಡಿಲ್ಲ. ಹೀಗೆಯೇ 'ಕನ್ನಡ ನುಡಿ' ಪತ್ರಿಕೆಗೆ ಶ್ರೀಯವರು ಸಂಪಾದಕರಾಗಿದ್ದಾಗ ಬರೆದಿದ್ದ ಸಂಪಾದಕೀಯಗಳೂ ಒಗ್ಗೂಡಿರುವಂತೆ ತೋರುವುದಿಲ್ಲ. ಬಹುಶಃ ಈ ಯೆಲ್ಲ ಬರಹಗಳನ್ನೂ ಕೂಡಿಸಿದರೆ, ಒಂದು ಸಂಪುಟವೇ ಆದೀತು. ಶ್ರೀಯವರು ಪರಿಷನ್ಮಂದಿರದಲ್ಲಿ ಬುದ್ಧನನ್ನು ಕುರಿತು (೨೯-೬.೧೯೪೧), ವಿಶ್ವೇಶ್ವರಯ್ಯನವರನ್ನು ಕುರಿತು (೧೫-೯-೧೯೪೧) ಉಪನ್ಯಾಸಮಾಡಿದ್ದಾರೆ. ಅವರಿಗೆ 'ಸಂಭಾವನೆ' ಯನ್ನು ಒಪ್ಪಿಸಿದಾಗ ಉತ್ಸವ ಜರುಗಿದ್ದೂ, ಅವರು ಉಪನ್ಯಾಸ ಮಾಡಿದ್ದೂ ಸಹ ಪರಿಷನ್ಮಂದಿರದಲ್ಲಿಯೇ (೧೪-೯-೧೯೪೧). ಇಂತಹ ಸಂದರ್ಭಗಳು ಇನ್ನೂ ಹಲವಾರು ಇರಬೇಕು.

ಶ್ರೀಯವರು ೧೯೩೪, ೧೯೩೬ ಮತ್ತು ೧೯೪೨ರ ಅವಧಿಗಳಲ್ಲಿ ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ ಸದಸ್ಯರಾಗಿದ್ದುಕೊಂಡು ತಮ್ಮ ಸಹಕಾರವನ್ನು ನೀಡಿದರು. ಆ ಪತ್ರಿಕೆಯ ಮೂಲಕ 'ಕನ್ನಡದ ಪುನರುಜ್ಜೀವನ' (೨೧-೧-೧೯೩೬), 'ಕಾವ್ಯಾವಲೋಕನದ ವಿಮರ್ಶೆ' (೨೬-೨-೧೯೪೧), 'ಪೂರ್ವದ ಹಳಗನ್ನಡ ಮತ್ತು ತಮಿಳು: ಕನ್ನಡ ಮೊದಲೊ ತಮಿಳು ಮೊದಲೊ ?' (೨೭-೧-೧೯೪೨) ಎಂಬ ತಮ್ಮ ಬರೆಹಗಳನ್ನು ಪ್ರಕಟಿಸಿದರು.

ಶ್ರೀಯವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಕಾಲದಲ್ಲಿ ನಡೆದ ಕೆಲವು ಮಹತ್ವದ ಘಟನೆಗಳಲ್ಲಿ ಒಂದು, ಪರಿಷತ್ತಿನ ಹೆಸರು 'ಕರ್ಣಾಟಕ ಸಾಹಿತ್ಯ ಪರಿಷತ್ತು' ಎಂದಿದ್ದುದು 'ಕನ್ನಡ ಸಾಹಿತ್ಯ ಪರಿಷತ್ತು' ಎಂದಾದುದು. ಶ್ರೀಯವರು ಸಾಹಿತ್ಯ ಪರಿಷತ್ಪತ್ರಿಕೆಯ ಏಪ್ರಿಲ್ ೧೯೩೮ರ ಸಂಚಿಕೆಯನ್ನು (೨೩-೧) 'ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ' ಎಂಬುದಾಗಿ ಬದಲಾಯಿಸಿದ್ದು ಬೆಳ್ಳಾವೆ ವೆಂಕಟನಾರಣಪ್ಪ ಮೊದಲಾಗಿ ಕೆಲವರ ಆಗ್ರಹಕ್ಕೆ ಅವರು ಗುರಿಯಾಗುವಂತಾಯಿತು. ಈ ಸಂದರ್ಭ ಆಪ್ತರ ನಡುವೆ ಕೆಲ ಕಾಲ ಕಟುವಾತಾವರಣವನ್ನು ಕೆದರಿತು. ಶ್ರೀಯವರು ಒಬ್ಬ ಅಪರಾಧಿಯೋ ಎನ್ನುವಂತೆ ಕೆಲವರ ಭಾವನೆಗಳು ಉದ್ರೇಕಗೊಂಡುವು. ಅನಂತರದಲ್ಲಿ ಡಿಸೆಂಬರ್ ೧೯೩೮ರಲ್ಲಿ ಬಳ್ಳಾರಿಯಲ್ಲಿ ನಡೆದ ಸಕಲ ಸದಸ್ಯರ ಅಧಿವೇಶನದಲ್ಲಿ ಸಂಸ್ಥೆ 'ಕನ್ನಡ ಸಾಹಿತ್ಯ ಪರಿಷತ್ತು' ಎಂದೂ ಪತ್ರಿಕೆ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ' ಎಂದೂ ಇರುವುದೆಂದು ತೀರ್ಮಾನವಾಯಿತು. ಪರಿಷತ್ತಿನ ಶಕ್ತಿ ಪ್ರಭಾವಗಳನ್ನು ಬಹುಮುಖವಾಗಿ ಬೆಳಸಿದ, ಬೆಳಗಿಸಿದ, ಶ್ರೀಯವರ ಅಧಿಕಾರಾವಧಿಯಲ್ಲಿಯೇ ಪರಿಷತ್ತಿನ ಬೆಳ್ಳಿಯ ಹಬ್ಬ ಕೂಡ ಜರುಗುವಂತಾದುದು ಒಂದು ಯೋಗಾಯೋಗ. ೧೯೪೦ರ ಜೂನ್

೩೦ ಮತ್ತು ಜುಲೈ ೧ನೆಯ ತಾರೀಖುಗಳಂದು ಅದು ವೈಭವದಿಂದ ಜರುಗಿತು. ಆಗ್ಗೆ ಪರಿಷತ್ತಿನ ಪೋಷಕರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಈ ಹಬ್ಬದ ಸಡಗರದಲ್ಲಿ ಭಾಗವಹಿಸಿದ್ದರು.

೧೯೪೨ರ ಡಿಸೆಂಬರ್ ೨೧ ರಂದು ಪರಿಷತ್ತಿನ ಉಪಾಧ್ಯಕ್ಷಸ್ಥಾನದಿಂದ ಬಿಡುಗಡೆ ಪಡೆದಾಗ ಶ್ರೀಯವರು ಆಡಿದ ಈ ಮಾತುಗಳು ಅವರ ವಿನಯವನ್ನೂ ಕನ್ನಡ ಪ್ರೇಮವನ್ನೂ ಎತ್ತಿ ಹೇಳುತ್ತವೆ: "ಪರಿಷತ್ತಿನ ನನ್ನ ಆಸೆ ನೋಟ, ಕನಸು ಬಲು ದೊಡ್ಡದು. ಕನ್ನಡದ ಸಾರ್ವಜನಿಕ ವಿದ್ಯಾಪೀಠ, ಹೊಸ ಕರ್ನಾಟಕವನ್ನು ರೂಪಿಸುತ್ತಿರುವ ಕನ್ನಡಮ್ಮನ ಗುಡಿ ಅದು. ಯಾರೊಬ್ಬನ ಸೇವೆಯೂ ಅಲ್ಲಿ ಅಖಿಲ ಸೇವೆಗಿಂತ ಹೆಚ್ಚಾಗದು. ನನ್ನಿಂದಾದಷ್ಟೂ ದುಡಿವೆನೋ ಇಲ್ಲವೋ ಅನ್ನುವುದು ನನ್ನ ಅಳುಕು." ಪರಿಷತ್ತಿನ ಆಚಾರ್ಯಶಿಲ್ಪಿಗಳಲ್ಲಿ ಒಬ್ಬರಾಗಿ ಶ್ರಮಿಸಿದ ಶ್ರೀಯವರ ಘನ ವ್ಯಕ್ತಿತ್ವಕ್ಕೆ ಈ ಮಾತು ಭೂಷಣಪ್ರಾಯವಾದುದು, ಮುಂದಿದ ಪೀಳಿಗೆಯವರಿಗೆ ಮಾರ್ಗದರ್ಶಕವಾದುದು.




**ಟಿ. ಆರ್. ನಾಗಪ್ಪ**

# ಶ್ರೀಯುವರು ಮತ್ತು ವಯಸ್ಕರ ಶಿಕ್ಷಣ

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಒಂದು ಕಾಲಕ್ಕೆ ಅಂತರ ರಾಷ್ಟ್ರೀಯ ಖ್ಯಾತಿಯನ್ನು ಪಡೆದಿತ್ತು. ಜೊತೆಗೆ ಯೂನೆಸ್ಕೊ ಅಂಗಸಂಸ್ಥೆ (Associated Project) ಆಗಿತ್ತು. ಇಂತಹ ಪುರಸ್ಕಾರ ದೊರೆತಿದ್ದು ಇಡೀ ಏಷ್ಯಾದಲ್ಲಿ ಕೇವಲ ಈ ಎರಡು ಸಂಸ್ಥೆಗಳಿಗೆ ಮಾತ್ರ. ಒಂದು ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ; ಇನ್ನೊಂದು ದೆಹಲಿಯ ಜಾಮಿಯಾ ಮಿಲಿಯಾ. ಯೂನೆಸ್ಕೊ ಸಮಿತಿಯ ಪರವಾಗಿ ಹೊರದೇಶಗಳಲ್ಲಿ ಹಣ ಸಂಗ್ರಹ ಮಾಡಿ 'ಗಿಫ್ಟ್ ಕೂಪನ್' (ಉಡುಗೊರೆ ಚೀಟಿ)ಗಳ ಮೂಲಕ ಸಮಿತಿಗೆ ಕಳುಹಿಸುತ್ತಿತ್ತು. ಈ ಮಟ್ಟಕ್ಕೆ ಏರಲು ಅದಕ್ಕಿದ್ದದ್ದು ಧನಬಲವಲ್ಲ, ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ* ಪ್ರಥಮ ಅಧ್ಯಕ್ಷ ಬಿ. ಎಂ. ಶ್ರೀಕಂಠಯ್ಯನವರು ವ್ಯಕ್ತಪಡಿಸಿದಂತೆ ಅದಕ್ಕಿದ್ದ ಜನಬಲ. ಈಗ ಸಮಿತಿಗೆ ಧನಬಲ ಇದೆ. ಬಿ. ಎಂ. ಶ್ರೀಕಂಠಯ್ಯನವರು ತಿಳಿಸಿದಂತೆ ಜನಬಲವಿಲ್ಲ. ಸಮಿತಿಗೆ ಅದು ಬೇಕೂ ಇಲ್ಲ.

ಮೈಸೂರಿನ ಮಹಾರಾಜ ಕಾಲೇಜಿನ ವಿದ್ಯಾರ್ಥಿ ಸಂಘದ ಕಾರ್ಯಕ್ರಮಗಳಲ್ಲಿ ಅಕ್ಷರಪ್ರಚಾರ ಒಂದು ಕಾರ್ಯಕ್ರಮ ಆಗಿತ್ತು. 1940 ರ ಜುಲೈನಲ್ಲಿ ವಿದ್ಯಾರ್ಥಿ ಸಂಘವು ಅಕ್ಷರ ಪ್ರಚಾರ ಕೈಗೊಳ್ಳಲು ಒಂದು ಉಪ ಸಮಿತಿಯನ್ನು ರಚಿಸಿತು. ಅದರ ಗೌರವ ಕಾರ್ಯದರ್ಶಿಯಾಗಿ ಯೂನೆಸ್ಕೊ ತಜ್ಞರಾಗಿದ್ದ ದಿವಂಗತ ಎಸ್. ವಿ. ಶ್ರೀನಿವಾಸರಾಯರು ನೇಮಕವಾದರು. ಅವರಿಗೆ ನೆರವು ನೀಡಿದವರು ಮಹಾರಾಜ ಕಾಲೇಜಿನ ವಿದ್ಯಾರ್ಥಿ ಸಂಘದ ಸದಸ್ಯ ಸಿಂಗಾರಿಗೌಡರು. ಅವರು ಈಗ ಮಂಡ್ಯ

---

* ಮೊದಲಿನ ಹೆಸರು 'ಸಂಸ್ಥಾನದ ಅಕ್ಷರ ಸಮಿತಿ'. ಅನಂತರ ಅದರ ಹೆಸರು 'ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ' ಎಂದು ಮಾರ್ಪಾಡಾಯಿತು. ಕರ್ನಾಟಕ ರಾಜ್ಯ ರಚನೆ ಆದಮೇಲೆ 'ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ' ಎಂಬುದಾಗಿ ಅದರ ಹೆಸರು ಬದಲಾಗಿದೆ.

ಜಿಲ್ಲೆಯ ಮುಖಂಡರಲ್ಲಿ ಒಬ್ಬರು. ಹಲವಾರು ಗ್ರಾಮಪಂಚಾಯಿತಿಗಳು ಮತ್ತು ಜಿಲ್ಲಾ ಬೋರ್ಡುಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ವಯಸ್ಕರಿಗೆ ಅಕ್ಷರ ಪ್ರಚಾರ ತರಗತಿಗಳನ್ನು ತೆರೆಯುವಂತೆ ವಿದ್ಯಾರ್ಥಿ ಸಂಘದ ಸಹಾಯ ಬೇಡಿದವು. ಜೊತೆಗೆ ಈ ಕಾರ್ಯಕ್ಕೆ ಬೇಕಾಗುವ ಧನಸಹಾಯ ಮಾಡಲು ಮುಂದೆ ಬಂದವು. ಮೈಸೂರಿನ ಕೃಷ್ಣರಾಜೇಂದ್ರ ಮಿಲ್ಲು ಮತ್ತು ಭದ್ರಾವತಿಯ ಉಕ್ಕಿನ ಕಾರ್ಖಾನೆ ಅಕ್ಷರಪ್ರಚಾರ ತರಗತಿಗಳನ್ನು ತೆರೆಯಲು ಮುಂದಾದವು.

ಅಕ್ಷರಪ್ರಚಾರ ಕಾರ್ಯಕ್ರಮ ವಿಸ್ತಾರವಾಗುತ್ತ ಬಂತು. ಆದ್ದರಿಂದ ಈ ಕಾರ್ಯವನ್ನು ವ್ಯಾಪಕವಾಗಿ ಹರಡಲು 1941ರ ಆದಿಭಾಗದಲ್ಲಿ ಉಪಸಮಿತಿ ವಿಸ್ತಾರಗೊಂಡಿತು. ಅದು ಅಕ್ಷರಪ್ರಚಾರ ಸಮಿತಿ ಆಗಿ ಮಾರ್ಪಟ್ಟಿತು. ಎಸ್. ವಿ. ಶ್ರೀನಿವಾಸ ರಾಯರು ಮತ್ತು ನಾಡಿಗ ಕೃಷ್ಣಮೂರ್ತಿಗಳು ಅದರ ಕಾರ್ಯದರ್ಶಿಗಳಾಗಿ ಆಯ್ಕೆ ಆದರು. ಆಗಿನ ಕಾಲಕ್ಕೆ ಎಂ ವಿ. ಕೃಷ್ಣಪ್ಪ ಮಹಾರಾಜ ಕಾಲೇಜಿನ ವಿದ್ಯಾರ್ಥಿ. 1942 ರಲ್ಲಿ ನಡೆದ 'ಭಾರತದಿಂದ ತೊಲಗಿ' ಚಳುವಳಿಯಲ್ಲಿ 'ಯಾರದು ರೈಲು, ನಮ್ಮದು ರೈಲು' ಎಂಬ ಘೋಷಣೆಯ ಮೂಲಕ ವಿದ್ಯಾರ್ಥಿಗಳನ್ನು ಹುರಿದುಂಬಿಸಿದ ಸೂತ್ರಧಾರಿ. ಮೈಸೂರು ನಗರದ ಉಪಾಧ್ಯಾಯರ ತರಬೇತಿ ಕೇಂದ್ರದಲ್ಲಿ ಪಟ್ಟಾಭಿರಾಮಯ್ಯ ಎಂಬುವರು ಪಂಡಿತ ಪರೀಕ್ಷೆಗೆ ಅಧ್ಯಯನ ಮಾಡುತ್ತಿದ್ದರು. ಇವರಿಬ್ಬರು ಒಪ್ಪೊತ್ತಿನ (part time) ಮೇಲ್ವಿಚಾರಕರಾಗಿ ನೇಮಕವಾದರು. ಮೈಸೂರಿನಂತೆ ಬೆಂಗಳೂರು ನಗರದಲ್ಲಿ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಅಕ್ಷರ ಪ್ರಚಾರ ಸಮಿತಿ ರಚನೆ ಆಯಿತು. ಸಮಿತಿಯ ಕಾರ್ಯದರ್ಶಿ ಟಿ. ಎಲ್. ಅಹೋಬಲಾಚಾರ್. ಯೂನಿವರ್ಸಿಟಿ ಸೆಟಲ್‌ಮೆಂಟ್ ನೆರವಿನಿಂದ ಬೆಂಗಳೂರು ನಗರದಲ್ಲಿ ಕಾರ್ಮಿಕರಿಗೆ ಅಕ್ಷರ ಪ್ರಚಾರ ತರಗತಿಗಳು ಪ್ರಾರಂಭವಾದವು.

ಆಗಿನ ವಿದ್ಯಾಮಂತ್ರಿ ಮಹಮದ್ ಇಮಾಂ ಅವರು ೧೯೪೧ರ ಆಗಸ್ಟ್ ತಿಂಗಳಿನಲ್ಲಿ ಮೈಸೂರು ಮತ್ತು ಬೆಂಗಳೂರು ನಗರಗಳಲ್ಲಿ ಅಕ್ಷರಪ್ರಚಾರ ಕಾರ್ಯದಲ್ಲಿ ನಿರತರಾಗಿದ್ದ ಕಾರ್ಯಕರ್ತರ ಸಭೆ ಕೂಡಿಸಿದರು. ಆ ಸಭೆಗೆ ಬೆಂಗಳೂರು ನಗರ ಅಕ್ಷರ ಪ್ರಚಾರ ಸಮಿತಿಯ ಅಧ್ಯಕ್ಷ ಬಿ. ಎಂ. ಶ್ರೀಕಂಠಯ್ಯನವರು, ಮೈಸೂರಿನ ಸಮಿತಿಯ ಪರವಾಗಿ ಪ್ರೊಫೆಸರ್ ಡಬ್ಲ್ಯು. ಜಿ. ಈಗಲ್ಟನ್ ಹಾಜರಾಗಿದ್ದರು. ಎರಡನೆಯ ಬಾರಿಗೆ 30.10 41ರಲ್ಲಿ ಇನ್ನೊಂದು ಸಭೆ ಸೇರಿತು. ಆ ಸಭೆಗೆ ಸಮಿತಿಯ ಪ್ರಧಾನ ಕಾರ್ಯದರ್ಶಿ ಟಿ. ಕೃಷ್ಣಮೂರ್ತಿಗಳು ಮತ್ತು ಎಸ್. ವಿ. ಶ್ರೀನಿವಾಸರಾಯರು ಆಹ್ವಾನಿತರು. ಮಾನ್ಯ ಮಂತ್ರಿಗಳು ಸಭೆಯನ್ನು ಉದ್ದೇಶಿಸಿ ಹೀಗೆ ಹೇಳಿದರು :

"ಮೈಸೂರು ಸಂಸ್ಥಾನದಲ್ಲಿ ಅಕ್ಷರ ಪ್ರಚಾರಕಾರ್ಯ ನಡೆಸಲು ಅನೇಕ ಸಂಸ್ಥೆಗಳು ಹುಟ್ಟಿಕೊಂಡಿವೆ. ಅವೆಲ್ಲವೂ ಒಟ್ಟುಗೂಡಿ ಪರಿಣಾಮಕಾರಿಯಾಗಿ ಸೇವೆ ಸಲ್ಲಿಸುವುದು ಒಳ್ಳೆಯದು. ಮೇಲಾಗಿ ಈ ಕಾರ್ಯ ಇಡೀ ಸಂಸ್ಥಾನಕ್ಕೆ ವಿಸ್ತಾರವಾಗತಕ್ಕದ್ದು. ಈ ದೃಷ್ಟಿಯಿಂದ ಒಂದು ಕೇಂದ್ರ ಸಮಿತಿಯ ಸ್ಥಾಪನೆ ಅನಿವಾರ್ಯ. ಅದರಲ್ಲಿ ಖಾಸಗಿ ಮಹನೀಯರಿಗೆ ಹೆಚ್ಚಿನ ಪ್ರಾತಿನಿಧ್ಯ ಅತ್ಯಗತ್ಯ. ಆವಶ್ಯಕತೆಯಿದ್ದ ಕಡೆಗಳಲ್ಲಿ ಕೇಂದ್ರ ಸಮಿತಿ ತನ್ನ ಶಾಖೆಗಳನ್ನು ತೆರೆಯಬಹುದು." ಈ ಸಭೆಯಲ್ಲಿ ಕೈಕೊಂಡ ತೀರ್ಮಾನದಂತೆ ಬೆಂಗಳೂರು ಮತ್ತು ಮೈಸೂರು ಅಕ್ಷರ ಪ್ರಚಾರ ಸಮಿತಿ ಸದಸ್ಯರ ಮತ್ತು ಕಾರ್ಯಕರ್ತರ ಸಭೆ ನವೆಂಬರಿನಲ್ಲಿ ಬೆಂಗಳೂರು ಅಕ್ಷರ ಪ್ರಚಾರ ಸಮಿತಿ ಕಚೇರಿಯಲ್ಲಿ ಸೇರಿತು. ಸಭೆಯ ಫಲಶ್ರುತಿ ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ ಸ್ಥಾಪನೆ. ಬಿ. ಎಂ. ಶ್ರೀಕಂಠಯ್ಯನವರು ಸಮಿತಿಯ ಅಧ್ಯಕ್ಷರಾಗಿ ಆಯ್ಕೆ ಆದರು. ಡಬ್ಲ್ಯು. ಜಿ. ಈಗಲ್ಟನ್ ಉಪಾಧ್ಯಕ್ಷರಾಗಿಯೂ, ಟಿ. ಕೃಷ್ಣಮೂರ್ತಿ ಗೌರವಕಾರ್ಯ ದರ್ಶಿಯಾಗಿಯೂ ಚುನಾಯಿತರಾದರು.

ಅಕ್ಷರ ಪ್ರಚಾರಕಾರ್ಯಕ್ರಮ ನಡೆಸಲು ಸೂಕ್ತ ಪಠ್ಯಪುಸ್ತಕದ ಆವಶ್ಯಕತೆ ತೋರಿತು. 18-2-1939ರಲ್ಲಿ ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪದಲ್ಲಿ ಜಿಲ್ಲಾ ಕರ್ಣಾಟಕ ಸಂಘಗಳು ಅಕ್ಷರಪ್ರಚಾರ ಕಾರ್ಯವನ್ನು ಕೈಕೊಳ್ಳಬೇಕೆಂದು ತೀರ್ಮಾನ ವಾಯಿತು. ಆಗ ಶಿವಮೊಗ್ಗ ಕರ್ನಾಟಕ ಸಂಘದ ಕಾರ್ಯದರ್ಶಿಗಳು ಎಸ್. ವಿ. ಕೃಷ್ಣಮೂರ್ತಿರಾಯರು ಮತ್ತು ಬಿ. ಆರ್. ಪುಟ್ಟನಂಜಪ್ಪನವರು. ಅವರ ಕೋರಿಕೆಯ ಮೇಲೆ ಹೆಸರಾಂತ ಸಾಹಿತಿಗಳಾಗಿದ್ದ ಎಂ. ಆರ್. ಶ್ರೀನಿವಾಸಮೂರ್ತಿಗಳು 'ವಯಸ್ಕರ ವಿದ್ಯಾಭ್ಯಾಸದ ಮೊದಲನೆಯ ಪುಸ್ತಕ' ರಚಿಸಿಕೊಟ್ಟರು. ಅದರ ಮುದ್ರಣದ ಹೊರೆ ಯನ್ನು ಭೂಪಾಲಂ ಚಂದ್ರಶೇಖರಯ್ಯನವರು ವಹಿಸಿಕೊಂಡರು. ಅದೇ ಪುಸ್ತಕವನ್ನು ಸಮಿತಿಯೂ ಸಹ ಬಳಸುತ್ತಿತ್ತು. ಅದರ ಪ್ರತಿಗಳು ಮುಗಿದು ಹೋದವು. ಆ ಪುಸ್ತಕ ಸಾಕಷ್ಟು ಸುಧಾರಣೆ ಆಗಬೇಕಿತ್ತು. ಆದ್ದರಿಂದ ಸಮಿತಿ ಬೇರೆ ಪಠ್ಯಪುಸ್ತಕವನ್ನು ರಚಿಸಲು ಯೋಚಿಸಿತ್ತು. ಇತ್ತಲಾಗಿ ಕೆ.ಎಸ್. ಆಚಾರ್ಲು, ದೇವುಡು ನರಸಿಂಹಶಾಸ್ತ್ರಿ ಗಳು ಮತ್ತು ಜೆ. ಬಿ. ಮಲ್ಲಾರಾಧ್ಯರು ತಮ್ಮದೇ ಆದ ರೀತಿಯಲ್ಲಿ ಪಠ್ಯಪುಸ್ತಕ ರಚಿಸುವ ಕಾರ್ಯದಲ್ಲಿ ತೊಡಗಿದ್ದರು.

ಮೇಲೆ ಹೇಳಿದಂತೆ ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ ಸ್ಥಾಪನೆ ಆಯಿತು. ಅದರ ಅಂಗವಾಗಿ 'ಕನ್ನಡ ಸಮಿತಿ' ರಚನೆ ಆಯಿತು. ಅದರ ಸದಸ್ಯರು ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ, ಡಬ್ಲ್ಯು. ಜಿ. ಈಗಲ್ಟನ್, ತೀ. ನಂ.

ಶ್ರೀಕಂಠಯ್ಯ, ಎಂ. ಆರ್. ಶ್ರೀನಿವಾಸಮೂರ್ತಿ, ದೇವುಡು ನರಸಿಂಹಶಾಸ್ತ್ರಿ, ಕೆ. ಶ್ರೀನಿವಾಸಾಚಾರ್ಲು (ಕೆ.ಎಸ್. ಆಚಾರ್ಲು), ಗೊರೂರು ಸ್ವಾಮಯ್ಯಂಗಾರ್, ಜಿ.ಆರ್. ರಂಗಸ್ವಾಮಿ, ಟಿ. ಕೃಷ್ಣಮೂರ್ತಿ, ಎಸ್. ವಿ. ಶ್ರೀನಿವಾಸರಾಯರು ಮತ್ತು ಮಿಸ್ ಹಾವರ್ತ್. ಕೆ.ವಿ. ನಾರಾಯಣ್ ಆ ಸಮಿತಿಯ ಸಂಚಾಲಕರು. ಈ ಸಮಿತಿಯು ಪಠ್ಯಪುಸ್ತಕ ರಚಿಸಲು ಒಂದು ಉಪಸಮಿತಿಗೆ ವಹಿಸಿತು. ಅದು ಎಂ. ಆರ್. ಶ್ರೀನಿವಾಸಮೂರ್ತಿಯವರ ಪಠ್ಯಪುಸ್ತಕದ ಆಧಾರದ ಮೇಲೆ ಸುಧಾರಿಸಿದ ಪಠ್ಯಪುಸ್ತಕವನ್ನು ತಯಾರಿಸಿತು.

ವಿಶ್ವದ ಎರಡನೆಯ ಮಹಾಯುದ್ಧದ ಅನಂತರ ಮೈಸೂರು ಸರಕಾರ ಶಿಕ್ಷಣದ ಪ್ರಗತಿಗೆ ಹಾಗೂ ಗ್ರಾಮಾಭಿವೃದ್ಧಿಗೆ ಒಂದು ಯೋಜನೆಯನ್ನು ತಯಾರಿಸಲು ಯೋಚಿಸಿತು. ವಯಸ್ಕರ ಶಿಕ್ಷಣ, ಶಿಕ್ಷಣದ ಅವಿಭಾಜ್ಯ ಅಂಗ ಎಂಬುದನ್ನು ಸರಕಾರ ಅಂಗೀಕರಿಸಿತ್ತು. ಸಂಸ್ಥಾನಾದ್ಯಂತ ವಯಸ್ಕರ ಶಿಕ್ಷಣ ಕಾರ್ಯವನ್ನು ವಿಸ್ತರಿಸಲು ಅನುಕೂಲವಾಗುವಂತೆ ಒಂದು ಸಮಗ್ರ ಯೋಜನೆಯನ್ನು ತಯಾರಿಸಲು ಸಮಿತಿಯ ಅಧ್ಯಕ್ಷ ಬಿ.ಎಂ.ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಮೈಸೂರು ಸರಕಾರ ರಚಿಸಿತು.

ಬಿ.ಎಂ. ಶ್ರೀಕಂಠಯ್ಯನವರಿಗೆ ವಯಸ್ಕರ ಶಿಕ್ಷಣದ ಯಶಸ್ಸಿಗೆ ಜನ ಬಲ ಅಗತ್ಯ ಎಂಬ ಅಚಲ ನಂಬಿಕೆಯಿತ್ತು. 7-6-1942ರಲ್ಲಿ ಬೆಂಗಳೂರಿನಲ್ಲಿ ನಡೆದ ವಯಸ್ಕರ ಶಿಕ್ಷಣ ಸಮ್ಮೇಳನದಲ್ಲಿ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿರುವರು : "ಸರಕಾರದವರೂ, ಪ್ರಜೆಗಳಲ್ಲಿ ಶ್ರೀಮಂತರೂ, ಜಿಲ್ಲೆ ನಗರಸಭೆಗಳೂ ದ್ರವ್ಯ ಸಹಾಯವನ್ನು ಮಾಡುತ್ತಿವೆ. ಇನ್ನೂ ಹೆಚ್ಚಾಗಿ ಹಣ ಬೇಕಾಗಿದೆ ಎಂದು ಹೇಳಬೇಕಾಗಿಲ್ಲ. ಧನಕ್ಕಿಂತ ಹೆಚ್ಚಾಗಿ ಜನ ಬೇಕಾಗಿವೆ....ತಮ್ಮ ತಮ್ಮ ಸ್ಥಳಗಳಲ್ಲಿ ಈ ದೊಡ್ಡ ಪ್ರಯತ್ನಕ್ಕೆ ಉತ್ತೇಜನ ಕೊಡಬೇಕೆಂದು ಸಮಿತಿಯ ಪರವಾಗಿ ಪ್ರಾರ್ಥಿಸುತ್ತೇನೆ." ಈಗಿನ ಧೋರಣೆ ತದ್ವಿರುದ್ಧ. ಜನಬಲಕ್ಕಿಂತ ಹೆಚ್ಚಾಗಿ ಧನ ಬಲಕ್ಕೆ ಹೆಚ್ಚಿನ ಮಾನ್ಯತೆ. ಜನಬಲವನ್ನು ಕಡೆಗಣಿಸಲಾಗಿದೆ. ಹೀಗಾಗಿ ಸಮಿತಿಯ ಕಾರ್ಯಕ್ರಮ ನಿರೀಕ್ಷಿಸಿದಷ್ಟು ತೃಪ್ತಿಕರವಾಗಿಲ್ಲ.

ನವಸಾಕ್ಷರರಿಗೆ ಸರಳ ಭಾಷೆಯಲ್ಲಿ ರಾಮಾಯಣ ಬರೆಸಲು 1943ರಲ್ಲಿ ಡಿ. ವಿ. ಗುಂಡಪ್ಪ, ಸಮಿತಿಯ ಅಧ್ಯಕ್ಷ ಬಿ. ಎಂ. ಶ್ರೀಕಂಠಯ್ಯ ಮತ್ತು ರಾಜಸೇವಾಸಕ್ತ ಮಾಸ್ತಿ ವೆಂಕಟೇಶಯ್ಯಂಗಾರ್ಯರಿಂದ ಕೂಡಿದ ಸಮಿತಿ ರಚನೆ ಆಯಿತು. ಈ ಯೋಜನೆಗೆ ಸರಕಾರದ ನೆರವನ್ನು ದೊರಕಿಸಿಕೊಡುವುದಾಗಿ ಆಗಿನ ವಿದ್ಯಾಮಂತ್ರಿ ಗುಂಡಪ್ಪಗೌಡರು ಆಶ್ವಾಸನೆ ಇತ್ತರು.

**ಲಿಪಿಸುಧಾರಣೆ :** 1936ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ವಸಂತ ಸಾಹಿತ್ಯೋತ್ಸವವನ್ನು ಏರ್ಪಡಿಸಿತು. ಅದೇ ಸಂದರ್ಭದಲ್ಲಿ ಕನ್ನಡ ಲಿಪಿ ಸುಧಾರಣೆಯಲ್ಲಿ ಆಸಕ್ತರಾಗಿದ್ದ ವಿದ್ವಾಂಸರ ಸಮ್ಮೇಳನವನ್ನು ಕೂಡಿಸಿತು. ಈ ತೆರನಾದ ಸಮ್ಮೇಳನ ಕೂಡಿಸಲು ಪ್ರೋತ್ಸಾಹ ನೀಡಿದವರು ಬಿ. ಎಂ. ಶ್ರೀಕಂಠಯ್ಯನವರು. ದೀರ್ಘ, ಮಹಾಪ್ರಾಣಗಳಿಗೆ ಬದಲಾಗಿ ಸುಲಭವಾಗಿ ಗುರುತಿಸಬಹುದಾದ ಚಿನ್ಹೆಗಳನ್ನು ಬಳಸಿ ಲಿಪಿ ಸುಧಾರಿಸಬಹುದೆಂದು ಸಮ್ಮೇಳನ ಒಪ್ಪಿತು. ಅನಂತರ ಬಿ. ಎಂ. ಶ್ರೀಕಂಠಯ್ಯನವರು ತಮ್ಮ ಕೆಲವು ಕವನಗಳನ್ನು ಸುಧಾರಿಸಿದ ಲಿಪಿಯಲ್ಲಿ ಪ್ರಕಟಿಸಿದರು. ಅಷ್ಟೇ ಅಲ್ಲ 'ಕನ್ನಡ ನುಡಿ' ಪತ್ರಿಕೆಯಲ್ಲಿ ಸುಧಾರಿಸಿದ ಲಿಪಿಯಿಂದ ಕೂಡಿದ ಒಂದು ಕಾಲಂ ವಿಷಯವನ್ನು ಪ್ರಕಟಿಸಲು ವ್ಯವಸ್ಥೆ ಮಾಡಿದರು. ಬಿ.ಎಂ.ಶ್ರೀ ಅವರು ತಮ್ಮ ಜೀವನದ ಅಂತ್ಯದವರೆವಿಗೆ ಲಿಪಿ ಸುಧಾರಣೆಯ ಕಾರ್ಯದಲ್ಲಿ ನಿರತರಾದರು.

ಬಿ. ಎಂ. ಶ್ರೀ ಅವರ ನೇತೃತ್ವದಲ್ಲಿ 1942ರಲ್ಲಿ ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ಸಹಕಾರದೊಡನೆ ಕನ್ನಡ ಸಾಹಿತ್ಯ ಪರಿಷತ್ತು ಇನ್ನೊಂದು ಸಭೆಯನ್ನು ಸೇರಿಸಿತು. ಲಿಪಿ ಸುಧಾರಣೆಯ ಬಗ್ಗೆ ತಜ್ಞರು ಸೂಚಿಸಿದ ಸುಧಾರಣೆಗಳನ್ನು ಸಭೆ ಅಂಗೀಕರಿಸಿತು. ಕರ್ನಾಟಕದ ಪತ್ರಿಕಾ ಸಂಪಾದಕರು ಮತ್ತು ಇತರ ಕಾರ್ಯಕರ್ತರು ಈ ಸುಧಾರಣೆಗೆ ತಮ್ಮ ಬೆಂಬಲವಿತ್ತರು.

1944ರ ಜನವರಿಯಲ್ಲಿ ಅಖಿಲ ಕರ್ನಾಟಕ ಪತ್ರಿಕೋದ್ಯೋಗಿಗಳ ಸಮ್ಮೇಳನ ಮಂಗಳೂರಿನಲ್ಲಿ ನಡೆಯಿತು. ಅದರ ಅಂಗವಾಗಿ ಲಿಪಿ ಸುಧಾರಣೆ ಬಗ್ಗೆ ಚಿಂತಿಸಲು ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ಕಾರ್ಯದರ್ಶಿ ಎಸ್. ವಿ. ಶ್ರೀನಿವಾಸರಾಯರ ಅಧ್ಯಕ್ಷತೆಯಲ್ಲಿ ಒಂದು ವಿಭಾಗದ ಸಭೆ ಸೇರಿತು. "ಚೀಣ ಮತ್ತು ಟರ್ಕಿ ದೇಶಗಳಲ್ಲಿ ಸಾಮೂಹಿಕ ಸಾಕ್ಷರತಾ ಚಳುವಳಿಗೆ ಮುನ್ನ ಲಿಪಿ ಸುಧಾರಣೆ ನಡೆದಿದೆ" ಎಂಬುದಾಗಿ ಅಧ್ಯಕ್ಷರು ವ್ಯಕ್ತಪಡಿಸಿದರು. ಕರ್ನಾಟಕದ ವಿವಿಧ ಭಾಗಗಳಿಂದ ಬಂದಿದ್ದ ಪತ್ರಿಕೋದ್ಯೋಗಿಗಳು ಲಿಪಿ ಸುಧಾರಣೆಯನ್ನು ಸ್ವಾಗತಿಸಿ ಪೂರ್ಣ ಬೆಂಬಲ ನೀಡುವುದಾಗಿ ಭರವಸೆ ಇತ್ತರು. ಲಿಪಿ ಸುಧಾರಣೆಗೆ ಪರದೆಯ ಹಿಂದೆ ಪ್ರೇರಕಶಕ್ತಿಯಾಗಿ ನಿಂತವರು ಬಿ. ಎಂ. ಶ್ರೀ. ಅಷ್ಟೇ ಅಲ್ಲ, ಅವರೇ ಸ್ವತಃ ತಮ್ಮ ಕೆಲವು ಕವನಗಳನ್ನು ಸುಧಾರಿಸಿದ ಲಿಪಿಯಲ್ಲಿ ಪ್ರಕಟಿಸಿ ಇತರರಿಗೆ ಆದರ್ಶಪ್ರಾಯರಾದರು.

ಬಿ. ಎಂ. ಶ್ರೀಯವರ ಪ್ರೇರಣೆಯಿಂದ ಪ್ರಾರಂಭವಾದ ಲಿಪಿ ಸುಧಾರಣಾಕಾರ್ಯ ಇಲ್ಲಿಗೇ ನಿಲ್ಲಲಿಲ್ಲ. 13-10-46ರಲ್ಲಿ ನಡೆದ ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಸಭೆಯು ಸುಧಾರಿಸಿದ ಕನ್ನಡ ಲಿಪಿಯಲ್ಲಿ ಪಠ್ಯ ಪುಸ್ತಕಗಳನ್ನು ಮತ್ತು ಪತ್ರಿಕೆಯನ್ನು

ಪ್ರಕಟಿಸಲು ತೀರ್ಮಾನಿಸಿತು. ಮೇಲಾಗಿ ಸಂಸ್ಥಾನದ ವಿದ್ಯಾ ಇಲಾಖಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಲಿಪಿ ಸುಧಾರಣಾ ಸಮಿತಿ ರಚಿತವಾಯಿತು. ಈ ಸಮಿತಿಯಲ್ಲಿ ವಿಶ್ವ ವಿದ್ಯಾನಿಲಯದ ವಿದ್ವಾಂಸರು ಮತ್ತು ಸಂಸ್ಥಾನದ ಹಾಗೂ ಕರ್ನಾಟಕದ ವಿವಿಧ ಭಾಗಗಳ ವಿದ್ವಾಂಸರು ಮತ್ತು ಇತರರು ಇದ್ದರು. ಈ ಸಮಿತಿಯ ಸಭೆ 1947 ನವೆಂಬರಿನಲ್ಲಿ ಸಂಸ್ಥಾನದ ವಿದ್ಯಾ ಇಲಾಖಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಪರಿಣಾಮವಾಗಿ ವಿದ್ಯಾ ಇಲಾಖಾಧಿಕಾರಿಗಳು ಸುಧಾರಿಸಿದ ಲಿಪಿಯಲ್ಲಿ 1000 'ಕನ್ನಡ ಒಂದನೆಯ ಪುಸ್ತಕ'ದ ಪ್ರತಿಗಳನ್ನು ಮೈಸೂರು ಸಂಸ್ಥಾನದ 'ವಯಸ್ಕರ ಶಿಕ್ಷಣ ಸಮಿತಿ' ಪ್ರಕಟಿಸಲು ಅನುಮತಿ ನೀಡಿದರು. ಆ ಪುಸ್ತಕಗಳನ್ನು ನಗರದ ಕೆಲವು ಪ್ರಾಥಮಿಕ ಶಾಲೆಗಳಲ್ಲಿ ಪ್ರಾಯೋಗಿಕವಾಗಿ ತಿಳಿಸಬೇಕೆಂದು ಸೂಚಿಸಿದರು ಆಗ 'ಮೈಸೂರು ವಿದ್ಯಾಭ್ಯಾಸದ ಇಲಾಖೆ'ಯ ಅಧಿಕಾರಿ ಕಸ್ತೂರಿ ರಾಜ್‌ಚೆಟ್ಟಿ ಯವರು. ಆದರೆ ಈ ಪ್ರಯೋಗ ಆಗ ಸಂಸ್ಥಾನದಲ್ಲಿ ರಾಜಕೀಯ ಗೊಂದಲದಿಂದ ನಡೆಯದೆ ನಿಂತು ಹೋಯಿತು. ಅಲ್ಲಿಗೆ ಬಿ. ಎಂ. ಶ್ರೀಯವರ ಪ್ರಯತ್ನ ಒಂದು ಮಟ್ಟ ಮುಟ್ಟಿ ನಿಂತುಹೋಯಿತು.

ಬಿ. ಎಂ. ಶ್ರೀಕಂಠಯ್ಯನವರು ನವೆಂಬರ್ 1941ರಿಂದ ಜೂನ್ 1943ರ ವರೆಗೆ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಪ್ರಾರಂಭದಲ್ಲಿ ಸಂಘ ಸಂಸ್ಥೆಗಳನ್ನು ಕಟ್ಟು ವುದು ಅಷ್ಟೇನು ಸುಲಭವಲ್ಲ. ಹಾಗೂ ವಯಸ್ಕರ ಶಿಕ್ಷಣದಂತಹ ಯೋಜನೆಗೆ ಸಾರ್ವಜನಿಕರ ಮತ್ತು ಸರ್ಕಾರದ ಬೆಂಬಲ ಪಡೆಯುವುದು ಬಹು ಕಷ್ಟ. ಈಗಿನಂತೆ ಆಗ ಪ್ರವಾಸ ಮಾಡಲು ಸಮಿತಿಗೆ ವಾಹನ ಸೌಕರ್ಯವಿರಲಿಲ್ಲ. ಜೊತೆಗೆ ಸಂಪನ್ಮೂಲಗಳು ಸೀಮಿತವಾಗಿದ್ದವು. ಆದರೆ ಜನತೆಯ ಪೂರ್ಣ ಬೆಂಬಲ ಮತ್ತು ಆಶೀರ್ವಾದ ಈ ಕಾರ್ಯಕ್ಕೆ ಇತ್ತು. ಅವರು ಮೂರು ವರ್ಷಕಾಲ ಸಮಿತಿಯಲ್ಲಿ ಎಣೆಯಿಲ್ಲದೆ ಸೇವೆ ಸಲ್ಲಿಸಿದರು. ಹಳ್ಳಿಹಳ್ಳಿಯಲ್ಲಿ ತಿರುಗಿದರು. ಭಾಷಣ ಮಾಡಿದರು. 'ಅಕ್ಷರ ಕಲಿಯಿರಿ' ಎಂಬ ಮಂತ್ರ ವನ್ನು ಸ್ಫೂರ್ತಿದಾಯಕವಾಗಿ ಬೋಧಿಸಿದರು. ಧಾರವಾಡ ಕಾಲೇಜಿನ ಆಚಾರ್ಯರಾಗಿ ಹೋದನಂತರ ಅವರು ಸಮಿತಿಯನ್ನು ಬಿಡಬೇಕಾಯಿತು. ಅವರನ್ನು ಬೀಳ್ಕೊಟ್ಟಾಗ "ನನಗೆ 'ಬೆಳಕು' ಕಳುಹಿಸಿ ಕೊಡುತ್ತಿರಿ" ಎಂದು ಕೊನೆಯ ಮಾತಾಗಿ ಹೇಳಿದರು.

ಬಿ. ಎಂ. ಶ್ರೀ ಅವರ ಸವಿನೆನಪಿಗಾಗಿ ಸಮಿತಿ 'ಕಾಣಿಕೆ' ಎಂಬ ಕೃತಿಯನ್ನು ಹೊರತಂದಿದೆ.

## ಗ್ರಂಥಋಣ

1) Mysore State Adult Education Council : Adult Education in Mysore, Script Reform in Kannada (pages 28-32), 1949

2) Mysore State Adult Education Council : Plan for Script Reform in Kannada, Preface (1946)

3) ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮ್ಮೇಳನ, ಬೆಂಗಳೂರು, 7-6-42. ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ಅಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಮಾಡಿದ ಸ್ವಾಗತ ಭಾಷಣ.

4) ಎಂ. ಆರ್. ಶ್ರೀನಿವಾಸಮೂರ್ತಿ : ವಯಸ್ಕರ ವಿದ್ಯಾಭ್ಯಾಸದ ಮೊದಲನೆಯ ಪುಸ್ತಕ. ಕರ್ನಾಟಕ ಸಂಘ, ಶಿವಮೊಗ್ಗ, 1939.

5) ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿ, ಮೈಸೂರು : ವಯಸ್ಕರ ಅಕ್ಷರ ಕಲಿಯುವ ಪುಸ್ತಕ, ಎರಡನೆಯ ಭಾಗ. ಉಪಾಧ್ಯಾಯರಲ್ಲಿ ಬಿನ್ನಹ, 1942

6) ಮೈಸೂರು ಸಂಸ್‌ತಾನದ ವಯಸ್‌ಕರ ಶಿಕ್‌ಷಣ ಸಮಿತಿ : ಮೈಸೂರು ವಿದ್‌ಯಾಭ್‌ಯಾಸದ ಇಲಾಕೆ, ಕನ್‌ನಡ ಒಂದನೆಯ ಪುಸ್‌ತಕ, 1947

ಸಾಹಿತ್ಯ ಬೆಳೆಯಬೇಕಾದರೆ ಬರಿಯ ಲಕ್ಷಣಗಳಿಗೆ, ಸೂತ್ರಗಳಿಗೆ ಕಟ್ಟುಬಿದ್ದಿರಬೇಕಾದುದಿಲ್ಲ. ಸಾಹಿತ್ಯದಿಂದ ಲಕ್ಷಣ ಸೂತ್ರಗಳೇ ಹೊರತು ಲಕ್ಷಣ ಸೂತ್ರಗಳಿಂದ ಸಾಹಿತ್ಯವಲ್ಲ. ನಮಗೆ ಯಾವುದು ಹೊಂದಿಕೊಳ್ಳುತ್ತದೆಯೋ ನಮ್ಮ ಜನರಿಗೆ ಯಾವುದರಿಂದ ತಿಳಿವಳಿಕೆಯನ್ನೂ ಜ್ಞಾನವನ್ನೂ ಸಾಹಿತ್ಯವನ್ನೂ ಸುಲಭವಾಗಿ ಕೊಡಬಹುದೋ ಅಂತಹ ಲಕ್ಷಣ ಸೂತ್ರವಿದ್ದರೆ ಇರಲಿ, ಇಲ್ಲದಿದ್ದರೆ ಹೋಗಲಿ. ಇದು ಕನ್ನಡದ ಒಳಗುಟ್ಟು, ಒಳಗೆ ಕುಳಿತಿರುವ ಕೆಚ್ಚು.

— 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೯೫.

ಸೋಮಶೇಖರಗೌಡ

# ಶ್ರೀಯವರು ಮತ್ತು ಲಿಪಿ ಪರಿಷ್ಕರಣ

ಸಾಮಾಜಿಕ ಭಾಷಾವಿಜ್ಞಾನ (Socio-linguistics) ಆಧುನಿಕ ಭಾಷೆಗಳ ವೈಜ್ಞಾನಿಕ ಬೆಳವಣಿಗೆಯತ್ತ ಹೆಚ್ಚಿನ ಒಲವು ತಳೆದಿದೆ. ಭಾಷಾ ಯೋಜನೆ (language planning) ಇದರ ಕಾರ್ಯಾಂಗಗಳಲ್ಲಿ ಒಂದು. ಭಾಷಾ ಯೋಜನೆಯ ಯಾವುದೇ ಸಾಹಿತ್ಯದಲ್ಲಿ ಮೂರು ಪ್ರಕ್ರಿಯೆಗಳು ನಮ್ಮ ಗಮನ ಸೆಳೆಯುತ್ತವೆ. ಅವಾವುವೆಂದರೆ :

(೧) ಲಿಪೀಕರಣ (Graphisation)
(೨) ಆದರ್ಶೀಕರಣ (Standardisation)
(೩) ಆಧುನೀಕರಣ (Modernisation)

ಒಂದು ಭಾಷೆಯ ಬೆಳವಣಿಗೆಯನ್ನು ನಿರ್ಧರಿಸುವಲ್ಲಿ ವಿಶೇಷವಾಗಿ ಈ ಮೂರು ಅಂಶಗಳನ್ನು ಪರಿಗಣಿಸಲೇಬೇಕೆಂಬುದು ಫರ್ಗುಸನ್ ಅವರ ಖಚಿತ ಅಭಿಪ್ರಾಯ। ಇವುಗಳಲ್ಲಿ ಮೊದಲನೆಯದಾದ 'ಲಿಪೀಕರಣ' ಯಾವುದೇ ಭಾಷೆಯ (೧) ಲಿಪಿಸೃಷ್ಟಿ ಮತ್ತು (೨) ಲಿಪಿ ಪರಿಷ್ಕರಣ ಇವೆರಡನ್ನೂ ಒಳಗೊಳ್ಳುತ್ತದೆ. ಲಿಪಿಸೃಷ್ಟಿ ಆ ಭಾಷೆಯ ಧ್ವನ್ಯಾತ್ಮಕ ಅಧ್ಯಯನ (Phonological Study) ವನ್ನಾಧರಿಸಿದರೆ, ಲಿಪಿ ಪರಿಷ್ಕರಣ, ಆ ಭಾಷೆಯ ಪ್ರಚಲಿತ ಲಿಪಿಯಲ್ಲಿ ಮಾರ್ಪಾಡುಗಳನ್ನು ತರುತ್ತದೆ.

ಲಿಪಿಯೇ ಇಲ್ಲದ ಭಾಷೆಗೆ ಎರಡು ವಿಧಾನಗಳಿಂದ ಲಿಪಿ ಸೃಜಿಸಲು ಸಾಧ್ಯ. (೧) ಇತರ ಭಾಷೆಗಳಿಗಿಂತ ಭಿನ್ನವಾದ ಹೊಸ ಲಿಪಿಯನ್ನು ಆ ಭಾಷೆಯ ಧ್ವನಿಗಳನ್ನೇ ಆಧರಿಸಿ ಸೃಷ್ಟಿಸುವುದು. (೨) ಪ್ರದೇಶ ಭಾಷೆ (Regional Language) ಯೊಂದರ ಲಿಪಿಯನ್ನೇ ಅನುಸರಿಸುವುದು. ಇಲ್ಲವೇ ಲಿಪಿಯಿರದ ಭಾಷೆಯ ಧ್ವನಿಯ ವ್ಯವಸ್ಥೆಗನುಗುಣವಾಗಿ ಯಾವುದೇ ಒಂದು ಭಾಷೆಯ ಲಿಪಿಯನ್ನು ಮಾರ್ಪಡಿಸಿಕೊಂಡು ಅಳವಡಿಸಿಕೊಳ್ಳುವುದು.

ಈ ಎರಡನೇ ವಿಧಾನದಿಂದ ಸೃಜಿತ ಲಿಪಿಯನ್ನು 'ಸಂಬಂಧಿತ ಲಿಪಿ ವಿಧಾನ' (related script system or associated script system) ಎಂದು ಕರೆಯ

ಲಾಗಿದೆ. ಈ ವಿಧಾನದಲ್ಲಿ ಹೊಸದಾಗಿ ಭಾಷಿಕ ವಿವರಣೆ ಇತ್ತು ನಿರ್ಧರಿಸಲ್ಪಟ್ಟ ಧ್ವನಿಮಾಗಳ ಹೊರತಾಗಿ ಉಳಿದ ಎಲ್ಲ ಧ್ವನಿಮಾಗಳು ಆಧಾರಿತ ಭಾಷೆಯ ಧ್ವನಿಮಾಗಳು ಪ್ರತಿನಿಧಿಸುವ ಉಪವರ್ಣ (allograph) ಗಳನ್ನೇ ಪ್ರತಿನಿಧಿಸುತ್ತವೆ. ಈ ವಿಧಾನವನ್ನು ಸುಲಭಗ್ರಾಹ್ಯವಾದುದೆಂದು ಪರಿಗಣಿಸಲಾಗಿದೆ. ಕಾರಣವೇನೆಂದರೆ ಆಧಾರಿತ ಭಾಷೆಯ ಲಿಪಿ ಪರಿಚಯ ಈ ಮೊದಲೇ ಅದು ಪ್ರದೇಶ ಭಾಷೆಯಾದ್ದರಿಂದ ಅಲ್ಲಿನ ಎಲ್ಲ ಜನರಿಗೂ ಇರುವುದೇ ಆಗಿದೆ. ಹೀಗಾಗಿ ಯಾವುದೋ ಹೊಸ ಲಿಪಿಯೊಂದನ್ನು ಕಲಿಯಬೇಕೆಂಬ ಭ್ರಮೆಯಿಂದ ಜನರು ಸುಲಭವಾಗಿ ಪಾರಾಗಬಹುದು.

ಲಿಪಿ ಸೃಷ್ಟಿಗಿಂತ ಜೇರಾದ ಕಾರ್ಯ ಲಿಪಿ ಪರಿಷ್ಕರಣದ್ದು. ಲಿಪಿ ಪರಿಷ್ಕರಣದಲ್ಲಿ ಮಾಡುವಂಥ ಕೆಲಸವೆಂದರೆ, ಈಗಾಗಲೇ ಪ್ರಚಲಿತವಿರುವ ಆಯಾ ಭಾಷೆಯ ಲಿಪಿಯನ್ನೇ ಇಂದಿನ ವೈಜ್ಞಾನಿಕ ಹಾಗೂ ತಾಂತ್ರಿಕ ಅಗತ್ಯಕ್ಕೆ ತಕ್ಕಂತೆ ಪರಿಷ್ಕರಿಸಿ ನವೀಕರಿಸುವುದು. ಬೆರಳಚ್ಚು ಯಂತ್ರಗಳು, ಮುದ್ರಣ ಯಂತ್ರಗಳು ಬಳಕೆಗೆ ಬಂದ ಮೇಲೆ ಲಿಪಿ ಸುಧಾರಣೆ, ಸಂಸ್ಕರಣೆಯ ಕೆಲಸ ಎಲ್ಲ ಭಾಷೆಗಳಿಗೂ ವ್ಯಾಪಿಸಿದೆ. ಈ ಯಂತ್ರಗಳು ಬಂದ ಮೇಲೆ ಆಯಾ ಭಾಷೆಯ ಬರಹದ ಕುಂದು ಕೊರತೆಗಳು ಎದ್ದು ಕಾಣಲಾರಂಭಿಸಿದವು.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಯಾರೂ ಮುದ್ರಣಾಲಯದಲ್ಲಿ ಮೊಳೆ ಜೋಡಿಸುವ (composing) ಕೆಲಸ ಮಾಡಬೇಕಾಗಿಲ್ಲ. ಈಗಾಗಲೇ ಅವರು Linotype, Monotype ಮತ್ತಿತರ ಸ್ವಯಂ ಚಾಲಿತ ಜೋಡಣ ಯಂತ್ರಗಳನ್ನು (automatic composing machines) ಉಪಯೋಗಿಸುತ್ತಿದ್ದಾರೆ. ಈಗ Photo composing technique ಕೂಡ ಅಲ್ಲಿನ ಮುದ್ರಣಾಲಯಗಳಲ್ಲಿ ಬಳಕೆಯಲ್ಲಿದೆ. ನಾವಿನ್ನೂ ಭಾರತೀಯ ಭಾಷೆಗಳಿಗೆ ಲಿಪಿ ಸಂಸ್ಕರಣ ಮಾಡುವುದರಲ್ಲಿ ಇದ್ದೇವೆ. ಮೇಲಾಗಿ ಬಹುತೇಕ ಭಾರತೀಯ ಭಾಷೆಗಳು ಇನ್ನೂ ತಮ್ಮದೇ ಆದ ಲಿಪಿಯನ್ನು ಹೊಂದದೆ ಆಡುಮಾತಿಗಷ್ಟೇ ತೃಪ್ತಿಪಡಬೇಕಾಗಿದೆ.

ಕನ್ನಡ, ತಮಿಳು, ತೆಲುಗು, ಮಲೆಯಾಳಂ ಮುಂತಾದ ದ್ರಾವಿಡ ಭಾಷೆಗಳ ಲಿಪಿ ವೈಜ್ಞಾನಿಕ ತಾಂತ್ರಿಕತೆಗೆ ಒಗ್ಗುತ್ತಿಲ್ಲ ಮತ್ತು ಮಕ್ಕಳು ಹಾಗೂ ವಿದೇಶೀಯರೂ ಈ ಭಾಷೆಗಳನ್ನು ಕಲಿಯುವಲ್ಲಿ ಬಹಳಷ್ಟು ಶ್ರಮಪಡಬೇಕು ಎಂಬ ಆರೋಪವಿದೆ. ಹೀಗಾಗಿ ಈ ಭಾಷೆಗಳ ಲಿಪಿಗಳನ್ನು ಪುನರ್‌ನವೀಕರಿಸುವುದು ಅನಿವಾರ್ಯ ಎಂದು ಕೆಲವರ ವಾದ.

ಈ ಭಾಷೆಗಳ ಲಿಪಿ ಪರಿಷ್ಕರಣಕ್ಕೆ ಸಂಬಂಧಿಸಿದಂತೆ ವಿದ್ವಾಂಸರ ಅಭಿಪ್ರಾಯಗಳಲ್ಲಿ ವೈವಿಧ್ಯವನ್ನು ಕಾಣಬಹುದು. ಕೆಲವರು ಸಂಪೂರ್ಣವಾಗಿ ರೋಮನ್‌ಲಿಪಿಯನ್ನು

ಈ ಭಾಷೆಗಳಿಗೆ ಅಳವಡಿಸಿಕೊಂಡರೆ ಒಳ್ಳೆಯದು. ಆಗ ಈ ಭಾಷೆಗಳನ್ನು ಸುಲಭವಾಗಿ ವಿದೇಶೀಯರು ಕಲಿಯುತ್ತಾರೆ. ಇದರಿಂದ ಈ ಭಾಷೆಗಳಿಗೆ ಅಂತರ ರಾಷ್ಟ್ರೀಯ ಖ್ಯಾತಿ ಲಭ್ಯವಾಗುತ್ತದೆ; ಅಲ್ಲದೆ ಹೆಚ್ಚೂಕಡಿಮೆ ನಮ್ಮ ಮಕ್ಕಳು ಇಂಗ್ಲಿಷ್ ಭಾಷೆಗೆ ಪರಿಚಯಿಸಲ್ಪಡುತ್ತಾರೆ. ಹೀಗಾಗಿ ನಮ್ಮ ಮಾತೃಭಾಷೆಗಳೂ ಈ ರೋಮನ್ ಲಿಪಿಯನ್ನು ಅಳವಡಿಸಿಕೊಂಡರೆ ಅವರಿಗೆ ಬೇರೊಂದು ಲಿಪಿಯನ್ನು ಕಲಿಯುವ ಶ್ರಮ ತಪ್ಪುತ್ತದೆ ಎಂದು ವಾದಿಸಿದರೆ, ಮತ್ತೆ ಕೆಲವರು ಭಾರತದ ಎಲ್ಲ ಭಾಷೆಗಳಿಗೂ ದೇವನಾಗರಿ ಒಂದೇ ಲಿಪಿ ಇದ್ದರೆ ಸಾಕು. ಇದರಿಂದ ದಕ್ಷಿಣೋತ್ತರ ಭೇದ ಭಾವಗಳು ತೊಲಗಿ ದೇಶದ ಏಕತೆ ಮತ್ತು ಸಮಗ್ರತೆಗೆ ಬಲ ಬರುತ್ತದೆ. ಅಲ್ಲದೆ ವಿವಿಧ ಸಮಾಜ, ಸಂಸ್ಕೃತಿಯನ್ನುಳ್ಳ ಭಾರತೀಯ ಜನ ಒಬ್ಬರನ್ನೊಬ್ಬರು ಅರಿಯುವುದು ಸುಲಭ ಎಂದು ಅಭಿಪ್ರಾಯಿಸಿದ್ದಾರೆ. ಇನ್ನು ಕೆಲವರು ಇವೆರಡೂ ಆಗದ ಕೆಲಸಗಳು; ಏನಿದ್ದರೂ ನಮ್ಮ ನಮ್ಮ ಭಾಷೆಗಳ ಪ್ರಸಕ್ತ ಲಿಪಿಯನ್ನೇ ನಮ್ಮ ಧ್ಯೇಯಾದರ್ಶಗಳಿಗನುಗುಣವಾಗಿ ಮಾರ್ಪಡಿಸಿಕೊಳ್ಳುವುದೊಳ್ಳೆಯದು ಎಂದು ತೀರ್ಪು ನೀಡಿದ್ದಾರೆ.

ಕೊನೆಯ ಅಭಿಪ್ರಾಯಕ್ಕೆ ಹೆಚ್ಚಿನ ಮನ್ನಣೆ ದೊರೆತಂತೆ ತೋರುತ್ತದೆ. ಇದರಿಂದಾಗಿ ದಕ್ಷಿಣದ ಎಲ್ಲ ಪ್ರಮುಖ ಭಾಷೆಗಳಲ್ಲೂ ಲಿಪಿ ಪರಿಷ್ಕರಣ ನಡೆದಿರುವುದು ತಿಳಿದುಬರುತ್ತದೆ.

ತೆಲುಗು ಮತ್ತು ಮಲೆಯಾಳಂ ಭಾಷೆಗಳಲ್ಲೂ ಈ ಬಗೆಯ ಲಿಪಿ ಸುಧಾರಣೆ ನಡೆದಿದೆ. ಅದರಲ್ಲೂ ತೆಲುಗು ಲಿಪಿ, ಕನ್ನಡ ಲಿಪಿಗೆ ಹೆಚ್ಚು ಸಮೀಪವಾಗಿರುವುದರಿಂದ ಕನ್ನಡ ಮತ್ತು ತೆಲುಗು ಈ ಎರಡು ಭಾಷೆಗಳಿಗೂ ಒಂದೇ ಲಿಪಿಯನ್ನು ಅಳವಡಿಸುವ ಯತ್ನಗಳೂ ನಡೆದುವು. ಒತ್ತಕ್ಷರ, ಮಹಾ ಪ್ರಾಣ, ಘೋಷ ಧ್ವನಿಗಳು ಮತ್ತು ಊಷ್ಮ ಧ್ವನಿಗಳನ್ನು ಹೊಂದಿರದ ತಮಿಳಿಗಿಂತ ಇವುಗಳನ್ನು ಹೊಂದಿರುವ ಕನ್ನಡ ಲಿಪಿ ಕಲಿಯಲು ಬಹು ಕಷ್ಟ ಎಂಬ ಮಾತೂ ಇದೆ.

ಕನ್ನಡ ಲಿಪಿ ಪರಿಷ್ಕರಣಕಾರರಲ್ಲಿ ಪ್ರಮುಖ ಹೆಸರು ಬಿ. ಎಂ. ಶ್ರೀಕಂಠಯ್ಯನವರದು. ಕನ್ನಡ ಲಿಪಿಯನ್ನು ಅಪಷ್ಟೂ ತೊಡಕಿಲ್ಲದಂತೆ ರೂಪಿಸಿ ಓದುವವರಿಗೆ ಮತ್ತು ಕಲಿಯುವವರಿಗೆ ಸುಲಭ ಲಭ್ಯವಾಗುವಂತೆ ಮಾಡುವುದು ಮತ್ತು ಶೀಘ್ರ ಲೇಖನ, ಬೆರಳಚ್ಚು ಯಂತ್ರ, ಮುದ್ರಣ ಮುಂತಾದುವುಗಳಿಗೆ ಸಮರ್ಥವಾಗಿ ಬಳಸಿಕೊಳ್ಳಲಾಗುವಂತೆ ಕನ್ನಡ ಲಿಪಿಯನ್ನು ಮಾರ್ಪಡಿಸಬೇಕೆಂಬುದು ಅವರ ಮಹತ್ವಾಕಾಂಕ್ಷೆಗಳಲ್ಲೊಂದಾಗಿತ್ತು. ಇದರಿಂದಾಗಿ ಈ ಬಗೆಯ ಕೆಲಸಮಾಡಲು ನಿಯಮಿಸಲ್ಪಟ್ಟ ಹಲವಾರು ಸಮಿತಿಗಳಿಗೆ ಅವರು ದುಡಿದಿದ್ದಾರೆ; ಮಾರ್ಗದರ್ಶನ ಮಾಡಿದ್ದಾರೆ; ಅಕ್ಷರ ಪ್ರಚಾರ ಸಮಿತಿಯ ಮೊದಲ ಅಧ್ಯಕ್ಷರೂ ಆಗಿದ್ದರು. ಅಲ್ಲದೆ ಕನ್ನಡದ ಮುದ್ರಾಕ್ಷರ

ಗಳಲ್ಲಿ ತಿದ್ದುಪಾಟುಗಳನ್ನು ತರಲು ಸಾಹಿತ್ಯಪರಿಷತ್ತು ೧೯೩೬ರಲ್ಲಿ ರಚಿಸಿದ ಉಪ ಸಮಿತಿಯ ನೇತಾರರೂ ಆಗಿದ್ದರು. ಈ ಉಪಸಮಿತಿ ೧೯೩೬ನೆಯ ಮೇ ತಿಂಗಳಿನಲ್ಲಿ ನಡೆಸಿದ ಸಮ್ಮೇಳನದಲ್ಲೂ ಅಧ್ಯಕ್ಷಸ್ಥಾನವನ್ನಲಂಕರಿಸಿದ್ದರು. ಹತ್ತು ವರ್ಷಗಳ ನಂತರ ವಯಸ್ಕರ ಶಿಕ್ಷಣ ಸಮಿತಿ ಒಂದು ಉಪಸಮಿತಿಯನ್ನು ರಚಿಸಿ ಸಂಸ್ಕರಣವಾದ ಲಿಪಿಯನ್ನು ಬಳಕೆಗೆ ತರಲು ಯತ್ನ ನಡೆಸಿತು. ಸ್ವತಃ ತಾವೇ "ಕನ್‌ನಡದ ಬೀವುಟ" ಎಂಬ ತಮ್ಮ ಪದ್ಯವೊಂದರಲ್ಲಿ ಲಿಪಿ ಸುಧಾರಣೆಗೆ ಸಂಬಂಧಿಸಿದಂತೆ ಈ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ :

(೧) ಕನ್ನಡದ ದೀರ್ಘ ಸ್ವರಗಳಿಗೆ ಬದಲಾಗಿ ಆಯಾ ಹ್ರಸ್ವ ಸ್ವರಗಳ ಪಕ್ಕದಲ್ಲಿ (ೀ) ದೀರ್ಘ ಚಿಹ್ನೆಯನ್ನು ಹಚ್ಚಿ ದೀರ್ಘಸ್ವರಗಳನ್ನಾಗಿಸಿರುವುದು.

ಉದಾ : ಅೀ = ಆ, ಇೀ = ಈ, ಎೀ = ಏ, ಒೀ = ಓ
ಬೀವುಟ = ಬಾವುಟ, ಎೀಳ್ = ಏಳ್, ಅೀಳ್ = ಆಳ್ ಇತ್ಯಾದಿ.

(೨) ಒತ್ತಕ್ಷರಗಳನ್ನು ಉಚ್ಚಾರಣೆಗನುಗುಣವಾಗಿ ಬಿಡಿಸಿ ಬರೆಯುವುದು.

ಉದಾ : ಕನ್‌ನಡ = ಕನ್ನಡ, ಕೆಚ್‌ಚೆದೆಯ = ಕೆಚ್ಚೆದೆಯ, ಮಕ್‌ಕಳು = ಮಕ್ಕಳು
ಇತ್ಯಾದಿ.

ಶ್ರೀ ಅವರ ಈ ಪರಿಷ್ಕರಣದಿಂದ ಕನ್ನಡ ಬೆರಳಚ್ಚು ಯಂತ್ರದ 'Key-board' ನಲ್ಲಿ ಬದಲಾವಣೆ ಸಾಧ್ಯವಿದೆ. ಬೆರಳಚ್ಚು ಯಂತ್ರದಲ್ಲಿ ಅಕ್ಷರಗಳ ಸಂಖ್ಯೆ ಕಡಿಮೆಯಾದಷ್ಟೂ ಅದರ ರಚನೆಯಲ್ಲಿ ಸರಳತೆ ಹಾಗೂ ಸೌಲಭ್ಯಗಳು ಹೆಚ್ಚುತ್ತವೆ. ಅಲ್ಲದೆ ಒತ್ತಕ್ಷರಗಳನ್ನು ಹಚ್ಚುವಾಗ ಈಗಿನಂತೆ ಯಂತ್ರದ ಚಾಲನೆಗೆ ಅಡಚಣೆ ಉಂಟಾಗುವುದಿಲ್ಲ ; ಒತ್ತಕ್ಷರಗಳನ್ನು ಬಿಡಿಸಿ ಒಂದರ ಪಕ್ಕದಲ್ಲಿ ಒಂದರಂತೆ ಮೂಡಿ ಸುತ್ತಾ ಹೋಗುವುದರಿಂದ ವೇಗ ಹೆಚ್ಚಾಗುತ್ತದೆ.

ಶ್ರೀ ಅವರು ತಂದ ಈ ಬಗೆಯ ಪರಿಷ್ಕರಣಕ್ಕೆ ತೀವ್ರ ತರನಾದ ಆರೋಪಗಳು ಎದುರಾದವು. ಅವುಗಳಲ್ಲಿ ಮುಖ್ಯವಾದವೆಂದರೆ : (೧) ಕನ್ನಡ ಲಿಪಿಗೆ ಒಂದು ಬಗೆಯ ಸಹಜ ಸೌಂದರ್ಯವಿದೆ. ಆ ಸೌಂದರ್ಯಕ್ಕೆ ಈ ಪರಿಷ್ಕರಣದಿಂದ ಧಕ್ಕೆ ಒದಗುತ್ತದೆ. (೨) ಒತ್ತಕ್ಷರಗಳನ್ನು ಬಿಡಿಸಿ ಉಚ್ಚರಿಸುವುದರಿಂದ ಬರವಣಿಗೆಯಲ್ಲಿ ಅರ್ಧಾಕ್ಷರಗಳ ಬಳಕೆ ಹೆಚ್ಚಿ 'ಕನ್ನಡ ಉಗ್ಗು ಭಾಷೆಯಾಯಿತು.' (೩) ಯಂತ್ರ ಸೌಲಭ್ಯಕ್ಕಾಗಿ ಲಿಪಿಸೌಂದರ್ಯವನ್ನು ಕೆಡಿಸಿ ವಿರೂಪಗೊಳಿಸುವುದರ ಬದಲು ಲಿಪಿಗೆ ತಕ್ಕಂತಹ ಯಂತ್ರಸೃಷ್ಟಿಯೇ ಔಚಿತ್ಯ ಪೂರ್ಣವಾದುದು—ಎಂಬೀ ಕೆಲವು

ಈ ಆರೋಪಗಳು ಏನೇ ಇರಲಿ, ಒಂದು ಭಾಷೆ ಆಧುನಿಕ ಆವಶ್ಯಕತೆಗೆ ಒಗ್ಗ ಬೇಕಾಗಿ ಬಂದಾಗ ಇಂಥ ಕೊಂಕು ನೆಪಗಳಿಗೆ ಬೆಲೆ ಕೊಡುವ ಆವಶ್ಯಕತೆ ಇರುವುದಿಲ್ಲ. ಹೊಸ ಧ್ವನಿಗಳಿಗೆ ತಕ್ಕಂತಹ ಹೊಸ ಚಿಹ್ನೆಗಳನ್ನು ಬರವಣಿಗೆಯಲ್ಲಿ ರೂಢಿಸಿಕೊಳ್ಳಬೇಕಾಗುತ್ತದೆ. ಏಕೆಂದರೆ ಬರಹ ಮಾನವನ ಬುದ್ಧಿಶಕ್ತಿಯ ಬೆಳವಣಿಗೆಗೆ ನೆರವಾಗುವ ಅಪೂರ್ವ ಸಾಧನಗಳಲ್ಲೊಂದು.

ಲಿಪಿ ಪರಿಷ್ಕರಣಕಾರರು ಅಗತ್ಯವಾಗಿ ಈ ಕೆಲವು ಅಂಶಗಳನ್ನು ನೆನಪಿನಲ್ಲಿಟ್ಟು ಕೊಳ್ಳಬೇಕಾಗುತ್ತದೆ : ಒಂದು ಧ್ವನಿಮಾಕ್ಕೆ ಒಂದು ಲಿಪಿಮುವನ್ನು (grapheme) ಸೃಷ್ಟಿಸಿ ಭಾಷೆಯ ನಿಯತತೆ (regularity) ಯನ್ನು ಕಾಯ್ದುಕೊಳ್ಳುವುದು; ಈ ಗುಣ ಭಾರತೀಯ ಭಾಷೆಗಳಲ್ಲಿ ಸ್ವಲ್ಪಮಟ್ಟಿಗೆ ಕಾಣಬರುತ್ತದೆಯಾದರೂ ಇಂಗ್ಲಿಷ್ ಭಾಷೆಗೆ ತೀರಾ ಹೊರಗುಳಿಯುತ್ತದೆ. ಕಾರಣವೇನೆಂದರೆ ಇಂಗ್ಲಿಷ್ ಭಾಷೆಯ ಉಚ್ಚಾರಣೆಗೂ ಅದರ ವರ್ಣವಿನ್ಯಾಸಕ್ಕೂ (ಕಾಗುಣಿತ) ತಾದಾತ್ಮ್ಯವಿಲ್ಲ. ಬರವಣಿಗೆ, ಬೆರಳಚ್ಚು ಯಂತ್ರ ಹಾಗೂ ಮುದ್ರಣ—ಈ ಎಲ್ಲಕ್ಕೂ ಒಂದೇ ಬಗೆಯ ಲಿಪಿ ಭಾಷೆಯಲ್ಲಿರಬೇಕು, ಬೇರೆ ಬೇರೆಯಾಗಿರಬಾರದು ; ಪರಿಷ್ಕೃತ ಲಿಪಿ ಸುಲಭವಾಗಿ ಸೇರಿಕೆಯಾಗುವಂಥದು (accessible), ಸ್ವೀಕೃತಗೊಳ್ಳುವಂಥದು (adoptable), ಸಮರ್ಥತೆಯನ್ನು ಹೊಂದಿರುವಂಥದು (efficient), ಮತ್ತು ತತ್ವಾಧಾರತೆಯುಳ್ಳದ್ದು (rationality) ಆಗಿರಬೇಕಾದುದಗತ್ಯ. ಇವುಗಳ ಜೊತೆಗೆ ಪ್ರೊ. ಟಿ. ಪಿ. ಮೀನಾಕ್ಷಿ ಸುಂದರಂ ಅವರು ತಮಿಳು ಲಿಪಿ ಸಂಸ್ಕರಣಕಾರರಿಗೆ ನೀಡಿದ ಎಚ್ಚರಿಕೆಯನ್ನೂ ಇಲ್ಲಿ ಸ್ಮರಿಸಬಹುದೆಂದು ತೋರುತ್ತದೆ : "Any remedy will be only worse than the disease ; because there is a great danger of making the handful of our literates in Tamil, illiterates by introducing revolutionary changes. It is this over-powering consideration that stands on the threshold of our enquiry preventing the acceptance of the Roman Alphabet."

ಯಾವ ವಿಶ್ವಮಾತೆಯನ್ನು ನಾವು ಸೇವಿಸಿದರೂ ನಮ್ಮ ಮಾತೆಯನ್ನು ಮಾತ್ರ ಬಿಡುವಂತಿಲ್ಲ. ನಮ್ಮ ತಾಯಿ ಎಷ್ಟೇ ಬಡವೆಯಾದರೂ ಆಕೆಯನ್ನು ಕೀಳಾಗದಂತೆ ಮಕ್ಕಳು ನೋಡಿಕೊಳ್ಳಬೇಕು. ವಾಸ್ತವವಾಗಿ ನಮ್ಮ ತಾಯಿ ಬಡವೆಯಲ್ಲ. ಆಕೆಗಾಗಿ ನಾವು ಹೆಮ್ಮೆಯಿಂದಿರಬಹುದಾಗಿದೆ. ಆಕೆಯ ಪಾದಪದ್ಮದ ಮೇಲೆ ಭಕ್ತಿಯಿಂದ, ಪ್ರೀತಿಯಿಂದ ಹೂವಿಟ್ಟು, ಬೇಕಾದರೆ ಪ್ರಪಂಚವನ್ನೇ ಸುತ್ತಿ ಬರೋಣ. ಯಾವ ಆಕ್ಷೇಪಣೆಯೂ ಇಲ್ಲ.

—'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೯೭

ಎಸ್. ಬಾಲಸುಬ್ರಹ್ಮಣ್ಯ

# ಇಂಗ್ಲಿಷ್ ಗೀತಗಳು

ಶ್ರೀಯವರ **ಇಂಗ್ಲಿಷ್ ಗೀತಗಳು** (೧೯೨೬) ಪ್ರಕಟಗೊಂಡ ದಿನದಿಂದಲೇ ಖ್ಯಾತಿ ಗೌರವಗಳನ್ನು ಪಡೆದಿರುವ ಕೃತಿ. ಅಂದಿನಿಂದಲೂ ಅದನ್ನು ಕುರಿತು ಅನೇಕ ವಿಮರ್ಶೆಗಳೂ, ಲೇಖನಗಳೂ ಬಂದಿವೆ. ಕನ್ನಡ ಸಾಹಿತ್ಯದ ಇತಿಹಾಸ ದಲ್ಲಿ ಒಂದು ಮೈಲಿಗಲ್ಲೆಂಬ ವಿಶಿಷ್ಟ ಸ್ಥಾನವನ್ನೂ, ಯುಗಪ್ರವರ್ತಕ ಕೃತಿಯೆಂಬ ಪ್ರಸಿದ್ಧಿಯನ್ನೂ ಅದು ಗಳಿಸಿದೆ. ಕಳೆದ ವರ್ಷದಿಂದಂತೂ ಅದು ವಿವಿಧ ದೃಷ್ಟಿಗಳಿಂದ ಮತ್ತೆ ಪುನರ್ವಿಮರ್ಶೆಗೆ ಒಳಗಾಗಿದೆ. ಅನೇಕ ಲೇಖನಗಳಿಗೆ, ಭಾಷಣಗಳಿಗೆ ವಸ್ತು ವಾಗಿದೆ. ಆದ್ದರಿಂದ ಅದರ ವಿಷಯವಾಗಿ ಹೊಸತಾದ ಯಾವುದನ್ನೋ ಹೇಳ ಹೊರಡುವ ಭ್ರಾಂತಿಗೆ ಬೀಳದೆ ಅದರ ಬಗ್ಗೆ ಸಾಂದರ್ಭಿಕವಾಗಿ ಹೊಳೆದ ಕೆಲವು ಅನಿಸಿಕೆ ಗಳನ್ನು ಮಾತ್ರ ಮುಂದಿಡಲು ಪ್ರಯತ್ನಿಸುತ್ತೇನೆ.

**ಇಂಗ್ಲಿಷ್ ಗೀತಗಳನ್ನು** ಯುಗಪ್ರವರ್ತಕ ಕೃತಿ, ಆಧುನಿಕ ಕನ್ನಡ ಕಾವ್ಯದ ಉಗಮಸ್ಥಾನ ಎಂದೆಲ್ಲ ಹೇಳಲಾಗುತ್ತಿದೆ. ಆದರೆ ಇದರಲ್ಲಿಯ ಒಂದು ವೈಚಿತ್ರ್ಯ ಅನೇಕರಿಗೆ ಅಷ್ಟಾಗಿ ಹೊಳೆದಂತಿಲ್ಲ. ಸಾಮಾನ್ಯವಾಗಿ ಯಾವುದೇ ಕೃತಿಯನ್ನು ಆ ಸಾಹಿತ್ಯದ ಯುಗಪ್ರವರ್ತಕ ಕೃತಿ ಎನ್ನುವಲ್ಲಿ ಆ ಕೃತಿ ಸಂಸ್ಕೃತಿಗೆ ಸೇರಿದ, ಆ ಭಾಷೆಯಲ್ಲಿ ರಚಿತವಾದ ಸ್ವತಂತ್ರ ಕೃತಿಯಾಗಿರುತ್ತದೆ. ಉದಾಹರಣೆಯೆಂದರೆ ಪಂಪನ ಭಾರತ ಅಥವಾ ವರ್ಡ್ಸ್‌ವರ್ತನ ಭಾವಗೀತ ಸಂಕಲನ. ಆದರೆ ಶ್ರೀಯವರ ಕೃತಿ ಇದಕ್ಕೆ ಅಪವಾದವಾಗಿದೆ. ಅದರ ವಸ್ತು ಇಂಗ್ಲಿಷ್ ಸಾಹಿತ್ಯದ್ದು; ಅದರ ರೂಪ ಅನುವಾದ. ಈ ರೀತಿಯಲ್ಲಿ ಅನ್ಯ ಸಂಸ್ಕೃತಿಯ, ಅನ್ಯದೇಶದ, ಅನ್ಯಭಾಷೆಯ ಸಾಹಿತ್ಯದ ಕೃತಿಗಳ ಅನುವಾದವೊಂದು ಇನ್ನೊಂದು ಸಾಹಿತ್ಯದಲ್ಲಿ ಹೊಸ ಯುಗವನ್ನು ಪ್ರಾರಂಭಿಸಿರುವುದಕ್ಕೆ ಉದಾಹರಣೆ— ಜರ್ಮನ್ ಸಾಹಿತ್ಯದ ರೊಮ್ಯಾಂಟಿಕ್ ಯುಗಕ್ಕೆ ಸ್ಫೂರ್ತಿ ನೀಡಿತೆಂದು ಹೇಳಲಾಗಿರುವ, ಹದಿನೆಂಟನೆಯ ಶತಮಾನದ ಕೊನೆ ಯಲ್ಲಿ ಹರ್ಡರ್ ಮತ್ತು ಷ್ಲೆಗೆಲ್ ಮಾಡಿದ ಶೇಕ್ಸ್‌ಪಿಯರನ ನಾಟಕಗಳ ಜರ್ಮನ್ ಅನುವಾದಗಳನ್ನು ಬಿಟ್ಟರೆ—ಬೇರೊಂದು ತಿಳಿದುಬಂದಿಲ್ಲ. **ಇಂಗ್ಲಿಷ್ ಗೀತ**ಗಳಿಂದ ಆಧುನಿಕ ಕನ್ನಡ ಕಾವ್ಯವು ಸ್ಫೂರ್ತಿಯನ್ನು ಪಡೆದುದಷ್ಟೇ ಅಲ್ಲದೆ, ತನ್ನ ವಸ್ತು,

ರೂಪ ಮತ್ತು ದೃಷ್ಟಿಗಳಲ್ಲಿಯೂ ಆ ಕೃತಿಗೆ ಋಣಿಯಾಗಿರುವುದು ಅದರ ಮಹತ್ವವನ್ನು ಸೂಚಿಸುತ್ತದೆ.

ಇಂಗ್ಲಿಷ್‌ಗೀತಗಳನ್ನು ರಚಿಸುವಲ್ಲಿ ತಮ್ಮ ಉದ್ದೇಶವೇನೆಂಬುದನ್ನು ಶ್ರೀಯವರೇ ತಮ್ಮ ಅರಿಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಅವುಗಳಲ್ಲಿ ಒಂದು : "ಇಂಗ್ಲಿಷ್ ಕಾವ್ಯಮಾರ್ಗವನ್ನು ಕನ್ನಡಿಗರು ಈ ಸಣ್ಣ ಗ್ರಂಥದಿಂದ ಸ್ವಲ್ಪಮಟ್ಟಿಗೆ ತಿಳಿಯಬಹುದಾಗಿದೆ....ಇಂಗ್ಲಿಷ್ ಸಾಹಿತ್ಯ ಸಮುದ್ರದ ಕರೆಯಲ್ಲಿ ತೆರೆಯೆಸೆದ ಈ ಕೆಲವು ಸಣ್ಣ ಚಿಪ್ಪುಗಳಿಂದ, ಆ ದಿವ್ಯ ರತ್ನಾಕರದ ಲಾವಣ್ಯವೂ, ವಾಸನೆಯೂ, ಘೋಷವೂ, ರುಚಿಯೂ ಸಹೃದಯರ ಅನುಭವಕ್ಕೆ ಬಾರದೆ ಇರಲಾರವೆಂದು ನಾನು ಭಾವಿಸುತ್ತೇನೆ." ಇನ್ನೊಂದು : "ಸಂಪ್ರದಾಯ ಮಾರ್ಗವನ್ನೇ ಛಲ ಹಿಡಿಯದೆ, ವಿಶ್ವಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜಭಾಷೆಯಲ್ಲಿ ಸೌಂದರ್ಯರಚನೆಯನ್ನು ಮಾಡಿರುವರೋ ಅದನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯವನ್ನೂ ಶಿಕ್ಷಣಬದ್ಧವಾದ ಸ್ವಾತಂತ್ರ್ಯವನ್ನೂ ವಹಿಸಿ ಕನ್ನಡ ಕವಿಗಳು ಹಿಂದಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನು ತಾಳಲಿ ಎನ್ನುವುದೇ ನಮ್ಮೆಲ್ಲರ ಹಾರೈಕೆಯಾಗಿದೆ." ಈ ಎರಡು ಉದ್ದೇಶಗಳು ಈ ಕೃತಿಯಲ್ಲಿ ಮತ್ತು ಕೃತಿಯಿಂದ ಎಷ್ಟರಮಟ್ಟಿಗೆ ಸಿದ್ಧಿಸಿವೆ ಎಂಬುದನ್ನು ನೋಡಬಹುದು.

ಅನುವಾದದ ವಿಷಯದಲ್ಲಿ, ಶ್ರೀಯವರೇ ತಾವು ಆರಿಸಿದ ಕವನಗಳ ಮೌಲ್ಯ, ಅವನ್ನು ಆರಿಸಲು ಕಾರಣ, ಅವನ್ನು ಅನುವಾದಿಸಿರುವ ದೃಷ್ಟಿ ಮತ್ತು ರೀತಿ, ಹಾಗೂ ಅನುವಾದದ ಇತಿಮಿತಿಗಳನ್ನು ಸ್ಪಷ್ಟವಾಗಿ ಸೂಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಪರೀಕ್ಷಿಸಿದಾಗ ಅವರ ಸಾಧನೆ ಅಸ್ವಾದ್ಯದೃಶವಾದುದು. ಪದಾನುವಾದ, ಭಾವಾನುವಾದ, ರೂಪಾಂತರ. ಪ್ರತಿಸೃಷ್ಟಿ ಮುಂತಾದ ಭಾಷಾಂತರದ ಎಲ್ಲ ಬಗೆಗಳನ್ನೂ ಅದರಲ್ಲಿ ಕಾಣಬಹುದು. ಅದರ ಯಶಸ್ಸು ಮೂಲಕ್ಕಿಂತಲೂ ಉತ್ತಮವೆಂದು ಕಾಣುವ 'ಅಡವಿಮರದೆಡೆಯಲ್ಲಿ' ಮುಂತಾದವುಗಳಿಂದ ಹಿಡಿದು ಅವರಿಗೇ ತೃಪ್ತಿ ನೀಡದ 'ನಿನ್ನೊಳಿನಗೊಲವಿಲ್ಲ' ಮುಂತಾದವುಗಳವರೆಗೂ ವ್ಯಾಪಿಸಿದೆ.

ಇಂಗ್ಲಿಷ್ ಕಾವ್ಯಮಾರ್ಗವನ್ನು ಕನ್ನಡಿಗರಿಗೆ ಸ್ವಲ್ಪಮಟ್ಟಿಗೆ ಪರಿಚಯ ಮಾಡಿಕೊಡುವುದು ಈ ಗ್ರಂಥದ ಒಂದು ಉದ್ದೇಶವೆಂದು ಶ್ರೀಯವರು ಹೇಳಿದ್ದಾರೆ. ಕವನಗಳನ್ನು ಆರಿಸಿರುವುದು ಆ ಮಾರ್ಗದ ನಿದರ್ಶನಗಳಾಗಿ ಎಂದು ಗ್ರಹಿಸಬಹುದು. ಈ

ಕವನಗಳಲ್ಲಿ ರೂಪಿತವಾಗಿರುವ ಮಾರ್ಗವೇ ಇಂಗ್ಲಿಷ್ ಕಾವ್ಯಮಾರ್ಗವೇ? ಎಂಬ ಸಂದೇಹ ಇಂಗ್ಲಿಷ್ ಸಾಹಿತ್ಯಾಭ್ಯಾಸಿಗಳನ್ನು ಬಾಧಿಸಿದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಇಲ್ಲಿ ಪ್ರದರ್ಶಿತವಾಗಿರುವುದು ಇಂಗ್ಲಿಷ್ ಕಾವ್ಯದ ಭಾವಗೀತ ಮಾರ್ಗ, ಅದರಲ್ಲೂ ರೊಮ್ಯಾಂಟಿಕ್ ಭಾವಗೀತ ಮಾರ್ಗ ಮಾತ್ರ. ಇಂಗ್ಲಿಷಿನ ವಿಡಂಬನಾತ್ಮಕ, ವರ್ಣನಾತ್ಮಕ, ತಾರ್ಕಿಕ ಚಿಂತನಾತ್ಮಕ, ವ್ಯಂಗ್ಯಾತ್ಮಕ, ಪಾತ್ರವಿಶ್ಲೇಷಣಾತ್ಮಕ ಮುಂತಾದ ಭಾವಗೀತಗಳ, ಸಾನೆಟ್, ಪ್ರಗೀತ ಮೊದಲಾದ ಭಾವಗೀತ ಪ್ರಕಾರಗಳ ನಿದರ್ಶನಗಳು ಇಲ್ಲಿ ಕಾಣಿಸುವುದಿಲ್ಲ. ಒಟ್ಟಿನಲ್ಲಿ ಕಂಡುಬರುವುದು ಇಂಗ್ಲೆಂಡಿನ ಹತ್ತೊಂಬತ್ತನೆಯ ಶತಮಾನದ ರೊಮ್ಯಾಂಟಿಕ್ ಪಂಥದ ಮತ್ತು ಅದರ ಗುಣಗಳಿರುವ ಇತರ ಶತಮಾನಗಳ ಕೆಲವು ಕವನಗಳು. ಆದ್ದರಿಂದ ಇಲ್ಲಿ ನಮಗೆ ಪರಿಚಯವಾಗುವುದು ಇಂಗ್ಲಿಷ್ ಕಾವ್ಯದ—ಅದೆಷ್ಟೇ ಪ್ರಮುಖವಾಗಿರಲಿ—ಒಂದು ಮಾರ್ಗವೇ ವಿನಾ ಇಂಗ್ಲಿಷ್ ಕಾವ್ಯಮಾರ್ಗವಲ್ಲ.

**ಇಂಗ್ಲಿಷ್ ಗೀತಗಳ** ಮಹತ್ವ ಅದರ ಅನುವಾದ ಸಾಮರ್ಥ್ಯವನ್ನು ಅವಲಂಬಿಸಿರುವುದಕ್ಕಿಂತಲೂ ಹೆಚ್ಚಾಗಿ ಇತರ ಅಂಶಗಳನ್ನು ಅವಲಂಬಿಸಿದೆ. ಛಂದಸ್ಸಿನ ಮತ್ತು ಭಾಷೆಯ ವಿಷಯಗಳಲ್ಲಿ ಅದರ ಸಾಧನೆ ಮತ್ತು ಪ್ರಭಾವ ಅಗಾಧವಾದವು. ಛಂದಸ್ಸಿನ ದೃಷ್ಟಿಯಿಂದ ಅದರ ಸಾಧನೆಯನ್ನು ತೀ. ನಂ. ಶ್ರೀಕಂಠಯ್ಯ, ಎಸ್. ಅನಂತನಾರಾಯಣ ಹಾಗೂ ಇತರರು ವಿವರವಾಗಿ ಚರ್ಚಿಸಿದ್ದಾರೆ. ತೀ. ನಂ. ಶ್ರೀಕಂಠಯ್ಯನವರಂತೂ "ಎಲ್ಲಕ್ಕೂ ಮಿಗಿಲಾಗಿ 'ಶ್ರೀ'ಯವರಿಂದ ಕನ್ನಡಕ್ಕೆ ಆದ ಪರಮೋಪಕಾರವೆಂದರೆ, 'ಇಂಗ್ಲಿಷ್ ಗೀತಗಳಲ್ಲಿ' ಹೊಸದೊಂದು ಹೆದ್ದಾರಿಯನ್ನೇ ತೆರೆದದ್ದು; ಕನ್ನಡ ಕಾವ್ಯದ ಚರಿತ್ರೆಯಲ್ಲಿ ಅವರ ಹೆಸರು ಚಿರಸ್ಮರಣೀಯವಾಗಿ ನಿಲ್ಲುವುದು ಮುಖ್ಯವಾಗಿ ಇದರಿಂದ" ಎಂದು ತೀರ್ಮಾನಿಸಿದ್ದಾರೆ. ಈ ಕೃತಿ ಶಾಸ್ತ್ರೀಯ ಛಂದಸ್ಸಿನ ಹಿಡಿತದಿಂದ ಕನ್ನಡಕಾವ್ಯಕ್ಕೆ ಬಿಡುಗಡೆ ತಂದಿತೆನ್ನುವುದು ಅತಿಶಯೋಕ್ತಿಯಲ್ಲ. ಭಾವದ ಬಾಗನ್ನು ಸೆರೆಹಿಡಿಯುವ, ಭಾವದ ನೈಜ ಅಭಿವ್ಯಕ್ತಿಯಾಗುವ ಹೊಸ ವೃತ್ತರೂಪಗಳನ್ನು ಅದು ಕಲ್ಪಿಸಿತು. ಜೊತೆಗೆ ಸಂಪ್ರದಾಯ ಅಥವಾ ಶಾಸ್ತ್ರ ಅನುಮತಿಸದ ಛಂದಸ್ಸಿನ ಸೃಷ್ಟಿಗೆ ಒಂದು ಸಮರ್ಥನೆಯನ್ನೂ ಒದಗಿಸಿತು. ಛಂದಸ್ಸು ಪೂರ್ವಸಿದ್ಧವಾದ ಶಾಸ್ತ್ರಕಲ್ಪನೆಯಾಗಿರದೆ ಸದ್ಯೋಜಾತವಾದ ಭಾವ ತನ್ನ ಅಭಿವ್ಯಕ್ತಿಗಾಗಿ ಕಲ್ಪಿಸಿಕೊಳ್ಳುವ ನೈಜರೂಪ ಎಂಬ ವಿವರಣೆಯನ್ನು ಸೂಚಿಸಿತು. ಈ ದೃಷ್ಟಿಯಿಂದ ಬಂಧಗಳ ಸೃಷ್ಟಿಯು ಕಾವ್ಯರಚನೆಯ ಅಂಗಭಾಗವೆಂದಾಯಿತು. ಈ ಪ್ರಯತ್ನದಲ್ಲಿ, ಅದುವರೆಗೆ ಪುರಸ್ಕಾರ ಪಡೆಯದಿದ್ದ ಮತ್ತು ಗಂಭೀರ ಕಾವ್ಯಕ್ಕೆ ಸಾಲದೆಂದು ಭಾವಿತವಾಗಿದ್ದ ಸರಳ ಜಾನಪದ ವೃತ್ತಗಳು ಮತ್ತೆ ಬಳಕೆಗೆ ಬಂದವು. ಅವುಗಳನ್ನು ಅನುಸರಿಸಿ ಅವುಗಳ ಧಾಟಿಯಲ್ಲಿಯೇ

ಹೊಸ ವೃತ್ತಗಳು ರಚಿತವಾದವು. ಇಂಥ ಪ್ರಯೋಗಗಳ ಸಾರ್ಥಕ್ಯಕ್ಕೆ ಸಮರ್ಥ ನಿದರ್ಶನಗಳನ್ನು ಒದಗಿಸಿದುದು **ಇಂಗ್ಲಿಷ್ ಗೀತಗಳು.**

ಭಾಷೆಯ ವಿಷಯದಲ್ಲಿಯೂ **ಇಂಗ್ಲಿಷ್‌ಗೀತಗಳು** ಇಂಥದೇ ಒಂದು ಪ್ರಯೋಗವನ್ನು ಯಶಸ್ವಿಯಾಗಿ ಮಾಡಿತು. ಕಾವ್ಯದ ಬಗ್ಗೆ ಅಂದು ಪ್ರಚಲಿತವಾಗಿದ್ದ ಭಾವನೆಯಂತೆ ಕಾವ್ಯದ ಭಾಷೆ ಗಂಭೀರವಾಗಿ, ವಿಶಿಷ್ಟವಾಗಿ, ಅನುದಿನದ ವ್ಯಾವಹಾರಿಕ ಭಾಷೆಗಿಂತ ಭಿನ್ನವಾಗಿ ಇರಬೇಕಾಗಿದ್ದಿತು. ಮೊಳಗುವ ಸಂಸ್ಕೃತ ಶಬ್ದಗಳು ಅದಕ್ಕೆ ಗಾಂಭೀರ್ಯ ಹೊದಿಸಿದ್ದರೆ, ಅಲಂಕಾರಗಳು ಅದಕ್ಕೆ ಸೌಂದರ್ಯವನ್ನು ಒದಗಿಸಿದ್ದವು. ಆದರೆ ಶ್ರೀಯವರ ಕೃತಿ ಇದಕ್ಕೆ ಸಮರ್ಥ ಅಪವಾದವಾಯಿತು. ಶ್ರೀಯವರ ಭಾಷೆ ಅಚ್ಚಕನ್ನಡ. ಚಿಕ್ಕ ಸರಳ ಪದಗಳು, ಆಡುಮಾತಿನ ಲಯ, ದೈನಂದಿನ ಜೀವನದ ನುಡಿಗಟ್ಟು, ನೇರವಾದ ನಿರಾಡಂಬರವಾದ ನಿರಲಂಕೃತವಾದ ವರ್ಣನೆ, ಕಥನ ಮತ್ತು ಹೇಳಿಕೆ ಇವುಗಳಿಂದ ಕೂಡಿದ ಅವರ ಅನುವಾದಗಳು ಕಾವ್ಯದ ಭಾಷೆಯನ್ನು ಕುರಿತಿದ್ದ ಮೂಲ ಭಾವನೆಗಳನ್ನೇ ಬದಲಾಯಿಸಿಬಿಟ್ಟವು. ಜೊತೆಗೆ ಕನ್ನಡ ಭಾಷೆಯ ಅಜ್ಞಾತ ಶಕ್ತಿಸಾಮರ್ಥ್ಯಗಳನ್ನು ಕಂಡರಿಯದ ರೀತಿಯಲ್ಲಿ ಪ್ರಕಟಿಸಿದವು. ಸಾವಿರಾರು ವರ್ಷಗಳ ಇತಿಹಾಸವಿದ್ದರೂ ಕನ್ನಡ ಇನ್ನೂ ಸಾಕಷ್ಟು ಬೆಳೆಯದಿರುವ ಒಂದು ದೇಶ ಭಾಷೆ, ಅದರ ಶಬ್ದಭಂಡಾರ ಸೀಮಿತವಾದುದು, ಶ್ರೇಷ್ಠ ಸಾಹಿತ್ಯರಚನೆಗೆ ಇರುವ ಅವಕಾಶದ ವಿಷಯದಲ್ಲಿ ಅದನ್ನು ಸಂಸ್ಕೃತ ಮತ್ತು ಆಧುನಿಕ ಪಾಶ್ಚಾತ್ಯ ಭಾಷೆಗಳೊಂದಿಗೆ ಹೋಲಿಸಲಾಗದು ಎಂದು ಭಾವಿಸಿದ್ದ ಕಾಲದಲ್ಲಿ ಶ್ರೇಷ್ಠಕೃತಿಗಳೆಂದು ವಿಶ್ವಮಾನ್ಯವಾಗಿದ್ದ ಕವನಗಳನ್ನು ಸಮರ್ಥವಾಗಿ ಕನ್ನಡಕ್ಕೆ ಅನುವಾದಿಸುವ ಮೂಲಕ ವಿಶ್ವಮಾನ್ಯವಾದ ಕೃತಿಗಳ ರಚನೆಗೆ ಅಗತ್ಯವಾದ ಶಕ್ತಿಸಾಮರ್ಥ್ಯಗಳು ಸದ್ಯದ ಕನ್ನಡ ಭಾಷೆಗೆ ಮತ್ತು ಛಂದಸ್ಸಿಗೆ ಸಾಕಷ್ಟಿವೆ ಎಂಬುದನ್ನು ಸಾಧಾರವಾಗಿ ಸ್ಥಾಪಿಸಿದ ಕೀರ್ತಿ ಶ್ರೀಯವರಿಗೆ ಸಲ್ಲಬೇಕು.

ಛಂದಸ್ಸು ಮತ್ತು ಭಾಷೆಗಳಲ್ಲಷ್ಟೇ ಅಲ್ಲದೆ, ಕಾವ್ಯದ ವಸ್ತು ಹಾಗೂ ಪ್ರಕಾರಗಳ ವಿಷಯದಲ್ಲಿಯೂ **ಇಂಗ್ಲಿಷ್ ಗೀತಗಳು** ಇಂಥದೇ ಒಂದು ಕ್ರಾಂತಿಯನ್ನು ತಂದವು. ಪ್ರಚಲಿತ ಕಾವ್ಯಸಿದ್ಧಾಂತದ ಪ್ರಕಾರ, ಗಂಭೀರ ಕಾವ್ಯದ ವಸ್ತು ಪ್ರಸಿದ್ಧವಾದ ಲೌಕಿಕ ಅಥವಾ ಪೌರಾಣಿಕ ಸಂಗತಿಯೊಂದರ, ಉದಾತ್ತ ಅಥವಾ ಉದಾತ್ತೀಕರಿಸಿದ ವ್ಯಕ್ತಿಯೊಬ್ಬನ ಚರಿತದ ದೀರ್ಘ ಕಥನವಾಗಬೇಕಾಗಿದ್ದಿತು. ಅದರಲ್ಲಿ ಅಷ್ಟಾದಶ ವರ್ಣನೆಗಳು, ರೂಪಕಾದಿ ಅಲಂಕಾರಗಳು, ನವರಸಗಳು ಇರಬೇಕಾಗಿದ್ದವು. ಆದರೂ ಆ ಕಾವ್ಯಸಿದ್ಧಾಂತದಲ್ಲಿ ಲಘುವಸ್ತುಗಳನ್ನು ಕುರಿತ ಬಿಡಿ ಕವನಗಳಿಗೆ ಮುಕ್ತಕಗಳಿಗೆ ಒಂದು ಸ್ಥಾನವಿದ್ದಿತು. ಆದರೆ ಅವು ಕವಿಯ ಅಥವಾ ಸಹೃದಯನ ವಿರಾಮವೇಳೆಯ ವಿಲಾಸ.

ವಿನೋದ ಮಾತ್ರ ಆಗಿದ್ದವು. ಅವುಗಳ ಕಾವ್ಯಗುಣ ಶ್ರೇಷ್ಠವಮಟ್ಟದ್ದಾಗಿದ್ದರೂ ಕಾವ್ಯಪಂಕ್ತಿಯಲ್ಲಿ ಅವಕ್ಕೆ ಅಗ್ರಸ್ಥಾನ ಇರಲಿಲ್ಲ. ಆದರೆ ಶ್ರೀಯವರು ಅನುವಾದಿಸಿದ ಕೃತಿಗಳು ಕಿರುಗವನಗಳು. ಅವುಗಳ ವಸ್ತು ಅನುದಿನದ ಘಟನೆಗಳು, ಯಾವನೇ ಸಾಮಾನ್ಯ ವ್ಯಕ್ತಿಗೆ ಒದಗಬಹುದಾದ ಅನುಭವಗಳು. ಕ್ಷಣಿಕ ವೈಯಕ್ತಿಕ ಭಾವಗಳ, ಭಾವನೆಗಳ, ಅನುಭವಗಳ ನೇರ ಸರಳ ಅಭಿವ್ಯಕ್ತಿಗಳು ಅವು. ಇವುಗಳನ್ನು ಶ್ರೀಯವರು ಸ್ವಂತವಾಗಿ ಬರೆದಿದ್ದರೆ ಅವುಗಳ ಸಾಧುತ್ವವನ್ನು, ಶ್ರೇಷ್ಠತೆಯನ್ನು, ಪ್ರಾಯಶಃ ಕಾವ್ಯತ್ವವನ್ನು ಕೂಡ, ಸಮರ್ಥಿಸಬೇಕಾದ ಸಂದರ್ಭ ಒದಗುತ್ತಿತ್ತೇನೋ. ಆದರೆ ಮೂಲಕವನಗಳು ಅಂದಿಗೇ ವಿಶ್ವಮಾನ್ಯತೆ ಪಡೆದಿದ್ದರಿಂದ ಆ ಪ್ರಯಾಸ ತಪ್ಪಿತು. ಕಾವ್ಯ ಶಿಖರವನ್ನೇರಲು, ಮಹಾಕವಿಯೆನಿಸಿಕೊಳ್ಳಲು ಬಯಸುವ ಕವಿಗೆ ಭಾವಗೀತ ಸಾಕು ಎನ್ನುವುದು ಸ್ಥಾಪಿತವಾಯಿತು.

ಇವುಗಳ ಜೊತೆಗೆ **ಇಂಗ್ಲಿಷ್ ಗೀತಗಳು** ಪರೋಕ್ಷವಾಗಿ ಒಂದು ಕಾವ್ಯ ಪಂಥವನ್ನೂ, ಕಾವ್ಯದೃಷ್ಟಿಯನ್ನೂ ಬೆಳೆಸಿದವು. ಅದು ರೂಮ್ಯಾಂಟಿಕ್ ಪಂಥ ಮತ್ತು ರೊಮ್ಯಾಟಿಂಕ್ ದೃಷ್ಟಿ. ಕನ್ನಡ ನವೋದಯ ಕಾವ್ಯದ ಮತ್ತು ವಿಮರ್ಶೆಯ ಮುಖ್ಯ ಲಕ್ಷಣ ಇದೇ ಎಂದು ವಿಮರ್ಶಕರ ಅಭಿಪ್ರಾಯ. ಈ ಬಗೆಯ ಸೃಷ್ಟಿ ಮತ್ತು ದೃಷ್ಟಿಗಳಿಗೆ ಮೂಲಕಾರಣರು ಶ್ರೀಯವರಲ್ಲ. ಅದನ್ನು ಅವರೇ ಒಪ್ಪಿಕೊಂಡಿದ್ದರು. ಆದರೂ ಅದುವರೆಗೆ ಹನಿಯಾಗಿ ಉದುರುತ್ತಿದ್ದುದು ಶ್ರೀಯವರ ಕೃತಿ ಬಂದ ತರುವಾಯ ಹೊಳೆಯಾಗಿ ಹರಿಯಿತು. ಇದಕ್ಕೆ ಕಾರಣ ಭಾಗಶಃ ಸ್ವಾತಂತ್ರ್ಯ ಚಳವಳಿಯ ಕಾಲದ ಐತಿಹಾಸಿಕ ಪರಿಸರವಾಗಿದ್ದರೂ, ಸಾಹಿತ್ಯದ ಮಟ್ಟಿಗೆ ಹೇಳಬಹುದಾದಲ್ಲಿ ಈ ಕೃತಿಯಲ್ಲಿ ವ್ಯಕ್ತವಾದ ಶ್ರೀಯವರ ವೈಯಕ್ತಿಕ ಒಲವುಗಳೂ ಬಹುಮಟ್ಟಿಗೆ ಕಾರಣ ಎನ್ನಬಹುದು. ಶ್ರೀಯವರದು ಹತ್ತೊಂಬತ್ತನೆಯ ಶತಮಾನದ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಮತ್ತು ವಿಮರ್ಶಕರ, ಅದರಲ್ಲೂ ಪ್ರಧಾನವಾಗಿ ವರ್ಡ್ಸ್‌ವರ್ತನ, ದೃಷ್ಟಿ. ಅವರ ಇಂಗ್ಲಿಷ್ ಗೀತಗಳ ಆಯ್ಕೆಯಲ್ಲಿ ಕಂಡುಬರುವುದು ಈ ದೃಷ್ಟಿಯೇ. ಆದ್ದರಿಂದ **ಇಂಗ್ಲಿಷ್ ಗೀತಗಳ** ಪ್ರಭಾವ ಮತ್ತು ಮಾರ್ಗದರ್ಶನಗಳಿಗೆ ಒಳಗಾದ ಕನ್ನಡ ನವೋದಯದ ಬಹುಮಟ್ಟಿನ ಕಾವ್ಯ ಈ ಗುಣಗಳಿಂದ ಕೂಡಿರುವುದು ಆಶ್ಚರ್ಯವಲ್ಲ.

ಬದುಕಿನೊಂದಿಗೆ ಸಂಬಂಧ ಕಳೆದುಕೊಂಡು ಪಂಡಿತರ ಕಸರತ್ತಾಗಿದ್ದ ಕನ್ನಡ ಕಾವ್ಯ ಬದುಕಿನೊಂದಿಗೆ ಮತ್ತೆ ತನ್ನ ಸಂಬಂಧ ಕೂಡಿಸಿಕೊಳ್ಳಲು ಶ್ರೀಯವರು ಶ್ರಮಿಸಿದರು. ಅದನ್ನು ಸಾಧಿಸುವ ವಿಧಾನವನ್ನು **ಇಂಗ್ಲಿಷ್ ಗೀತಗಳ** ಮೂಲಕ ಮಾಡಿ ತೋರಿಸಿದರು. ಕನ್ನಡದ ಹಿರಿಮೆಯನ್ನು ಸಾರಿದುದಷ್ಟೇ ಅಲ್ಲದೆ, ಹೊಸಗನ್ನಡದ

ಕವಿಗಳಿಗೆ ಸೃಷ್ಟಿಸ್ವಾತಂತ್ರ್ಯವನ್ನೂ, ಆತ್ಮವಿಶ್ವಾಸವನ್ನೂ ಗಳಿಸಿಕೊಟ್ಟರು. ಕಾವ್ಯ ಸಾಮಾನ್ಯ ಜೀವನದ ಅಂಗಭಾಗವೂ, ಸಾಮಾನ್ಯರ ಸ್ವತ್ತೂ ಅಭಿವ್ಯಕ್ತಿಸಾಧನವೂ ಆಯಿತು. ಗ್ರಂಥದ ಮುಖಪುಟದ ಮೇಲೆ ಶ್ರೀಯವರು "ಬೆಳೆಯೇನೋ ಬೇಕಾದ ಹಾಗಿದೆ; ಕುಯ್ಯುವರು ಕಡಮೆ" ಎಂಬ ಕೊರಗುನುಡಿ ಹಾಕಿದ್ದರು. ಆದರೆ ಸ್ವಲ್ಪ ಕಾಲದಲ್ಲೇ ಅವರ ಕೃತಿಯಿಂದ ಸ್ಫೂರ್ತಿ ಪಡೆದ ಕುಯ್ಯುವರ ದಂಡಿಗೆ ದಂಡೇ ಉದ್ಭವವಾಯಿತು. ಬೆಳೆ ನಿಂತು ಹೋಗಿ ಕುಯ್ಯುವರೇ ಹೆಚ್ಚಾಗಿ ಹೋಗಿರುವ ಸದ್ಯದ ಪರಿಸ್ಥಿತಿಗೆ ಬದಲಾಗಿರುವ ಯುಗಧರ್ಮದ ಜೊತೆಗೆ ಶ್ರೀಯವರಂಥ ಇನ್ನೊಬ್ಬ ವ್ಯಕ್ತಿಯ ಅಭಾವವೂ ಕಾರಣ ಎನ್ನಬಹುದು.

ಒಟ್ಟಿನಲ್ಲಿ **ಇಂಗ್ಲಿಷ್ ಗೀತಗಳು** ಒಳ್ಳೆಯ ಕವನಸಂಗ್ರಹ ಮತ್ತು ಮಹತ್ವದ ಐತಿಹಾಸಿಕ ಪ್ರಭಾವ.

**ಡಾ. ಎಡ್ವರ್ಡ್ ನೊರೋನ**

# 'ನಿರಾಶೆ'

( ಪ್ರಾಯೋಗಿಕ ಭಾಷಾಂತರ ವಿಶ್ಲೇಷಣೆ )

ಅನುವಾದ ಮಾಡುವಾಗ ಸಾಧ್ಯವಿದ್ದಷ್ಟು ಮಟ್ಟಿಗೆ "ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನೇ" ತಾನು ಮಾಡಿರುವೆನೆಂದು ಶ್ರೀಯವರು "ಇಂಗ್ಲಿಷ್ ಗೀತಗಳ" "ಅರಿಕೆ"ಯಲ್ಲಿ ಹೇಳಿದ್ದಾರೆ. ಶೆಲ್ಲಿಯ "Stanzas Written in Dejection, Near Naples" ಕವನದ ಅನುವಾದ "ನಿರಾಶೆ". ಈ ಅನುವಾದದಲ್ಲಿ ಮೂಲ ಕವನದ ಭಾವ ಹೆಚ್ಚು ಪ್ರಮಾಣದಲ್ಲಿ ಮತ್ತು ಅಷ್ಟೇ ಶಕ್ತವಾಗಿ ಮೂಡಿಬಂದಿದೆ. ತೀ. ನಂ. ಶ್ರೀ. ಅವರು ಸಹ "ಉತ್ಕೃಷ್ಟವಾದ ಅನುವಾದ"ವೆಂದು "ಇಂಗ್ಲಿಷ್ ಗೀತಗಳ" "ಪ್ರಸ್ತಾವನೆ"ಯಲ್ಲಿ ಇದನ್ನು ಹೇಳಿದ್ದಾರೆ.

ರೂಪ್ಯಕ ಸಮಾನಾರ್ಥಕತೆಯನ್ನು ಮಾತ್ರವಲ್ಲ ಸ್ಥೂಲ ಕಲ್ಪನೆಗಳ ಸಮಾನಾರ್ಥಕತೆಯನ್ನು ಪರಿಗಣಿಸಿದರೂ ಅನೇಕ ಕಡೆಗಳಲ್ಲಿ ಅನುವಾದ ಮೂಲಕ್ಕೆ ದೂರವೇ ಇದೆ ಎಂಬಂತೆ ತೋರದಿರಲಾರದು. ಮೂಲದ ಐದನೇ ಚರಣ ಅನುವಾದವಾಗಲೇ ಇಲ್ಲ. ಮೊದಲನೇ ಚರಣದಲ್ಲಿ ಹಲವು ಧ್ವನಿಗಳು ಏಕಾಂತತೆಯ (" Solitude ") ಧ್ವನಿಯಂತೆ ಮೆಲುವಾಗಿವೆ ಎಂದು ಮೂಲದಲ್ಲಿ ಇದ್ದೆಡೆ, ಅನುವಾದದಲ್ಲಿ ಏಕಾಂತತೆಯ ಮಾತಿಲ್ಲ. ಭೂಮಿಯ ಉಸಿರು ಮೊಗ್ಗುಗಳನ್ನು ಸುತ್ತುವರಿದಿದೆ ಎಂದಿರುವುದು ಅನುವಾದದಲ್ಲಿ

ಬಿರಿಯದ ಮೊಗ್ಗುಗಳೆಸಳನು ತೆರೆಯುತ
ಸುಳಿವುದು ತಂಪಿನ ನೆಲದುಸಿರು;

ಎಂದಾಗಿದೆ. ಎರಡನೇ ಚರಣದಲ್ಲಿ " the lightning of noontide ocean "ನ ಅನುವಾದದಲ್ಲಿ "noontide"ಗೆ ಸಮಾನಾರ್ಥಕವೇ ಇದ್ದದ್ದು ಕಾಣುವುದಿಲ್ಲ. ಮೂರನೇ ಚರಣದಲ್ಲಿರುವ ಹೊಂಬಟ್ಟಲಿಗೆ ಮೂಲದಲ್ಲಿ "cup" ಎಂದಷ್ಟೇ ಇದೆ. "To me that cup has been dealt in another measure" ಎಂದಿರುವುದು "ನನಗೋ ಆ ಹೊಂಬಟ್ಟಲೊಳೆಲ್ಲಾ ವಿಷವೆ ತುಂಬಿಹುದೇ!" ಎಂದಾಗಿದೆ. ನಾಲ್ಕನೇ ಚರಣದಲ್ಲಿ ಸಾವು ತನ್ನ ಮೇಲೆ ಕವಿಯುವ ವರೆಗೆ ತಾನು ಅಳುತ್ತಾ ಒರಗುವೆನು ಎಂದಿದ್ದಲ್ಲಿ "ವರೆಗೆ" ಅನುವಾದದಲ್ಲಿಲ್ಲ—ಒರಗುವೆನು, ಸಾವು ಬರಲಿ ಎಂದಿದೆ.

ಹೀಗಿದ್ದರೂ "ನಿರಾಶೆ"ಯನ್ನು ಓದುವಾಗ ಅನುಭವಕ್ಕೆ ಬರುವ ಭಾವಾವೇಶದ ಮತ್ತು ಸಂವೇದನೆಗಳ ಸಮಗ್ರತೆ ಪ್ರಧಾನವಾಗಿ ಮೂಲ ಕವನದಲ್ಲಿದ್ದಂತೆಯೇ ಇರುವುದು ಹೆಚ್ಚು ಮುಖ್ಯವಾಗಿರುವ ಸಂಗತಿ. ಮೂಲ ಕವನದ ಆರಂಭದಲ್ಲಿ ಲವಲವಿಕೆಯಿದ್ದ, ಆದರೂ ಉತ್ಸಾಹದ ತೀವ್ರತೆಯನ್ನು ತೋರ್ಪಡಿಸದ ದಿನದ ವರ್ಣನೆಯುಂಟು. ಕವನದಲ್ಲಿ, ಸ್ಪಷ್ಟವಾಗಿ ಐದನೇ ಚರಣದಲ್ಲಿ ಸುಂದರವಾದ ಈ ದಿನದ ಒಗೆಗೆ ಕವಿ ಆತ್ಮೀಯಭಾವವನ್ನು ತಾಳುತ್ತಾನೆ, ಈ ದಿನ ಬಹುಕಾಲ ಸ್ಮೃತಿಯಲ್ಲಿ ಉಳಿಯುವುದು ಎನ್ನುತ್ತಾನೆ. ಇಂಥ ಒಂದು ಹಗಲಲ್ಲಿ ಕವಿಯನ್ನು ಆವರಿಸಿದ ಖಿನ್ನತೆಯೇ ಕವನದ ಪ್ರೇರಣೆ. ಕವಿಯ ಅಂತರ್ಯವನ್ನು ಕೊರೆದು ಧ್ವಂಸಮಾಡುವ ಖಿನ್ನತೆ ಇದಲ್ಲ ; ನೋವಿದೆಯಾದರೂ, ನೋವು ಸಹ್ಯವಾಗಿರುವ ಸ್ಥಿತಿಗೆ ಬಂದಿದ್ದು, ಅಚಲಚಿತ್ತನಾಗಿ ವ್ಯಥೆಯಿಂದ ಪರಿಹಾರವನ್ನು ಸಾವಿನಲ್ಲಿ ಕಂಡುಕೊಳ್ಳುವಂತಿದ್ದಾನೆ ಕವಿ. ಕವಿಯ ಮನಸ್ಸು ವಿಷಣ್ಣವಾಗಿದ್ದರೂ ಪ್ರಕ್ಷುಬ್ಧವಾಗಿರದೆ, ಶಾಂತವಾಗಿದೆ. ಈ ಶಾಂತತೆ ಇಲ್ಲಿ ಹೊರಹೊಮ್ಮುವ ಪ್ರಧಾನವಾದ ಭಾವ. ತನ್ನೊಳಗೂ ಹೊರಗೂ ನೆಮ್ಮದಿಯಿಲ್ಲ ("nor peace within nor calm around") ಎಂದು ಕವಿ ಹೇಳಿದ ಮಾತುಗಳು, ಅವನ ವ್ಯಾಕುಲದ ಕಾರಣಗಳೆಂದಲ್ಲದೆ, ತತ್ಕ್ಷಣದ ಪರಿಸ್ಥಿತಿಯ ಸೂಚನೆಗಳೆಂದೆನಿಸುವುದಿಲ್ಲ. ಅಂತರಂಗ ಬಹಿರಂಗಗಳೆರಡರಲ್ಲೂ ನೋವನ್ನು ಉಂಡು ಮಾಗಿದ ಸ್ಥಿತಮನಸ್ಸೇ ವರ್ತಮಾನದ ನಿಜಸ್ವರೂಪವೆನಿಸುತ್ತದೆ. ಏಕೆಂದರೆ "Yet now despair itself is mild" ಎಂದು ಆರಂಭವಾಗುವ ಚರಣದಲ್ಲಿ ತಾಪತ್ರಯಗಳ ಈ ಬದುಕನ್ನು ಅತ್ತು ಕಳೆಯಲು ತಾನು ಶಕ್ತನಿದ್ದೇನೆ ಎಂಬ ಧೈರ್ಯ ಅವನಿಗಿದೆ. ಅದಲ್ಲದೆ ನಳನಳಿಸುವ ಹಗಲಿನ ಮೆಲುದನಿ, ನಕ್ಷತ್ರಗಳ ಸುರಿಮಳೆಯಂತೆ ಹೊಡೆಯುವ ತೆರೆಗಳು, ಕಳಂಕರಹಿತ ಶೋಭೆಯಿಂದ ಸ್ಮೃತಿಯಲ್ಲಿ ಸದಾ ಉಳಿಯುವ ಮಧುರ ದಿನದ ವೈಭವಗಳು ಪ್ರಕೃತದಲ್ಲಿ ಬಹಿರಂಗವೂ ನಿರ್ವಿಣ್ಣವಾಗಿರದೆ, ಬಹುತೇಕ ಮಟ್ಟಿಗೆ ಚೇತನವತ್ತಾಗಿಯೇ ಇದೆ ಎಂಬುದನ್ನು ತೋರಿಸುತ್ತದೆ. ಹೀಗೆ ವಿಶೇಷವಲ್ಲದಿದ್ದರೂ ಸಾಕಷ್ಟು ಪ್ರಮಾಣದಲ್ಲಿ ಸೊಬಗನ್ನು ಚೆಲ್ಲುವ ಬಹಿರಂಗದಲ್ಲಿ, ಕಹಿಯನ್ನನುಭವಿಸಿ ಪರಿಪಕ್ವವಾಗಿ, ಅದರಿಂದ ವಿಮುಕ್ತನಾಗಲು ಹವಣಿಸುವ ಅಂತರಂಗದ ಚಿತ್ರಣ ಇಲ್ಲಿದೆ.

ಮೂಲ ಕವನದ ಇವೆರಡು ಭಾವಗಳು ಅನುವಾದದಲ್ಲಿ ಅಷ್ಟೇ ಶಕ್ತವಾಗಿ ಮತ್ತು ಪರಿಪೂರ್ಣವಾಗಿ ಮೂಡಿಬಂದಿವೆ. ಆದರೆ ಇವುಗಳಲ್ಲಿ ಒಂದು ಭಾವಕ್ಕೆ ಮಾತ್ರ ತುಸು ಚ್ಯುತಿ ಒದಗಿದೆ. ಬಹಿರಂಗದ ಸಂಭ್ರಮವನ್ನು ಮಿತಗೊಳಿಸುವ ಧ್ವನಿ ಅನುವಾದದಲ್ಲಿ ಸ್ಪಷ್ಟವಾಗಿ ಕಾಣಿಸುವುದಿಲ್ಲ. ಮೂಲದಲ್ಲಿ,

Like many a voice of one delight,
The winds, the birds, the ocean floods,
The city's voice itself, is soft like Solitude's.

—ಈ ಪಂಕ್ತಿಗಳು, ವಿಶೇಷತಃ "soft", "Solitude" ಪದಗಳು ಅವುಗಳ ಹಿಂದಿನ ಪಂಕ್ತಿಗಳ ಉತ್ಸಾಹವನ್ನು ಮೊಂಡಾಗಿಸುತ್ತವೆ. ಹಾಗೆಯೇ ಮೊಗ್ಗುಗಳನ್ನು ಹಗುರವಾಗಿ ಬಳಸಿ ಅವುಗಳನ್ನು ಹಾಗೆಯೇ ಇರಗೊಡುವ ನೆಲದ ಉಸಿರು,

The breath of the moist earth is light,
Around its unexpanded buds ;

—ಈ ಪಂಕ್ತಿಗಳಲ್ಲೂ ಕಾಣುವ ಕ್ರಿಯಾಶೀಲತೆ ಕಡಿಮೆಯೇ. ಮೊದಲ ಸಂದರ್ಭದಲ್ಲಿ "solitude" ಅನುವಾದವಾಗಿಲ್ಲ, " soft " "ಇಂಪು" ಎಂದಾಗಿದೆ ; ಎರಡನೇ ಸಂದರ್ಭದಲ್ಲಿ ಮೂಲದಲ್ಲಿ ಇಲ್ಲದ ಕ್ರಿಯಾಶೀಲತೆ ಅನುವಾದದಲ್ಲಿ ಕಾಣಿಸಿಕೊಂಡಿದೆ :

ಬಿರಿಯದ ಮೊಗ್ಗುಗಳೆಸಳನು ತೆರೆಯುತ
ಸುಳಿವುದು ತಂಪಿನ ನೆಲದುಸಿರು ;

ಹೀಗಾದುದರಿಂದ ಯಾವುದೇ ಕುಂದಿಲ್ಲದ ಉತ್ಸಾಹವೇ ಚಿತ್ರಿತ ಹಗಲಿನ ಗುಣವಾಗುತ್ತಿದೆ. ಮೂಲದಲ್ಲಿ ಪ್ರಕೃತಿಯ ಉತ್ಸಾಹದಲ್ಲಿ ಮ್ಲಾನತೆಯ ಒಂದು ಎಳೆ ಇದೆ, ಕವಿಯ ಖಿನ್ನತೆಗೆ ಈ ಮ್ಲಾನತೆ ಸಹಜವರ್ತಿಯಾಗುತ್ತದೆ. ಇದನ್ನು ಕಳೆದುಕೊಂಡಿದ್ದುದರಿಂದ, ಇತರ ದೃಷ್ಟಿಗಳಲ್ಲಿ ಪರಿಪೂರ್ಣವಾಗಿರುವ ಅನುವಾದದಲ್ಲಿ ಒಂದು ಕೊರೆ ಕಾಣಿಸಿಕೊಂಡಂತಾಯಿತು.

ಅನುವಾದದ ಪರಿಪೂರ್ಣತೆಯೂ ಸೌಂದರ್ಯವೂ ಹಲವು ಸಂದರ್ಭಗಳಲ್ಲಿ ಕೆನೆಗಟ್ಟಿದುದನ್ನು ನೋಡಬಹುದು. ಇಲ್ಲೆಲ್ಲಾ ಅದ್ಭುತವಾಗಿ ಸಮರ್ಪಕವಾಗಿರುವ ಸಮಾನಾರ್ಥಕಗಳು ನಮ್ಮನ್ನು ಚಕಿತಗೊಳಿಸುತ್ತವೆ :

The sun is warm, the sky is clear,
ಬಿಸಿಲೊ ಬೆಳೆಯಿತು ; ಬಾನೋ ತಿಳಿಯಿತು ;

I see the waves upon the shore,
Like light dissolved in star-showers, thrown :
ನುಣ್ಣಗೆ ಬೆಳಕನು ಕರಗಿಸಿ, ಅರಿವಾ
ಗೆರೆದವೊಲಲೆಗಳು ತೂರುವುವು.

I could lie down like a tired child,
And weep away the life of care

ಹಾಗೆಯೆ ಸೊರಗಿದ ಮಗುವಂತತ್ತ
ತ್ತೊರಗುವೆ, ಜನ್ಮದ ಹೊರೆ ಜಾರಿ.

ಭಾವ, ಅರ್ಥ ಎರಡನ್ನೂ ಒಳಗೊಂಡಂತೆ ಈ ಸಮಾನಾರ್ಥಕಗಳು ಸಮರ್ಪಕವೂ ಹೃದ್ಯವೂ ಆಗಿವೆ.

ಮೂಲದಲ್ಲಿದ್ದಂತೆ ಅನುವಾದದಲ್ಲೂ ಸೊಬಗನ್ನು ಚೆಲ್ಲುತ್ತಿರುವ, ಕುಣಿಯುತ್ತಿರುವ ಹಗಲಿನ ವರ್ಣನೆ ಶಕ್ತವಾಗಿ ಮೂಡಿ ಬಂದಿದೆ.

ಬಿಸಿಲೊ ಬೆಳೆಯಿತು ; ಬಾನೋ ತಿಳಿಯಿತು ;
ಸೆಳೆಸೆಳೆದಲೆಗಳು ಕುಣಿಯುವುವು ;
ಮುಸುಕಿದ ಮಂಜನು ಕಳೆಯುತ ಗಿರಿಗಳು
ಬೆಳಗುವ ಹಗಲನು ಹೊದೆಯುವುವು ;

.... ........................

ನುಣ್ಣಗೆ ಬೆಳಕನು ಕರಗಿಸಿ ಅರಿಲಾ
ಗೆರೆದವೊಲಲೆಗಳು ತೂರುವುವು
......................... ; ಸುತ್ತಲು
ಮೆರೆವುದು ಮಿಂಚುವ ಕಡಲೊಡಲು.

ಖಿನ್ನತೆಯ ಭಾವವನ್ನೂ ವ್ಯಕ್ತಪಡಿಸುವ ಭಾಗದ ಗತಿ ಮೊದಲ ಎರಡು ಚರಣಗಳಿಗಿಂತ ನಿಧಾನವಾಗಿದೆ. ಅದರಲ್ಲೂ

....ಸೊರಗಿದ ಮಗುವಂತತ್ತ
ತ್ತೊರಗುವೆ, ಜನ್ಮದ ಹೊರೆ ಜಾರಿ.

ಎಂಬಲ್ಲಿ "weep away the life of care" ಎಂಬುದರ ಭಾವ ಪರಿಪೂರ್ಣವಾಗಿ ಮೂಡಿಬಂದಿದೆ. " that cup has been dealt in another measure " ಎಂಬುದು "ಆ ಹೊಂಬಟ್ಟಲೊಳೆಲ್ಲಾ ವಿಷವೆ ತುಂಬಿಹುದೇ !" ಎಂದಾಗಿರುವಲ್ಲಿ ಮೂಲದ ನುಡಿಗಟ್ಟು ಕನ್ನಡಕ್ಕೆ ಸಹಜವಾದ ಬಗೆಯಲ್ಲಿ ಮೂಡಿಬಂದಿದೆ. ಖಿನ್ನತೆ ಇದ್ದರೂ ಅದರಿಂದ ತನ್ನ ವ್ಯಕ್ತಿತ್ವ ಧ್ವಂಸವಾಗದೆ, ಅದನ್ನು, ಸಾವಿನಲ್ಲೇ ಇರಲಿ, ನಿರ್ವಹಿಸಿಯೇನು ಎಂಬ ಭಾವ,

ಕವಿಯಲಿ ನಿದ್ದೆಯವೊಲು ಸಾವೆಲರಲಿ
ಕೊರೆಯಲಿ ಕೆನ್ನೆಯ ಬಿಸಿಯಾರಿ ;

ಕಿವಿಯಲ್ಲಿದೆ ಕಡೆ ಮೊರೆಯಲಿ ಕಡಲಾ ಒಂದೇ ಬೇಸರದುಲಿಯೂರಿ
—ಈ ಮಾತುಗಳಲ್ಲಿ ಯಥಾರ್ಥವಾಗಿ ವ್ಯಕ್ತವಾಗುತ್ತದೆ.

ಭಾವಗಳ ಈ ಯಶಸ್ವೀ ಸಂವಹನೆಯನ್ನು ಗಮನಿಸಿದಾಗ ಕವನದ ಅನುವಾದದಲ್ಲಿ ಕಂಡುಬರುವ ಈ ಮೊದಲೇ ಗುರುತಿಸಿದ, ಬದಲಾವಣೆಗಳು ಅಮುಖ್ಯ ಎನಿಸುತ್ತವೆ. ಈ ಬದಲಾವಣೆಗಳಿಂದ ಹೆಚ್ಚಿನ ಸಂದರ್ಭಗಳಲ್ಲಿ ಅನುವಾದದ ಒಟ್ಟು ನಿವೇದನೆ ಮೂಲಕ್ಕಿಂತ ಭಿನ್ನವಾದುದೂ ಇಲ್ಲ, ಕ್ಷೀಣವಾದುದೂ ಇಲ್ಲ. ಕಾವ್ಯವನ್ನು ಕಾವ್ಯವನ್ನಾಗಿಯೇ ಅನುವಾದ ಮಾಡುವಲ್ಲಿ ಎದುರಿಸಬೇಕಾದ ಸಮಸ್ಯೆಗಳ ದೃಷ್ಟಿಯಲ್ಲಿ ಇವುಗಳನ್ನು ಅವಗಣಿಸುವುದು ತಪ್ಪಾಗಲಾರದು. ಕವನಕ್ಕೆ ಪೌರಾಣಿಕ ಸ್ಪರ್ಶವನ್ನು ಕೊಟ್ಟ "The Sage" (ಇವನು ಸಾಕ್ರೆಟಿಸ್ ಎಂದು ಭಾವಿಸಲಾಗಿದೆ) ಅನುವಾದಗೊಳ್ಳದಿದ್ದುದರಿಂದ ವಿಷಯದ ದೃಷ್ಟಿಯಿಂದ ಕವನದಲ್ಲಿ ಲೋಪವಾಯಿತಾದರೂ ಭಾವದ ದೃಷ್ಟಿಯಿಂದ ಕವನಕ್ಕೆ ಬಾಧೆಯುಂಟಾಗಲಿಲ್ಲ. ಐದನೇ ಚರಣದ ಬಗೆಗೆ ಈ ಮಾತನ್ನು ಹೇಳಬಹುದೇನೋ : ಈ ಚರಣದಲ್ಲಿ ತನ್ನ ಸಾವನ್ನು ಕುರಿತು ಕೆಲವರು ಪರಿತಪಿಸಬಹುದು ಎಂದು ಕವಿ ಹೇಳುತ್ತಾನೆ; ಹಗಲಿನ ವರ್ಣನೆಯೂ ಇಲ್ಲಿ ಪುನರುಕ್ತವಾಗಿದೆ, ಹಾಗೂ ಬಲಗೊಂಡಿದೆ. ಈ ದಿನ ಪ್ರಿಯವಾದುದು ಎನ್ನುತ್ತಾನೆ ಕವಿ. ಮೊದಲ ಚರಣದಲ್ಲಿ ಹಗಲಿನ ಸ್ವರೂಪ ವರ್ಣಿಸಲ್ಪಟ್ಟಿದೆ, ಹೀಗೆ ವರ್ಣಿಸಲ್ಪಟ್ಟುದು ಪ್ರಿಯವಾಗಿದೆ ಎಂದು ಇಲ್ಲಿ ಹೇಳಿದೆಯಷ್ಟೆ. ಅದಲ್ಲದೆ ನಾಲ್ಕನೇ ಚರಣದಲ್ಲಿ ಕವನ ಭಾವಶಿಖರವನ್ನು ತಲಪಿ ಸಹಜವಾಗಿ ಕೊನೆಗೊಳ್ಳುವಂತಿದ್ದು, ಐದನೇ ಚರಣ ಹೆಚ್ಚುವರಿ ಸೇರ್ಪಡೆ, ಉದ್ದೇಶಪೂರ್ವಕವಾದಂತಿದ್ದು, ಹಿಂದಿನ ಚರಣದಷ್ಟು ಭಾವಾತ್ಮಕವೆಂದು ತೋರುವುದಿಲ್ಲ. ಈ ಕಾರಣಗಳಿಗೋಸ್ಕರ ಶ್ರೀಯವರು ಇದನ್ನು ಅನುವಾದಿಸದೆ ಬಿಟ್ಟಿರಬಹುದು. (*The Golden Treasury* ಕಾವ್ಯಸಂಗ್ರಹದಲ್ಲಿ ಈ ಚರಣವಿಲ್ಲ, ಆದರೆ ಇತರ ಹಲವು ಸಂಗ್ರಹಗಳಲ್ಲಿ ಇದೆ.)

ಕನ್ನಡ ನನಗೆ ಮುಂದು, ಉಳಿದುದು ಏನಿದ್ದರೂ ಅವರ ಹಿಂದು. ಕನ್ನಡದ ಕಾವಲು ನಾಯಿ ನಾನು ; ಅದಕ್ಕೆ ಕಾವು ತಟ್ಟುವುದಾದರೆ ನಾನು ಬಗುಳುವುದುಂಟು : ಕಚ್ಚುವ ನಾಯಲ್ಲ.

— 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೯೮.

ಲಕ್ಷ್ಮೀನಾರಾಯಣ ಅರೋರಾ

# 'ದುಃಖಸೇತು'

## (ಪ್ರಾಯೋಗಿಕ ಭಾಷಾಂತರ ವಿಶ್ಲೇಷಣೆ)

ಮೆಲ್ಲಗಿವಳನು ಮುಟ್ಟು,
ಮರುಗಿ ಹಿಡಿದೆತ್ತು,
ಏನು ಕೋಮಲಕಾಯ !
ಹೊಳಪು ಹೊಸಪ್ರಾಯ !

ಪದಗಳ ಬಳಕೆಯಲ್ಲಿ ಮಾರ್ದವತೆ, ಭಾವನೆಗಳ ಅಭಿವ್ಯಕ್ತಿಯಲ್ಲಿ ಕೋಮಲತೆ, ಕರುಣ- ಶೃಂಗಾರಗಳ ರಸಾರ್ದ್ರತೆ ಇವೆಲ್ಲವನ್ನೂ ಮೇಳವಿಸಿಕೊಂಡಿರುವ ಇಂಥ ಸಾಲುಗಳು ಇಡೀ ಪದ್ಯವನ್ನು ಓದುವಂತೆ ಯಾರನ್ನೇ ಆಗಲಿ ಪ್ರೇರಿಸುತ್ತವೆ. ಇಡೀ ಪದ್ಯವನ್ನು ಓದಿದ ಅನಂತರ ಉಂಟಾಗುವಂತಹ ರಸಾನುಭವ ಭಾಷೆಯ ಎಲ್ಲ ಕಟ್ಟುಗಳನ್ನು ಮೀರಿ ನಿಲ್ಲುತ್ತದೆ, ಪದ್ಯದಲ್ಲಿ ಒಣ್ಣಿಸಿರುವ ಅನಾಥೆಗಾಗಿ ಓದುಗನ ಹೃದಯ ತನ್ನಲ್ಲೇ ಮರುಗುತ್ತದೆ, ಸಹಾನುಭೂತಿ ಸೂಚಿಸುತ್ತದೆ, ಮೌನವಾಗಿ ಕ್ರಂದಿಸುತ್ತದೆ.

ಮೂಲ ಪದ್ಯ ತನ್ನ ಓದುಗನ ಹೃದಯಸರೋವರದಲ್ಲಿ ಯಾವ ಬಗೆಯ ವೀಚಿಗಳನ್ನೆಬ್ಬಿಸಿತೊ, ಯಾವ ರಸಾನುಭವದ ನೆಲೆಗೆ ಅವನನ್ನು ತಲುಪಿಸಿತೊ ಅದೇ ಬಗೆಯ ಅನುಭವಗಳನ್ನು ಭಾಷಾಂತರಗೊಂಡ ಪದ್ಯ ಸಹ ತನ್ನ ಭಾಷೆಯ ಸಹೃದಯರಲ್ಲಿ ಉಂಟುಮಾಡಿದರೆ ಮಾತ್ರ ಅನುವಾದಕ ಕೃತಕೃತ್ಯನಾಗುತ್ತಾನೆಂಬುದು ನಿರ್ವಿವಾದ. ಆದರೆ ಕಾವ್ಯದ ಭಾಷಾಂತರ ಸುಲಭಸಾಧ್ಯವಲ್ಲ. ಕೆಲವು ವಿಮರ್ಶಕರ ದೃಷ್ಟಿಯಲ್ಲಿ ಅದು ಅಸಾಧ್ಯ.[1] ಏಕೆಂದರೆ ಕಾವ್ಯದ ಹೊರಗಿಗಿಂತ ಅದರಲ್ಲಿರುವ ಒಳಗೇ

---

[1] ಈ ದಿಶೆಯಲ್ಲಿ ಹಲವು ಹೇಳಿಕೆಗಳನ್ನು ಗಮನಿಸಬಹುದು :

(i) Nothing which is harmonised by the bond of Muses can be changed from one language to another without destroying its sweetness.—Dante

(ii) The flowering moments of the mind drop half their petals in speech and three-fourths in translation.

(iii) All translation seems to me simply an attempt to solve an insoluble problem.—Humboldt

(iv) Poetry is what gets lost In translation.—Frost

(v) Poetry, sir, cannot be simply translated.—Johnson

ಜಾಸ್ತಿ. ಉತ್ತಮವಾದ ಕಾವ್ಯದಲ್ಲಿ ಬಾಹ್ಯಾಲಂಕರಣಗಳಿಗಿಂತ ರಸ ಧ್ವನಿ ಇವುಗಳದೇ ಮೇಲುಗೈ ಎಂಬುದನ್ನು ಕಾವ್ಯಮೀಮಾಂಸೆಯ ಅಧ್ಯಯನದಿಂದ ಬಲ್ಲೆವು. ಹೀಗಾಗಿ ಮೂಲಕವಿ ಏರಿದ ಎತ್ತರಕ್ಕೆ ಏರಿ ಇಳಿದ ಆಳಕ್ಕೆ ಜಿಗಿದು ಅವನ ಹೃದಯಸ್ಪಂದನಕ್ಕೆ ಅನುಗುಣವಾಗಿ ಮಿಡಿದು ಅವನ ಮತ್ತು ತನ್ನ ಓದುಗರ ನಡುವೆ ಸ್ನೇಹಸೇತುವನ್ನು ನಿರ್ಮಿಸುವುದು ನಿಜವಾಗಿಯೂ ಕಷ್ಟದ ಮಾತು. ಹಾಗಾಗಿ ಕವಿಯನ್ನು ಭಾಷಾಂತರಿಸುವವನು ಕವಿಯೆ ಆಗಿರುವುದೊಳಿತು. ಕವಿಯ ಹೆಜ್ಜೆಯನ್ನು ಕವಿಯೆ ಅರಿಯಬಲ್ಲ.

ಈ ನಿಟ್ಟಿನಲ್ಲಿ 'ಶ್ರೀ'ಯವರು ಮಾಡಿರುವ ಥಾಮಸ್‌ಹುಡ್ ಕವಿಯ 'Bridge of Sighs' ಪದ್ಯದ ಅನುವಾದ 'ದುಃಖಸೇತು'ವನ್ನು ಪರಾಮರ್ಶಿಸಬಹುದು.[2] ಈ ಕವನಕ್ಕೆ "ಇಂಗ್ಲಿಷ್ ಸಾಹಿತ್ಯದಲ್ಲಿ ಯಾವುದೇ ಸ್ಥಾನವಿರಲಿ, ಕನ್ನಡ ಕಾವ್ಯಪ್ರಪಂಚ ದಲ್ಲೀನೋ 'ದುಃಖಸೇತು' ಉತ್ತಮ ಪದವಿಯನ್ನು ಪಡೆದಿದೆ" ಎಂಬ ತೀ. ನಂ. ಶ್ರೀ. ಯವರ ಮಾತು ಸಹ ಅನುವಾದದ ಸುಗ್ರಾಹ್ಯತೆಗೆ ಒಂದು ಅಳತೆಗೋಲೆನಿಸಬಹುದು.[3]

'ಶ್ರೀ'ಯವರು ಕನ್ನಡ ಸಾಹಿತ್ಯಭಾರತಿಯ ನವಯುಗದ ಪ್ರವರ್ತಕರು. ಹೊಸ ಹಾದಿಯೊಂದರಲ್ಲಿ ಹೆಜ್ಜೆ ಹಾಕಿದವರು. ಅನೇಕ ಹೊಸ ಕವಿಗಳಿಗೆ ಚೇತನ ತುಂಬಿ ದವರು. 'ಇವಳ ಸೊಬಗನ್ನು ಅವಳಿಗೆ ತೊಡಿಸಿ ನೋಡಬಯಸಿದವರು, ಅವಳ ತೊಡುಗೆಯನ್ನು ಇವಳಿಗಿಟ್ಟು ಹಾಡಬಯಸಿದವರು.[4] ಆ ಕಾಲಕ್ಕೆ 'ಇಂಗ್ಲಿಷ್ ಗೀತಗಳು' ಪುಸ್ತಕದಲ್ಲಿನ ಪ್ರಯೋಗ ಹೊಸದು, ರೋಮಾಂಚಕವಾದುದಾಗಿತ್ತು. ಭಾಷೆ, ರೀತಿ, ಛಂದಸ್ಸು ಎಲ್ಲವೂ ಹೊಚ್ಚ ಹೊಸದಾಗಿ ಗರಿಗೆದರುತ್ತಿದ್ದವು. ಹರಿಹರ ಕುಮಾರವ್ಯಾಸಾದಿಗಳು ಹಳಗನ್ನಡವನ್ನು ನಡುಗನ್ನಡಕ್ಕೆ ಪರಿವರ್ತಿಸಿದಂತೆ ನಡುಗನ್ನಡ ವನ್ನು ಹೊಸಗನ್ನಡವಾಗಿ ಪಳಗಿಸಲು ಹಾತೊರೆಸಿ ಲೇಖನಿ ಹಿಡಿದವರ ಮುಂಚೂಣಿಯಲ್ಲಿ 'ಶ್ರೀ'ಯವರೂ ಇದ್ದರು. 'The harvest truly is plentuous; but the labourers are few.' (ಬೆಳೆಯೇನೊ ಜೇಕಾದಹಾಗಿದೆ ; ಕುಯ್ಯುವರು ಕಡಮೆ.)

---

[2] ಈ ಪ್ರಬಂಧಕ್ಕಾಗಿ *Poems of Thomas Hood*—Ed. Alfred Ainger, vol. I (Serious Poems) Macmillan, 1897, p. 331-334 ಹಾಗೂ'ಇಂಗ್ಲಿಷ್ ಗೀತಗಳು'—ಶ್ರೀ, ವಿಶ್ವಸಾಹಿತ್ಯ ಮೈಸೂರು, ಎರಡನೆಯ ಪರಿಷ್ಕರಣ, ಪು. 61–65 ಇವನ್ನು ಆಧರಿಸಿದೆ.

[3] 'ಇಂಗ್ಲಿಷ್ ಗೀತೆಗಳು' ಪೂರ್ವೋಕ್ತ ಪರಿಷ್ಕರಣ ಪು. 41.

[4] 'ಇಂಗ್ಲಿಷ್ ಗೀತಗಳು' 'ಕಾಣಿಕೆ' ಪು. 1

—ಇಂಗ್ಲಿಷ್ ಸಾಹಿತ್ಯ ಶ್ರೀಮಂತಿಕೆಯನ್ನು ಕಂಡಾಗ 'ಶ್ರೀ'ಯವರಿಗೆ ಬಹುಶಃ ಅನಿಸಿದ್ದು ಹೀಗೆ.[5] 'ದುಃಖಸೇತು'ವನ್ನೂ ಒಳಗೊಂಡಂತೆ ಈ ಸಂಗ್ರಹದ ಯಾವುದೇ ಪದ್ಯವನ್ನು ಪರಾಮರ್ಶಿಸುವ ಮೊದಲು ಅನುವಾದಕರ ಈ ಮಾತುಗಳನ್ನು ಗಮನಿಸಬೇಕು—"ಇಲ್ಲಿ ಕೊಟ್ಟಿರುವ ಕವನಗಳೆಲ್ಲಾ ಇಂಗ್ಲಿಷ್ ಕಾವ್ಯಮಾಲೆಯ ನಾಯಕ ರತ್ನಗಳೆಂದು ಆದುಕೊಂಡುವಲ್ಲ. ಉತ್ತಮವಾದ ಕವಿಗಳು ಇಲ್ಲಿ ಎಲ್ಲರೂ ಅಲ್ಲ. ಆಗಾಗ್ಗೆ ಓದುತ್ತಿರುವಾಗ ನನ್ನ ಮನಸ್ಸಿಗೊಪ್ಪಿ, ನನ್ನ ಕೈವಿಾರದುವಾಗಿ ಕಂಡುಬಂದ ಗೀತಗಳಿವು."[6]

'ಇಂಗ್ಲಿಷ್ ಗೀತಗಳು' ಸಂಗ್ರಹದ ಮುನ್ನುಡಿಯಲ್ಲಿ ತೀ. ನಂ. ಶ್ರೀ.ಯವರು ಅನುವಾದಕರಿಗೆ ಸಿದ್ಧಿ ದೊರೆತಿರುವ ಪದ್ಯಗಳ ಪಟ್ಟಿಯಲ್ಲಿ 'ದುಃಖಸೇತು'ವನ್ನು ಸೇರಿಸಿರುವುದೇ ಅಲ್ಲದೆ ನಿದರ್ಶನರೂಪವಾಗಿ ಈ ಪದ್ಯದ ಅನುವಾದದ ಬಗೆಗೆ ಎರಡು ಮಾತುಗಳನ್ನು ಆಡಿರುವುದು ಗಮನಾರ್ಹ.[7] ಹಾಗಾಗಿ ಈ ಪದ್ಯದ ಅನುವಾದದಲ್ಲಿ ಎದುರಾಗುವ ಭಾಷಾಂತರದ ಸಮಸ್ಯೆ ಸೊಗಸುಗಳನ್ನೂ ಯಶಸ್ಸನ್ನೂ ಗುರುತಿಸುವ ಕೆಲಸ ಸಮಂಜಸವಾದುದು.

ಥಾಮಸ್‌ಹುಡ್ (೧೭೯೯-೧೮೪೫) ಕವಿ ಬದುಕಿದ್ದು ಕೇವಲ ನಲವತ್ತಾರು ವರ್ಷಗಳ ಕಾಲ ಮಾತ್ರ. ಅದರಲ್ಲೂ 'Bridge of Sighs' ಪ್ರಕಟವಾದದ್ದು Punch ಪತ್ರಿಕೆಯ ೧೮೪೩ರ ಮೇ ಸಂಚಿಕೆಯಲ್ಲಿ. ಅಂದರೆ ಕವಿ ತನ್ನ ಕಾವ್ಯ ಜೀವನದ ಹಾದಿಯಲ್ಲಿ ಪಕ್ವತೆಯನ್ನು ಗಳಿಸಿಕೊಂಡಿದ್ದ ಕಾಲ ಅದು. ಹಾಗಾಗಿ ಬದುಕಿನ ಬಗೆಗೆ ಕವಿಯ ದೃಷ್ಟಿ ಉದಾತ್ತಗೊಂಡಿತ್ತು. ಆದಿಕವಿ ವಾಲ್ಮೀಕಿ ಕ್ರೌಂಚ ಮಿಥುನದಲ್ಲಿ ಸಾವಿಗೀಡಾದ ಪಕ್ಷಿಯನ್ನು ನೋಡಿ ಮರುಗಿದಂತೆಯೆ ಅನಾಥೆಯೋರ್ವಳ ಸಾವಿನ ನೋಟ ಕವಿಹೃದಯವನ್ನು ಮಿಡಿದಿದ್ದಿರಬೇಕು. ಈ ನಿಟ್ಟಿನಲ್ಲಿ ಆಲ್ಫ್ರೆಡ್ ಐಂಗರ್ ಹುಡ್ ಕವಿಯ ಬಗೆಗೆ ಆಡಿರುವ ಮಾತುಗಳು ಸಹ ಗಮನಾರ್ಹ[8]. ಇಂಥ

---

5 ಅದೇ. ಒಳಶೀರ್ಷಿಕೆಯ ಪುಟ

6 ಅದೇ. ಅನುವಾದಕರ 'ಅರಿಕೆ' ಪು. 10

7 ಅದೇ. ಪ್ರಸ್ತಾವನೆ, ಪು. 40-41.

8 "In the 'Lady's Dream', the 'Bridge of Sighs', the 'Lay of the Labourer', Hood showed how he was realising more and more keenly what man has done to man. His sympathies were widening as well as deepening, and even on his death bed he was cherishing new ideas and hopes as to a more perfect charity than he had yet conceived." *Poems of Thomas Hood* vol. I (Serious Poems, Memoirs) p. ixxx.

ಪದ್ಯಗಳಿಂದಾಗಿಯೆ ಹುಡ್ ತನ್ನ ನಾಡಿನ ಜನತೆಯ ಹೃದಯಗಳಲ್ಲಿ ಯಾವಾಗಲೂ ಹಸುರಾಗಿರುತ್ತಾನೆಂಬ ಇದೇ ಮುನ್ನುಡಿಕಾರನ ಮಾತುಗಳನ್ನು ಸಹ ನೋಡಬಹುದು.[9]

ಈಗ 'ದುಃಖಸೇತು'ವನ್ನು ಭಾಷಾಂತರದ ದೃಷ್ಟಿಯಿಂದ ಪ್ರಾಯೋಗಿಕವಾಗಿ ಪರಿಶೀಲಿಸೋಣ. ಇದರಲ್ಲಿ ಎದುರಾಗುವ ಅನುವಾದದ ಸಮಸ್ಯೆಗಳೇನು, ಲೇಖಕರು ಅವುಗಳನ್ನು ಹೇಗೆ ಎದುರಿಸಿದ್ದಾರೆ, ಅನುವಾದದ ವಿವಿಧ ಪ್ರಕಾರಗಳು ಇಲ್ಲಿ ಹೇಗೆ ರೂಪು ತಳೆದಿವೆ, ಲೇಖಕರು ಎಷ್ಟರಮಟ್ಟಿಗೆ ಅನುವಾದದಲ್ಲಿ ಯಶಸ್ವಿಗಳು—ಈ ಅಂಶಗಳನ್ನು ಕ್ರಮವಾಗಿ ಗಮನಿಸೋಣ.

ಅನುವಾದದಲ್ಲಿ ಮೊದಲು ಎದುರಾಗುವುದು ಮೂಲಕವಿಯ ಧಾಟಿ ಧೋರಣೆಗಳಿಗೆ ಅನುವಾದಕರು ಯಾವ ರೀತಿಯಲ್ಲಿ ಪ್ರತಿಸ್ಪಂದಿಸಿದ್ದಾರೆ ಎಂಬುದು. ಹುಡ್ ಕವಿಯ 'ಅನಾಥೆ'ಯ ಬಗೆಗೆ ಅನುವಾದಕರಲ್ಲಿ ಸಂಪೂರ್ಣ ಸಹಾನುಭೂತಿ ಕಂಡು ಬರುತ್ತದೆ. ಅನುವಾದಕರ ಹೃದಯವೂ ಮೂಲಕವಿಯ ಹೃದಯದಂತೆ ಮರುಗಿದೆ, ಅವಳಿಗೆ ಉಂಟಾಗಿರುವ ಅನ್ಯಾಯಕ್ಕಾಗಿ ಕಂಬನಿ ಮಿಡಿದಿದೆ. ಮೂಲ ಮತ್ತು ಅನುವಾದದ 'ಅನಾಥೆ'ಯರಿಬ್ಬರಲ್ಲೂ ಭಾವಸಾಮ್ಯವಿದೆ. ಇಬ್ಬರೂ ಸಮಾನಸ್ಕಂಧರು, ಸಮಾಂತರ ಜೀವಿಗಳು. 'ಶ್ರೀ'ಯವರ ಅನಾಥೆ ಹುಡ್‌ಕವಿಯ ಅನಾಥೆಯ ಪುನಸ್ಸೃಷ್ಟಿ, ಒಂದು ಬಗೆಯಲ್ಲಿ ಅದೇ ಭಾವಬೀಜದಿಂದ ಕನ್ನಡಿಗಳಾಗಿ ಮೈದಳೆದ ಮತ್ತೊಂದು ಹೆಣ್ಣು. ಹಾಗಾಗಿ ನಮ್ಮ ಸಂಸ್ಕೃತಿಯ ನೆರಳಿನಲ್ಲಿ ಬೆಳೆದವಳು ಅವಳು. ಪಾಪ, ಕರ್ಮ, ಹೆಣ್ಣುಹುಟ್ಟು ಎಲ್ಲವೂ ಅವಳ ಪಾಲಿಗೆ ಉಂಟೇಉಂಟು. ಎಷ್ಟೋ ವೇಳೆ 'ಶ್ರೀ'ಯವರ ರಚನೆಯನ್ನು ಅನುವಾದದ 'ಆರೋಪ'ದಿಂದ ಮುಕ್ತವಾಗಿಸಿ ಓದಿದರೆ, ಸೊಗಸಾದ ಕಾವ್ಯರಸದೌತಣಕ್ಕೆ ಮಣೆಹಾಕಿದಂತಾಗುತ್ತದೆ. ಅನುಭವ ಸಹೃದಯರನ್ನು ನೇರವಾಗಿ ತಲುಪುತ್ತದೆ. ಅದೇ ಕಾವ್ಯ ಭಾಷಾಂತರದ ಯಶಸ್ಸಿನ ಗುಟ್ಟು!

## ಭಾಷಾಂತರ ಧೋರಣೆ

'ದುಃಖಸೇತು'ವಿನ ಮೊದಲ ಕೆಲವು ಸಾಲುಗಳನ್ನು ಗಮನಿಸಿದರೆ ಅನುವಾದಕರ ಧೋರಣೆ ಏನೆಂಬುದು ಸ್ಪಷ್ಟವಾಗುತ್ತದೆ. 'ಶ್ರೀ'ಯವರು ಬಹುಮಟ್ಟಿಗೆ ಪದಶಃ

---

[9] ಅದೇ ನೋಡಿ. ಪು. xxxvii "It was not until he was within the deepening shadows of the end that his true instinct of compassion once more found vent in the stanzas of 'The Song of the Shirt' and 'The Bridge of Sighs'....and it is by such as these that Hood lives and will live in the heart of his countrymen."

ಅನುವಾದವಲ್ಲ. ಕಾವ್ಯದ ಆಯಾಮಗಳನ್ನು ಗಮನಿಸಿದರೆ ಶಬ್ದಾನುವಾದ (metaphrase) ಅಷ್ಟು ಅಪೇಕ್ಷಣೀಯವೂ ಅಲ್ಲ.[10] ಅನುವಾದಕರು ಮೂಲದ ತಿರುಳನ್ನು ಆತ್ಮವನ್ನು ಆವಾಹಿಸಿಕೊಂಡು ನಾಡನುಡಿಯಲ್ಲಿ ಅಭಿವ್ಯಕ್ತಿಸುವ ಪ್ರಯತ್ನ ಮಾಡಿದ್ದಾರೆ.

| ಇಂಗ್ಲಿಷ್ ಮೂಲ | ಕನ್ನಡ ಅನುವಾದ |
|---|---|
| One more unfortunate | ಅನಾಥೆ ಇವಳಿನ್ನೊಬ್ಬ |
| Weary of breath | ಳೇ ಜನ್ಮರೋಸಿ |
| Rashly importunate | ವೇಧೆಯನು ತಾಳದೆಯೆ |
| Gone to her death | ಮುಳುಗಿದಳು ಹೊಳೆಗೆ |

ಎಂದಾಗಿದೆ. ಮೂಲದ unfortunate—importunate, breath—death ಇಂಥ ಅಂತ್ಯಪ್ರಾಸಗಳನ್ನು ಅನುವಾದಕರು ಕೈಬಿಟ್ಟಿದ್ದಾರೆ. ಅಂತ್ಯಪ್ರಾಸವಾಗಲಿ, ಆದಿಪ್ರಾಸವಾಗಲಿ ನಮಗೆ ಅಪರೂಪವೇನಲ್ಲ. ಮನಸ್ಸು ಮಾಡಿದರೆ. ಈ ಪ್ರಾಸಬಂಧನದಲ್ಲಿ ಕಾವ್ಯ ಕನ್ನಿಕೆಯನ್ನು ಸಿಕ್ಕಿಸುವುದು ನಮ್ಮ ಕವಿಗಳಿಗೆ ಕಷ್ಟವೇನೂ ಆಗಿರಲಿಲ್ಲ! ಆದರೆ 'ಶ್ರೀ'ಯವರು ಅಂದಿನ ಯುಗಧರ್ಮಕ್ಕೆ ಮಣಿದರು.[11] ಪ್ರಾಸವನ್ನು ಅನಿವಾರ್ಯವಾಗಿಸಲಿಲ್ಲ. ಇಂಗ್ಲಿಷಿನಲ್ಲಿ ಇಂಥ ಪ್ರಾಸಗಳ ಬಲವಂತ ಮಾಘಸ್ನಾನ ಉದ್ದಕ್ಕೂ ಕಂಡುಬರುತ್ತದೆ. ಉದಾಹರಣೆಗೆ scornfully—mournfully, boldly—coldy, tenderly—

[10] "Literal or word for word translation is a *primitive type* : It is only fit for prosaic matters." Theodore Savory.

[11] ಆ ಹೊತ್ತಿಗಾಗಲೆ ಕನ್ನಡದಲ್ಲಿ ನವಜಾಗೃತಿಯ ಕಾಲ ಮೂಡುತ್ತಿತ್ತು. ಎಸ್. ಜಿ. ನರಸಿಂಹಾಚಾರ್ಯ, ಪಂಜೆ ಮಂಗೇಶರಾಯರು, ರಾಷ್ಟ್ರಕವಿ ಗೋವಿಂದಪೈರವರು, ಹಟ್ಟಿಯಂಗಡಿ ನಾರಾಯಣರಾಯರು ಮುಂತಾದವರು ಇಂಗ್ಲಿಷ್ ಸಾಹಿತ್ಯದ ಕಡೆ ಆಕರ್ಷಿತರಾಗಿ ಹಲವಾರು ಇಂಗ್ಲಿಷ್ ಕವನಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ನಡೆಸಿದ್ದರು. ಎಸ್.ಜಿ.ಎನ್. ಮತ್ತು ಪಂಜೆಯವರು ನಡುಗನ್ನಡದಲ್ಲಿ ಬಳಕೆಯಲ್ಲಿದ್ದ ಚೌಪದಿ, ಷಟ್ಪದಿ, ಸಾಂಗತ್ಯಗಳನ್ನೇ ಹೊಸ ರೀತಿಯಲ್ಲಿ ಬಳಸಿಕೊಂಡರು. ಆದಿಪ್ರಾಸವನ್ನು ಬಿಡುವುದಕ್ಕೆ ಅವರ ಮನಸ್ಸು ಒಪ್ಪಲಿಲ್ಲ. 1911ರವೇಳೆಗೆ ಗೋವಿಂದಪೈರವರು ಧೈರ್ಯಮಾಡಿ ಪ್ರಾಸವನ್ನು ತೊರೆಯಲು ನಿಶ್ಚಯಿಸಿದರು. ನಾರಾಯಣರಾಯರ ಕಿವಿಗಳಿಗೆ ಪ್ರಾಸಮುಂಡನ ಒಗ್ಗಲಿಲ್ಲವಾದ್ದರಿಂದ ಅವರು ಪ್ರಾಸವನ್ನು ತೊರೆಯದೆ ಹೋದರೂ ರಚನೆಯಲ್ಲಿ ಹೊಸತನವನ್ನು ಕೆಲಮಟ್ಟಿಗೆ ತಂದುಕೊಟ್ಟರು.

slenderly, impurity—futurity ಇತ್ಯಾದಿ. ಅದು ಮೂಲಕವಿಯ ಕಾಲದ ಶೈಲಿಯಾಗಿದ್ದಿರಬಹುದು. ಆದರೆ ಇಂಥ ದೀರ್ಘಪ್ರಾಸಗಳು (feminine rhymes) ಪದ್ಯದ ಉದ್ದಕ್ಕೂ ಬಂದಿರುವುದು ಕರುಣರಸಕ್ಕೆ ಕೆಲವು ಮಟ್ಟಿಗೆ ಬಾಧಕವೆಂದೇ ತೀ.ನಂ.ಶ್ರೀ. ಅಭಿಪ್ರಾಯಪಡುತ್ತಾರೆ.[12] ಆದರೆ 'ಶ್ರೀ'ಯವರು ಬೇಕೆಂತಲೆ ಪ್ರಾಸವನ್ನು ತೊರೆದರು. ಆದರೆ ಪ್ರಾಸದ ಭೂತ ಸಿಂದಬಾದನ ಹೆಗಲೇರಿದ ಮುದುಕನಂತೆ ಅನುವಾದಕರ ಬೆನ್ನೇರಿ ಅನಾಯಾಸವಾಗಿ ಅಲ್ಲಲ್ಲಿ ಸುಳಿದು ಕಾವ್ಯವನ್ನು ರಸನಿರ್ಭರವಾಗಿರಿಸಿರುವುದು ಮೆಚ್ಚತಕ್ಕ ಅಂಶ. ಉದಾಹರಣೆಗೆ,

ಇನ್ನು ಅಕ್ಕರೆಯಾತ
ಇನ್ನು ಹತ್ತಿರದಾತ....
..........................
ಸಿರಿಹಿಡಿದು, ನಡುವೇರಿ,
ತೊದಲುಮಾತನು ಬೀರಿ
..........................
ಏನು ಕೋಮಲಾಂಗಿಯು
ಹೊಳಪು ಹೊಸಪ್ರಾಯ

ಮುಂತಾದೆಡೆಗಳಲ್ಲಿರುವ ಅಂತ್ಯ ಪ್ರಾಸವನ್ನೂ

ಮೆಲ್ಲಗಿವಳನು ಮುಟ್ಟು
ಮರುಗಿ ಹಿಡಿದೆತ್ತು

ಎಂಬ ರೀತಿಯ ವಡಿಯನ್ನೂ

ಊರ ಮನೆಬೆಳಕುಗಳು
ದೂರ ಸರಿಯುತ್ತ
ಕತ್ತಲೆಯ ಹೊಳೆ ಹರಿದು
ಹತ್ತಿರಕೆ ಬರುತ,

ಎಂಬಲ್ಲಿನ ಆದಿಪ್ರಾಸವನ್ನೂ ಗಮನಿಸಬಹುದು.

'ಶ್ರೀ'ಯವರ ಮಾತುಗಳನ್ನೇ ಅವರ ಭಾಷಾಂತರ ಧೋರಣೆಯ ಹಿನ್ನೆಲೆಯಲ್ಲಿ ಗಮನಿಸಬಹುದು : " .ನನ್ನ ಬುದ್ಧಿಬಲವಿರುವ ಮಟ್ಟಿಗೂ ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನೇ ಮುಂದಿಟ್ಟುಕೊಂಡು ಕೆಲಸ ಮಾಡಿದ್ದೇನೆ. ಕೆಲವು ಕಡೆ ಹೆಸರು, ಭಾವ ಮುಂತಾದುವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿ

12 'ಇಂಗ್ಲಿಷ್ ಗೀತಗಳು', ಪ್ರಸ್ತಾವನೆ, ಪು. 40

ದ್ದರೂ, ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ—ಇವೆಲ್ಲವೂ ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ. ಕನ್ನಡದ ಜಾಯಮಾನವನ್ನು ಮೀರದೆ ಎಷ್ಟುಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟು ಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ." ಇದೊಂದು ಸಮನ್ವಯ ಮಾರ್ಗವೇ ಸರಿ.[13].

## ಸಮಾನಪದಗಳು

ಸಮಾನಪದಗಳ ಆಯ್ಕೆ ಭಾಷಾಂತರದಲ್ಲಿ ಬಹು ಮುಖ್ಯವಾದುದು—ಪದಗಳ ಧ್ವನಿವಹೌಲ್ಯ ಮತ್ತು ಒಡಲು ಕವಿಯ ರಸಜ್ಞತೆಗೆ ಮತ್ತು ಭಾವಪ್ರವಹನಕ್ಕೆ ಪೋಷಕವಾಗುತ್ತವೆ. ಭಾಷಾಂತರಕಾರ ಮೂಲಪದಗಳ ಅರ್ಥಕೋಶದಲ್ಲಿ ಮಾತ್ರವೆ ಅಲ್ಲದೆ ಭಾವಕೋಶದಲ್ಲೂ ಇಳಿಯಬೇಕು. ನಿಮಜ್ಜನ ಚಾತುರ್ಯ ಮತ್ತು ಲಘಿಮಾ ಕೌಶಲದಲ್ಲಿ ಸಿದ್ಧಹಸ್ತನಿರಬೇಕು. ಅನಂತರ ತತ್ಸಮಾನವಾದ ಪ್ರವಾಹವನ್ನು ತನ್ನ ಭಾಷೆಯಲ್ಲಿ ಸೂಕ್ತ ಸಮಾನ ಪದಗಳ ಮೂಲಕ ಹರಿಯಬಿಡಬೇಕು.

'Bridge of Sighs' ಶೀರ್ಷಿಕೆ 'ದುಃಖಸೇತು'ವಾಗಿದೆ. ಸಮುಷ್ಟಿಪದಗಳು ನಮ್ಮ ಭಾರತೀಯ ಭಾಷೆಗಳ ಸೊಗಸು. 'Not of the stains of her' ಎಂಬುದನ್ನು ಅನುವಾದದಲ್ಲಿ 'ತಾನು ಮಾಡಿದ ಕರ್ಮ, ತನ್ನ ಬೆಂದಲಿಜೆಂದು ಸುಟ್ಟವಳು ಇವಳು' ಎಂಬುದಾಗಿದ್ದು ಭಾರತೀಯ ದರ್ಶನದ ಕರ್ಮಸಿದ್ಧಾಂತದ ಪರಿಧಿಗೆ 'ಅನಾಥೆ'ಯನ್ನು ಅನುವಾದಕರು ಒಳಪಡಿಸಿದ್ದಾರೆ.

ಹೀಗೆಯೆ, breath—ಜನ್ಮ, dishonour—ಹೊಲ್ಲನಡೆ, mutiny—ಪಾಪಗಳು, death—ಜವರಾಯ, Eve's family—ಹೆಣ್ಣುಹುಟ್ಟು, God—ದೀನರಕ್ಷಕ ಎಂಬುದಾಗಿ ನಮ್ಮ ಭಾಷಾ ಸಂಸ್ಕೃತಿಗಳೊಡನೆ ಸಾಮರಸ್ಯವನ್ನು ಬೆಸೆದುಕೊಂಡಿವೆ. dear one ಮತ್ತು near one ಗಳಿಗೆ ಅಕ್ಕರೆಯಾತ ಮತ್ತು ಹತ್ತಿರದಾತ ಪದಗಳು ಎಷ್ಟು ಮನಮುಟ್ಟುವಂತಿವೆ.'bleak wind of March' ನಮ್ಮ ಮಾರ್ಚಿ ತಿಂಗಳ ಗಾಳಿಯಾಗಿ ಯಾಂತ್ರಿಕವಾಗಿ ಭಾಷಾಂತರವಾಗದೆ ಸುಮ್ಮನೆ 'ಚಳಿಗಾಳಿ' ಯಾಗಿರುವುದು ಗಮನಾರ್ಹ. 'ಶ್ರೀ'ಯವರು ಆಯ್ದ ಪದಗಳು ಆತ್ಮೀಯತೆಯನ್ನು ತುಂಬಿಕೊಂಡಿವೆ, ನೇರವಾಗಿ ಮನಸ್ಸನ್ನು ಮುಟ್ಟುತ್ತವೆ.

---

13 ಅದೇ. ಅರಿಕೆ, ಪು: 9–10

**ಕಾವ್ಯತ್ವ**

'ಶ್ರೀ'ಯವರದು ಕವಿಹೃದಯ. ಕವಿಯನ್ನು ಕವಿಯೇ ಅನುವಾದಿಸುವುದು ಒಳಿತು. ಕವಿಯ ಮನೋಧರ್ಮವನ್ನು ಮತ್ತೊಬ್ಬ ಕವಿ ಬಲ್ಲ. ಮೂಲಕವಿ ಏರುವ ಎತ್ತರಕ್ಕೆ ಇಳಿಯುವ ಆಳಕ್ಕೆ ಸಮರ್ಥನಾದ ಅನುವಾದಕ ಕವಿ ಏರಬಲ್ಲ, ಜಿಗಿಯಬಲ್ಲ ಪರಕಾಯ ಪ್ರವೇಶ (metem psychosis) ಅಂಥ ಅನುವಾದಕ ಕವಿಗಳಿಂದ ಮಾತ್ರ ಸಾಧ್ಯ. ಮೂಲದ ಭಾವತೀವ್ರತೆಯನ್ನು ಅನುಭವಿಸಿದಷ್ಟೆ ಮಟ್ಟದಲ್ಲಿ ಉದ್ದಿಷ್ಟ ಭಾಷೆಯಲ್ಲಿ ಹರಿಯಬಿಡಬೇಕಾದರೆ ಅನುವಾದಕ ಕವಿಯ ಭಾವ ಭಾಷೆಗಳ ವಿದ್ಯುದಾಲಿಂಗನ ಆಗಬೇಕು.

| | |
|---|---|
| Take her up tenderly | ಮೆಲ್ಲಗಿವಳನು ಮುಟ್ಟು, |
| Lift her with care | ಮರುಗಿ ಹಿಡಿದೆತ್ತು, |
| Fashioned so slenderly | ಏನು ಕೋಮಲಕಾಯ ! |
| Young, and so fair | ಹೊಳಪು ಹೊಸಪ್ರಾಯ ! |

ಎಂದಾಗಿದೆ. ಇದು ಎಷ್ಟು ಹೃದ್ಯವಾಗಿದೆ! ಕರುಣ–ಶೃಂಗಾರಗಳ ಎಂಥ ಸಮ್ಮಿಲನ ! ಹಾಗೆಯೆ ಭಾವತೀವ್ರತೆಗೆ ಒಂದೆರಡು ಉದಾಹರಣೆಗಳನ್ನೂ ಕೊಡಬಹುದು.

| | |
|---|---|
| In she plunged boldly | ಹಾರಿದಳು, ಮುಳುಗಿದಳು |
| No matter how coldly | ತೇಲಿದಳು, ಕೊಚ್ಚಿದಳು |
| Picture it—think of it | ಎಲವೊ ಕಾಮುಕ, ಕಟುಕ |
| Dissolute Man ! | ಇಲ್ಲಿ ಬಾ, ನೋಡು ಬಾ, |
| Lave in it—drink of it, | ಎಲ್ಲಿ ಬೆಚ್ಚಗೆ ಮಲಗಿ |
| Then if you can ! | ಸಲ್ಲಾಪ ಮಾಡುತಿಹೆ, |
| | ಈಗ ಬಾ ನೋಡು ಬಾ, |
| | ಇವಳೊಡನೆ ಮುಳುಗು ಬಾ, |
| | ಮುಳುಗು ಬಾ, ಪಾಪಿ ! |

ಭಾವತೀವ್ರತೆಯ ಹರಿವಿನಲ್ಲಿ ಅನುವಾದಕರೆ ತೇಲಿಹೋಗಿದ್ದಾರೇನೋ ಅನಿಸುತ್ತದೆ. ಮೂಲಕ್ಕೆ ಅನುವಾದ ಇಂತೆಡೆಗಳಲ್ಲಿ ದೂರವಾಗುತ್ತದೆಯೋನೊ ಎಂದು ಅನಿಸದಿರದು. ಆದರೆ ಇವು ಉತ್ತಮವಾದ ಸಾಲುಗಳೆಂಬುದರಲ್ಲಿ ಸಂದೇಹವಿಲ್ಲ. ಇಂಗ್ಲಿಷನ್ನು ವ್ಯಾವಹಾರಿಕವಾಗಿ ಬಲ್ಲ ಕನ್ನಡ ಮಾತೃಭಾಷೆಯವರ ಪಾಲಿಗೆ ಮೇಲಿನ ಮೂಲ ಸ್ವಲ್ಪ

ಸಪ್ಪೆಯಾಗಿ ಅನುವಾದ ಆಪ್ಯಾಯಮಾನವಾಗಿ ಕಂಡುಬಂದರೆ ಆಶ್ಚರ್ಯವೇನಿಲ್ಲ. ಅನುವಾದ ಮೂಲವನ್ನು ಮೆಟ್ಟಿನಿಲ್ಲುವುದು ಉಚಿತವೆ ಎಂಬುದು ಪ್ರಶ್ನೆ ! [14]

ಪದ್ಯದಲ್ಲಿ ಬರುವ 'ಹೊಳಪು ಹೊಸ ಪ್ರಾಯ', 'ಕಟ್ಟುಕೊಡಿಸು ಕುರುಳ', 'ಹಲ್ಲು ಮುಡಿಯನು ಕಚ್ಚಿ ಕಲ್ಲುಮನಸಾದಾಗ,' 'ಜರೆಯುವರ, ಹಳಿಯುವರ, ತೊರೆಯುವರ' ಮುಂತಾದೆಡೆಗಳಲ್ಲಿ ಬರುವ ಸಹಜ ಪ್ರಾಸಗಳನ್ನು ಗಮನಿಸಬಹುದು.

ಹಾಗೆಯೆ,

| | |
|---|---|
| Mad from life's history | ಹುಚ್ಚು ಹಿಡಿಸಿದ ಬಾಳು |
| Glad to death's mystery | ಬಾಳ ತೆಗೆದೊಗೆದು |
| | ಏನಿದೆಯೊ ಅರಿಯದಿಹ |
| | ಸಾವಕೆಳೆ ಬಗೆದು |

ಈ ರೀತಿಯ ಪದಬಂಧಗಳು ತುಂಬ ಮಧುರವಾಗಿ ಮನಸ್ಸನ್ನು ಆಕರ್ಷಿಸುತ್ತವೆ. ಇಂಥ ಪುನಸ್ಸೃಷ್ಟಿ ಕವಿಯಿಂದಲೇ ಸಾಧ್ಯ !

**ಸರಿತ**

ಭಾಷಾಂತರ ಎಲ್ಲ ರೀತಿಯಲ್ಲೂ ಮೂಲಾನುವರ್ತಿಯಾಗಿರಬೇಕೆಂಬುದು ಒಂದು ತತ್ವ. ಆದರೆ ಪ್ರತಿಭಾಶಾಲಿಗಳಾದ ಭಾಷಾಂತರಕಾರರು ಅನೇಕ ಕಡೆಗಳಲ್ಲಿ ಮೂಲದಿಂದ ಸ್ವಲ್ಪ ಅತ್ತಿತ್ತ ಸರಿದು ತಮ್ಮ ಸ್ವಂತ ಪ್ರತಿಭಾ ಸರಸ್ಸಿನಲ್ಲಿ ಓದುಗರನ್ನು ಈಜಾಡಿಸುತ್ತಾರೆ. ಮೂಲದ ಎಳೆಯನ್ನೇ ಹಿಡಿದು ಹೋಗುತ್ತಿರುವ ಓದುಗನಿಗೆ ಇದರಿಂದ ಭಂಗ ಉಂಟಾಗಬಹುದಾದರೂ ಉತ್ತಮವಾದ ಸ್ವೋಪಜ್ಞವಾದ ಸರಿತಗಳು ಓದುಗನನ್ನು ಭಾವಾಭಿವ್ಯಕ್ತಿಯ ಪರಿಧಿಯಲ್ಲಿ ಸಿಕ್ಕಿಸಿ ತಲೆದೂಗುವಂತೆ ಮಾಡುತ್ತವೆ.[15]

---

14 ಗ್ರೀಕ್ ಮಹಾಕವಿ ಹೋಮರನ 'ಇಲಿಯಡ್' ಮಹಾಕಾವ್ಯವನ್ನು ಅಲೆಕ್ಸಾಂಡರ್ ಪೋಪ್ ಇಂಗ್ಲಿಷಿಗೆ ಭಾಷಾಂತರಿಸಿದಾಗ ಅನೇಕ ಟೀಕೆಗಳು ಬಂದವು. 'ಪೋಪರ ರಚನೆಯನ್ನು ಉತ್ತಮವಾದ ಕಾವ್ಯವೆಂದು ಕರೆಯಿರಿ ಅಡ್ಡಿಯಿಲ್ಲ ಆದರೆ ಹೋಮರ್ ಎಂದು ಮಾತ್ರ ಅನ್ನಬೇಡಿ' ಎಂಬುದು ವಿಮರ್ಶಕರ ಅನಿಸಿಕೆಯಾಗಿತ್ತು. ಹಾಗಾಗಿ ಯಾವುದೇ ಅನುವಾದ ನಿಷ್ಠೆಯಿಂದ ಮೂಲಾನುವರ್ತಿಯಾಗಿರಬೇಕಾದುದು ಆವಶ್ಯಕ.

15 ಈ ಸಂಬಂಧವಾಗಿಯೆ ಥಿಯೋಡರ್ ಸೆವೊರಿ ಭಾಷಾಂತರಗಾರರ ಪಾಲಿಗೆ 'freedom to the limit' ಮತ್ತು 'freedom into licence' ಎಂಬುದಾಗಿ ನಿದರ್ಶಿಸುತ್ತಾನೆ. ಮೊದಲನೆಯದಕ್ಕೆ ಉಮರ್ ಖಯ್ಯಾಮನ ರೂಬಾಯಿಗಳನ್ನು ಇಂಗ್ಲಿಷಿಗೆ ಅನುವಾದಿಸಿದ ಫಿಡ್ಜೆರಾಲ್ಡನನ್ನು ಉದಾಹರಿಸುತ್ತಾನೆ. ಹಾಗೆಯೇ ಈ ಮಿತಿಯನ್ನು ದಾಟಬಾರದೆಂದು ಗೆರೆ ಹಾಕುತ್ತಾ 'The limit, however, can be overstepped and then th product can scarcely be called a translation by any charitable means' ಅನ್ನುತ್ತಾನೆ. *The Art of Translation* T. H. Savory, p.154.

ಸರಿತಗಳು ಅನೇಕ ಕಡೆಗಳಲ್ಲಿ ವಿಸ್ತರಣೆಯಾಗಿಯೂ ಕಂಡುಬರುತ್ತವೆ. ಮತ್ತೆ ಕೆಲವೆಡೆಗಳಲ್ಲಿ ಹೊಸ ಸೇರ್ಪಡೆಗಳಾಗಿಯೂ ವಿಲೋಪನಗಳಾಗಿಯೂ ಎದುರಾಗುತ್ತವೆ. ಉದಾಹರಣೆಗೆ,

ಮುಂದೆ ಬಲ್ಲವರಾರು ?
ಇಂದಾಯ್ತು ಶಾಂತಿ
ದೇವ ಮಾಡುವುದಿರಲಿ,
ನಾವು ಮಾಡುವ ಹಿಂಸೆ
ಅದೆ ನರಕಹಿಂಸೆ !
ದುಃಖಿಗಳ, ಪಾಪಿಗಳ
ನಾವು ಧಿಕ್ಕರಿಸುವೆವು
ದೂರ ಅಟ್ಟುವೆವು
ಅಟ್ಟದಾ ರೀತಿಯಲಿ
ತಂದೆ, ರಕ್ಷಕನು.

ಈ ಸಾಲುಗಳಿಗೆ ಮೂಲ ಪದ್ಯದ ಕಡೆಯ ಭಾಗದಲ್ಲಿ ಎಲ್ಲಿ ಆಧಾರ ಎಂದು ತಡಕಾಡಬೇಕಾಗಿರುವುದು. ಅಲ್ಲಲ್ಲಿ ಇವಕ್ಕೆ ಸಂವಾದಿಯೆನಿಸಬಹುದಾದ ಪದಗಳಿಂದ ಸ್ವಲ್ಪಮಟ್ಟಿಗೆ ಸೂಚನೆ ದೊರೆಯಬಹುದಷ್ಟೆ. ಇಂಥ ವಿಸ್ತರಣೆ ಮೂಲದಿಂದ ತುಂಬ ಸರಿದಿದೆ. ಇಂಥ ಸೇರ್ಪಡೆಗಳ ವಿಲೋಪನೆಗಳ ಸೂಕ್ತಾಸೂಕ್ತತೆಯ ಬಗೆಗಿನ ವಿವೇಚನೆ ಚರ್ಚಾಸ್ಪದವಾದುದು. ಹೀಗೆಯೆ,

Love, by harsh evidence
Thrown from its eminence
Even God's providence
Seeming estranged.

ನಿಷ್ಕರುಣದಲಿ ಬೆಂದು
ಪ್ರೇಮಸಾಗರದಮೃತ
ಬಯಲು ದೊರೆಯಾಯ್ತೆ ?
ದೀನರಕ್ಷಕ ದೊರೆಯು
ಕೇಳಿ ಕಾಪಾಡುವುದು
ತನಗೆ ಹುಸಿಯಾಯ್ತೆ ?
ಏನು ಬಂತೋ ದುಃಖ
ಏನು ಬಂತೋ ರೋಷ
ಕ್ರೂರಮನಸನು ಮಾಡಿ
ಬೀರಿದಳು ಬದುಕ !



ಈ ರೀತಿಯ ವಿಸ್ತರಣೆಗಳೂ ಗಮನಾರ್ಹ :

| | |
|---|---|
| Where the lamps quiver | ಊರ ಮನೆ ಬೆಳಕುಗಳು |
| So far in the river | ದೂರ ಸರಿಯುತ್ತ ... |
| With many a light | |
| From window and casement, | |
| From garret to basement, | |
| She stood with amazement, | |
| Houseless by night. | |

ಮೇಲಿನ ಮೂಲಕ್ಕೆ ಅನುವಾದದಲ್ಲಿ ಇರುವುದು ಪ್ರಾಯಶಃ ಇಷ್ಟೇ. ಇದು ಸಂಕ್ಷೇಪನಕ್ಕೆ ಒಂದು ಉದಾಹರಣೆ.

ಕೆಲನೆಡೆಗಳಲ್ಲಿ ಕವಿಹೃದಯ ಹೊಸದನ್ನು ಸೇರಿಸಿ ಮೂಲವನ್ನು ಹೆಚ್ಚು ಗ್ರಾಹ್ಯವನ್ನಾಗಿ ಮಾಡುವ ಉದಾಹರಣೆಗಳೂ 'ದುಃಖಸೇತು'ವಿನಲ್ಲಿ ಕಾಣಸಿಗುವುವು. ಇಂಗ್ಲಿಷ್ ಕವಿ ಹುಡ್ ತನ್ನ 'ಅನಾಥೆ'ಯ ಭಾಗಕ್ಕೆ ತಂದೆ, ತಾಯಿ, ಅಣ್ಣ ತಮ್ಮಂದಿರು, ಅಕ್ಕತಂಗಿಯರು, ಹತ್ತಿರದಾತ, ಅಕ್ಕರೆಯಾತ ಇಲ್ಲವೆ ಎಂಬ ಪ್ರಶ್ನೆ ಹಾಕುತ್ತಾನೆ. ಅನುವಾದಕರು ಇವೆಲ್ಲದರ ಜೊತೆಗೆ ಸಹಾನುಭೂತಿ ಉಕ್ಕಿಸುವ ಪರಾಕಾಷ್ಠೆಯೊ ಎಂಬಂತೆ

ನಿರಿಹಿಡಿದು, ನಡುವೇರಿ
ತೊದಲು ಮಾತನು ಬೀರಿ
ಕೊರಗ ನಗಿಸಲು ಬಲ್ಲ
ಮಗುವಿಲ್ಲವೇನೊ

ಎಂಬ ಮಾತುಗಳನ್ನು ಸೇರಿಸಿದ್ದಾರೆ. ಇದು ತುಂಬ ಅರ್ಥವತ್ತಾಗಿದೆ. ತಾಯ್ತನ ಹೆಣ್ಣಿಗೆ ಕಲಶವಿಟ್ಟಂತೆ, ಹೆಣ್ಣಿನ ಬದುಕು ಅದಿಲ್ಲದೆ ಅಪೂರ್ಣತೆಯ ಸುಳಿಯಲ್ಲಿ ಸಿಕ್ಕಿಬಿಡುತ್ತದೆ. ಇಂಥ ಸೇರ್ಪಡೆಗಳು ಮೆಚ್ಚತಕ್ಕವು.

**ಅಳವಡಿಕೆ**

| | |
|---|---|
| Alas! for the rarity | ಆಹ, ಎಲ್ಲಡಗಿತೊ |
| Of Christian charity | ಆರ್ಯಧರ್ಮದ ಕರುಣ, |
| Under the Sun! | ಆರ್ಯಜನಗಳ ಮರುಕ |
| | ಉರಿಯುವವನೆ ಬಲ್ಲ! |

ಅನುವಾದಕರ 'ಅನಾಥೆ' ಸಂಪೂರ್ಣ ಭಾರತೀಯಳಾದುದರಿಂದ ಈ ರೀತಿಯ ಅಳವಡಿಕೆ ಅಥವಾ ರೂಪಾಂತರ ತುಂಬ ಯೋಗ್ಯವಾಗಿದೆ. Christian Charity 'ಆರ್ಯಧರ್ಮದ ಕರುಣೆ'ವಾಗಿ Sun 'ಉರಿಯುವವ' ಆಗಿದ್ದಾನೆ. ನಮ್ಮ ಹಳ್ಳಿಗಳ ಕಡೆಗಳಲ್ಲೂ ಸೂರ್ಯನಿಗೆ ಹೀಗೆ ಕರೆಯುವುದು ವಾಡಿಕೆ ಎಂಬುದಾಗಿ ವಿಮರ್ಶಕರು ಗುರುತಿಸಿದ್ದಾರೆ.[16]

ರೂಪಾಂತರ ಮಾಡುವುದರ ಬಗೆಗೆ ಬಹಳಷ್ಟು ಮಂದಿ ವಿಮರ್ಶಕರು ಅಷ್ಟು ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ. ರೂಪಾಂತರ ನಿರರ್ಥಕವಾದಲ್ಲಿ ಮೂಲ ಲೇಖಕನಿಗೆ ಉಂಟಾಗುವ ದ್ರೋಹ ಅಕ್ಷಮ್ಯವಾದುದು. ಆದರೆ ಮೇಲೆ ಮಾಡಿರುವಂಥ ಅನುವಾದ ರೂಪಾಂತರಕ್ಕೆ ಮರ್ಯಾದೆ ತರುವಂಥದು ಎನಿಸುತ್ತದೆ.

ಹೀಗೆಯೆ

| | |
|---|---|
| Cross her hands humbly, | ಮರೆಹೋಗುವನಾಥೆಯನು |
| As if praying dumbly, | ಎದೆಯಲಿ ಕೈಮುಗಿಸಿ |
| Over her breast ! | ಅವನ ಬಳಿ ಕಳುಹು. |

ಕ್ರೈಸ್ತಧರ್ಮಾನುಯಾಯಿಗಳಿಗೆ ಎದೆಯ ಮೇಲೆ ಶಿಲುಬೆಯಾಕಾರದಲ್ಲಿ ಕೈಯಿಟ್ಟು ಕೊಳ್ಳುವುದು ನಿವೇದನೆಯ ಒಂದು ಆಚರಣೆ. ಅದನ್ನೇ ಅನುವಾದಕರು ಸೂಕ್ತವಾಗಿ ಅಳವಡಿಸಿಕೊಂಡು ತಮ್ಮ 'ಅನಾಥೆ'ಯನ್ನು ಕೈಮುಗಿಸಿ ದೇವರ ಬಳಿ ಕಳುಹಿಸುವಂತೆ ಸೂಚಿಸುತ್ತಾರೆ.

ಒಟ್ಟಿನಲ್ಲಿ 'ಶ್ರೀ'ಯವರ 'ದುಃಖಸೇತು' ಸಾಕಷ್ಟು ಉತ್ತಮವಾದ ಒಂದು ಅನುವಾದ ಎಂದು ಹೇಳಲು ಅಡ್ಡಿಯಿಲ್ಲ. ಆದರೆ ಅನುವಾದಕ-ಕವಿಗೆ ತನ್ನ ಪ್ರತಿಭೆಯ ಕೆಲವು ಅಂಶಗಳೇ ದೋಷಗಳಾಗುವ ಸಂಭಾವ್ಯತೆಯೂ ಇರುತ್ತದೆ. ಸಂಕ್ಷೇಪಮಾಡು ವಿಕೆ, ವಿಸ್ತಾರ, ಅಳವಡಿಕೆ ಇವೆಲ್ಲ ಅನುವಾದಕ-ಕವಿಯ ಪ್ರತಿಭೆ ಹರಿಯಲು ಹಾಸುಗಲ್ಲಾಗಬಹುದಾದರೂ ಮೂಲನಿಷ್ಠತೆಯನ್ನು ಬೇಡುವ ಭಾಷಾಂತರ ವಿಮರ್ಶೆಯ ಒರೆಗಲ್ಲಿನ ಮೇಲೆ ಕಪ್ಪುಚುಕ್ಕೆಗಳೆನಿಸಬಹುದು. ಹಾಗೆಯೆ ಉದ್ದಿಷ್ಟ ಭಾಷೆಯ ಓದುಗರ ಆಸ್ವಾದನೆಯ ದೃಷ್ಟಿಯಿಂದ ಇಂಥವೇ ದೃಷ್ಟಿಬೊಟ್ಟಾಗಬಹುದು, ಸೌಂದರ್ಯದ ಅಂಶಗಳಾಗಬಹುದು. ನಿಜವಾಗಿ ಹೇಳಬೇಕೆಂದರೆ 'ಶ್ರೀ'ಯವರ ಭಾಷಾಂತರದ ಸಂದರ್ಭದಲ್ಲಿ ಆಗಿರುವುದು ಹೀಗೆಯೆ.

---

16 'ಇಂಗ್ಲಿಷ್ ಗೀತೆಗಳು', ಪ್ರಸ್ತಾವನೆ, ಪು. 41

ತೌಲನಿಕ ವಿಮರ್ಶೆಯ ಒರೆಗಲ್ಲಿನ ಮೇಲೆ ಅನುವಾದಗೊಂಡ ಪದ್ಯಗಳನ್ನು ಹಾಕಿದರೆ ಅವುಗಳ ಚೊಕ್ಕತನ ಹೆಚ್ಚು ನಿಸ್ಪಷ್ಟವಾಗಿ ಗೊತ್ತಾಗುವ ಸಂಭವವಿರುತ್ತದೆ.[17] ಆದರೆ ಒಂದೇ ಮೂಲವನ್ನು ಕನಿಷ್ಠಪಕ್ಷ ಇಬ್ಬರು ಉತ್ತಮ ಪ್ರತಿಭಾವಂತ ಕವಿಗಳೇ ಅನುವಾದ ಮಾಡಿರಬೇಕಾದುದು ಅಪೇಕ್ಷಣೀಯ. ‘ದುಃಖಸೇತು’ವಿನ ಇಷ್ಟೇ ಉತ್ತಮ ಭಾಷಾಂತರ ಬೇರೊಂದು ಲಭ್ಯವಿಲ್ಲದಿರುವುದರಿಂದ ಅಂಥ ಅಧ್ಯಯನಕ್ಕೆ ಎಡೆ ದೊರೆಯುತ್ತಿಲ್ಲ.

---

17 ‘ಶ್ರೀ’ ಅವರ ‘ಬಾನಾಡಿ’ ಹಾಗೂ ಗೋವಿಂದಪೈ ಅವರ ‘ಬಾನಕ್ಕಿಗೆ’ (ಮೂಲ : To a Skylark—Shelly) ಪದ್ಯಗಳನ್ನು ಈ ರೀತಿಯ ತೌಲನಿಕ ಅಧ್ಯಯನಕ್ಕೆ ಪರಿಗಣಿಸಬಹುದು. ‘ಶ್ರೀ’ಯವರಿಗಿಂತ ಪೈರವರೇ ಅನೇಕ ಕಡೆಗಳಲ್ಲಿ ಹೆಚ್ಚು ಯಶಸ್ವಿಯಾಗಿರುವುದನ್ನು ವಿಮರ್ಶಕರು ಗುರುತಿಸಿದ್ದಾರೆ. ನೋಡಿ ‘ ಕನ್ನಡದಲ್ಲಿ ಭಾವಗೀತೆ ’— ಡಾ. ಪ್ರಭುಶಂಕರ, ಎರಡನೇ ಆವೃತ್ತಿ ೧೯೮೧, ಪು. ೨೧೪-೧೫.

ಜನಗಳು ರೂಢಿಗೆ ತಂದ ಮಾತುಗಳನ್ನು ಸಮಯೋಚಿತವಾಗಿ ಒಪ್ಪಿಕೊಳ್ಳಬೇಕು. ಕೈಯಲ್ಲಾದಮಟ್ಟಿಗೆ ಮಾತುಗಳನ್ನು ಕಲ್ಪನೆ ಮಾಡಬಾರದು ; ಹಾಗೆ ಮಾಡಿದರೂ ಕನ್ನಡ ಮಾತುಗಳನ್ನೇ, ಬಳಸುತ್ತಿರುವ ಸಂಸ್ಕೃತ ಪದಗಳನ್ನೇ ಕೂಡಿಸುವುದು ಅನುಕೂಲ. ರೈಲನ್ನು ರೈಲೆಂದೇ ಕರೆಯುವುದು ಉತ್ತಮ. ಹೊಗೆಬಂಡಿ, ಹೊಗೆಗಾಡಿ ಎನ್ನುವುದು ಮಧ್ಯಮ, ಧೂಮಶಕಟವೆನ್ನುವುದು ಅಧಮ. ಮುಖ್ಯ ಬರೆಯುವವರು ಕಠಿಣ ಪದಗಳಲ್ಲಿ ಕೈವಲ್ಯವುಂಟೆಂದು ಮೋಸಹೋಗದೆ, ಅರ್ಥದಲ್ಲಿ ಬುದ್ಧಿಯನ್ನು ಓಡಿಸಿ ಪ್ರೌಢತನವನ್ನು ತೋರಿಸಿದರೆ ಎಲ್ಲರೂ ಬದುಕಿಕೊಂಡಾರು.

—'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೫೪

ಎಚ್. ಎಸ್. ಹರಿಶಂಕರ್

# 'ಬಾನಾಡಿ'

## (ಪ್ರಾಯೋಗಿಕ ಭಾಷಾಂತರ ವಿಶ್ಲೇಷಣೆ)

ಹೊಸಗನ್ನಡ ಸಾಹಿತ್ಯದ ಬೆಳವಣಿಗೆಗೆ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರ ಕೊಡುಗೆಯೇನೆಂಬುದು ಈಗೆಲ್ಲರಿಗೂ ತಿಳಿದಿರುವ ಸಂಗತಿ. ತಾವು ಓದುತ್ತಿರುವಾಗಲೇ ಕನ್ನಡ ಸಾಹಿತ್ಯವನ್ನು ಹೇಗೆ ಕಸಿಮಾಡಬೇಕು, ಇಂಗ್ಲಿಷಿನ ಭಾವಸಂಪತ್ತನ್ನೂ ಅರ್ಥ ಸಂಪತ್ತನ್ನೂ ಕನ್ನಡಕ್ಕೆ ಹೇಗೆ ತರಬೇಕೆಂದು ಅವರು ಯೋಚನೆ ಮಾಡಿದ್ದುಂಟು. ಇದರ ಫಲವಾಗಿ ಹಲವಾರು ಪ್ರಸಿದ್ಧ ಮತ್ತು ಅಪ್ರಸಿದ್ಧ ಇಂಗ್ಲಿಷ್ ಕವಿಗಳ ಕವನಗಳನ್ನು ಕನ್ನಡಕ್ಕೆ ಅನುವಾದಿಸಿ 'ಇಂಗ್ಲಿಷ್ ಗೀತಗಳು' ಎಂಬ ಹೆಸರಿನಿಂದ ಪ್ರಕಟಿಸಿದರು. ಈ ಗ್ರಂಥದಿಂದ ಸ್ಫೂರ್ತಿಗೊಂಡ ತರುಣ ಕವಿಗಳು ತಾವೂ ಹೊಸಗನ್ನಡದಲ್ಲಿ ಕವಿತೆಗಳನ್ನು ರಚಿಸಲು ಆರಂಭಿಸಿದರು. ಹೊಸ ಅಲೆಯೊಂದು ಕನ್ನಡದಲ್ಲಿ ಕಾಣಿಸಿಕೊಂಡಿತು.

ಪ್ರಸ್ತುತ ಕವನ 'ಬಾನಾಡಿ' ಸುಪ್ರಸಿದ್ಧ ಇಂಗ್ಲಿಷ್ ಕವಿ ಪೆರ್ಸಿಬಿಷೆ ಷೆಲ್ಲಿಯ (೧೭೯೨–೧೮೨೨) "To a Skylark" ಎಂಬ ಇಂಗ್ಲಿಷ್ ಕವನದ ಅನುವಾದ. ಇಂಗಿಷ್ ಸಾಹಿತ್ಯದಲ್ಲಿ ಷೆಲ್ಲಿಯ ಹೆಸರು ದೊಡ್ಡದು. ರೊಮ್ಯಾಂಟಿಕ್ ಪಂಥದ ಕವಿ ಈತ. ಕಾವ್ಯದ ಬಗ್ಗೆ ಈತನಿಗೆ ಮೊದಲಿನಿಂದಲೂ ಆಸಕ್ತಿ, ಅಭಿರುಚಿ. ಈತನ ಉತ್ತಮೋತ್ತಮ ಕವನಗಳಲ್ಲಿ "Ode to the West Wind" " The Cloud ", "To a Skylark" ಇತ್ಯಾದಿ ಕವನಗಳೂ ಸೇರಿಕೊಂಡಿವೆ. ಕಾವ್ಯ ಸ್ವರೂಪವನ್ನು ಕುರಿತು ಈತ ಒಂದು ಸೊಗಸಾದ ಕೃತಿ ರಚಿಸಿದ್ದಾನೆ. ಅದೇ 'A defence of Poetry'. ಈತನ ಅನೇಕ ಕವನಗಳು ಸುಧಾರಣೆಯನ್ನೇ ಗುರಿಯಾಗಿಟ್ಟುಕೊಂಡಂತಹವು. ಆದರೆ ಇವು ಸಮಕಾಲೀನ ಆಸಕ್ತಿಯನ್ನು ಕೆರಳಿಸಿದ್ದರೂ ಆಧುನಿಕ ಓದುಗನ ಮನಸ್ಸನ್ನು ಕಲಕುವಂತಹ ಭಾಗಗಳನ್ನು ಹೊಂದಿವೆ. ಆದರೆ ಇವೆಲ್ಲದಕ್ಕಿಂತ ಮಿಗಿಲಾಗಿ ಷೆಲ್ಲಿಯನ್ನು ಮುಖ್ಯವಾಗಿ ಆರಾಧಿಸುವುದು ಆತನ ಭಾವಗೀತೆಗಳಿಗಾಗಿ.

ಷೆಲ್ಲಿಯ 'To a Skylark' ಕವನವನ್ನು ಕನ್ನಡದಲ್ಲಿ ಬಿ. ಎಂ. ಶ್ರೀ ಅವರೂ ಮತ್ತು ಎಂ. ಗೋವಿಂದಪೈ ಅವರೂ ಅನುವಾದಿಸಿದ್ದಾರೆ. ' ಬಾನಾಡಿ ' ಮತ್ತು

'ಜಾನಕ್ಕಿ'ಗೆ ಎಂದು ಇದನ್ನು ಕ್ರಮವಾಗಿ ಇವರು ಕರೆದಿದ್ದಾರೆ. ಶ್ರೀಯವರ ಕವನವನ್ನು ಮೂಲದ ಕವನದೊಡನೆ ಇಲ್ಲಿ ಹೋಲಿಸಿ ನೋಡುವ ಪ್ರಯತ್ನವನ್ನು ಕೈಗೊಳ್ಳಲಾಗಿದೆ. ಅಲ್ಲಲ್ಲಿ ಗೋವಿಂದ ಪೈ ಅವರ ಕವನವನ್ನೂ ಈ ತೌಲನಿಕ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

'ಬಾನಾಡಿ' ಷೆಲ್ಲಿಯ ಪ್ರಸಿದ್ಧ ಕವನಗಳಲ್ಲೊಂದು ಎಂದು ಮೇಲೆ ಹೇಳಿದೆಯಷ್ಟೆ. ಈ ನೀಳ್ಗವನದಲ್ಲಿ ಐದು ಸಾಲಿನ ೨೧ ಪದ್ಯಗಳಿವೆ. ಷೆಲ್ಲಿ ಮೂಲದಲ್ಲಿ ಯಾವ ಬಗೆಯ ಛಂದಸ್ಸನ್ನು ಬಳಸಿದ್ದಾನೆಯೋ, ಅದೇ ಮಾದರಿಯಲ್ಲೂ ಶ್ರೀಯವರು ಅಂತಹ ಬಗೆಯ ಛಂದಸ್ಸನ್ನೇ ಬಳಸಲು ಪ್ರಯತ್ನಿಸಿದ್ದಾರೆ. ಹಾಗೆ ಮೂಲದ ಛಂದಸ್ಸನ್ನು ಉಳಿಸಿಕೊಳ್ಳುವುದರ ಮೂಲಕ ಷೆಲ್ಲಿಯ ಕವನಗಳ ಮುಖ್ಯ ಗುಣಗಳಾದ ನಾದ ಮಾಧುರ್ಯ, ಸುಕೋಮಲ ಭಾವಗಳನ್ನು ಅನುವಾದದಲ್ಲೂ ತಕ್ಕ ಮಟ್ಟಿಗೆ ತರಲು ಸಾಧ್ಯವಾಗಿದೆ. ೩+೪ ಗಣಗಳ ಲಯವನ್ನು ಈ ಕವನದುದ್ದಕ್ಕೂ ಶ್ರೀಯವರು ಬಳಸಿ ಬಲುಮಟ್ಟಿಗೆ ಯಶಸ್ವಿಯಾಗಿದ್ದಾರೆ.

ಷೆಲ್ಲಿಯ ಕವನದ ಮೊದಲನೆ ಪದ್ಯವನ್ನು ಗಮನಿಸಿ :

ಮೂಲ :

Hail to thee, blithe spirit !
Bird thou never wert,
That from heaven, or near it
Pourest thy full heart
In profuse strains of unpremeditated art.

ಅನುವಾದ :

ಆರು ನೀನೆಲೆ ಹರುಷ ಮೂರುತಿ ?
ಹಕ್ಕಿಯೆಂಬರೆ ನಿನ್ನನು !
ತೋರಿ ದಿವಿಜರು ಸುಳಿವ ಬಳಿ, ಸುಖ
ವುಕ್ಕಿಬಹ ನಿನ್ನೆದೆಯನು
ಹಾರಿ ನೆನೆಯದ ಕಲೆಯ ಕುಶಲದ ಭೂರಿಗಾನದೊಳೆರೆಯುವೆ !

ಯಾವುದು ಮೂಲಕವಿಯಲ್ಲಿ ಆಶ್ಚರ್ಯಸೂಚಕವಾಗಿದೆಯೊ ಅದು ಅನುವಾದದಲ್ಲಿ ಪ್ರಶ್ನಾರ್ಥಕವಾಗಿ ರೂಪುಗೊಂಡಿದೆ. Hail to thee ಎಂಬ ಪದಪುಂಜ ಅನುವಾದದಲ್ಲಿ ಮಾಯವಾಗಿವೆ ; ಅನುವಾದ ತೀರ ಸಪ್ಪೆಯಾಗಿದೆ. ಆದರೆ ಗೋವಿಂದ ಪೈ ಅವರು ಈ ಮಾತುಗಳನ್ನೇ 'ಸೊಗಯಿಸ್ಸೈ ಸುಖಜೀವಿ' ಎಂದು ಅನುವಾದಿಸಿದ್ದಾರೆ. ಇದು ಮೂಲಕ್ಕೆ ಹೆಚ್ಚು ಹತ್ತಿರವಾಗಿದೆ. ಮುಂದಿನ ಸಾಲು 'Bird thou never wert'

ಎಂಬುದು ಶ್ರೀಯವರ ಅನುವಾದದಲ್ಲಂತೂ 'ಹಕ್ಕಿಯೆಂಬರೆ ನಿನ್ನನು !' ಎಂದು ತೀರ ಸರಳಗೊಂಡಿದೆ. ಆದರೆ ಪೈಯವರು ಇದನ್ನು 'ನೆಗೆವಕ್ಕಿ ನೀನಲ್ಲ' ಎಂದು ಉಚಿತ ವಾಗಿಯೇ ಅನುವಾದಿಸಿದ್ದಾರೆ. 'That from heaven, or near it; pourest thy full heart' ಎಂಬುದನ್ನು 'ತೋರಿ ದಿವಿಜರು... .. ನಿನ್ನೆದೆಯನು' ಎಂದು ಭಾಷಾಂತರಿಸಿದ್ದಾರೆ. ಇಲ್ಲಿ 'ಸ್ವರ್ಗದಿಂದ' ಎಂಬರ್ಥಕೊಡುವ ಮೂಲದ ಪದಕ್ಕೆ 'ದೇವತೆಗಳು' ಎಂದು ಬದಲಾಯಿಸಿರುವುದರ ಔಚಿತ್ಯವೇನೋ ತಿಳಿಯದು. ಗೋವಿಂದ ಪೈಗಳು ಇದನ್ನೇ 'ಗಗನದಿಂದಲೊ ಗಗನದರುಗಿಂದಲೊ ಮೊಗೆವೆ ತುಂಬಿದೆಯ ...' ಎಂದು ಅನುವಾದಿಸಿದ್ದಾರೆ. ಇದು ಮೂಲಕ್ಕೆ ಹೆಚ್ಚು ಸಮೀಪವಾಗಿದೆ. ಈ ಪದ್ಯದ ಕೊನೆಯ ಸಾಲಾದ 'The profuse....art' ಎಂಬುದು ಅನುವಾದದಲ್ಲಿ 'ಹಾರಿ ನೆನೆಯದ ಭೂರಿಗಾನದೊಳೆಯುವೆ' ಎಂದು ಸಮರ್ಥವಾಗಿ ಅನುವಾದಗೊಂಡಿದೆ. ಆದರೆ ಪೈ ಅವರು ಇದನ್ನೇ 'ಚಿನ್ನಣಿಗೆಯುಗುವುದಾರ ಗಾಯನದ ಝುರಿಯಿಂ' ಎಂದು ಅನುವಾದಿಸಿದ್ದಾರೆ. ಇದು ಅಷ್ಟು ಸಮರ್ಪಕವಾಗಿಲ್ಲ.

ಈಗ ಎರಡನೆಯ ಪದ್ಯವನ್ನು ನೋಡಬಹುದು

ಮೂಲ : Higher still and higher
From the earth thou springest,
Like a cloud of fire,
The blue deep thou wingest,
And singing still dost soar, and soaring ever singest

ಅನುವಾದ : ನೆಲವನೊಲ್ಲದೆ ಚಿಗಿದು ಚಿಮ್ಮುತ
ಮೇಲೆ ಮೇಲಕ್ಕೋಡುವೆ ;
ಒಲೆದು, ದಳ್ಳುರಿ ನೆಗೆದು, ಗಗನದ
ನೀಲಿಯಾಳದೊಳಾಡುವೆ ;
ನಲಿದು ಹಾಡುತ ಹಾಡುತೇರುವೆ, ಏರುತೇರುತ ಹಾಡುವೆ

ಇಲ್ಲಿ ಶ್ರೀಯವರು 'From the earth thou springest' ಎಂಬುದನ್ನು 'ನೆಲವನೊಲ್ಲದೆ ಚಿಗಿದು ಚಿಮ್ಮುತ' ಎಂದು ಅನುವಾದಿಸಿದ್ದಾರೆ. 'ನೆಲವನೊಲ್ಲದೆ' ಎಂಬುದು ಸರಿಯಾದ ಭಾಷಾಂತರವಲ್ಲ. ಮೂಲದಲ್ಲಿ 'ನೆಲದಿಂದ' ಎಂಬ ಸಾಮಾನ್ಯಾರ್ಥವೇ ಇದೆ. ಆದರೆ ಅನುವಾದದಲ್ಲಿಯಂತೆ ನಿಷೇಧಾತ್ಮಕ ಅರ್ಥವಲ್ಲ. ಆದರೆ ಪೈ ಅವರ ಅನುವಾದವನ್ನು ಗಮನಿಸಿ.

ಉನ್ನತಂ ಮೇಣದರಿ
ನುನ್ನತಂ ಭುವಿಯಿಂದ

ಎಂಬ ಸಾಲುಗಳು ಮೂಲಕ್ಕೆ ಹತ್ತಿರವಾಗಿವೆ. ಅಷ್ಟೇ ಅಲ್ಲ ಪೈಗಳು ಮೂಲದ 'Like a cloud of fire' ಎಂಬ ಸಾಲನ್ನು ಬಹಳ ಮೋಹಕವಾಗಿ 'ಕೆಂಡದುರಿ ಮೋಡದಂತೆ' ಎಂದು ಅನುವಾದಿಸಿದ್ದಾರೆ. ಆದರೆ ಶ್ರೀಯವರಾದರೋ 'ದಳ್ಳುರಿ ನೆಗೆದು' ಎಂದು ಅನುವಾದಿಸಿ ಮೂಲದಿಂದ ದೂರ ಸರಿದಿದ್ದಾರೆ. ಆದರೆ ಮುಂದಿನ ಸಾಲಾದ 'And singing .. singest' ಎಂಬುದನ್ನು ಬಹಳ ಸೊಗಸಾಗಿ 'ನಲಿದು ಹಾಡುತ ಹಾಡುವೆ' ಎಂದು ಅನುವಾದಿಸಿದ್ದರೆ, ಪೈ ಅವರು 'ಗಗನದೊಳೇರುತಿನ್ನ ಹಾಡುವೆ, ಹಾಡುತಿನ್ನೇರುವೆ' ಎಂದು ಸಾಧಾರಣವಾಗಿ ಅನುವಾದಿಸಿದ್ದಾರೆ.

ಈಗ ಮೂರನೆಯ ಪದ್ಯವನ್ನು ನೋಡಬಹುದು.

ಮೂಲ : In the golden lightning
Of the sunken sun
O'er which clouds are brightening,
Thou dost float and run
Like an unbodied joy whose race is just begun

ಅನು : ಬಿಳಿಯ ಮುಗಿಲನು ಬಣ್ಣವೇರಿಸಿ
ಕೆಳಗೆ ಹೊರಳುವ ಹೊತ್ತಿನ
ತಿಳಿಯ ಹೊಂಬಿಸಿಲಲ್ಲಿ ತೇಲುವೆ,
ಮುಳುಗಿ ಏಳುವೆ, ಹರಿಯುವೆ,
ಕಳಚಿ ದೇಹವ ದಿವಕೆ ಹರಿಯುವ ಭೋಗಿಯೋಲಾಟದವೊಲು

ಮುಳುಗಿದ್ದ ಸೂರ್ಯನ ಚಿತ್ರಣವನ್ನು ಷೆಲ್ಲಿ ನೀಡಿದರೆ ಶ್ರೀಯವರು ಅದನ್ನೇ ಮುಳುಗುತ್ತಿರುವ ಸೂರ್ಯನೆಂದು ಪರಿಭಾವಿಸಿದ್ದಾರೆ. ಗೋವಿಂದ ಪೈಗಳಾದರೊ 'ನೇಸರು ಮುಳುಂಗಿದಾ' ಎಂದು ಸಮರ್ಪಕವಾಗಿ ಅನುವಾದಿಸಿದ್ದಾರೆ. 'golden lightning' ಎಂಬುದನ್ನು 'ಕಾಂಚನದ ಮಿಂಚು' ಎಂದು ಅನುವಾದಿಸಿ ಪೈಗಳು ಭಾವ ಲೋಕವನ್ನೇ ಸೃಷ್ಟಿಸಿದ್ದಾರೆ. ಈ ಪದ್ಯದ ಕೊನೆಯ ಸಾಲಾದ 'like an unbodied joy whose race is just begun' ಎಂಬುದನ್ನು 'ಕಳಚಿ ದೇಹವ ದಿವಕೆ ಹರಿಯುವ ಭೋಗಿಯೋಲಾಟದವೊಲು' ಎಂಬುದಾಗಿ ಬಹಳ ನೀರಸವಾಗಿ ಅನುವಾದಿಸಿದ್ದಾರೆ. ಇಲ್ಲಿ ಪೈಗಳ ಅನುವಾದವೇ ಮೂಲಕ್ಕೆ ಹೆಚ್ಚು ಹತ್ತಿರವಾಗಿದೆ.

ನಾಲ್ಕನೆಯ ಪದ್ಯವನ್ನು ಈಗ ಪರಿಶೀಲಿಸೋಣ :

ಮೂಲ : The pale purple even
Melts around thy flight ;
Like a star of heaven
In the broad daylight
Thou art unseen, but yet I hear thy shrill delight :

ಈ ಪದ್ಯವನ್ನು ಇಡಿಯಾಗಿ ನೋಡೋಣ. ಶ್ರೀಯುವರು ಇದನ್ನು ಹೀಗೆ ಅನುವಾದಿಸಿದ್ದಾರೆ.

ಅನು : ಹಾರುತಿರುತಲೆ ಸಂಜೆ ಸುತ್ತಲು
ಕರಗುವುದು ನಸುಗೆಂಪನು ;
ತಾರೆ ನಡುಹಗಲಲ್ಲಿ ಬಾನೊಳು
ಕುರುಹುದೋರದ ಪರಿಯೊಳು
ತೋರೆಯಾದರು, ಕೇಳುತಿರುವೆನು ನಿನ್ನ ಕೀರುವ ನಲಿವನು

'like a star....daylight' ಎಂಬುದು 'ತಾರೆ ನಡುಹಗಲಲ್ಲಿ .. ಪರಿಯೊಳು' ಎಂದು ಬಹಳ ಸುಂದರವಾಗಿ ಅನುವಾದಗೊಂಡಿದೆ. ಕೊನೆಯ ಸಾಲಂತೂ ಉತ್ತಮ ಭಾಷಾಂತರಕ್ಕೆ ಉದಾಹರಣೆಯಾಗಿದೆ. 'Thou art unseen —delight' 'ತೋರೆಯಾದರು.... ನಲಿವನು'. ಆದರೆ ಪೈ ಅವರ ಭಾಷಾಂತರ ನೀರಸವಾಗಿದೆ. ಮೇಲಿನ ಸಾಲನ್ನು ಹೀಗೆ ಅನುವಾದಿಸಿದ್ದಾರೆ."....ಕಾಣದೊಡೆ ಕಿವಿಯು ಹುಗು ಹುಗುತ್ತವಿದೊ ನಿನ್ನ ಕೆಲೆವ ನಲಿವು"—

ಈಗ ಐದನೆಯ ಪದ್ಯವನ್ನು ಪರಿಭಾವಿಸಬಹುದು. ಮೂಲ ಹೀಗಿದೆ :

ಮೂಲ : Keen as are the arrows
Of that silver sphere,
Whose intense lamp narrows
In the white dawn clear
Until we hardly see, we feel that it is there

ಅನು : ಎಳೆಯ ಬೆಳಕನು ಮೊಗೆದು ಹೊತ್ತರೆ
ಬೆಳ್ಳಗೆತ್ತಲು ತುಳುಕಲ,
ಕಳೆಯು ಸೊಡಲನು ಕುಗ್ಗಿ ತಡಗುವ
ಬೆಳ್ಳಿಬಿಂಬದ ಬಗೆಯೊಳು,
ತಿಳಿವುದಿರುವುದು ಮೇಲೆ ಎಲ್ಲಿಯೋ, ಕಣ್ಣು ತಟ್ಟನೆ ಹಿಡಿಯದು

ಮೂಲದ ಸೊಗಸನ್ನು ಶ್ರೀಯವರಾಗಲಿ ಇಲ್ಲವೆ ಪೈಗಳಾಗಲೀ ಅನುವಾದದಲ್ಲಿ ಒಡಿದಿಡಲು ಸಮರ್ಥರಾಗಿಲ್ಲ. ಇವರ ಅನುವಾದಗಳಲ್ಲಿ ಮೂಲದ ಭಾವನೆಗಳು ಸಂಗ್ರಹವಾಗಿ ಬಿಟ್ಟಿವೆ. ಮೂಲದ silver sphere ಎಂಬುದನ್ನು 'ಬೆಳ್ಳಿಬಿಂಬ' ಎಂಬುದಾಗಿ ಶ್ರೀಯವರು ಅನುವಾದಿಸಿದ್ದರೆ ಇದನ್ನೇ ಪೈಯವರು 'ಬೆಳ್ಳಿಯ ಬಟ್ಟಲು' ಎಂದು ಅನುವಾದಿಸಿದ್ದಾರೆ. ಪೈಗಳ ಈ ಪದ್ಯವನ್ನು ಓದಿದಾಗ ಹಳಗನ್ನಡ ಪದ್ಯವನ್ನು ಓದಿದಂತೆ ಭಾಸವಾಗುತ್ತದೆ.

ಆರನೆಯ ಪದ್ಯವನ್ನು ಈಗ ನೋಡೋಣ :

ಮೂಲ : All the earth and air
With thy voice is loud,
As, when night is bare,
From one lonely cloud
The moon rains out her beams, and heaven is over-flow'd.

ಅನು : ಇಳೆಯು, ಗಾಳಿಯು ತೆರಹನೆಲ್ಲವ
ಕಲಿವ ನಿನ್ನುಲಿ ತುಂಬಿತು,
ತೊಳೆವ ಬಾನೊಳಗೊಂಟಿಮೋಡದ
ನೆಲೆಗೆ ನುಸುಳಿದ ತಿಂಗಳು
ಬೆಳಕು ಮಳೆಯನು ಕರೆದು ಗಗನದ ಬಯಲ ತುಂಬುವ ತೆರದೊಳು

ಮೇಲಿನ ಅನುವಾದ ತುಂಬ ಸೊಗಸಾಗಿ ಬಂದಿದೆ. 'The moon rains out her beams .......' ಎಂಬುದನ್ನು ಕನ್ನಡದಲ್ಲಿ ಸಹಜವಾಗಿ 'ತಿಂಗಳು ಬೆಳಕು ಮಳೆಯನು ಕರೆದು' ಎಂದು ಮೂಡಿ ಬಂದಿದೆ. The moon ಎಂಬುದು ಅಚ್ಚಗನ್ನಡದ 'ತಿಂಗಳು' ಎಂದಾಗಿದ್ದು ಅರ್ಥಗರ್ಭಿತವಾಗಿದೆ.' ಹಾಗೆಯೇ ಮೂಲದ 'when night is bare From one lonely cloud' ಎಂಬುದು 'ತೊಳೆದ ಬಾನೊಳಗೊಂಟಿ ಮೋಡದ' ಎಂದು ಅನುವಾದಗೊಂಡಿದ್ದು ಮೂಲಕ್ಕೆ ಹೆಚ್ಚು ಹತ್ತಿರವಾಗಿದೆ. ಪೈಗಳ ಅನುವಾದ ಮೂಲಕ್ಕೆ ಹತ್ತಿರವಾಗಿದ್ದರೂ ಬಹಳ ಪೆಡಸಾಗಿದೆ.

ಏಳನೆಯ ಪದ್ಯದ ಮೂಲ ಮತ್ತು ಅನುವಾದಗಳು ಹೀಗಿವೆ :

ಮೂಲ : What thou art we know not ;
What is most like thee ?
From rainbow clouds there flow not ;

Drops so bright to see
As from thy presence showers a rain of melody :

ಅನು : ಏನೋ ನೀನದ ನಾವು ಕಾಣೆವು ;
ಏನು ಸರಿ ನಿನಗೆಂಬುದು ?
ನೀನು ಸನ್ನಿಧಿಯಿಂದ ಬೀರುವ
ಗಾನಧಾರೆಯ ಕಾಂತಿಗೆ
ಸೋನೆ ಸಮನೇ ಬಿಲ್ಲುಮೂಡಿದ ಮೋಡ ಸುರಿಯುತ್ತಿರುವುದು !

'From rainbow clouds' ಎಂದು ಆರಂಭವಾಗುವ ಸಾಲುಗಳು ಅನುವಾದದಲ್ಲಿ ಅಷ್ಟೇ ಧ್ವನಿಯುಕ್ತವಾಗಿ 'ನೀನು ಸನ್ನಿಧಿಯಿಂದ....' ಎಂದು ಅನುವಾದಗೊಂಡಿದೆ. ಇದನ್ನೇ ಪೈಗಳು '...ಧಾರೆಯೊರೆಯ ಮಿರುವನಿಗಳನ್ನೆರಚಿದಾ ಮಳೆವಿಲ್ಲನಾಂತ ಮುಗಿಲು' ಎಂದು ಯಥಾವತ್ತಾಗಿ ಅನುವಾದಿಸಿದ್ದಾರೆ.

ಎಂಟನೆಯ ಪದ್ಯವನ್ನು ಈಗ ಗಮನಿಸಬಹುದು ;

ಮೂಲ : Like a poet hidden
In the light of thought,
Singing hymns unbidden,
Till the world is wrought
To sympathy with hopes and fears it heeded not;

ಅನು : ಬಗೆಯ ಹೊಳಪಿನೊಳಡಗಿ ತನ್ನೊಳೆ
ತಡೆಯಲಾರದೆ ಹಾಡುತ,
ಬಗೆಗೆ ತಾರದೆ ಲೋಕ ನೂಕಿದ
ಮಿಡುಕು ಹಂಬಲು ಬಯಕೆಯು
ಹೊಗಿಸಿ ಹೃದಯಕೆ ಮರುಕಗೊಳಿಸುವ ಕವಿಗೆ ಹೋಲಿಸಿ ಹೊಗಳಲೊ ?

ಮೂಲದಲ್ಲಿ 'ಕವಿಯಂದದಲಿ' (like a poet) ಎಂಬ ಭಾವನೆಯಿದ್ದರೆ ಶ್ರೀಯವರು ಅದನ್ನೇ 'ಕವಿಗೆ ಹೋಲಿಸಿ' ಎಂಬುದಾಗಿ ಅನುವಾದಿಸಿದ್ದಾರೆ. ಪೈಗಳು 'ಹಾಡುವ ಕವಿಯೋ ನೀನು ?' ಎಂದು ಪ್ರಶ್ನಿಸಿದ್ದಾರೆ. ಇಬ್ಬರು ಅನುವಾದಕರೂ ಮೂಲದಿಂದ ದೂರ ಸರಿದಿದ್ದಾರೆ. ಹಾಗೆಯೇ ಶ್ರೀಯವರು 'Singing hymns unbidden' ಎಂಬುದನ್ನು 'ತಡೆಯಲಾರದೆ ಹಾಡುತ' ಎಂದು ಅನುವಾದಿಸಿದ್ದಾರೆ. ಪೈಯವರು 'ತನ್ನೊಸೆಗಳಂ ಸ್ವಚ್ಛಂದಮಾಗೆ ತಂದು ಹಾಡುವ' ಎಂದು ಅನುವಾದಿಸಿದ್ದಾರೆ. ಇಲ್ಲೂ

ಕೂಡ ಈ ಇಬ್ಬರು ಅನುವಾದಕರೂ ಸ್ವಲ್ಪಮಟ್ಟಿನ ಸ್ವಾತಂತ್ರ್ಯವಹಿಸಿದ್ದಾರೆ. ಇದನ್ನು ಒಂದು ರೀತಿಯಲ್ಲಿ ಸ್ವಚ್ಛಂದಾನುವಾದವೆಂದು ಬೇಕಾದರೂ ಕರೆಯಬಹುದು!

ಒಂಬತ್ತನೆಯ ಪದ್ಯ ಮೂಲಕ್ಕೆ ಹೆಚ್ಚು ಹತ್ತಿರವಾಗಿದೆ, ಇಬ್ಬರು ಅನುವಾದಕರಲ್ಲಿಯೂ. ಆ ಪದ್ಯ ಹೀಗಿದೆ :

ಮೂಲ : Like a high-born maiden
In a palace tower,
Soothing her love-laden
Soul in secret hour
With music sweet as love which overflows her bower :

ಅನು : ಕೆಳದಿ ಸುಳಿಯದ ವೇಳೆ, ಒಬ್ಬಳೆ
ಏರಿ ಅರಮನೆಮಾಡವ,
ಒಲುಮೆಹೇರಿದ ಜೀವವಾರಲು,
ತೂರಿ ನೆಲೆಯನು ಕೊಚ್ಚಿಸಿ,
ಒಲುಮೆವೊಲೆ ಸವಿಯಾದ ಗಾನವನುಲಿವ ದೊರೆಮಗಳೆಂಬೆನೋ!

ಶ್ರೀಯವರು 'like a high-born maiden' ಎಂಬುದನ್ನು 'ದೊರೆಮಗಳು' ಎಂದು ಅನುವಾದಿಸಿದ್ದಾರೆ. ಮೂಲದಲ್ಲಿಲ್ಲದ 'ಕೆಳದಿ ಸುಳಿಯದ' ಎಂಬ ಪದಗುಚ್ಛವನ್ನು ಹೊಸದಾಗಿ ಸೇರಿಸಿದ್ದಾರೆ. ಈ ಸಣ್ಣ ಬದಲಾವಣೆಯನ್ನು ಬಿಟ್ಟರೆ ಈ ಪದ್ಯ ಮೂಲಕ್ಕೆ ಹೆಚ್ಚು ಹತ್ತಿರವಾಗಿದೆ. ಪೈಯವರು ಈ ಹೆಣ್ಣನ್ನು 'ಕುಲೀನ ಕನ್ನೆ'ಯೆಂದು ಅನುವಾದಿಸಿದ್ದಾರೆ. ಪೈಯವರು ಅನುವಾದಿಸಿರುವ ಈ ಪದ್ಯವೂ ಮೂಲಕ್ಕೆ ಹೆಚ್ಚು ಹತ್ತಿರವಾಗಿದೆ.

ಮುಂದಿನ ಪದ್ಯದಲ್ಲಿ ಬಾನಾಡಿಯನ್ನು ಕವಿ ಮಿಂಚುಹುಳಕ್ಕೆ ಹೋಲಿಸಿದ್ದಾನೆ. ಆ ಪದ್ಯವನ್ನು ಈಗ ನೋಡಬಹುದು.

ಮೂಲ : Like a glow-worm golden
In a dell of dew,
Scattering unbeholden
Its aerial hue
Among the flowers and grass, which screen it from the view

ಅನು :　ಬಿಳಿಯ ಮಂಜಿನ ಮುಸುಕು ಬಳಸಿದ
　　ಮೆಳೆಯ ಪೊದರಲಿ ಪದರುತ
　ಬಳಿಯ ಹೂವಿನ, ಹುಲ್ಲ ತೆರೆಯಲಿ
　　ಹೊಳಪ ಮೆರೆಯುತ, ಮರಸುತ
　ತೆಳುವು ಬೆಳಕನು ಕೆದರಿ ಮಿನುಕುವ ಮಿಂಚುಹುಳುವೆಂದೆಣಿಸಲೋ !

ಶ್ರೀಯವರ ಅನುವಾದ ಇಲ್ಲಿ ಮೂಲಕ್ಕೆ ಯಥಾರ್ಥವಾಗಿದೆ. 'Among ...view' ಎನ್ನುವುದನ್ನು 'ಬಿಳಿಯ ಹೂವಿನ........ಮರಸುತ' ಎಂದು ಅನುವಾದಿಸಿದ್ದಾರೆ. ಪೈಯವರು ಇದನ್ನೇ ಮತ್ತಷ್ಟು ಸುಂದರವಾಗಿ 'ತನ್ನೊಡಲ ಮರೆಗೊಳಿಪ ಹೂವುಲ್ಲುಗಳ ಬಾಸಣಿಯೊಳು' ಎಂದು ಅನುವಾದಿಸಿದ್ದಾರೆ.

ಇನ್ನು ಹನ್ನೊಂದನೆಯ ಪದ್ಯವನ್ನು ಗಮನಿಸಬಹುದು :

ಮೂಲ :　Like a rose enbower'd
　　In its own green leaves,
　By warm winds d-flower'd,
　　Till the scent it gives
　Makes faint with too much sweet these heavy-winged thieves.

ಅನು :　ಹಸುರ ಹೊರ ಎಸಳಲ್ಲಿ ಹುದುಗುತ,
　　ಮುಗುಳ ಸೊಬಗನು ಹೊರೆಯುತ,
　ಬಿಸಿಯ ಗಾಳಿಗೆ ಒಳಲಿ ಬಿರಿಯುತ,
　　ಸೊಗಡುಗಂಪನು ಸುರಿಯುತ,
　ಹಸಿದ ಜೇನಿನ ಹೊರೆಯ ಕಳ್ಳರ ಸೊಕ್ಕಿಸಿಡುವ ಗುಲಾಬಿಯೊ ?

ಮೂಲದ ಎಲ್ಲ ಭಾವಾರ್ಥಗಳೂ ಇಲ್ಲಿ ಇಡಿಯಾಗಿ ಮೂಡಿ ಬಂದಿವೆ. 'the scent it gives' ಎಂಬುದು ಬಹಳ ಸುಂದರವಾಗಿ 'ಸೊಗಡುಗಂಪನು ಸುರಿಸುತ' ಎಂದು ಅನುವಾದಗೊಂಡಿದೆ. ಕೊನೆಯ ಸಾಲಂತೂ ಕನ್ನಡದಲ್ಲಿ ಬಹಳ ಸಹಜವಾಗಿ ಸೊಗಸಾಗಿ ಅನುವಾದಗೊಂಡಿದೆ. ಆದರೆ ಪೈಯವರ ಅನುವಾದದಲ್ಲಿ 'ಗುಲಾಬಿ' ಹೊ 'ತಾವರೆ' ಯಾಗಿ ಮಾರ್ಪಟ್ಟಿದೆ. ಹೀಗೆ ಅವರು ಅದನ್ನು ಬದಲಾಯಿಸಿಕೊಂಡಿದ್ದರ ಔಚಿತ್ಯ ತಿಳಿಯದು.

ಹನ್ನೆರಡನೆಯ ಪದ್ಯ ಹೀಗಿದೆ :

ಮೂಲ : Sound of vernal showers
On the twinkling grass,
Rain-awaken'd flowers,
All that ever was
Joyous, and clear, and fresh thy music doth surpass.

ಅನು : ಹೊಳೆವ ಗರುಕೆಯ ಮೇಲೆ ಬೀಳುವ
ಮಳೆಯ ಹನಿಗಳ ಸೊಪ್ಪುಳು,
ಮಳೆಗೆ ಕಣ್ಬಿಡುವರಳು, ಮತ್ತೀ
ಇಳೆಯೊಳಾವುದು ನಲಿವುದು
ಹೊಳಪು, ಹೊಸತನವನ್ನೆಲ್ಲ ಮೀರಿಸಿ, ನಿನ್ನ ಗಾನವೆ ಮೆರೆವುದು.

ಮೂಲದ ಮೊದಲ ಎರಡು ಸಾಲುಗಳು 'ಹೊಳೆವ ಗರುಕೆಯ ಮೇಲೆ....' ಎಂದು ಬಹಳ ನಿರ್ದಿಷ್ಟವಾಗಿ ಅನುವಾದಗೊಂಡಿವೆ. 'Rain-awaken'd flowers' ಎಂಬುದಂತೂ 'ಮಳೆಗೆ ಕಣ್ಬಿಡುವರಳು' ಎಂದು ಮೂಲದ ಅರ್ಥಸಾಮ್ಯ ಮತ್ತು ಧ್ವನಿಸಾಮ್ಯಗಳೊಂದಿಗೆ ಅನುವಾದದಲ್ಲಿ ಮೂಡಿಬಂದಿದೆ. ಅದೇ ರೀತಿ 'thy music doth surpass' ಎಂಬುದೂ ಕೂಡ 'ನಿನ್ನ ಗಾನವೆ ಮೆರೆವುದು' ಎಂದು ಯಥಾವತ್ತಾಗಿ ಅನುವಾದಗೊಂಡಿದೆ. ಆದರೆ ಪೈಗಳು ಅನುವಾದಿಸಿರುವ ಈ ಪದ್ಯ ಶ್ರೀಯವರ ಈ ಪದ್ಯದ ಮುಂದೆ ಸಪ್ಪೆಯೆನಿಸುತ್ತದೆ.

ಮುಂದಿನ ಪದ್ಯದಲ್ಲೂ ಅನುವಾದದ ಸಿದ್ಧಿಯನ್ನು ನಾವು ಕಾಣಬಹುದಾಗಿದೆ.

ಮೂಲ : Teach us, sprite or bird,
What sweet thoughts are thine :
I have never heard
Praise of love or wine
That panted forth a flood of rapture so divine

ಅನು : ದೇವನಾಗಿರು ಹಕ್ಕಿಯಾಗಿರು,
ಕಲಿಸು ನಮಗೀ ಹರುಷವ,
ಪ್ರೇಮಗಾನವೋ, ಸೋಮಪಾನವೊ
ಅಲೆವುದಾವುದು ಹೃದಯವ ?
ಆವಸವಿ ಬಗೆ ತುಂಬಿತುಳುಕುವುದಿನಿತು ದಿವ್ಯಾನಂದವ ?

ಮೂಲದ ಸೊಬಗನ್ನು ಯಥಾವತ್ತಾಗಿ ತರಲು ಪ್ರಯತ್ನಿಸಿದ್ದರೂ ಅನುವಾದಕರು

ಇಲ್ಲೊಂದು ಬದಲಾವಣೆಯನ್ನು ಮಾಡಿಕೊಂಡಿದ್ದಾರೆ. ಸಾಮಾನ್ಯ ಹೇಳಿಕೆಯನ್ನು ಶ್ರೀಯವರು ಇಲ್ಲಿ ಪ್ರಶ್ನಾರ್ಥಕವಾಗಿ ಬದಲಾಯಿಸಿದ್ದಾರೆ. ಈ ಬದಲಾವಣೆಯನ್ನು ಬಿಟ್ಟರೆ ಅಂತಹ ಹೆಚ್ಚಿನ ಬದಲಾವಣೆ ಕಾಣಿಸುವುದಿಲ್ಲ. ಆದರೆ ಎರಡನೆಯ ಸಾಲಿನಲ್ಲಿ 'what sweet thoughts are thine' ಎಂಬುದನ್ನು 'ಕಲಿಸು ನಮಗೀ ಹರುಷವ' ಎಂದು ಬದಲಾಯಿಸಿರುವುದರ ಔಚಿತ್ಯವೇನೋ ತಿಳಿಯದು. ಪೈಯವರು ಅನುವಾದಿಸಿರುವ ಈ ಪದ್ಯ ಮೂಲದಿಂದ ಬಹಳ ದೂರವಾಗಿದೆ, ಜೊತೆಗೆ ಸ್ವಲ್ಪಮಟ್ಟಿನ ಪೆಡಸಿನಿಂದಲೂ ಕೂಡಿದೆ.

ಹದಿನಾಲ್ಕನೆಯ ಪದ್ಯವನ್ನು ಇನ್ನುಮುಂದೆ ಪರಿಭಾವಿಸಬಹುದು.

ಮೂಲ : Chorus hymeneal
Or trimphal chaunt
Match'd with thine, would be all
But an empty vaunt—
A thing wherein we feel there is some hidden want

ಅನು : ಮದುವೆಯೊಸಗೆಯ ಗೀತವಾಗಲಿ,
ಜಯದ ಘೋಷವೆ ಆಗಲಿ,
ಎದಿರೆ ನಿನ್ನೊಂದುಲಿಗೆ. ತೆಗೆ, ಹುಸಿ
ಮಯದ ಹೆಮ್ಮೆಯ ಕೊಸರಿಕೆ !
ಅದರೊಳೆತ್ತಲೋ ಹುದುಗಿ ಏನೋ ಕೊರತೆ ಇಹುದೆಂದರಿಯೆವೇ ?

ಇಲ್ಲಿಯೂ ಶ್ರೀಯವರ ಅನುವಾದ ಮೂಲಕ್ಕೆ ಹೆಚ್ಚು ಸಮೀಪವಾಗಿದೆ. ಮೊದಲೆರಡು ಸಾಲುಗಳು ಬಹಳ ಸೊಗಸಾಗಿ ಅನುವಾದಗೊಂಡಿವೆ. ಮೂಲದ 'But an empty vaunt' ಎಂಬುದನ್ನು ಶ್ರೀಯವರು 'ಹುಸಿಮಯದ ಹೆಮ್ಮೆಯ ಕೊಸರಿಕೆ' ಎಂದು ಅನುವಾದಿಸಿದ್ದರೆ, ಪೈಯವರು ಅದನ್ನು ಮತ್ತಷ್ಟು ಮೋಹಕವಾಗಿ 'ಬಣಗು ಹೆಮ್ಮೆಯದಲ್ಲ' ಎಂದು ಅನುವಾದಿಸಿದ್ದಾರೆ. ಪೈಯವರ ಈ ಸಾಲು ಮೂಲಕ್ಕೆ ಯಥಾರ್ಥವಾಗಿದೆ.

ಹದಿನೈದನೆಯ ಪದ್ಯ ಹೀಗಿದೆ :

ಮೂಲ : What objects are the fountains
Of thy happy strain ?
What fields, or waves, or mountains ?

What shapes of sky or plain
What love of thine own kind? What ignorance of pain?

ಅನು : ಆವ ಸಿರಿನೋಟಗಳು ಮಡುಗಳೊ
ತೀವಿದೀ ಸುಖಗಾನಕೆ ?
ಆವ ತೆರೆಗಳೋ, ಬಯಲೋ, ಬೆಟ್ಟವೋ
ಆವ ಗಗನ ವಿಚಿತ್ರವೊ ?
ಆವ ಜಾತಿ ಪ್ರೇಮವೊ ? ನೋವೇನೊ ಕಾಣದ ಜನ್ಮವೊ ?

ಶ್ರೀಯವರ ಮತ್ತು ಪೈ ಅವರ ಈ ಪದ್ಯದ ಅನುವಾದಗಳು ಮೂಲಕ್ಕೆ ಹೆಚ್ಚು ಹತ್ತಿರವಾಗಿವೆ. ಮೂಲದ 'what fields, or waves, or mountains ?' ಎಂಬುದನ್ನು ಶ್ರೀಯವರು 'ಆವ ತೆರೆಗಳೊ, ಬಯಲೊ, ಬೆಟ್ಟವೊ ?' ಎಂದು ಸ್ವಲ್ಪಮಟ್ಟಿಗೆ ವಿಷಯ ಸ್ಥಾನಪಲ್ಲಟಮಾಡಿದ್ದರೆ, ಪೈಗಳು 'ಯಾವೆಲ್ಲ ಹೊಲವೊ ಯಾವಲೆಯೊ ಮಲೆಯೊ ?' ಎಂದು ಬಹಳ ಸುಂದರವಾಗಿ ಅನುವಾದಿಸಿದ್ದಾರೆ. ಒಟ್ಟಿನಲ್ಲಿ ಈ ಪದ್ಯ ಇಬ್ಬರಲ್ಲಿಯೂ ಬಹಳ ಚೆನ್ನಾಗಿ ಅನುವಾದಗೊಂಡಿದೆಯೆಂದು ಹೇಳಬಹುದು.

ಮುಂದಿನ ಈ ಪದ್ಯವನ್ನು ಗಮನಿಸಿ :

ಮೂಲ : With thy clear keen joyance
Languor cannot be :
Shadow of annoyance
Never came near thee :
Thou lovest ; but ne'er knew love's sad satiety.

ಅನು : ಗೆಲುವು ಹಿಗ್ಗುವ ನಿನ್ನ ಬಗೆಯೊಳು
ಸೊರಗು ಸಂಕಟವಿಳಿಯದು ;
ಕಲಕಿ ಚಿತ್ತವ ಕವಿವ ಚಿಂತೆಯು
ನೆರಳು ಬಳಿಯೊಳು ಸುಳಿಯದು
ಒಲಿವೆ, ಒಲಿವರ ದಣಿವು ಬೇಸರವೇನೋ ನಿನಗದೆ ತಿಳಿಯದು

ಈ ಪದ್ಯವನ್ನಂತೂ ಶ್ರೀಯವರು ತುಂಬ ಸೊಗಸಾಗಿ ಕನ್ನಡಿಸಿದ್ದಾರೆ. ಮೂಲದಲ್ಲಿರುವಂತೆಯೇ ಕನ್ನಡದಲ್ಲೂ ಪ್ರಾಸವನ್ನು ಉಳಿಸುವ ಕಾರ್ಯವನ್ನು ಕೈಗೊಂಡಿದ್ದಾರೆ. ಸಂದರ್ಭಕ್ಕೆ ತಕ್ಕಂತೆ ಪದಗಳು ಒಂದನ್ನೊಂದು ಅನುಸರಿಸಿ ಬಂದಿವೆ. ಓದಿಸಿಕೊಂಡು ಹೋಗುವ ಗುಣದ ಜೊತೆಗೆ, ಲಯ ಮಾಧುರ್ಯ ಕೂಡ ಬಂದಿದೆ. ಆದರೆ ಪೈಗಳ

ಈ ಪದ್ಯದ ಅನುವಾದ ತುಂಬ ಪೆಡುಸಾಗಿದೆ. ಉದಾಹರಣೆಗೆ ಕೊನೆಯ ಸಾಲನ್ನು ಶ್ರೀಯವರು 'ಒಲಿವೆ....ತಿಳಿಯದು' ಎಂದು ಅನುವಾದಿಸಿದ್ದರೆ ಇದನ್ನೇ ಪೈಗಳು 'ನೀಂ ತಿಳಿಯೆ ಕೂರ್ಮೆಯುಮ್ನಳಿಕೆಯುಳಲಂ' ಎಂದು ಅನುವಾದಿಸಿದ್ದಾರೆ.

ಹದಿನೇಳನೆಯ ಪದ್ಯವನ್ನು ಇನ್ನು ನೋಡಬಹುದು :

ಮೂಲ : Waking or asleep
Thou of death must deem
Things more true and deep
Than we mortals dream,
Or how could thy notes flow in such a crystal stream ?

ಅನು : ಜಡರು ಮರ್ತ್ಯರು ನಾವು, ತರ್ಕಿಸಿ
ಮರಣಮರ್ಮವನರಿವೆವೆ ?
ಹಿಡಿದು ಕನಸಿನೊಳಾಳವೆಲ್ಲವ
ಪರಮ ಶಾಂತಿಯ ಪಡೆದಿಹೆ ;
ಪಡೆಯದಿರಲಿಂತೆಂತು ಹರಿವುದು ರಾಗ ತಿಳಿಹೊಳೆಯಂದದೆ ?

ಈ ಪದ್ಯದ ಒಟ್ಟರ್ಥ ಅನುವಾದದಲ್ಲಿ ಮೂಡಿದ್ದರೂ ಮೂಲದಲ್ಲಿರುವ 'waking or asleep' ಎಂಬ ಉನ್ನತ ಭಾವನೆಯೇ ಅನುವಾದದಲ್ಲಿ ಮಾಯವಾಗಿಬಿಟ್ಟಿದೆ. ತರ್ಕದ ಪ್ರಶ್ನೆಯೇ ಮೂಲದಲ್ಲಿ ಏಳದಿದ್ದಾಗ ಇಲ್ಲಿ 'ತರ್ಕಿಸಿ' ಎಂಬುದನ್ನು ಶ್ರೀಯವರು ಸೇರಿಸಿರುವ ಔಚಿತ್ಯವೇನೋ ತಿಳಿಯದು. ಮೂಲದಲ್ಲಿ 'ನಾವು ಮರ್ತ್ಯರು' ಕನಸುಕಾಣುವುದಕ್ಕಿಂತ 'ಮರಣ'ವೇ ಹೆಚ್ಚು ಸತ್ಯದಿಂದ ಮತ್ತು ಆಳವಾಗಿ ವಸ್ತುಗಳನ್ನು ಪರಿಭಾವಿಸಬಲ್ಲುದು ಎಂಬ ಆಶಯವಿದ್ದರೆ ಅನುವಾದದಲ್ಲಿ ಇದು ಬೇರೆ ಗತಿಯನ್ನು ಹಿಡಿದಂತೆ ತೋರುತ್ತದೆ. ಕೊನೆಯ ಸಾಲು ಉತ್ತಮವಾಗಿ ಅನುವಾದಗೊಂಡಿದೆ. ಪೈಯವರ ಅನುವಾದವನ್ನು ಗಮನಿಸಿದಾಗ ಅವರ ಅನುವಾದವೂ ಹೆಚ್ಚುಕಡಿಮೆ ಹೀಗೆಯೇ ಇದೆ. ಮೇಲಿನ ಪದ್ಯದ ಮೊದಲನೆಯ ಸಾಲುಗಳನ್ನು ಪೈಯವರು 'ತನುವಳಿನ ನಾವೆಂದೊ, ಕನಗಾಂಬ ವಿಷಯದಿಂ' ಎಂದು ಅಷ್ಟೇ ಅರ್ಥವಾಗದ ರೀತಿಯಲ್ಲಿ ಭಾಷಾಂತರಿಸಿದ್ದಾರೆ.

ಹದಿನೆಂಟನೆಯ ಪದ್ಯವನ್ನು ಇನ್ನುಮುಂದೆ ನೋಡಬಹುದು.

ಮೂಲ : We look before and after,
And pine for what is not :
Our sincerest laughter

With some pain is fraught;
Our sweetest songs are those that tell of saddest thought.

ಅನು : ಹಿಂದುಮುಂದನು ನೋಡಿ ನವೆವೆವು
ನೆನೆಯುತಿಲ್ಲದ ಸುಖವನು,
ಕುಂದು ಸೋಂಕದ ನಮ್ಮ ನಗೆಯೊಳು
ಕೊನೆಗೆ ನೋವಿನಿಸಿರುವುದು,
ನೊಂದ ಗೋಳನು ಹೇಳಿಕೊರೆವುವೆ ಇನಿಯ ಕವನಗಳೆಮ್ಮೊಳು.

ಮೂಲದ ಮೊದಲ ಎರಡು ಸಾಲುಗಳು ಶ್ರೀಯವರ ಅನುವಾದದಲ್ಲಿ ಯಥಾವತ್ತಾಗಿ ಅನುವಾದಗೊಂಡಿರುವುದರ ಜೊತೆಗೆ ಮೋಹಕವಾಗಿವೆ, ಬಹಳ ಸರಳವಾಗಿವೆ, ಸಹಜವಾಗಿವೆ. 'ಹಿಂದುಮುಂದನು ನೋಡಿ ನವೆವೆವು, ನೆನೆಯುತಿಲ್ಲದ ಸುಖವನು' ಎಂಬುದು ಎಷ್ಟೊಂದು ಸಹಜವಾಗಿದೆ! ಮೂಲದ 'our sweetest ...thought' ಎಂಬುದನ್ನು ಶ್ರೀಯವರು 'ನೊಂದಗೋಳನು....ಕವನಗಳೆಮ್ಮೊಳು' ಎಂದು ಭಾಷಾಂತರಿಸಿರುವುದು ಅಷ್ಟೇನೂ ಹಿತವಾಗಿಲ್ಲ. ಮೂಲಧ್ವನಿಯನ್ನು ಇದು ಅಷ್ಟಾಗಿ ಪ್ರತಿಧ್ವನಿಸುವುದಿಲ್ಲ. ಪೈಯವರ ಅನುವಾದ ಕೂಡ ಅಷ್ಟೇ ನೀರಸವಾಗಿದೆ. ಇದನ್ನೇ ಅವರು 'ಮನಂ ಸಂದ ಜೇವಸವ ಬಗೆ ತಂದೊರೆವುವೆಮ್ಮ ಸ್ವಾದಿಷ್ಠಗೀತಂ' ಎಂದು ಅನುವಾದಿಸಿದ್ದಾರೆ.

ಹತ್ತೊಂಬತ್ತನೆಯ ಪದ್ಯವನ್ನು ಈಗ ನೋಡಬಹುದು.

ಮೂಲ : Yet if we could scorn
Hate, and pride, and fear ;
If we were things born
Not to shed a tear,
I Know not how thy joy we ever should come near.

ಅನು : ಹೋಗಲದು :—ಹಗೆ, ಕೊಬ್ಬು, ಕಳವಳ
ದೆಡೆಗೆ ಲೆಕ್ಕಿಸದಿದ್ದೆವು ;
ಹೀಗೆ ಕಂಬನಿಬಿಡದ ಹುಟ್ಟನು
ಪಡೆದೆ ಭೂಮಿಗೆ ಬಂದೆವು ;
ಆಗಲಾಯಿತು, ನಿನ್ನ ನಲಿವಿನ ಹದಕೆ ಬರುವೆವೆ ? ಕಾಣೆನು.

ಇಲ್ಲಿಯೂ ಕೂಡ ಶ್ರೀಯವರ ಅನುವಾದ ಮೂಲಕ್ಕೆ ಹತ್ತಿರವಾಗಿದೆ. 'I know not....near' ಎಂಬುದನ್ನು ಸೊಗಸಾಗಿ ಅನುವಾದಿಸಿದ್ದಾರೆ. ಪೈಯವರು ಇದನ್ನು

'....ತಿಳೆಯೆ ನಾನೆಂತಕಟ ನಿನ್ನ ಹಳಸದೀ ನಲಿವಿನುಲಿವಿನ ಸನಿ ಹಕೆ' ಎಂದು ಅನುವಾದಿಸಿದ್ದಾರೆ. ಇದು ಮೂಲದಿಂದ ತುಸು ಭಿನ್ನವಾಗಿದೆ. ಶ್ರೀಯವರು ಮೇಲಿನ ಪದ್ಯದಲ್ಲಿ '.... .......ಭೂಮಿಗೆ ಬಂದೆವು' ಎಂಬ ಮೂಲದಲ್ಲಿಲ್ಲದ ಭಾವವನ್ನು ಅನುವಾದದಲ್ಲಿ ಹೊರಡಿಸುತ್ತಾರೆ. ಈ 'ಧ್ವನಿ'ಯ ಔಚಿತ್ಯವೇನೋ ಅರ್ಥವಾಗುವುದಿಲ್ಲ.

ಇಪ್ಪತ್ತನೆಯ ಪದ್ಯವನ್ನು ಪರಿಶೀಲಿಸಬಹುದು.

ಮೂಲ : Better than all measures
Of delightful sound,
Better than all treasures
That in books are found,
Thy skill to poet were, thou scorner of the ground !

ಅನು : ಕಿವಿಗೆ ಸವಿಯನು ಕರೆವ ವೃತ್ತಗ
ಳಿರಲಿ ಹೆಣೆಯುವೆವೆಲ್ಲರು,
ಕವನಕೋಶದೊಳಿರುವ ರತ್ನಗ.
ಳಿರಲಿ ಕದಿಯಲು ಬಲ್ಲೆವು
ಕವಿಗೆ ಬೇಡವೆ ನಿನ್ನ ಕೌಶಲ–ನೆಲವ ಜರೆಯುವ ಜೀವವೇ !

ಮೂಲದಲ್ಲಿ 'Better than........found' ಎಂದಿದ್ದರೆ ಅದನ್ನು ಶ್ರೀಯವರು 'ಕವನಕೋಶದೊಳಿರುವ' ಎಂದು ಅನುವಾದಿಸಿ ಮೂಲದ ಅರ್ಥ ಛಾಯೆಯನ್ನೇ ಬದಲಾಯಿಸಿದ್ದಾರೆ. ಇದನ್ನು ಬದಲಾಯಿಸುವ ಅಗತ್ಯವಾದರೂ ಏನಿತ್ತು ? ಎಂದು ಪ್ರಶ್ನಿಸಬೇಕಾಗುತ್ತದೆ. ಪೈಯವರು 'ಕವಿತೆಯೊಳಗವಿತಿರುವ ಬಗೆ ಬಗೆಯ ನಿಧಿ ಚಯದಿಂ' ಎಂದು ಅನುವಾದಿಸಿದ್ದಾರೆ.

ಇನ್ನು ಕೊನೆಯ ಪದ್ಯವನ್ನು ಪರಿಶೀಲಿಸಬಹುದು.

ಮೂಲ : Teach me half the gladness
That thy brain must know,
Such harmonious madness
From my lips would flow,
The world should listen then, as I am listening now !

ಅನು : ಭೋಗನಿಧಿ, ನೀನರಿತ ಹರುಷದಿ
ಕಲಿಸಿಕೊಡು ನನಗರೆಯನು ;

ರಾಗಮಧುರಾವೇಶವೆನ್ನಲಿ
ತುಳುಕಿ ಬರುತಿದೆ ತುಟಿಯಲಿ,
ಈಗ ಕೇಳುವೆ ನಾನು, ಲೋಕವೆ ಆಗ ಕೇಳುದೆನ್ನನು.

ಈ ಪದ್ಯ ಮೂಲಕ್ಕಿಂತ ಸ್ವಲ್ಪ ಭಿನ್ನವಾಗಿದೆ. ಮೂಲದ ಭಾವಗಳನ್ನು ಇಲ್ಲೂ ಕೂಡ ಶ್ರೀಯವರು ಸ್ವಲ್ಪಮಟ್ಟಿಗೆ ಬದಲಾಯಿಸಿದ್ದಾರೆ. ಈ ಬದಲಾವಣೆಯ ಬಗ್ಗೆ ವಿವರಗಳಿಲ್ಲ. ಮೇಲಿನ ಪದ್ಯದ 'The world should listen....now' ಎಂದು ಕವಿ ಲೋಕವೂ ತಾನು ಹೇಳುವುದನ್ನು ಕೇಳಬಯಸಲಿ ಎಂದು ಹೇಳುವ ಉಪದೇಶದ ಮಾತನ್ನು ಶ್ರೀಯವರು ಬಹಳ ಯಾಂತ್ರಿಕವಾಗಿ 'ಈಗ ಕೇಳುವೆ....ಕೇಳುದೆನ್ನನು' ಎಂಬುದಾಗಿ ಅನುವಾದಿಸಿದ್ದಾರೆ. ಇದು ತೀರ ಸಪ್ಪೆಯೆನಿಸುತ್ತದೆ. ಆದರೆ ಇದನ್ನೇ ಗೋವಿಂದ ಪೈ ಅವರು ಬಹಳ ಅರ್ಥಪೂರ್ಣವಾಗಿ '........ತಿರೆಯುದು ಕೇಳೆ ಕಿವಿದೆರೆವುದಂದೀಗಳಾಂ ಕೇಳುವಂತೆ' ಎಂದು ಭಾಷಾಂತರಿಸಿದ್ದಾರೆ.

'ಬಾನಾಡಿ' ಕವನವನ್ನು ತೌಲನಿಕವಾಗಿ ಇಂಗ್ಲಿಷ್ ಮೂಲದೊಡನೆ ಹೋಲಿಸಿ ನೋಡಿದಾಗ ಅನುವಾದ ಸಿದ್ಧಿ ಈ ಕವನದಲ್ಲಿ ದೊರೆತಿಲ್ಲವೆಂದೇ ಹೇಳಬೇಕಾಗುತ್ತದೆ. ಆದರೆ ಮೂಲದೊಡನೆ ಹೋಲಿಸದೆ ಪ್ರತ್ಯೇಕವಾಗಿ ಈ ಕವನವನ್ನು ಓದಿದಾಗ ಕನ್ನಡದಲ್ಲಿ ಸಹಜವಾಗಿ ರಚಿತವಾದ ಸ್ವತಂತ್ರ ಕವನವೇನೋ ಎಂಬಷ್ಟರಮಟ್ಟಿಗೆ ಸಹಜವಾಗಿದೆ. ಕವನದ ನಡುನಡುವೆ ಉತ್ತಮ ಭಾಷಾಂತರ ಒಪ್ಪುವಂತೆ ನಡೆದಿದ್ದು ಶ್ರೀಯವರು ಇದನ್ನು ಇನ್ನಷ್ಟು ಪರಿಷ್ಕರಿಸಿದ್ದಿದ್ದರೆ ಬಹುಶಃ ಮೂಲಕ್ಕೆ ಇದು ಮತ್ತಷ್ಟು ಹತ್ತಿರ ಸರಿಯುತ್ತಿತ್ತೆಂದು ತೋರುತ್ತದೆ.

ನವೋದಯದ ಆರಂಭಕಾಲದಲ್ಲಿ ಇಂತಹ ಪ್ರಯತ್ನ ಕೈಗೊಂಡು ಕನ್ನಡದ ಕಣಜವನ್ನು ಶ್ರೀಮಂತಗೊಳಿಸಿದ ಇವರ ಸಾಹಸ ಕಾರ್ಯಕ್ಕೆ ಕನ್ನಡಿಗರು ಋಣಿಯಾಗಿರಬೇಕಾಗಿದೆ. ಇಂತಹ ಕವನವೊಂದನ್ನು ಕೇವಲ ಭಾಷಾಂತರ ದೃಷ್ಟಿಯಿಂದ ಪರಿಶೀಲಿಸಬಾರದು. ಭಾಷಾಂತರ ಸ್ವರೂಪದ ಬಗ್ಗೆ ಮೌಲ್ಯಮಾಪನಮಾಡುವಾಗ ಇಲ್ಲಿ ಅನುವಾದಿಸಿರುವ ಪದಪದಗಳನ್ನು ಹಿಂಜಿ ತೆಗೆದು 'ಈ ಕವನ ಭಾಷಾಂತರವೆಂದು ಕರೆಸಿಕೊಳ್ಳಲು ಅರ್ಹವಾಗಿಲ್ಲ' ಇತ್ಯಾದಿಯಾಗಿ ಕಟುವಿಮರ್ಶೆ ಮಾಡುವುದಾಗಲಿ, ಕುಹಕದ ಕಟಕಿಯ ಮಾತುಗಳನ್ನಾಡುವುದಾಗಲಿ ಬಹು ಸುಲಭ ಕೆಲಸ. ಆದರೆ ಆ ಕಾಲದ ಹಿನ್ನೆಲೆಯನ್ನು ಗಮನಿಸಿ, ಆ ಕಾಲಕ್ಕೆ ಕನ್ನಡದಲ್ಲಿ ಇಂತಹ ಕೃತಿಯೊಂದು ಮೂಡಿಬಂದಿತೆಂಬ ಅಂಶವನ್ನು ನೆನೆದಾಗ ಇದರಲ್ಲಿರುವ ಅರೆಕೊರೆಗಳು ಮುಚ್ಚಿಹೋಗು

ತ್ರವೆ. ಶ್ರೀಯುವರಂತಹ ಮಹನೀಯರು ಭಾಷಾಂತರ ಕ್ಷೇತ್ರದಲ್ಲಿ ದುಡಿದು ಕನ್ನಡ ಭಾಷೆ ಸತ್ವಯುತವಾಗಲು, ಶ್ರೀಮಂತವಾಗಲು ಕಾರಣರಾದರೆಂಬ ಸಂಗತಿಯನ್ನು ಸದಾ ನೆನಪಿನಲ್ಲಿಟ್ಟುಕೊಳ್ಳಬೇಕು. ಏಕೆಂದರೆ ಬೇರಾವ ಕ್ಷೇತ್ರಕ್ಕಿಂತಲೂ ಕಾವ್ಯದ ಕ್ಷೇತ್ರದಲ್ಲಿ ಭಾಷಾಂತರದ ಕಾರ್ಯ ಬಹಳ ಕಷ್ಟ. 'Poetry, Sir, cannot simply be translated' ಎಂಬುದಾಗಿ ಸರ್. ಜಾನ್‌ಸನ್‌ರಂತಹ ಪ್ರಸಿದ್ಧ ಲೇಖಕರು ಹೇಳಿದ್ದು ಇದೇ ಉದ್ದೇಶದಿಂದಲೇ.



"ನಮ್ಮ ಕನ್ನಡವನ್ನು ಮುಂದಕ್ಕೆ ತರುವುದಕ್ಕೆ ಬೇಕಾದ ಹೆಮ್ಮೆಯೂ ಹೆಬ್ಬುಬ್ಬೂ ನಮ್ಮಲ್ಲಿ ಉಂಟು. ನಮ್ಮ ಮಾತೇನೂ ನೆನ್ನೆ ಮೊನ್ನೆಯ ಕಾಡು ಮಾತಲ್ಲ. ನಮ್ಮ ಕಾವ್ಯಮಾಲೆ ಓದು ಬರಹ ಬರದ ಒಡ್ಡರು ಹೇಳುವ ಕುರುಕು ಪದವೂ ಅಲ್ಲ. ಆರ್ಯರು ಇಂಡಿಯಾಕ್ಕೆ ಬರುವುದಕ್ಕೆ ಮೊದಲೇ ದ್ರಾವಿಡ ಭಾಷೆ ನೆಲಸಿತ್ತು ; ಈಚೆಗೆ ಒಡೆದು ಮುಖ್ಯವಾಗಿ ತೆಲುಗು, ತಮಿಳು, ಕನ್ನಡ, ಮಲೆಯಾಳ ಎಂದು ನಾಲ್ಕು ಕವಲಾಗಿದೆ. ಇವುಗಳು ಪ್ರತಿಯೊಂದರಲ್ಲಿಯೂ ವಿಸ್ತಾರವಾದ ಗ್ರಂಥಮಾಲೆ ಹುಟ್ಟಿದೆ. ಕನ್ನಡದಲ್ಲಿ ಸುಮಾರು ಐದು ಆರನೆಯ ಶತಮಾನದಿಂದಲೂ ಕಾವ್ಯಗಳನ್ನು ಬರಿದಿದ್ದಾರೆಂದು ಸ್ಪಷ್ಟವಾಗಿದೆ....ಈ ಭಂಡಾರವನ್ನೆಲ್ಲಾ ಕೂಡಿಟ್ಟು ಕಾಪಾಡಿಕೊಂಡು ಮುಂದೆ ಹೆಚ್ಚಿಸುತ್ತಾ ಹೋಗುವುದು ಬಿಟ್ಟು, ಇದ್ದಬದ್ದದ್ದನ್ನೆಲ್ಲಾ ಕೆರೆಯಲ್ಲಿ ಮುಳುಗಿಸಿ ಕೈಬೀಸಿಕೊಂಡು ಮನೆಗೆ ಬರುವಷ್ಟು ಮರುಳುತನ ಎಲ್ಲಾದರೂ ಉಂಟೆ ?"

—'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', 'ಶ್ರೀ ಸಾಹಿತ್ಯ'ದಲ್ಲಿ, ಪು. ೨೫೪

ಎಸ್. ಎಸ್. ಶಾರದಾ ಪ್ರಸಾದ್



# "ಮುದ್ದಿನ ಕುರಿಮರಿ"

(ಪ್ರಾಯೋಗಿಕ ಭಾಷಾಂತರ ವಿಶ್ಲೇಷಣೆ)

"ಮೂವತ್ತೆರಡು ವರ್ಷಗಳ ಹಿಂದಿನ ಮಾತು. ಹೈಸ್ಕೂಲಿನಲ್ಲಿ ಓದುತ್ತಿದ್ದ ನನ್ನ ಕೈಗೆ ಒಂದು ಮಾಸಪತ್ರಿಕೆ ಸಿಕ್ಕಿತು. ಅದರ ಹಾಳೆಗಳನ್ನು ತಿರುವಿ ಹಾಕುವಾಗ, ಸಾಲುಸಾಲಾಗಿ ಅಚ್ಚಾಗಿದ್ದ ಕವನವೊಂದು ಕಣ್ಣನ್ನು ಸೆಳೆಯಿತು, ಕುತೂಹಲದಿಂದ ಓದತೊಡಗಿದೆನು :

ಹಿಡಿದು ಮಂಜು ಬೀಳುತ್ತಿತ್ತು, ಚುಕ್ಕಿ ಕಣ್ಣು ಮಿಟುಕುತಿತ್ತು ;
"ಕುಡಿಯೊ, ಕಂದ, ಕುಡಿಯೊ" ಎಂದು ನುಡಿವ ಮಾತು ಕಿವಿಗೆ ಬಿತ್ತು ;
ತಿರುಗಿ ನೋಡಲೊಬ್ಬಿಯಾಚೆ, ಒಬ್ಬಳಲ್ಲಿ ಹೆಣ್ಣುಮಗಳು
ನೋಯು ಬಿಳುಪು ಕುರಿಯ ಮರಿಯ ತಲೆಯ ತಡವುತಿದ್ದಳು....

ಚಿಕ್ಕಂದಿನ ಪಠ್ಯಪುಸ್ತಕಗಳಲ್ಲಿ ನಾವು ಓದಿ ಬಳಕೆ ಮಾಡಿಕೊಂಡಿದ್ದ ಷಟ್ಪದಿ, ಕಂದ, ವೃತ್ತ ಈ ಯಾವೊಂದು ಪದ್ಯಜಾತಿಗೂ ಸೇರದಿದ್ದರೂ ತಾಳಕ್ಕೆ ಸರಿಯಾಗಿ ಓಡುವ ಚರಣಗಳು, ಕೇಳಿದ ಕೂಡಲೆ ಅರ್ಥವಾಗುವ ಆಡಂಬರವಿಲ್ಲದ ಹೊಸಗನ್ನಡ ಮಾತುಗಳು. ಹುಡುಗರ ಅನುಭವಕ್ಕೆ ಕೂಡ ನಿಲುಕುವ ವಿಷಯಸರಣಿ—ಇದನ್ನು ಕಂಡು ನನ್ನ ಎಳೆಯ ಮನಸ್ಸು ಈ ಪದ್ಯದ ಕಡೆಗೆ ಹೆಚ್ಚಾಗಿ ಹರಿಯಿತು. ಇಂಥ ಕವನಗಳು ಇನ್ನೂ ಉಂಟೆ ?........ಕರ್ನಾಟಕ ಗ್ರಂಥಮಾಲೆಯಲ್ಲಿ ೧೯೨೧ರಲ್ಲಿ ಪ್ರಕಟವಾಗಿದ್ದ 'ಇಂಗ್ಲಿಷ್ ಗೀತಗಳು' ಎಂಬ ಹೆಸರಿನ ಚಿಕ್ಕ ಕವನಸಂಪುಟವು...ದೊರೆಯಿತು; ಮೇಲೆ ಉಕ್ತವಾಗಿರುವ 'ಮುದ್ದಿನ ಕುರಿಮರಿ' ಎಂಬ ಕವನವೂ ಅದರಲ್ಲಿತ್ತು"[1] ಎಂಬ ತೀ. ನಂ. ಶ್ರೀಕಂಠಯ್ಯನವರ ಮಾತುಗಳು ಈ ಪದ್ಯ ಆ ಕಾಲದಲ್ಲಿಯೇ ಬೀರಿದ ಪ್ರಭಾವವನ್ನು ಸೂಚಿಸುತ್ತವೆ.

"'ಇಂಗ್ಲಿಷ್ ಗೀತಗಳು' ಪ್ರಕಟವಾದ ಕೂಡಲೆ ಹಿತವಾದ ಗಾಳಿ ಬೀಸಿತು ; ಸಮುದ್ರದ ತೆರೆಗಳ ತುದಿಯಲ್ಲಿ ನೀರಿನ ಮಣಿಗಳು ಉಕ್ಕಿ ಹೊಳೆಯುವಂತೆ ನಮ್ಮ

---

1 'ಇಂಗ್ಲಿಷ್ ಗೀತಗಳು', "ಪ್ರಸ್ತಾವನೆ", ತೀ.ನಂ. ಶ್ರೀಕಂಠಯ್ಯ, 1983, ಪು. ix-x.

ಸಾಹಿತ್ಯಸಾಗರದಲ್ಲೂ ಅಲೆಗಳೆದ್ದು ಕಾವ್ಯರತ್ನಗಳು ಹೊಳೆಯುತ್ತ ಕಾಣಿಸಿಕೊಂಡುವು...."[2] ಎಂಬ ಮಾತಿನಲ್ಲಿ ಶ್ರೀಯವರ ಕೃತಿಯಲ್ಲಿ ಅಡಗಿದ್ದ ರತ್ನಗಳ ಪ್ರಸ್ತಾಪ ಮಾಡಿದ್ದಾರೆ. ಅವುಗಳ ಪೈಕಿ "ಮುದ್ದಿನ ಕುರಿಮರಿ"ಯೂ ಒಂದು ಎಂಬುದಂತೂ ನಿಸ್ಸಂದೇಹವಾದ ಮಾತಾಗಿದೆ.

ಶ್ರೀಯವರು ತಮ್ಮ ಆಯ್ಕೆಯ ಬಗ್ಗೆ, ಅನುವಾದದ ರೀತಿಯ ಬಗ್ಗೆ ಹೇಳುವುದನ್ನು ಗಮನಿಸೋಣ : "...........ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನೇ ಮುಂದಿಟ್ಟುಕೊಂಡು ಕೆಲಸ ಮಾಡಿದ್ದೇನೆ. ಕೆಲವು ಕಡೆ ಹೆಸರು, ಭಾವ ಮುಂತಾದುವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ—ಇದೆಲ್ಲವೂ ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ. ಕನ್ನಡ ಜಾಯಮಾನವನ್ನು ಮೀರದೆ ಎಷ್ಟುಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟುಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ." ಇದು ಒಂದು ರೀತಿಯಲ್ಲಿ ಮುನ್ನೆಚ್ಚರಿಕೆಯ ಮಾತಾದರೆ, ತಾವು ಆಯ್ದುಕೊಂಡ ಕಾವ್ಯವಸ್ತುಗಳು ಯಾವುವು ಎಂಬ ಬಗ್ಗೆ ಹೇಳುವುದನ್ನು ಗಮನಿಸಬಹುದು : "ವಿಶ್ವಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು ಜನ್ಮಾಂತರ ದರ್ಶನಗಳು...."[3] ಈ ವಿಷಯಗಳಿಗೆ ಸಂಬಂಧಿಸಿದಂತೆ ೬೦ ಕವನಗಳ ಅನುವಾದಗಳು 'ಇಂಗ್ಲಿಷ್ ಗೀತ'ಗಳಲ್ಲಿ ಸೇರಿವೆ. ಸಂಖ್ಯಾಬಾಹುಳ್ಯದ ದೃಷ್ಟಿಯಿಂದ ಷೆಲ್ಲಿಗೆ ಪ್ರಥಮ ಸ್ಥಾನ ಸಲ್ಲುತ್ತದೆ, ಅವನ ಒಂಬತ್ತು ಕವನಗಳು ಅನುವಾದಗೊಂಡಿವೆ. ಬರ್ನ್ಸ್‌ನ ಆರು ಕವನಗಳಿವೆ, ವರ್ಡ್ಸ್‌ವರ್ತ್‌ನ ಐದು ಕವನಗಳು ಅನುವಾದಗೊಂಡಿವೆ; ಪರಿಸ್ಥಿತಿ ಹಾಗಿದ್ದರೂ "ಬಿ.ಎಂ.ಶ್ರೀಯವರು ವರ್ಡ್ಸ್‌ವರ್ತ್ ಕವಿಯ ಭಕ್ತರು; ಕಾವ್ಯಶೈಲಿಯ ವಿಷಯದಲ್ಲಿ ಅವನ ಅಭಿಪ್ರಾಯಗಳನ್ನು ಬಹುಮಟ್ಟಿಗೆ ಅನುಮೋದಿಸಿ, ಕವಿತೆಯ ಭಾಷೆಗೂ ಜನತೆಯ ಭಾಷೆಗೂ ಹೆಚ್ಚಿನ ಅಂತರವಿರಬಾರದೆಂದೂ, ಜನಸಾಮಾನ್ಯನ ಮಾತನ್ನು ಶೋಧಿಸಿ ಆರಿಸಿಕೊಂಡರೆ ಕಾವ್ಯ ಭಾಷೆಯಾಗಬಲ್ಲದೆಂದೂ ನಂಬಿದ್ದರು."[4]

---

[2] 'ಬಿ.ಎಂ. ಶ್ರೀಕಂಠಯ್ಯ', ಎ.ಎನ್. ಮೂರ್ತಿರಾವ್, ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ; 1982 (ಎ.ಮು.) ; ಪು. ೩೬.

[3] 'ಇಂಗ್ಲಿಷ್ ಗೀತಗಳು', "ಅರಿಕೆ", ಬಿ.ಎಂ. ಶ್ರೀಕಂಠಯ್ಯ

[4] 'ಇಂಗ್ಲಿಷ್ ಗೀತಗಳು', "ಪ್ರಸ್ತಾವನೆ", ತೀ.ನಂ. ಶ್ರೀಕಂಠಯ್ಯ, 1983. ಪು. xxvi.

ಎಂಬುದು ಒಂದು ಹೇಳಿಕೆಯಾದರೆ "ವರ್ಡ್ಸ್‌ವರ್ತ್ ಅಂತೂ ಅವರ ಪ್ರೀತಿಯ ಕವಿ; ಆತನ 'ಲ್ಯೂಸಿ ಪದ್ಯ'ಗಳಲ್ಲಿ (Lucy Poems) ಅವರಿಗೆ ಹೆಚ್ಚಿನ ಮೆಚ್ಚಿಕೆಯಿದ್ದರೂ ಅವುಗಳಲ್ಲಿ ಒಂದಾದರೂ ಇಲ್ಲಿ ಬಂದಿಲ್ಲದಿರುವುದು ಸೋಜಿಗದ ವಿಷಯ"[5] ಎಂಬ ಅನಿಸಿಕೆಯೂ ಇಲ್ಲದಿಲ್ಲ.

ಕಾವ್ಯದ ಅನುವಾದದ ಇತಿ-ಮಿತಿಗಳ ಬಗ್ಗೆ—ಅಂತೆಯೇ 'ಇಂಗ್ಲಿಷ್ ಗೀತಗಳ' ಅನುವಾದದ ಸಫಲತೆಯ ಬಗ್ಗೆ — ಒಂದು ಅಭಿಪ್ರಾಯವನ್ನೂ ಇಲ್ಲಿ ಗಮನಿಸ ಬಹುದಾಗಿದೆ : "'ಭಾಷಾಂತರ ಮಾಡುವಾಗ ಏನು ಕೈತಪ್ಪಿಸಿಕೊಂಡು ಮರೆಯಾಗುತ್ತದೆಯೋ ಅದೇ ಕಾವ್ಯಗುಣ' ಎಂದು ಕೆಲವರು ಹೇಳುವುದುಂಟು; ಇಲ್ಲಿಯ ಒಂದೆರಡು ಅನುವಾದಗಳನ್ನು ನೋಡಿದಾಗ ಈ ಮಾತನ್ನು ತಿರುಗು-ಮುರುಗು ಮಾಡಿ 'ಭಾಷಾಂತರ ಮಾಡುವಾಗ ಯಾವುದು ಒಂದು ಸೇರಿಕೊಳ್ಳುತ್ತದೆಯೋ' ಅದೇ ಕಾವ್ಯಗುಣ ಎಂದು ಹೇಳುವಂತಾಗುತ್ತದೆ-ಸ್ವಲ್ಪ ಉತ್ಪ್ರೇಕ್ಷೆಗೆ ಮನಸೋತರೆ...."[6] "ಶ್ರೀಯವರು ಅನುವಾದ ಕಾರ್ಯದಲ್ಲಿ ಒಲುಮಟ್ಟಿಗೆ ಕಟ್ಟುನಿಟ್ಟಿನ ಮಾರ್ಗವನ್ನೇ ಅನುಸರಿಸಿದರು. ಅಕ್ಷರಶಃ ಭಾಷಾಂತರಮಾಡದೆ, ಮೂಲದ ಭಾವನ್ನೈಖರಿಯನ್ನು ಸಜೀವವಾಗಿ ಆದರೆ ಯಥಾವತ್ತಾಗಿ ಕನ್ನಡದಲ್ಲಿ ಪ್ರತಿಬಿಂಬಿಸಲು ಸರ್ವ ಪ್ರಯತ್ನವನ್ನೂ ಮಾಡಿದರು ; ಈ ಕಾರ್ಯದಲ್ಲಿ ಹೆಚ್ಚಿನ ಯಶಪಡೆದರು ಎಂಬುದು ಗಮನಾರ್ಹವಾದ ಅಂಶ.

"ಈ ಸಂಕಲನದಲ್ಲಿ ಸಿದ್ಧಿ ದೊರೆತಿರುವ ಅನುವಾದಗಳು ಬಹುಸಂಖ್ಯೆಯಲ್ಲಿವೆ. ಉದಾಹರಣೆಗೆ ಮುಪ್ಪು-ಯೌವನ, ವಸಂತ, **ಮುದ್ದಿನ ಕುರಿಮರಿ**, ಕಾಳಗದ ಪದ, ಮಾದಮಾದಿ, ಕನಕಾಂಗಿ, ಬಿಂಕದ ಸಿಂಗಾರಿ, ಮುದಿಯ ರಾಮುಗೌಡ, ದುಃಖಸೇತು, ಕಾರಿಹೆಗ್ಗಡೆಯ ಮಗಳು, ಜೋಳಕನ್ನೆಯರು, ಅರೆ ಯಾವುದಿಲ್ಲಿ, ನಿರಾಶೆ, ನನ್ನ ಮೇರಿ, ಕನಸು ಬೇಕು ಕನಸು, ಪ್ರಾರ್ಥನೆ — ಇವು ಇನ್ನು ಕೆಲವು ಉತ್ಕೃಷ್ಟವಾದ ಅನುವಾದಗಳು."[7] ಯಶಸ್ವಿ ಅನುವಾದದ ಪಟ್ಟಿಯಲ್ಲಿ ಸ್ಥಾನ ಪಡೆದಿರುವ "ಮುದ್ದಿನ ಕುರಿಮರಿ" (The Pet Lamb)ಯ ಬಗ್ಗೆ ಸ್ವಲ್ಪಮಟ್ಟಿಗೆ ವಿವರವಾಗಿ ಗಮನಿಸಬಹುದು.

* * *

---

[5] ಅದೇ., ಪು. xxxiv.

[6] 'ಬಿ. ಎಂ. ಶ್ರೀಕಂಠಯ್ಯ', ಎ. ಎನ್. ಮೂರ್ತಿರಾವ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1982 (ಎ.ಮು.), ಪು. ೩೯.

[7] 'ಇಂಗ್ಲಿಷ್ ಗೀತಗಳು', "ಪ್ರಸ್ತಾವನೆ", ಬಿ. ಎಂ. ಶ್ರೀಕಂಠಯ್ಯ, 1983, ಪು. xxxv.

ವರ್ಡ್ಸ್‌ವರ್ತ್ ಸು. ೧೮೦೦ರಲ್ಲಿ ರಚಿಸಿದ "The Pet Lamb" ೬೮ ಸಾಲುಗಳ ಒಂದು ಪದ್ಯ. ಇದು ಕನ್ನಡದಲ್ಲಿ "ಮುದ್ದಿನ ಕುರಿಮರಿ"ಯಾಗಿ ಅಷ್ಟೇ ಸಂಖ್ಯೆಯ ಸಾಲುಗಳಲ್ಲಿ ಮೂಡಿಬಂದಿದೆ ಎಂಬುದು ಕುತೂಹಲಕಾರಿಯಾದ ಅಂಶ. "The Pet Lamb" ನಲ್ಲಿ ವರ್ಡ್ಸ್‌ವರ್ತ್‌ನಿಗೆ ಸ್ಫೂರ್ತಿಯ ಸೆಲೆಯಾಗಿರಬಹುದು ಎನ್ನಲಾದ Barbara Lewthwaite ಎನ್ನುವ ಹುಡುಗಿಯ ಬಗ್ಗೆ ಈ ಹೇಳಿಕೆಯೂ ಇದೆ : "....Barbara Lewthwaite now (1843) living at Ambleside, though much changed as to beauty, was one of two most lovely sisters.... [She] was not in fact the child whom I had seen and overheard as engaged in the poem. I chose the name for reasons implied in the above ..." [Notes in *William Wordsworth*, the Poems, Vol. I, Ed : John O. Hayden, Penguin Books, (1982) p. 968]. ಈ ಬರ್ಬರ ಲೆತ್‌ವೈಟ್ ಶ್ರೀಯವರ ಅನುವಾದದಲ್ಲಿ, ಎಲ್ಲೆಲ್ಲೂ ಕಂಡುಬರುವ, ಮುಗ್ಧತೆಯ ಪ್ರತೀಕವಾದ ಹೆಣ್ಣುಮಗಳಾಗಿ ಪರಿವರ್ತನೆಗೊಂಡಿದ್ದಾಳೆ. ವರ್ಡ್ಸ್‌ವರ್ತ್‌ನ ಪಾಲಿಗೆ ಒಬ್ಬಳು ವ್ಯಕ್ತಿಯಾಗಿದ್ದವಳು ಇಲ್ಲಿ ಸಾಮಾನ್ಯೀಕರಣಗೊಂಡಿರುವುದು ಗಮನಾರ್ಹವಾದ ಅಂಶ. ಇದು ಒಂದು ಮುಖ್ಯ ಬದಲಾವಣೆಯಾಗಿದೆ ಎನ್ನಬಹುದು.

ಶ್ರೀಯವರು ವರ್ಡ್ಸ್‌ವರ್ತ್‌ನನ್ನು ಬಹುಮಟ್ಟಿಗೆ ಅನುಸರಿಸಿರುವರು. ಉದ್ದೇಶಪೂರ್ವಕವಾಗಿ ಬದಲಾವಣೆಗಳನ್ನು ಮಾಡಿಕೊಂಡಿರುವುದರ ಜೊತೆಗೆ ಒಂದೆರಡು ಕಡೆ ಕೆಲವು ಪದಗಳನ್ನು ಬಿಟ್ಟಿರುವುದೂ ಉಂಟು—ಕವನದ ಒಟ್ಟು ಪರಿಣಾಮಕ್ಕೆ ಭಂಗ ಬಾರದ ರೀತಿಯಲ್ಲಿ.

ಉದಾ : Nor sheep nor kine were near ; the lamb was all alone ಎನ್ನುವುದು

ಕುರಿಗಳಿಲ್ಲ ಜೇರೆ ನೆರೆಯೊಳಲ್ಲಿ ಮರಿಯದೊಂದೆ ಇತ್ತು

ಎಂದು ಅರ್ಥಪೂರ್ಣವಾಗಿ ಬಂದಿದೆಯಾದರೂ ಮೂಲದ kine (=cows, ಪ್ರಾ.ಪ್ರ.) ಎಂಬುದು ಬಂದಿಲ್ಲ. ಇಡೀ ಪದ್ಯದಲ್ಲಿನ ಒತ್ತು ಕುರಿಮರಿಯತ್ತಲೇ ಇರುವುದರಿಂದ ಈ "ಬಿಡುವಿಕೆ" ಅಷ್ಟು ಪ್ರಮುಖವಾಗಿ ಪರಿಣಮಿಸುವುದಿಲ್ಲ.

ಮೂಲದಲ್ಲಿ ಕಂಡುಬರಬಹುದಾದ ಅನಿಶ್ಚಿತತೆಯು ಕನ್ನಡದಲ್ಲಿ ಹೇಗೆ ಖಚಿತತೆಯಾಗಿ ಮಾರ್ಪಟ್ಟಿದೆ, ಸಂದೇಹ ನಿವಾರಣೆಯಾಗಿ ಮುಗ್ಧಮನದಲ್ಲಿ ಆತ್ಮವಿಶ್ವಾಸ ಮೂಡಿಸುವುದು ಹೇಗೆ ಸಾಗಿದೆ ಎಂಬುವನ್ನು ಇಲ್ಲಿ ಗಮನಿಸಿ :

Thy limbs, are they not strong ? And beautiful thou art
ಎಂಬುದು

ನೀನು ಬಲಿತು ಬೆಳೆಯುತಿರುವೆ ; ಸೊಬಗು ಹೊಮ್ಮಿ ಹೊಳೆಯುತಿರುವೆ
ಎಂದು ಚೆನ್ನಾಗಿ ಮೂಡಿಬಂದಿದೆ.

Then I'll yoke thee to my cart like a pony in the plough ;
ಈ ಸಾಲು ಕನ್ನಡದಲ್ಲಿ

ಆಗ ನನ್ನ ಪುಟ್ಟಬಂಡಿ ಕಟ್ಟಿಕೊಡುವೆ, ಎಳೆಯುವಂತೆ
ಎಂದಾಗಿದ್ದು ಮೂಲದಲ್ಲಿನ like a pony in the ploughನ ಸಾಮ್ಯ ಕಾಣದಾಗಿದೆ.

ಸ್ವದೇಶೀಕರಣಗೊಂಡಿರುವ ಪ್ರಸಂಗ ಗಮನಿಸಿ :

If Nature to her tongue could measured numbers bring
ಎಂಬುದು

ಅಳತೆಮಾಡಿ ನುಡಿಯ ಹೆಣೆವ ವರವ ಕೊಡಲು ವಾಣಿ, ಈಗ
ಎಂದಾಗಿದೆ. Nature ವಿದ್ಯಾಧಿದೇವತೆಯಾದ ವಾಣಿಯಾಗಿ ಪರಿವರ್ತಿತವಾಗಿದೆ ; 'ಭಾರತೀ'ಕರಣಗೊಂಡಿದೆ; (Nature ಪ್ರಕೃತಿ ಎಂದರೂ ತಪ್ಪಾಗುತ್ತಿರಲಿಲ್ಲವೇನೋ !) Beech ಬಸಿರಿ ಮರವಾಗಿದೆ.

ಮೂಲದ ಒಂದು ಪದಕ್ಕೆ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಪದಗಳನ್ನು ಬಳಸಿ ಪರಿಣಾಮವನ್ನು ಹೇಗೆ ಹೆಚ್ಚು ಮಾಡಲಾಗಿದೆ ಎಂಬುದನ್ನು ಗಮನಿಸಬಹುದು :

Thy plot of *grass* is soft, and green as *grass* can be
ಎಂಬುದು

ನೆಲದ ಹುಲ್ಲು ಮೆತ್ತೆಯಲ್ಲ ! ಇದಕೆ ಹಸುರೆ ಇಲ್ಲವಲ್ಲ !

ಮತ್ತು

This *grass* is tender *grass*
ಎಂಬುದು

ಇಲ್ಲಿ ಗರುಕೆ ಎಳೆಯ ಗರುಕೆ
ಎಂದಾಗಿದೆ. ಸಿದ್ಧಿ ಪಡೆದ ಭಾಷಾಂತರಕಾರರಿಗೆ ಮಾತ್ರ ಈ ಕಾರ್ಯ ಸಾಧ್ಯ ಎಂದರೆ ಉತ್ಪ್ರೇಕ್ಷೆಯಾಗಲಾರದು.

* * *

ಇನ್ನು "ಮುದ್ದಿನ ಕುರಿಮರಿ"ಯ ಛಂದಸ್ಸಿನ ಬಗ್ಗೆ ಗಮನಿಸಬಹುದು.

"ಮುದ್ದಿನ ಕುರಿಮರಿ" ತ್ರಿಮಾತ್ರಾಲಯದಲ್ಲಿಯೇ ಇದೆ. ಇದರ ಪಾದ ಸಂಯೋಜನೆಯು "ಗೋವಿನ ಕಥೆಯ ಮಟ್ಟ"ನ್ನು ಹೋಲುತ್ತದೆ. ಗೋವಿನಕಥೆಯ ಮಟ್ಟನಲ್ಲಿ ಮೂರು ಪೂರ್ಣಪಾದಗಳ ಸರಣಿ ಕೊನೆಗೆ ಒಂದು ಊನಪಾದ ಬಂದು, ಬಂಧಕ್ಕೆ ಮುಕ್ತಾಯ ಸೂಚಿಸುತ್ತದೆ. ಒಟ್ಟಾರೆ ಬಂಧವು ಒಂದು ತ್ರಿಸಮ ಚೌಪದಿ ಯಾಗಿದೆ. "ಮುದ್ದಿನ ಕುರಿಮರಿ"ಯ ರಚನೆ ಕೂಡ ಇಂತಹುದೇ. ಇದರಲ್ಲೂ ಮೂರು ಪೂರ್ಣಪಾದಗಳ ಸರಣಿ ; ಕೊನೆಗೆ ಒಂದು ಊನಪಾದ ; ಒಟ್ಟಾರೆ ಬಂಧವು ಒಂದು ತ್ರಿಸಮಚೌಪದಿ. [ಎಂದರೆ ಮೂರು ಪಾದಗಳು ಸಮವಾಗಿರುವ ಒಂದು ಚೌಪದಿ] ಬಹುಮಟ್ಟಿಗೆ ಅಂತ್ಯಪ್ರಾಸವಿಲ್ಲ [ಒಂದನೆಯ ಮತ್ತು ಹದಿಮೂರನೆಯ ಚೌಪದಿಗಳಲ್ಲಿ ಮಾತ್ರ ಅಂತ್ಯಪ್ರಾಸವಿದೆ] ; ಆದಿಪ್ರಾಸ ಮಾತ್ರ aa bb ಮಾದರಿಯಲ್ಲಿ ನಿಯತವಾಗಿ (ಮೂರನೆಯ ಚೌಪದಿಯೊಂದನ್ನುಳಿದು) ಬಂದಿದೆ.

ಉದಾ : ಹಿಡಿದು. ಮಂಜು. ಬೀಳು. ತಿತ್ತು. ಚುಕ್ಕಿ. ಕಣ್ಣು. ಮಿಟುಕು. ತಿತ್ತು. ;
"ಕುಡಿಯೊ. ಕಂದ. ಕುಡಿಯೊ." ಎಂದು. ನುಡಿವ. ಮಾತು. ಕಿವಿಗೆ. ಬಿತ್ತು ;
ತಿರುಗಿ. ನೋಡ. ಲೊಬ್ಬೆ. ಯಾಚೆ. ಒಬ್ಬ. ಳಲ್ಲಿ. ಹೆಣ್ಣು. ಮಗಳು.
ನೊರೆಯ .ಬಿಳುಪು. ಕುರಿಯ. ಮರಿಯ. ತಲೆಯ. ತಡವು. ತಿದ್ದ. ಳು

3. 3. 3. 3. 3. 3. 3. 3
3. 3. 3. 3. 3. 3. 3. 3
3. 3. 3. 3. 3. 3. 3. 3
3. 3. 3. 3. 3. 3. 3. ಮು

* * *

ಚುಕ್ಕಿ, ಒಬ್ಬೆ, ಈದ ತಾಯಿ, ಉಣಲು, ಇರುಬು, ಮಂದೆ, ಹೊಯ್ಯುವೆ, ಕೊಪ್ಪ, ಮಬ್ಬು, ತಳುಗಿ, ಪದ, ಹಟ್ಟಿ ಮೊದಲಾದ ಪದಗಳ ಪ್ರಯೋಗದಿಂದ ಇಡೀ ಕವನ ಓದುಗನನ್ನು ಗ್ರಾಮಜೀವನದ ಪರಿಸರಕ್ಕೆ ಕರೆದೊಯ್ಯುತ್ತದೆ.

ಒಟ್ಟಿನಲ್ಲಿ "ಮೂಲದ ಮಿತಿ, ಬಿಗಿ ಶಕ್ತಿ ಕುಂದಿಲ್ಲ ಹೆಚ್ಚಿದೆ; ಅದು ಪರರಾಷ್ಟ್ರದಿಂದ ತಂದಂತೆ ತೋರುವುದಿಲ್ಲ, ಆದರ ರುಚಿ ಭಾರತಕ್ಕೆ ಸಹಜವಾದದ್ದು" ಎಂದು ಶ್ರೀಯವರ "ಬಿಂಕದ ಸಿಂಗಾರಿ"ಯ ಬಗ್ಗೆ ಮೂರ್ತಿರಾಯರು ಹೇಳಿರುವ ಮಾತನ್ನೇ "ಮುದ್ದಿನ ಕುರಿಮರಿ"ಗೂ ಅನ್ವಯಿಸಿ ಹೇಳಬಹುದಾಗಿದೆ.

ಶಿವರಾಮು ಕಾಡನಕುಪ್ಪೆ

# ಹೊಂಗನಸುಗಳು

ಎಸ್.ಜಿ. ನರಸಿಂಹಾಚಾರ್ಯ, ಜಯರಾಮಾಚಾರ್ಯ, ಎಸ್.ಜಿ. ಗೋವಿಂದರಾಜ-ಯ್ಯಂಗಾರ್ಯ, ಪಂಜೆ ಮಂಗೇಶರಾಯ, ಹಟ್ಟಂಗಡಿ ನಾರಾಯಣರಾಯ, ಶಾಂತಕವಿ, ಸಾಲಿ ರಾಮಚಂದ್ರರಾಯ—ಇವರೇ ಮೊದಲಾದವರಿಂದ ಕನ್ನಡದ ಹೊಸ ಕಾವ್ಯ ಪ್ರಾರಂಭವಾಯಿತಾದರೂ ಹಾಗೂ ಇವರ ಕಾವ್ಯದ ಭಾಷೆ, ವಸ್ತು, ಶೈಲಿ ಮತ್ತು ಅಭಿವ್ಯಕ್ತಿಗಳಲ್ಲಿ ಹೊಸತನವನ್ನು ಕಾಣಬಹುದಾದರೂ, ನಿಜವಾದ ಹೊಸತನದ ಪ್ರಾರಂಭವಾದದ್ದು ಬಿ. ಎಂ. ಶ್ರೀ ಅವರಿಂದಲೇ ಎಂಬುದು ಇಂದು ನಿರ್ವಿವಾದವಾದ ಸಂಗತಿಯಾಗಿದೆ. ಬಿ.ಎಂ.ಶ್ರೀ ಅವರ ಹಿಂದೆ ಹೊಸ ಕಾವ್ಯಕ್ಕೆ ಒಂದು ಮನೋಭೂಮಿ ಸಿದ್ಧವಾಗಿತ್ತೆಂಬುದರಲ್ಲಿ ಅನುಮಾನವಿಲ್ಲ. ಪಾಶ್ಚಾತ್ಯರ ನಾಟಕವೇ ಮೊದಲಾದ ಸಾಹಿತ್ಯ ಪ್ರಕಾರಗಳು ಆ ಕಾಲಕ್ಕಾಗಲೇ ರೂಪಾಂತರಗೊಂಡಿದ್ದವು. ಆದರೆ ಬಿ.ಎಂ.ಶ್ರೀ ಅವರಿಗಿಂತ ಮೊದಲು ಕಾವ್ಯದ ರೂಪ (Form) ವನ್ನು ಬದಲಾಯಿಸು ವಂಥ ಧೈರ್ಯಕ್ಕೆ ಯಾರೂ ಕೈ ಹಾಕಲಿಲ್ಲ. ಬಿ.ಎಂ.ಶ್ರೀ ಆ ಕೆಲಸ ಮಾಡಿದರು.

ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತಗಳು' ಮೊದಲು ಪ್ರಕಟವಾದದ್ದು ೧೯೨೧ ರಲ್ಲಿ. ಆದರೆ, ಅದಕ್ಕೆ ಮೊದಲು ಈ ಅನುವಾದ ಕವನಗಳು ಪತ್ರಿಕೆಗಳಲ್ಲಿ ಪ್ರಕಟ ಗೊಂಡಿರಬೇಕು. 'ಶ್ರೀ' ಅವರ 'ಭರತ ಮಾತೆಯ ನುಡಿ' ಕವನ ಪ್ರಕಟವಾಗಿರುವುದು ೧೯೧೧ರಲ್ಲಿ ಎಂಬುದು ಅತ್ಯಂತ ಗಮನಾರ್ಹವಾದುದು.

ಹಳೆಯ ಛಂದೋರೂಪಗಳ ಬಂಧನದಲ್ಲಿ ಸಿಲುಕಿ ಕಾವ್ಯ ಕ್ಲೀಷೆಯಾಗುತ್ತಿದ್ದ ಸಂದರ್ಭದಲ್ಲಿ, ನಮ್ಮ ಯುಗಧರ್ಮಕ್ಕೆ ಹೊಂದಿಕೊಳ್ಳುವಂಥ, ಅರ್ಥಪೂರ್ಣ ಎನ್ನಿಸಿ ಕೊಳ್ಳುತ್ತಿದ್ದ ಇಂಗ್ಲಿಷ್ ರೋಮ್ಯಾಂಟಿಕ್ ಕಾವ್ಯದ ಪ್ರಭಾವದಿಂದ ಕನ್ನಡ ಕಾವ್ಯಕ್ಕೆ ಜೀವ ತುಂಬಿದ್ದು ಸಾಮಾನ್ಯ ಕೆಲಸವಲ್ಲ. ನಮ್ಮ ನವೋದಯ ಕಾಲದ ಎಲ್ಲ ಕವಿಗಳು 'ಶ್ರೀ' ಅವರ ಈ ಪ್ರಯೋಗಗಳ ಪ್ರಭಾವದಿಂದ ಬರೆದು, ಬೆಳೆದವರೆ.

ಕಾವ್ಯದ ಹೊರರೂಪವಾದ ಛಂದಸ್ಸೇ ಇಡೀ ಒಂದು ನಾಡಿನ ಕಾವ್ಯಮಾರ್ಗ ದಲ್ಲಿ ಕ್ರಾಂತಿಕಾರಕ ಆಯಾಮಗಳನ್ನು ಸೃಷ್ಟಿಸಬಲ್ಲುದು ಎಂಬುವಕ್ಕೆ 'ಶ್ರೀ' ಅವರು

ಹಾಕಿಕೊಟ್ಟ ಕಾವ್ಯರೂಪವೇ ಸಾಕ್ಷಿಯಾಗಿವೆ. ಈ ನಿಟ್ಟಿನಲ್ಲಿ 'ಶ್ರೀ' ಅವರ ಶ್ರೇಷ್ಠ ಕೊಡುಗೆ 'ಇಂಗ್ಲಿಷ್ ಗೀತಗಳು' ಸಂಕಲನವೇ ಆದರೂ, ಅವರ ಸ್ವಂತ ರಚನೆಗಳ ಸಂಕಲನವಾದ 'ಹೊಂಗನಸುಗಳು' ಕೂಡ ಅಧ್ಯಯನ ಯೋಗ್ಯವಾಗಿದೆ.

ಬಿ. ಎಂ. ಶ್ರೀ ಅವರಿಗೆ ಕನ್ನಡದ ಸ್ಥಿತಿಗತಿಗಳು ಕಾಡಿರುವ ಹಾಗೆ ಮತ್ತಾವ ಸಮಸ್ಯೆಗಳೂ ಕಾಡಿಲ್ಲ. ಕನ್ನಡದ ಉದ್ಧಾರವೇ ಅವರ ಬಾಳಿನ ಜಪ ; ಅವರ ದಿನ ನಿತ್ಯದ ಕರ್ಮ. ಅದರ ಏಳ್ಗೆಯೇ ಅವರ ಸಮಸ್ತ ದುಡಿಮೆಯ ಗುರಿ. ಈ ಕಾರಣ ದಿಂದ ಅವರ ಸ್ವಂತ ರಚನೆಗಳಲ್ಲೆಲ್ಲ ಕನ್ನಡದ ಪ್ರೇಮ ಎದ್ದು ಕಾಣುತ್ತದೆ. ಕಳೆದು ಹೋದ ಕನ್ನಡದ ಸುವರ್ಣಯುಗದ ಪುನರುಜ್ಜೀವನದ ಕನಸನ್ನು ಅವರ ಪ್ರತಿ ಕವನವೂ ಬಯಸುತ್ತದೆ. 'ಶ್ರೀ' ಅವರಿಗೆ ಭಾಷೆಯ ಬಾಳ್ವಿಕೆಯಲ್ಲಿ ಕನ್ನಡಿಗರ ಬಾಳುವಿಕೆ ಕಂಡಿದೆ. ಕನ್ನಡಕ್ಕಾಗಿ ಎಂಥ ಹೋರಾಟಕ್ಕಾದರೂ ಸಿದ್ಧ ಎಂಬ ಆಶಯ ಎಲ್ಲ ಕವನಗಳ ಜೀವಸಾಡಿಯಾಗಿ ಹರಿಯುತ್ತದೆ.

ಬಿ.ಎಂ.ಶ್ರೀ ಕಾವ್ಯ, ಒಂದರ್ಥದಲ್ಲಿ Functional ಆದ ಕಾವ್ಯ. ಕಾವ್ಯದ ಕಲೆಗಾರಿಕೆ, ಸೂಕ್ಷ್ಮತೆ ಕಡಿಮೆ. ಒಂದು ಭಾಷೆಯ ಬಗ್ಗೆ ಜನ-ಜನಪದದಲ್ಲಿ ಪ್ರೀತಿ ಪ್ರೇಮ ಸ್ವಾಭಿಮಾನಗಳನ್ನು ಮೂಡಿಸುವಂಥ ಪ್ರಮುಖ ಗುರಿಯನ್ನು ಇಟ್ಟುಕೊಂಡು ರಚಿತವಾದ ಕವನಗಳಿವು. ಹೀಗಾಗಿ ನವೋದಯ ಕಾಲದ ಇನ್ನಿತರ ಕವಿಗಳಂತೆ ಇವರ ಕಾವ್ಯದಲ್ಲಿ ಸೊಗಸು ಮಾಧುರ್ಯಗಳು ಕಡಿಮೆ. ಆ ಜಾಗದಲ್ಲಿ ಆವೇಗ ಆವೇಶಪೂರಿತ ಬಿರುನುಡಿಗಳ, ಸುಯ್‌ನುಡಿಗಳ ನಡೆಯಿದೆ. ಈ ನಡೆ ಕವಿಯ ಗುರಿಯನ್ನು ಅರ್ಥ ಪೂರ್ಣವಾಗಿ ನಿರ್ವಹಿಸುತ್ತವೆ.

ಬಿ.ಎಂ ಶ್ರೀ ಅವರಿಗೆ ಶ್ರೇಷ್ಠಕಾವ್ಯವನ್ನು ಕೊಡಬೇಕೆಂಬ ಆಸೆಗಿಂತ ಮಿಗಿಲಾಗಿ, ಶ್ರೇಷ್ಠ ಕಾವ್ಯಪರಂಪರೆಯತ್ತ ಜನರ ಮನಸ್ಸು ಹರಿಯುವಂತೆ ಮಾಡುವುದೇ ಮುಖ್ಯ ವಾಗಿತ್ತು. ಇದರಿಂದಾಗಿಯೇ, ಅವರ ಅನುವಾದ ಕವನಗಳಲ್ಲಿರುವ ಛಂದೋವೈವಿಧ್ಯ, ಭಾಷಾ ಬಳಕೆ, ಮಾಧುರ್ಯ ಕೋಮಲತೆಗಳಿಂದ ಕೂಡಿದ ಅಭಿವ್ಯಕ್ತಿ 'ಹೊಂಗನಸುಗಳು' ಸಂಕಲನದಲ್ಲಿಲ್ಲ. ಕನ್ನಡದಲ್ಲಿ ಬರೆಯುವವರಿಗೆ ಸಾಧ್ಯವಾಗುವ ಎಲ್ಲ ಸಾಧ್ಯತೆಗಳನ್ನು ತೋರಿಸಿಕೊಟ್ಟ ಬಿ.ಎಂ.ಶ್ರೀ, ಅತ್ಯಂತ ಕಡಿಮೆ ಎನ್ನುವಷ್ಟು ಪದ್ಯಗಳನ್ನು ಬರೆದಿದ್ದಾರೆ. ಈ ಪದ್ಯಗಳಲ್ಲಿ ಬಹುಪಾಲು ಸಾಂದರ್ಭಿಕ ರಚನೆಗಳು; ಆಂತರ್ಯದ ಅನಿವಾರ್ಯ ಅಭಿವ್ಯಕ್ತಿ ಗಳಲ್ಲ. ಗುರಿ ಸಾಧನೆಯ ಮಾಧ್ಯಮವಾಗಿ ಹೊರಬಂದಂಥವು.

ಈ ಸಂಕಲನದ 'ಬಾನ್‌ಕೊಂಡ ಕೃಷ್ಣನ್', 'ಅರಮನೆಯ ಬಸಗೆ', 'ಶುಕ್ರಗೀತೆ', 'ಪಂಪನ ಬರತೆ', 'ಧರ್ಮಯುದ್ಧ'—ಕವನಗಳು ಹಳಗನ್ನಡ-ನಡುಗನ್ನಡ ಧಾಟಿಯಲ್ಲಿ

ರಚಿತವಾಗಿವೆ. ಅದರಲ್ಲೂ 'ಧರ್ಮಯುದ್ಧ' ಕವನವಂತು ಷಟ್ಪದಿಯಲ್ಲಿದೆ. (ಅದೂ ೧೯೪೩ರಲ್ಲಿ ಈ ಕವನ ರಚಿತಗೊಂಡಿವೆ !) ಉಳಿದ ಕವನಗಳು ಸ್ಪಷ್ಟವಾಗಿ ಆಧುನಿಕ ಮಟ್ಟುಗಳಲ್ಲಿರುವ ರಚನೆಗಳಾದರೂ ಹೇರಳವಾಗಿ ಹಳಗನ್ನಡ-ನಡುಗನ್ನಡ ಪದಗಳನ್ನು ವ್ಯಂಜನಾಂತವಾಗುವ ಪದಗಳನ್ನು ಕಾಣಬಹುದು. ಈ ಅಂಶ ಬಿ. ಎಂ. ಶ್ರೀ ಅವರಿಗಿದ್ದ ಕನ್ನಡ ಪರಂಪರೆಯ ಅಗಾಧ ಜ್ಞಾನವನ್ನು, ಅದರ ಮೇಲಿನ ಪ್ರೀತಿಯನ್ನು ತಿಳಿಸುತ್ತದೆ.

ಕಾವ್ಯದ ರೂಪ ಮಾತ್ರವಲ್ಲ, ಬಿ.ಎಂ.ಶ್ರೀ ಅವರ ಕಾವ್ಯದ ಅಂತರಂಗ-ಬಹಿರಂಗಗಳೆರಡೂ ಕನ್ನಡದ ಹುಚ್ಚನ್ನು ಹತ್ತಿಸಿಕೊಂಡಿವೆ. ಅವರು ಯಾವುದೇ ವಸ್ತುವನ್ನು, ವ್ಯಕ್ತಿಯನ್ನು ಕುರಿತು ಬರೆಯಲಿ—ಅದಕ್ಕೆ ಕನ್ನಡದ ಸಂಬಂಧವನ್ನು ಕಲ್ಪಿಸುತ್ತಾರೆ.

ಬಿ.ಎಂ.ಶ್ರೀ ಅವರು ಬದುಕಿದ್ದ ಕಾಲ—ರಾಜರಿದ್ದ ಕಾಲ ; ಪರಕೀಯರಿದ್ದ ಕಾಲ. ಆಳುವ ಪ್ರಭುಗಳೆಂದರೆ ದೇವರಿಗೂ ಮಿಗಿಲೆಂಬ ಭಾವನೆ. ಉತ್ತರ ಭಾರತದಲ್ಲಿ ಬ್ರಿಟಿಷರ ವಿರುದ್ಧ ಗಾಂಧಿ ನೇತೃತ್ವದಲ್ಲಿ ಚಳುವಳಿ ಸಂಗ್ರಾಮ ರೂಪದಲ್ಲಿ ನಡೆಯುತ್ತಿದ್ದರೂ, ನಮ್ಮದೇ ಆದ ಉತ್ತರ ಕರ್ನಾಟಕ ಅದರಲ್ಲಿ ಪಾಲ್ಗೊಂಡಿದ್ದರೂ ಹಳೆಯ ಮೈಸೂರು ಪ್ರಾಂತ್ಯ ಮೈಸೂರೊಡೆಯರ ಆಳ್ವಿಕೆಯಲ್ಲಿ ವಿಶ್ರಾಂತವಾಗಿತ್ತು. ಮೈಸೂರೊಡೆಯರಿಗೆ ಬ್ರಿಟಿಷರು ಸ್ನೇಹಿತರು-ಪ್ರಭುಗಳು. ಹೀಗಾಗಿ ಬ್ರಿಟಿಷರು ವೈರಿಗಳಲ್ಲ, ಆಳುವ ಪ್ರಭುಗಳು ಎಂಬ ಭಾವನೆಯಿತ್ತು ಎಂಬುದಕ್ಕೆ 'ಶ್ರೀ' ಅವರ ಕಾವ್ಯದಲ್ಲಿ ಅನೇಕ ಸಾಕ್ಷ್ಯಗಳು ದೊರಕುತ್ತವೆ :

ಕಡೆಗೆ ನೆನೆದೆನು ನನ್ನ ಮನೆತನನೇರವಾಗುವ ತೆರವನು,
ಕಡಲರಾಣಿ ಬ್ರಿಟಾನಿಯಳ, ನನ್ನಿನಿಯ ತಂಗಿಯ ನೆರವನು ;
  ಗೆಲಿದು ನಾಡನು ಬೆಸೆದಳು—ನೆಲ
  ದೊಲುಮೆ ಕಟ್ಟನು ಹೊಸೆದಳು.

(ಭರತಮಾತೆಯ ನುಡಿ)

ಆವ ದೇವಿಯರಿವರು ಮೂವರು ?—ಕನ್ನಡ ಸಿರಿಯೊಬ್ಬಳು,
ಅಕ್ಕತಂಗಿಯರಂತೆ ತಬ್ಬುತ, ಕಡಲರಾಣಿಯದೊಬ್ಬಳು,
  ಶ್ರೀ ಭರತಮಾತೆಯದೊಬ್ಬಳು

(ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ)

ಇದು 'ಶ್ರೀ' ಮನೋಧರ್ಮ. ಅವರು ಎಂದೂ ಬ್ರಿಟಿಷರನ್ನೂ, ಅವರ ಸಾಹಿತ್ಯವನ್ನೂ ಹೀಗಳೆದವರಲ್ಲ ; ಅದರಿಂದ ಹೊಸ ಹೊಸ ಸಾಧ್ಯತೆಗಳನ್ನು ಕಂಡವರು. ಅದನ್ನು

ಸ್ಪಷ್ಟವಾಗಿ 'ಇಂಗ್ಲಿಷ್ ಗೀತಗಳು' ಸಂಕಲನದ 'ಕಾಣಿಕೆ' ಕವನದಲ್ಲಿ ಹೀಗೆ ಸ್ಪಷ್ಟಪಡಿಸುತ್ತಾರೆ.

ಪಡುವ ಕಡಲ ಹೊನ್ನ ಹೆಣ್ಣು,
ನನ್ನ ಜೀವದುಸಿರು, ಕಣ್ಣು,
ನಲಿಸಿ, ಕಲಿಸಿ, ಮನವನೊಲಿಸಿ
ಕುಣಿಸುತಿರುವಳು.

ಇಂಗ್ಲಿಷ್ ಕಾವ್ಯ ಪ್ರೀತಿಸುವುದರಲ್ಲಿ, ಅವರ ಪೂರ್ವ-ಪಶ್ಚಿಮ ಸಮನ್ವಯ ಧೋರಣೆಯನ್ನು ಗುರುತಿಸಬಹುದು. ಅಂದ ಮಾತ್ರಕ್ಕೆ ಭಾರತದ ಬಗ್ಗೆಯಾಗಲಿ ಕನ್ನಡದ ಬಗ್ಗೆಯಾಗಲಿ ಅವರ ಪ್ರೀತಿ ಪ್ರೇಮಗಳು ಕಡಿಮೆಯೆಂದಲ್ಲ. ಅವರ ಎಲ್ಲ ರಚನೆಗಳು ನಾಡಭಿಮಾನದಿಂದ, ಭಾಷಾಸ್ವಾಭಿಮಾನದಿಂದ ತುಂಬಿ ತುಳುಕುತ್ತವೆ.

'ಶ್ರೀ' ಅವರಿಗೆ ಮೈಸೂರು ರಾಜರ ಬಗ್ಗೆ ಅತಿ ಎನ್ನಿಸುವಷ್ಟು ರಾಜಭಕ್ತಿ. ತಮ್ಮ ರಾಜಭಕ್ತಿಯನ್ನು ಐದು ಕವನಗಳಲ್ಲಿ ವ್ಯಕ್ತಪಡಿಸಿದ್ದಾರೆ. ಅದರಲ್ಲಿ ಮೂರು ಕವನಗಳು ನಾಲ್ವಡಿ ಕೃಷ್ಣರಾಜರನ್ನು ಕುರಿತು ಬರೆದಿವೆ. ಉಳಿದೆರಡು ಜಯಚಾಮರಾಜರನ್ನು ಕುರಿತವು. ಅನೇಕ ಕಡೆ ಜಯಚಾಮರಾಜರ ಬಗ್ಗೆ ಭಕ್ತಿಯ ಉಲ್ಲೇಖಗಳು ಬರುತ್ತವೆ. 'ಮೈಸೂರು ಮಕ್ಕಳು' ಪದ್ಯದಲ್ಲಿ ಕನ್ನಡನಾಡು, ಜನತೆ ಮತ್ತು ಕೃಷ್ಣರಾಜರನ್ನು ಕುರಿತು ವರ್ಣಿಸುತ್ತಾರೆ: 'ಬೆಳೆಯುವ ನಾಡದು | ಮೈಸೂರು ! ಇಳೆಯ ಮಾದರಿಯದು.| ಮೈಸೂರು.| ಕನ್ನಡಿಗನುಸಿರದು | ಮೈಸೂರು.| ನಾಲುಮಡಿ ಕೃಷ್ಣನ | ಮೈಸೂರು.' ಭಾವಾತಿರೇಕದ ಪ್ರೀತಿ ಇಲ್ಲಿ ವ್ಯಕ್ತವಾಗಿದೆ. ಬಿ. ಎಂ. ಶ್ರೀ ಕೊಡುವ ಕನ್ನಡ ನಾಡು-ಜನತೆಯ ವರ್ಣನೆ ಹೀಗಿದೆ ;

ಅಲ್ಲಿಲ್ಲಿ ನೋಡಿದರು ಬಾನಕರೆಯಲಿ ಹುದುಗಿ ಕಾರ ಮುಗಿಲಂತಿಹುವು ಬೆಟ್ಟ ಹಬ್ಬಿ ; ತೆರೆ ಎದ್ದು ಬಿದ್ದು ಬಹ ಬಯಲಲ್ಲಿ ಹಳ್ಳಿಗಳು, ತಾವರೆಯ ಕೆರೆ, ತೋಟ, ಹೊಲದ ಹಸುರು ; ಕಾಡಿನಲಿ ನುಸಿಯುತ್ತ, ಕಲ್ಲಿನಲಿ ಮೊರೆಯುತ್ತ, ಮರಳಿನಲಿ ಸುಳಿಸುಳಿದು, ಸರಿದು ದುಮುಕಿ ಪಯಿರುಗಳ ಬದುಕಾಗಿ, ಹೊಳಲುಗಳ ಬೆಳಕಾಗಿ, ಕಣ್ಣುಗಳ ಬೆರಗಾಗಿ ಹರಿವ ಹೊನಲು. ಅಲ್ಲಿ ಅಲೆಅಲೆಯಾಗಿ ಬಂದು, ನೆಲೆನೆಲೆಯಾಗಿ ನಿಂದು, ಹಲತೆರದಿಂದ ನುಡಿದು, ನಡೆದು, ಕಡೆಗೆ ನಾಡೊಂದೆಂದು, ದೊರೆಯೊಬ್ಬ ನಮಗೆಂದು, ಬಾಳ ಬೆಲೆ ಹುದುವೆಂದು ಕಲಿತು, ಕಲೆತು, ಜಾಣಿನಲಿ, ಚೆಲುವಿನಲಿ, ಸೊಗಸಿನಲಿ, ನಯವಲೌದಾರ್ಯದಲಿ, ಕಾರ್ಯದಲಿ ಕಳಶನೆನಿಸಿ, ಮೆರೆಯುತಿಹ ಜನವ ನಾನೇನೆಂಬೆ, ಎಂತು ನಾ ಕನ್ನಡಿಗರ್ಸಿರಿಯ ಬಣ್ಣಿಸುವೆನು.

ಹಳಗನ್ನಡ ಸಾಹಿತ್ಯದಲ್ಲಿ ಈ ತೆರನ ವರ್ಣನೆ ನಮಗೆ ದೊರೆತರೂ 'ಶ್ರೀ' ಯವರದೇ ಆದ ವ್ಯಕ್ತಿತ್ವದ ಮುದ್ರೆ ಇದರಲ್ಲಿದೆ.

'ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ'ದಲ್ಲಿ ನಾಲ್ವಡಿ ಕೃಷ್ಣರಾಜರ ವ್ಯಕ್ತಿತ್ವದ ಚಿತ್ರವಿದೆ. ೧೯೪೦ರಲ್ಲಿ ರಚಿತವಾದ 'ಬಾನ್‌ಕೊಂಡ ಕೃಷ್ಣನ್' ಎಂಬ ಪದ್ಯದಲ್ಲಿ ನಾಲ್ವಡಿ ಕೃಷ್ಣರಾಜರ ನಿಧನದಿಂದ ಉಂಟಾದ ಕವಿಯ ಶೋಕದ ಅಭಿವ್ಯಕ್ತಿಯಿದೆ. ಪದ್ಯ ಏಳು ಭಾಗಗಳಲ್ಲಿದೆ. ಆರು ಭಾಗಗಳು ಕೃಷ್ಣರಾಜನ ವ್ಯಕ್ತಿತ್ವ, ಸಾವು ಬದುಕಿನ ಸಂಬಂಧ, ಆತ್ಮದ ಶಾಶ್ವತತೆಗಳ ಬಗ್ಗೆ ಹೇಳುತ್ತದೆ. ಕೊನೆಯ ಭಾಗ ಜಯಚಾಮರಾಜರ ಸ್ತುತಿಯಲ್ಲಿ ಕೊನೆಗೊಳ್ಳುತ್ತದೆ. ಈ ಕವನದ ವೈಶಿಷ್ಟ್ಯ—ಅದರ ಭಾಷಾಶೈಲಿ. 'ಅಶ್ವತ್ಥಾಮನ್' ಈ ಹೊತ್ತಿಗೆ ರಚನೆಯಾಗಿತ್ತು. ಅದೇ ಹಳಗನ್ನಡ ಶೈಲಿಯಲ್ಲಿ 'ಬಾನ್‌ಕೊಂಡ ಕೃಷ್ಣನ್' ಪದ್ಯ ಹರಿಯುತ್ತದೆ.

ಕನ್ನಡನಾಡು ಭಾರತದೇಶದ ಒಂದು ಅವಿಭಾಜ್ಯ ಅಂಗ, ಅದು ಬೇರೆ ಅಲ್ಲ ಎಂಬುದು 'ಶ್ರೀ' ಅವರ ನಿಲವು. ಗತಿಸಿಹೋಗಿರುವ ಭಾರತದ ಹಿರಿಮೆಯನ್ನು ಮತ್ತೆ ಚಿಮ್ಮಿಸಬೇಕೆಂಬ ಛಲವನ್ನು, ಹೊರಬೇಕಾಗಿರುವ ಜವಾಬ್ದಾರಿಯನ್ನು 'ಭರತ ಮಾತೆಯ ನುಡಿ' ಎಂಬ ಕವನ ಹೇಳುತ್ತದೆ. 'ನಮ್ಮ ಮನೆಯಲಿ ನಾವು ಹೆರರಿಗೆ ದುಡಿವ ತೊತ್ತುಗಳಾದೆವು' ಎಂಬಲ್ಲಿ 'ಶ್ರೀ'ಯವರ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರೋಧವನ್ನು ಗುರುತಿಸಬಹುದಾದರೂ, ಈ ಭಾವ ಸ್ಥಾಯಿಯಲ್ಲ. ಭರತಮಾತೆ ಕೊಡುವ ಉತ್ತರ ಕೆಚ್ಚಿನ ವ್ಯಕ್ತಿತ್ವವನ್ನು ಮೆದುಗೊಳಿಸುತ್ತದೆ; ರಾಜಿಮಾಡಿಸುತ್ತದೆ. 'ಸಕಲಧರ್ಮದ ತಿರುಳ'ನ್ನು, 'ಸಕಲ ಸೀಮೆಯ ಬಳಕೆಗೆಳೆದ'ವಳನ್ನು ಭರತಮಾತೆ 'ಮರೆಯಿರಿ' ಎಂದು ತಿಳಿಸಿಬಿಡುತ್ತಾಳೆ. ಧರ್ಮ ಶಾಂತಿಗಳೇ ಸ್ವಾತಂತ್ರ್ಯವೆಂಬ ತತ್ವವನ್ನೊಡ್ಡುತ್ತಾಳೆ. ಕವಿ ಭರತಮಾತೆಗೆ ವಂದಿಸಿ 'ಸಾಕುತಾಯಿಯ ತೊರೆಯೆವು' ಎಂದು ನುಡಿದುಬಿಡುತ್ತಾರೆ.

ಅಧ್ಯಾತ್ಮಗತಿಯಲ್ಲಿ ಸಾಗುವ 'ಶುಕ್ರಗೀತೆ', 'ಶ್ರೀ'ಯವರ ಸಂಕೀರ್ಣಗೀತೆ. ಸತ್ಯ–ಅಸತ್ಯ, ಒಳ್ಳೆಯದು–ಕೆಟ್ಟದ್ದು–ಇವುಗಳ ಹೋರಾಟ ನಿರಂತರ. ಈ ಹೋರಾಟ ದಲ್ಲಿ ಗೆಲ್ಲುವುದು ಸತ್ಯಮಾತ್ರ. 'ಋತವೊಂದೆ ಗೆಲ್ಲುವುದು, ಅನೃತವಲ್ತು' ಎಂದು ವಿಶ್ವ ಭಾರತಿಯನ್ನು ಕವಿ ನೆನೆಯುತ್ತಾರೆ.

ಪಂಪನ ಸಾವಿರ ವರ್ಷದ ಹಬ್ಬದ ನೆನಪಿನಲ್ಲಿ ಬರೆದ 'ಪಂಪನ ಒರತೆ' ಎಂಬ ಪದ್ಯ ಪಂಪನ ಕಾವ್ಯದ ಮಹತ್ತನ್ನೂ ವ್ಯಕ್ತಿತ್ವದ ಮಹತ್ತನ್ನೂ ತಿಳಿಸುತ್ತದೆ. 'ಶ್ರೀ' ಯವರು ಪಂಪ 'ಎಮ್ಮ ತಾಯ್‌ನುಡಿಗೀಗೆ ಪೊಸಪೊಸತು ಪೆಂಪನ್' ಎಂದು

ಆಶಿಸುತ್ತಾರೆ. ಪಂಪನ ಅದ್ಭುತ ಕಲೆಗಾರಿಕೆಯ ಬಗ್ಗೆ, ಸೃಷ್ಟಿಯ ಬಗ್ಗೆ 'ಶ್ರೀ'ಯವರು ಹೀಗೆ ಉದ್ಗಾರ ತೆಗೆಯುತ್ತಾರೆ :

ಓ ಪಂಪ, ಗುರುಪಂಪ, ಏನ್ ನೋಂತ್ತು ನೋಂತ್ತಿಯೋ
ಏನ್ ಪಾರ್ತ್ತು ಪಾರ್ತ್ತೋ
ಕಡೆದಿಟ್ಟೆ ಕಬ್ಬದೊಳ್ ಸಂಸಾರ ಸಾರಮನ್,
ಮಾನಮನ್, ದಾನಮನ್, ಧೀರ ಗಾಂಭೀರ್ಯಮನ್,
ಧರ್ಮ್ಮಮನ್, ಕರ್ಮ್ಮಮನ್, ಶಿವಪದದ ಮರ್ಮ್ಮಮನ್,
ಸರ್ವ್ವಸ್ವಮನ್ !

ಪಂಪನ ಹೊಗಳಿಕೆಯಲ್ಲಿ ಪ್ರೀತಿ ಅಭಿಮಾನ ತುಂಬಿದೆ. ಕರ್ನಾಟಕಕ್ಕೆ ಮತ್ತೊಮ್ಮೆ 'ಪಿರಿಯತನ' ಒರಲೆಂದು 'ಪರಸು' ಎಂದು 'ಶ್ರೀ' ಅವರು ಪಂಪನನ್ನು ಕೇಳಿ ಕೊಳ್ಳುತ್ತಾರೆ.

ಕನ್ನಡದ ಕೆಚ್ಚನ್ನು ಕನ್ನಡಿಗರ ಎದೆಯಲ್ಲಿ ಎಚ್ಚರಿಸುವ ಪದ್ಯ 'ಕನ್ನಡದ ಬಾವುಟ'. ಕನ್ನಡದ ಬಾವುಟ ಹಾರಲು ಪ್ರಾರಂಭವಾಯಿತೆಂದರೆ 'ಹಾಳ್ ಹಾಳ್ ಸುರಿಯಿತು ಹಗೆಯ ಬೀಡಕ್ಕಟ' ಎಂದು ಕವಿ ಹೇಳುತ್ತಾರೆ. ಕವನ ಕನ್ನಡರಾಜರ ಶೌರ್ಯ ಪರಾಕ್ರಮಗಳನ್ನು, ಕವಿಗಳ ಕಲಾಸೃಷ್ಟಿಯನ್ನು ಕನ್ನಡಿಗರಿಗೆ ನೆನಪುಮಾಡಿ ಕೊಡುತ್ತಾ, ಕನ್ನಡದ ಭಾವನೆಗಳನ್ನು ಕನ್ನಡಿಗರ ಎದೆಗಳಲ್ಲಿ ಹೆಪ್ಪುಗಟ್ಟಿಸುತ್ತದೆ.

ತಾಯುಳಿಯೆ ನೀನುಳಿದೆ,
ತಾಯಳಿಯೆ ನೀನಳಿದೆ,
ಮನೆ ಕಾಯಿ, ತುರು ಕಾಯಿ, ನಾಡ ಗಡಿ ಗುಡಿ ಕಾಯಿ,
ಕಾಯಲಾರೆಯ, ಸಾಯಿ

ಎಂದು ಸತ್ತಿರುವ ಸ್ವಾಭಿಮಾನವನ್ನು ಬಡಿದೆಚ್ಚರಿಸುವ ಗಡುಸುತನದಿಂದ ಪದ್ಯ ಮುಂದುವರಿಯುತ್ತದೆ. 'ಕನ್ನಡ ತಾಯಿ ಬಾಳಲಿ' ಎಂಬ ಆಶಯವನ್ನು ಪದ್ಯ ಕೊನೆಗೆ ಧ್ವನಿಸುತ್ತದೆ.

ಇದೇ ಧ್ವನಿ 'ಕನ್ನಡ ತಾಯ ನೋಟ'ದಲ್ಲಿ ಇನ್ನೂ ಸ್ಪಷ್ಟವಾಗಿ ಕಾಣುತ್ತದೆ. ತನ್ನ ಮಕ್ಕಳ ಅಭಿಮಾನ ಶೂನ್ಯತೆಗೆ ಮರುಗಿ, ದುಃಖಪಡುತ್ತಿರುವ ಕನ್ನಡ ತಾಯಿಯ ರುದ್ರಚಿತ್ರವನ್ನು 'ಶ್ರೀ' ಈ ಪದ್ಯದಲ್ಲಿ ಕೊಡುತ್ತಾರೆ :

ತುಂಗಭದ್ರೆಯ ತಡಿಯ, ಚೆದರಿರುವ ಮೊರಡಿಗಳ ಕೊರಕಲಿನ ಬಿಸಿಲ
ಬೇಗುದಿಯ ಬಿರುಕಿನಲಿ ಮುಳ್ಳಿಡೆಯ ಕಲ್ಲುಹೂವಿಡಿದರೆಯ ಮೇಲೆ,
ಕುಳಿತಿದ್ದಳಾ ತಾಯಿ, ಕೈಮೇಲೆ ತಲೆಯೂರಿ, ಅಳಲಿನಾಳದಲಿ !

'ಅಳಲಿನಾಳದಲಿ' ಕುಳಿತಿರುವ ತಾಯಿಯ ಬಾಯಲ್ಲಿ 'ಶ್ರೀ'ಯವರು ಹೇಳಿಸುವ ಈ ಮಾತುಗಳು ಇಂದಿಗೂ ಸತ್ಯವಾಗಿವೆ:

ಏನು ಕವಿಯಿತೋ ಮಂಕು, ಮಕ್ಕಳಿಗೆ ! ಯಾರೆರಚಿದರೊ ಬೂದಿ, ಕಾಣೆ,
ನನ್ನನೊಲ್ಲರು ನನ್ನ ಮಕ್ಕಳೆ ! ತಾವ್ ಬಾಳಿ, ತಾಯ ಬಾಳಿಸರು.
ಹೆರರ ನುಡಿ, ಹೆರರ ನಡೆ,—ಹೆರರ ಕೂಗೆ ಕೂಗು ; ಹೆರರದೇ ಹೆಮ್ಮೆ !

ನನ್ನ ಮನೆ ಹಾಳು !
ನನ್ನ ನುಡಿ ಬೀಳು !

'ಶ್ರೀ'ಯವರು ಈ ಪದ್ಯ ಬರೆದು ಇಂದಿಗೆ ಅರ್ಧಶತಮಾನ ಕಳೆಯುತ್ತಿದೆ. ಆದರೂ ಕನ್ನಡದ ಉಳಿವಿಗೆ ಅದೇ ರೀತಿಯ ಹೋರಾಟ ನಡೆಸಬೇಕಾಗುತ್ತಿರುವುದು ನಮ್ಮ ಬದುಕು-ಭಾಷೆಗಳ ದೊಡ್ಡ ದುರಂತ; ನಮ್ಮ ಜನರ ಹಂಗುತನಕ್ಕೆ ಜೀವಂತ ಸಾಕ್ಷಿ. ಈ ಕವನದಲ್ಲಿ 'ಶ್ರೀ' ಯವರು ಕನ್ನಡದ ಬದುಕು-ಭಾಷೆಯನ್ನು ರಕ್ಷಿಸುತ್ತೇವೆಂದು ಭರವಸೆ ಕೊಡುತ್ತಾರೆ. 'ಶ್ರೀ'ಯವರು ಕನ್ನಡ ತಾಯನ್ನು ಪ್ರಕೃತಿಯನ್ನಾಗಿ ಕಾಣುತ್ತಾರೆ ; ಕನ್ನಡದ ರತ್ನಸಿಂಹಾಸನದಲ್ಲಿಟ್ಟು ಮೆರೆಸುತ್ತಾರೆ.

'ಶ್ರೀ'ಯವರು ಕನ್ನಡವೆಂದರೆ ಭಾವೋದ್ವೇಗಕ್ಕೆ ಒಳಗಾಗುತ್ತಾರೆ. ತಮ್ಮ ಕವನಗಳಲ್ಲಿ ಕನ್ನಡ-ಕನ್ನಡನಾಡನ್ನು ಇನ್ನಿಲ್ಲದಷ್ಟು ಕೀರ್ತಿಸುತ್ತಾರೆ. ಅವರಿಗೆ ಅದೇ ಉಸಿರು, ಹೃದಯ, ಚರ್ಮ ಎನ್ನುವಷ್ಟರಮಟ್ಟಿಗೆ ಅದರಲ್ಲಿ ಬೆರತು ಹೋಗುತ್ತಾರೆ :

ಕನ್ನಡ ನುಡಿ, ನಮ್ಮ ಹೆಣ್ಣು
ನಮ್ಮ ತೋಟದಿನಿಯ ಹಣ್ಣು

(ಕಾಣಿಕೆ-ಇಂಗ್ಲಿಷ್ ಗೀತಗಳು)

ಏನು ಚೆಲುವಿನ ನಾಡು ! ಚೆಲುವು ಚೆಲ್ಲುವ ನಾಡು ! ಕನ್ನಡದ ನಾಡು !
ಏನು ಚಿನ್ನದ ನಾಡು ! ನಮ್ಮೊಲುಮೆಯಾ ನಾಡು ! ನಮ್ಮಿನಿಯ ನಾಡು !
ಕಾವೇರಿಯಿಂದಮಾ ಗೋದಾವರಿಯವರೆಗೆ ಚಾಚಿರುವ ನಾಡು !

(ಕನ್ನಡ ತಾಯ ನೋಟ)

"ಸಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಗೆಲ್ಗೆ, ಬಾಳ್ಗೆ—
ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ."

(ಅದೇ)

ಬಾಳ್ ಕನ್ನಡ ತಾಯ್
ಏಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜೇಶ್ವರೀ

(ಕನ್ನಡದ ಬಾವುಟ)

ಇಂಥ ಹತ್ತಾರು ಸಾಲುಗಳನ್ನು 'ಶ್ರೀ' ಕಾವ್ಯದಲ್ಲಿ ನಾವು ಕಾಣಬಹುದು. ಇವೆಲ್ಲ 'ಶ್ರೀ'ಯವರ ಕನ್ನಡ ಪ್ರೇಮವನ್ನು ಸಾರಿ ಹೇಳುತ್ತವೆ.

ಸನಾತನ ಮೌಲ್ಯಗಳಲ್ಲಿ ಅಚಲನಿಷ್ಠೆ, ಪ್ರಾಚೀನ ಕಾವ್ಯಪರಂಪರೆಯ ಬಗ್ಗೆ ಅತೀವ ಪ್ರೀತಿ, ಹೊಸ ಆಲೋಚನೆಗಳನ್ನು ಕಾಣುವ ಆರೋಗ್ಯಕರ ಮನೋಧರ್ಮ, ಕನ್ನಡದ ಸ್ವಾಭಿಮಾನ—ಇವು 'ಶ್ರೀ' ಕವನಗಳ ವೈಶಿಷ್ಟ್ಯ. ನವೋದಯಕ್ಕೆ ನಾಂದಿ ಹಾಡಿದ 'ಶ್ರೀ'ಯವರ 'ಹೊಂಗನಸುಗಳು' ರಚನೆಗೊಂಡ ಸಾಂದರ್ಭಿಕ ಹಿನ್ನೆಲೆಯ ದೃಷ್ಟಿಯಿಂದ ಗಮನಾರ್ಹ ಕೃತಿಯಾಗಿದೆ.*

---

* ಈ ಲೇಖನ ಬರೆಯಲು ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ 'ಶ್ರೀ ಸಾಹಿತ್ಯ' ಸಂಪುಟವನ್ನು ಬಳಸಿಕೊಂಡಿದ್ದೇನೆ.

ವಿ. ಜಿ. ಕೃಷ್ಣಮೂರ್ತಿ

# ಎರಡು ರುದ್ರನಾಟಕಗಳು

## ೧. ನವೋದಯ ಮತ್ತು ನಾಟಕ ರಚನೆ

ಸಿಂಗರಾರ್ಯನು ಚಿಕ್ಕದೇವರಾಯನ ವಿಲಾಸಕ್ಕಾಗಿ **ಮಿತ್ರವಿಂದಾಗೋವಿಂದ** ನಾಟಕವನ್ನು ರಚಿಸಿದ ತರುವಾಯ (ಸು. ೧೬೮೦), ಎರಡು ಶತಮಾನಗಳವರೆಗೆ, ಅಂದರೆ ಚುರಮುರಿ ಶೇಷಗಿರಿರಾಯರು ೧೮೭೦ ರಲ್ಲಿ **ಶಾಕುಂತಲ** ನಾಟಕವನ್ನು ರಚಿಸುವವರೆಗೆ, ಕನ್ನಡದಲ್ಲಿ ನಾಟಕ ರಚನೆ ಆಗಲಿಲ್ಲ: ಜನರಂಜನೆಗೆ ಹಾಗೂ ವಾಚನಕ್ಕೆ ನಾಟಕ ಸಾಹಿತ್ಯ ಆ ಎರಡು ಶತಮಾನಗಳ ಕಾಲ ಕನ್ನಡಿಗರಿಗೆ ಲಭಿಸಲಿಲ್ಲ. ಆ ತರುವಾಯ ಕನ್ನಡದಲ್ಲಿ ನಾಟಕಗಳು ರಚನೆಯಾಗುವುದಕ್ಕೆ ಎರಡು ಕಾರಣಗಳು ಸ್ಪಷ್ಟವಾಗಿ ಕಾಣುತ್ತವೆ: ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಾಗಲೆ ಮೈಸೂರು ಸಂಸ್ಥಾನ ಹಾಗೂ ಬೊಂಬಾಯಿ ಆಧಿಪತ್ಯಕ್ಕೆ ಸೇರಿದ್ದ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ವ್ಯಾಪಕವಾಗಿ ನಡೆದು ಕಾಲೇಜಿನ ಹಂತದ ವಿದ್ಯಾರ್ಥಿಗಳು ಇಂಗ್ಲಿಷ್ ನಾಟಕಗಳ ವಾಚನದಿಂದ ನಾಟಕ ಸಾಹಿತ್ಯದ ಬಗ್ಗೆ ಅಭಿರುಚಿಯನ್ನು ತಾಳಿದರು. ಪಠ್ಯ ವಿಷಯವಾಗಿ ಗೊತ್ತುಮಾಡುತ್ತಿದ್ದ ಪಾಶ್ಚಾತ್ಯ ನಾಟಕಗಳ ಮೂಲಕ ಪಾಶ್ಚಾತ್ಯ ನಾಟಕಗಳ ವಸ್ತು, ರಚನಾವಿಧಾನ, ಶೈಲಿ ಹಾಗೂ ಪಾತ್ರ ವೈವಿಧ್ಯಗಳತ್ತ ವಿದ್ಯಾವಂತರ ಗಮನ ಹರಿಯಿತು. ಎರಡನೆಯದಾಗಿ, ನಾಟಕ ರಚನೆಗೆ ಉತ್ಸಾಹ ತುಂಬಿದ್ದು ಉತ್ತರ ಕರ್ನಾಟಕ ಹಾಗೂ ಮೈಸೂರು ಕಡೆ ಬಂದು ಪಾಶ್ಚಾತ್ಯ ಶೈಲಿಯ ಚಿತ್ರಚೌಕಟ್ಟಿನ ರಂಗಭೂಮಿಯ (Proscenium stage) ಮೇಲೆ, ಚಿತ್ರಿತ ಸುರುಳು ಪರದೆಗಳನ್ನು ಉಪಯೋಗಿಸಿ ರಂಗಸಂಗೀತದೊಂದಿಗೆ ನಾಟಕಗಳನ್ನು ಪ್ರದರ್ಶಿಸಿದ ಬಾಲಿವಾಲ ಮೊದಲಾದ ಪಾರಸಿ ವೃತ್ತಿ ನಾಟಕ ಮಂಡಲಿಗಳು. ಆಗ ಕನ್ನಡಿಗರಿಗೆ ಪಾಶ್ಚಾತ್ಯ ಶೈಲಿಯ ರಂಗಭೂಮಿಯ ಮೇಲೆ ನಾಟಕಗಳನ್ನು ಅಭಿನಯಿಸಬೇಕೆಂಬ ಉತ್ಸಾಹ ಮೂಡಿತು. ಆ ಸಮಯದಲ್ಲಿ ಅರಮನೆಯ ಶ್ರೀಚಾಮರಾಜೇಂದ್ರ ನಾಟಕ ಮಂಡಲಿಗೆ ಬಸವಪ್ಪಶಾಸ್ತ್ರಿಗಳು ಕಾಳಿದಾಸನ **ಶಾಕುಂತಲ** ನಾಟಕವನ್ನು ಕನ್ನಡ ವೃತ್ತ, ಕಂದ ಹಾಗೂ ಹಾಡುಗಳನ್ನು ಸೇರಿಸಿ ಕನ್ನಡಕ್ಕೆ ಅಳವಡಿಸಿಕೊಟ್ಟರು (೧೮೮೨). ವಿದ್ಯಾವಂತರು ಕಾಲೇಜುಗಳಲ್ಲಿ ಇಂಗ್ಲಿಷ್ ನಾಟಕಗಳನ್ನು ಭಾಷಾಂತರಿಸಿ

ಆಡತೊಡಗಿದರು. ಹೀಗೆ ಇಂಗ್ಲಿಷ್ ನಾಟಕಗಳು ಮತ್ತು ಜನರಂಜನೆಗೆ ನಾಟಕಗಳನ್ನು ಪ್ರದರ್ಶಿಸುತ್ತಿದ್ದ ವೃತ್ತಿ ನಾಟಕ ಕಂಪನಿಗಳು ನಾಟಕ ರಚನೆಗೆ ನೆರವಾದವು. ಇವೆಲ್ಲವೂ ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ನಡೆದ ಘಟನೆಗಳು.

ಬಿ.ಎಂ. ಶ್ರೀಕಂಠಯ್ಯನವರು ಅಭಿಜಾತ ಶೈಲಿಯಲ್ಲಿ ಮೂರು ನಾಟಕಗಳನ್ನು ರಚಿಸುವುದಕ್ಕೆ ಹಿಂದೆ, ವೃತ್ತಿ ರಂಗಭೂಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಕೆಲವರು ನಾಟಕಗಳನ್ನು ರಚಿಸಿದ್ದರು: ಶಾಂತಕವಿಗಳ **ಉಷಾಹರಣ** (೧೮೮೭), ಕರ್ಕಿ ವೆಂಕಟರಮಣಶಾಸ್ತ್ರಿಗಳ **ಇಗಪ ಹೆಗಡೆಯ ವಿವಾಹ ಪ್ರಸಂಗ** (೧೮೮೭), ಎ. ಆನಂದರಾಯರ **ರಾಮವರ್ಮ ಮತ್ತು ಲೀಲಾವತಿ** (*Romeo and Juliet*) ೧೮೮೯, ಬಿ. ಸುಬ್ಬರಾಯರ **ಚಂಡಮಾರುತ** (*The Tempest*) ೧೮೯೮, ಕೆ. ಲಕ್ಷ್ಮಣರಾಯರ **ಚಂಡೀ ಮರ್ದನ ನಾಟಕಂ** (*The Taming of the Shrew*) ೧೯೧೦, ಕೆರೂರು ವಾಸುದೇವಾಚಾರ್ಯರ **ಸುರತ ನಗರದ ಶ್ರೇಷ್ಠಿ** (*The Merchant of Venice*) ೧೯೧೮, ಮತ್ತು **ವಸಂತಯಾಮಿನೀ ಸ್ವಪ್ನ ಚಮತ್ಕಾರ** (*A Midsummer—Night's Dream*) ೧೯೧೮, ಮೊದಲಾದ ನಾಟಕಗಳು ರಂಗದ ಮೇಲೆ ಬಂದಿದ್ದವು. ಎಂ. ಎಲ್. ಶ್ರೀಕಂಠೇಶಗೌಡರು ಸ್ವಂತ ವೃತ್ತಿ ನಾಟಕ ಸಂಘವನ್ನು ಸ್ಥಾಪಿಸಿ **ಪ್ರತಾಪರುದ್ರದೇವ** (*Macbeth*) ೧೮೯೫ ಮತ್ತು **ಪ್ರಮೀಳಾರ್ಜುನೀಯಂ** (೧೮೯೬) ಎಂಬ ನಾಟಕಗಳನ್ನು ರಂಗದ ಮೇಲೆ ಪ್ರಯೋಗಿಸಿದುದಲ್ಲದೆ, ಅವುಗಳನ್ನು *English Classics For Kanarese Readers* ಎಂಬ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು. ಅವರು ಪಾಶ್ಚಾತ್ಯ ನಾಟಕಗಳ ಸ್ವರೂಪವನ್ನು ವಿಕೃತಗೊಳಿಸಿ, ಪ್ರೇಕ್ಷಕರು ಸಾಕು–ಸಾಕು ಅನ್ನುವಷ್ಟು ವೃತ್ತ, ಕಂದ ಮತ್ತು ರಗಳೆಗಳನ್ನು ಸೇರಿಸಿ ಆ ಎರಡು ನಾಟಕಗಳನ್ನು ಬರೆದುದಲ್ಲದೆ, **ಪ್ರಮೀಳಾರ್ಜುನೀಯ**ದಲ್ಲಿ ನಾಯಕ–ನಾಯಿಕೆಯರ ವಿವಾಹ ಕಾಲದಲ್ಲಿ ಅವರ ಮನರಂಜನೆಗೆ "ಪಟ್ಟಣದ ಕೆಲವು ಕೈವಾಡದ ವಟು ಜನ"ರಿಂದ ರಾಮವರ್ಮ–ಲೀಲಾವತಿ (ರೋಮಿಯೋ ಅಂಡ್ ಜೂಲಿಯೆಟ್) ನಾಟಕವನ್ನು ಆಡಿಸಿದ್ದಾರೆ. ಅದು ನಾಟಕದೊಳಗಿನ ನಾಟಕ.

ಶ್ರೀ ಅವರಿಗೆ ನಾಟಕ ರಚನೆಗೆ ಒದಗಿದ ಅವಕಾಶ ಗಮನಾರ್ಹವಾದದ್ದು: ೧೯೩೫ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಸಂಘದ ವಿದ್ಯಾರ್ಥಿಗಳು ಒಂದು ನಾಟಕವನ್ನು ಆಡಬೇಕೆಂದು ಸಂಕಲ್ಪಿಸಲು, ಆ ಸಮಯದಲ್ಲಿ ಸಂಘದ ಅಧ್ಯಕ್ಷರಾಗಿದ್ದ ಬಿ.ಎಂ.ಶ್ರೀ ರನ್ನನ **ಗದಾಯುದ್ಧ**ವನ್ನು ನಾಟಕ ರೂಪಕ್ಕೆ ತಿರುಗಿಸಿಕೊಟ್ಟರು.

ಅದನ್ನು ಸಂಘದ ಸದಸ್ಯರು ಮೈಸೂರಿನಲ್ಲಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದವರು ಬೆಂಗಳೂರಿನಲ್ಲಿ, ಆ ತರುವಾಯ ಆ ಎರಡು ಸಂಘಗಳೂ ಸೇರಿ ಕರ್ನಾಟಕದ ಕೆಲವು ಸ್ಥಳಗಳಲ್ಲಿ ಅಭಿನಯಿಸಿದರು.[1] **ಗದಾಯುದ್ಧ** ರಚನೆ ಯಾದ ಮೇಲೆ ಶ್ರೀ ಅವರು **ಅಜಾಕ್ಸ್** ಗ್ರೀಕ್ ರುದ್ರನಾಟಕದ ವಸ್ತುವನ್ನು ಮಹಾ ಭಾರತ ಯುದ್ಧದಲ್ಲಿ ಭಾಗವಹಿಸಿದ ಅಶ್ವತ್ಥಾಮನಿಗೆ ಹೊಂದಿಸಿಕೊಂಡು **ಅಶ್ವತ್ಥಾಮನ್** ನಾಟಕವನ್ನು ರಚಿಸಿದರು. ಆ ನಾಟಕವು ಸಹ ಯಶಸ್ವಿ ಪ್ರಯೋಗ ವನ್ನು ಕಂಡಿತು. ಆದರೆ ಅವರು ಭಾಷಾಂತರಿಸಿದ **ಪಾರಸಿಕರು** ರುದ್ರನಾಟಕ, ಕಾವ್ಯದೃಷ್ಟಿಯಿಂದ ಅದ್ಭುತ ಕೃತಿಯಾದರೂ ರಂಗಪ್ರಯೋಗದಲ್ಲಿ ಯಶಸ್ವಿಯಾಗಲಿಲ್ಲ.

ರುದ್ರನಾಟಕ ಭಾರತೀಯ ನಾಟಕ ಸಂಪ್ರದಾಯಕ್ಕೆ ಭಿನ್ನವಾದದ್ದು. ಕನ್ನಡ ನವೋದಯ ಕಾಲದಲ್ಲಿ ಭರತಮುನಿಯ ನಾಟ್ಯಶಾಸ್ತ್ರದ ನಿಯಮಗಳಿಗೆ ಕಟ್ಟುಬಿದ್ದವರು ನಾಟಕವಿಷಾದಾಂತವಾಗಿರುವುದನ್ನು ಅನುಮೋದಿಸಲಿಲ್ಲ. **ರಾಮವರ್ಮ-ಲೀಲಾವತಿ** (ರೋಮಿಯೋ ಅಂಡ್ ಜೂಲಿಯೆಟ್) ನಾಟಕದಲ್ಲಿ ನಾಯಕ—ನಾಯಿಕೆಯರು ಪ್ರಾಣಹತ್ಯೆಮಾಡಿಕೊಂಡರೂ, ಸಿದ್ಧಪುರುಷನೊಬ್ಬನು ಅವರನ್ನು ಎಬ್ಬಿಸಿ ನಾಟಕ ವನ್ನು ಹರ್ಷಾಂತಗೊಳಿಸುವ ಧೈರ್ಯವನ್ನು ಸಹ ನಾಟಕಕಾರರು ತಾಳಿದರು. ಗ್ರೀಕ್ ಮಾದರಿಯ ರುದ್ರನಾಟಕಗಳು ಆಗಿನ ಕಾಲದವರಿಗೆ ತೀರ ಹೊಸದು. ಭಾರತೀಯ ನಾಟಕದ ನಾಯಕ ಸಾತ್ವಿಕ ಸ್ವಭಾವದವನು. ಅವನ ಗುಣಕ್ಕೆ ಭಿನ್ನವಾಗಿ ಗ್ರೀಕ್ ರುದ್ರನಾಟಕದ ನಾಯಕ ತಮೋ–ರಜೋ ಗುಣಗಳನ್ನು ಹೊಂದಿರುವುದರಿಂದ ಅವನಲ್ಲಿ ಅಹಂಭಾವನೆ, ಪ್ರತೀಕಾರ ಪ್ರವೃತ್ತಿ, ದೇವತೆಗಳ ಬಗ್ಗೆ ತಾತ್ಸಾರಗಳಿದ್ದು ಅವುಗಳ ಮೂಲಕ ಅವನ ದುರಂತ ಪ್ರಾಪ್ತವಾಗುತ್ತದೆ. ರಂಗದ ಮೇಲೆ ಆತ್ಮಹತ್ಯೆ, ರಕ್ತಪಾತ ಹಾಗೂ ಭೀಕರ ದೃಶ್ಯಗಳು ಇರಬಾರದು ಎಂಬ ಕಲ್ಪನೆಗಳಿದ್ದ ಕಾಲದಲ್ಲಿ ಬಿ. ಎಂ. ಶ್ರೀ ಅವರ ರುದ್ರನಾಟಕಗಳು ಗ್ರೀಕ್‌ಸಂಪ್ರದಾಯದಲ್ಲಿಯೇ ಬಂದವು. ನವೋದಯ ಸಾಹಿತಿಗಳಲ್ಲಿ ಗ್ರೀಕ್ ನಾಟಕಗಳನ್ನು ಕನ್ನಡಿಗರಿಗೆ ಪರಿಚಯಮಾಡಿಕೊಟ್ಟ ಮೊದಲಿಗರು ಬಿ. ಎಂ. ಶ್ರೀ. ಅವರ ತರುವಾಯ ರುದ್ರನಾಟಕ ಶೈಲಿಯಲ್ಲಿ **ಸೊಹರಾಬ್ ಮತ್ತು ರುಸ್ತುಂ, ರಕ್ತಾಕ್ಷಿ, ಸಾಕ್ರೆಟೀಸನ ಮರಣ** ಮೊದಲಾದವು ಬಂದವು.

ಮಹಾಭಾರತದಲ್ಲಿ ದುರ್ಯೋಧನನು ಊರುಭಂಗದಿಂದ ಮರಣಾವಸ್ಥೆಯಲ್ಲಿರು ವಾಗ ಅವನನ್ನು ಸಂತುಷ್ಟಗೊಳಿಸಲು ಅಶ್ವತ್ಥಾಮನು ನಿಶೆಯಲ್ಲಿ ಪಾಂಡವರ ಶಿಬಿರದ

---

[1] ಶ್ರೀ, ಗದಾಯುದ್ಧನಾಟಕಂ, ವಿಶ್ವಸಾಹಿತ್ಯ, ಮೈಸೂರು, ೧೯೭೫, ಪು. ೧೧.

ಮೇಲೆ ಧಾಳಿ ನಡೆಸಿ ಉಪಪಾಂಡವರನ್ನು ನಾಶಮಾಡುವ ಪ್ರಸಂಗವನ್ನು **ಅಯಾಸ್** ನಾಟಕದ ವಸ್ತುವಿಗೆ ಅಳವಡಿಸಿಕೊಳ್ಳುವಾಗ ಮಹಾಭಾರತದ ಪಾತ್ರಗಳಲ್ಲಿ ಹಾಗೂ ಅವುಗಳ ಪರಸ್ಪರ ಸಂಬಂಧಗಳಲ್ಲಿ ಶ್ರೀ ಅವರು ಕೆಲವು ಬದಲಾವಣೆಗಳನ್ನು ಮಾಡಿ, ಮೂಲ ಗ್ರೀಕ್ ನಾಟಕಕ್ಕೆ ಹೊಂದಿಸಿಕೊಳ್ಳಬೇಕಾಯಿತು. ಗ್ರೀಕ್ ನಾಟಕದ ಅಯಾಸನಂತೆ ಮಹಾಭಾರತದ ಅಶ್ವತ್ಥಾಮ ರಾತ್ರಿಯ ಹೊತ್ತು ಶತ್ರುಗಳನ್ನು ನಾಶ ಮಾಡಲು ಹೋಗುವುದು ; ಗ್ರೀಕ್ ದೇವತೆ ಅಥೀನಳ ಶಕ್ತಿಯಿಂದ ಅಯಾಸನು ಉನ್ಮತ್ತನಾಗುವಂತೆ ಕೃಷ್ಣನಿಂದ ಅಶ್ವತ್ಥಾಮನ ಮನಸ್ಸು ಮೋಹಗೊಳ್ಳುವುದು ; ಅಯಾಸನು ಪಶ್ಚಾತ್ತಾಪದಿಂದ ಆತ್ಮಹತ್ಯೆಮಾಡಿಕೊಂಡು ನಾಶಹೊಂದುವಂತೆ, ಅಶ್ವತ್ಥಾಮನು ಜೀವಚ್ಛವವಾಗಿ ಅಲೆದಾಡುವ ರೌದ್ರಸ್ಥಿತಿ—ಇವುಗಳಿಗೆ ಹೋಲಿಕೆ ಗಳಿರುವುದರಿಂದ ಶ್ರೀ ಅವರು ಗ್ರೀಕ್ ನಾಟಕದ ಸನ್ನಿವೇಶಗಳನ್ನೆಲ್ಲಾ **ಅಶ್ವತ್ಥಾಮನ್** ನಾಟಕಕ್ಕೆ ತಂದುಕೊಂಡರು. ಆದರೆ ಅವರು ಮಹಾಭಾರತದ ಪಾತ್ರಗಳ ಬಗ್ಗೆ ಮಾಡಿದ ಬದಲಾವಣೆಗಳು ಧರ್ಮನಿಷ್ಠರಿಗೆ ನಾಸ್ತಿಕವಾಗಿ ಕಂಡಿತು. ಬಿ. ಎಂ. ಶ್ರೀ ಅವರು ಅಶ್ವತ್ಥಾಮನು "ಪಶುಗಳನ್, ಪೆಣ್ಡಿರನ್, ಮಕ್ಕಳನ್ ತರಿದವನ್" ಎಂಬ ಮಾತನ್ನು ಭೀಮನ ಬಾಯಿಂದ ಹೊರಡಿಸಿದ್ದಾರೆ. ಅಶ್ವತ್ಥಾಮನು ಉಪಪಾಂಡವ ರನ್ನು ಕೊಂದು ಶಿಶುಹತ್ಯಾದೋಷಕ್ಕೆ ಒಳಗಾಗಿರುವಾಗ, ಗ್ರೀಕ್ ನಾಟಕದ ನಾಯಕ ಅಯಾಸನು ದನ-ಕುರಿಗಳನ್ನು ಕೊಂದಂತೆ ಅಶ್ವತ್ಥಾಮನಿಂದಲೂ ಪಶುವಧೆಮಾಡಿಸಿ ಆ ಪಾಪವನ್ನು ಸಹ ಅವನ ಮೇಲೆ ಶ್ರೀ ಅವರು ಹೊರಿಸಿರುವರೆಂಬ ಕೂಗು ಸಂಪ್ರದಾಯ ಬದ್ಧರಿಂದ ಹೊರಟಿತು. ಚಿರಂಜೀವಿಯಾದ ಅಶ್ವತ್ಥಾಮನು ತನ್ನ ಖಡ್ಗದಿಂದಲೇ ಅಸುವನ್ನು ನೀಗಿಕೊಳ್ಳುವುದು ಅಬದ್ಧವೆನಿಸಿತು. ಗ್ರೀಕ್ ಪುರಾಣದಲ್ಲಿ ಪ್ರಭಾವ ಯುತಳಾದ ಸಮರ ದೇವತೆ ಅಥೀನಳ ಸ್ಥಾನದಲ್ಲಿ ರುದ್ರನನ್ನು ತೋರಿಸಿರುವುದು ; ಗ್ರೀಕ್ ಮಹಾಯೋಧ ಓಡಿಸೀಯಸನ ಪಾತ್ರಕ್ಕೆ ಸಮವಾಗಿ ಭಗವಾನ್ ಕೃಷ್ಣನನ್ನು ಸಾಮಾನ್ಯ ಯೋಧನಂತೆ ಆರಿಸಿಕೊಂಡಿರುವುದು ; ಅಯಾಸನ ಮಗ ಯೂರಿಸಾಕಿಸ್ ಪಾತ್ರಕ್ಕೆ ಸಮವಾಗಿ ರುದ್ರಶಕ್ತಿ ಎಂಬ ಪಾತ್ರವನ್ನು ಬ್ರಹ್ಮಚಾರಿಯಾದ ಅಶ್ವತ್ಥಾಮನ ಮಗನನ್ನಾಗಿ ಸೃಷ್ಟಿಸಿರುವುದು; ಮಹಾಭಾರತ ಯುದ್ಧಕ್ಕೆ ಹಿಂದೆಯೇ ಮರೆಯಾಗಿದ್ದ ಏಕಲವ್ಯನು ಸ್ನೇಹಿತನ ಪಾತ್ರದಲ್ಲಿ ಬ್ರಾಹ್ಮಣನಾದ ಅಶ್ವತ್ಥಾಮನ ಅಂತ್ಯಕ್ರಿಯೆ ಯನ್ನು ನಡೆಸುವಂತೆ ಮಾಡಿರುವುದು ; ಭಾರ್ಗವಿಯನ್ನು, ಬಾನೆಯಲ್ಲಿ (ದ್ರೋಣದಲ್ಲಿ) ಹುಟ್ಟಿದ ದ್ರೋಣನ ತಾಯಿಯಂತೆ ಚಿತ್ರಿಸಿ, ವೃದ್ಧಾಪ್ಯದಲ್ಲಿರುವ ಆಕೆ, ಮೊಮ್ಮಗ ಅಶ್ವತ್ಥಾಮನು ಸತ್ತರೆ, ತನಗೆ ಯಾರೂ ಗತಿಯಿಲ್ಲ, ತಾನು ಗುರುಮಾತೆಯಾದರೂ ಕೌರವರು ತನ್ನನ್ನು ಕೊಲ್ಲದೆ ಬಿಡರು ಎಂದು ಗೋಳಾಡುವಂತೆ ಮಾಡಿರುವುದು—

ಇವೆಲ್ಲಾ ಸಂಪ್ರದಾಯಬದ್ಧ ಮಡಿವಂತ ಸಮಾಜಕ್ಕೆ ಹಿಡಿಸಲಾರವೆ ಹೋದವು. ಪೌರಾಣಿಕ ಪಾತ್ರಗಳ ಆಯ್ಕೆ "ಆ ಪಾತ್ರಗಳ ವ್ಯಕ್ತಿತ್ವಕ್ಕೆ ಚ್ಯುತಿ ಬರದೆ ಕಲಾದೃಷ್ಟಿಯಿಂದ ಮೇಲ್ಮೆಗೆ ಸಹಾಯವಾಗುವಂತಿರಬೇಕು. ಅಶ್ವತ್ಥಾಮನ್ ನಾಟಕದಲ್ಲಿ ಮಾಡಿಕೊಂಡಿರುವ ಬದಲಾವಣೆಗಳು ಇಂತಹ ಒಂದು ಸಾಧನೆಗೆ ಸಹಾಯಕವಾಗಿವೆಯೇ ಎಂಬುದು ವಿಚಾರಾರ್ಹವಾದ ವಿಷಯ" ಎಂದು ತ. ಸು. ಶಾಮರಾಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[1]

## ೨. ರುದ್ರನಾಟಕದ ಲಕ್ಷಣ

ಗ್ರೀಕ್ ನಾಟಕ ಸಂಪ್ರದಾಯದಲ್ಲಿ "ಟ್ರಜಿಡೀ" (Tragedy) ಎಂದರೆ ಕಾವ್ಯರೂಪದಲ್ಲಿದ್ದು ಒಂದು ತೀವ್ರವಾದ ಅಥವಾ ವಿಷಣ್ಣವಾದ ವಿಷಯವನ್ನು–ವಿಶಿಷ್ಟವಾಗಿ ಅಹಂಕಾರ, ಈರ್ಷೆ ಇಂಥ ಯಾವುದೇ ಒಂದು ಲೋಪದಿಂದ ಒಬ್ಬ ಉದಾತ್ತವ್ಯಕ್ತಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು, ಆ ಮೂಲಕ ದೈವಾಜ್ಞೆಯನ್ನು ಅಥವಾ ನೀತಿಯ ನಿಯಮಗಳನ್ನು ಉಲ್ಲಂಘಿಸಿ ನಾಶಹೊಂದುವ ವಿಷಯವನ್ನು—ಮೂಲವಸ್ತುವಾಗಿ ಉಳ್ಳ ನಾಟಕ ಪ್ರಕಾರ. "ಟ್ರಜಿಡೀ" ಎಂಬ ಶಬ್ದಕ್ಕೆ ಕನ್ನಡದಲ್ಲಿ ವಿಷಾದಾಂತ ನಾಟಕ ಎಂಬ ಹೆಸರನ್ನು ಬಳಸಿದರು. ಬಿ.ಎಂ.ಶ್ರೀ ಅವರು ಆ ಪ್ರಕಾರದ ನಾಟಕವನ್ನು ರುದ್ರನಾಟಕ ಎಂದು ಕರೆದು ಆ ಹೆಸರನ್ನು ಈ ರೀತಿ ಸಮರ್ಥಿಸುತ್ತಾರೆ: "ಡಯೋನಿಸಿಸ್ಸಿಗೆ ಹಲವು ರೀತಿಯಲ್ಲಿ ಸಾದೃಶ್ಯವುಳ್ಳ, ರುದ್ರಭೂಮಿಗೆ ಅಧಿನಾಯಕನಾದ, ಆದರೂ ಮಂಗಳದಾಯಕನಾಗಿ ಭವರೋಗಕ್ಕೆ ಭಿಷಜನಾದ, ನಾಟ್ಯನಾಟಕ ಪ್ರದರ್ಶಕನಾದ ರುದ್ರನ ಹೆಸರಿನಿಂದ ಈ ಬಗೆಯ ನಾಟಕವನ್ನು ಕರೆಯಬಹುದೆಂದು ಭಾವಿಸಿ ರುದ್ರನಾಟಕವೆಂದು ನಾನು, **ಗದಾಯುದ್ಧ ನಾಟಕಂ, ಅಶ್ವತ್ಥಾಮನ್** ಮುಂತಾದ ನಾಟಕಗಳಿಗೆ ಹೆಸರನ್ನಿಟ್ಟೆ.[2]

ಬಿ.ಎಂ.ಶ್ರೀ ಅವರು ತಮ್ಮ **ಅಶ್ವತ್ಥಾಮನ್** ಮತ್ತು **ಪಾರಸಿಕರು** ನಾಟಕಗಳಿಗೆ ಕ್ರಮವಾಗಿ ಸೊಫೊಕ್ಲೀಸನ **ಅಯಾಸ್** (Ajax) ಮತ್ತು ಈಸ್ಕಿಲಸನ **ಪರ್ಷಿಯನ್ಸ್** ಮೂಲ ಗ್ರೀಕ್ ನಾಟಕಗಳಿಂದ ವಸ್ತುವನ್ನು ತಂದುಕೊಂಡರು. ಅವರ ಈ ಎರಡು ನಾಟಕಗಳು ಗ್ರೀಕ್ ರುದ್ರನಾಟಕಗಳ ಬೆಳಕಿನಲ್ಲಿ ಬೆಳೆದಿರುವ

---

[1] ತ.ಸು. ಶಾಮರಾಯ, ಕನ್ನಡ ನಾಟಕ, ಗೀತಾಬುಕ್ ಹೌಸ್, ಮೈಸೂರು, 1962.

[2] ಬಿ.ಎಂ.ಶ್ರೀ, 'ರುದ್ರನಾಟಕ', ಕನ್ನಡನುಡಿ, ಸಂಪುಟ ೩, ಸಂಚಿಕೆ ೧೯.

ಕಾರಣ ಅವರ ನಾಟಕಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಗ್ರೀಕ್ ರುದ್ರನಾಟಕಗಳ ಲಕ್ಷಣಗಳನ್ನು ತಿಳಿಯುವುದು ಅಗತ್ಯವೆನಿಸುತ್ತದೆ.

ರುದ್ರನಾಟಕ ಕಾವ್ಯರಚನೆಯಲ್ಲಿ ಸುಂದರವಾದೊಂದು ಕಲಾರೂಪ. ಜೀವನದ ಮೌಲ್ಯಗಳ ಬಗೆಗೆ ಬೆಳಕನ್ನು ಹರಿಸುವ ಬೋಧಕ ಸಾಧನ. ಪ್ರಧಾನ ಪಾತ್ರಗಳ ದುಃಖಮಯ ಸನ್ನಿವೇಶಗಳಿಂದ ಕನಿಕರ (pity), ಪ್ರಧಾನ ಪಾತ್ರಗಳ ಭೀಕರ ಮರಣ ದಿಂದ ಭೀತಿ (terror)—ಈ ರಸಾನುಭವಗಳನ್ನು ಪ್ರೇಕ್ಷಕರಲ್ಲಿ ತಂದು, ಜೀವನದಲ್ಲಿ ಅಂಥ ದುರಂತ ಆಗಬಾರದು ಎಂದು ಪ್ರೇಕ್ಷಕರ ಮನಸ್ಸನ್ನು ಪುನೀತಗೊಳಿಸುವ ಬೋಧಕ ಮಾಧ್ಯಮ ರುದ್ರನಾಟಕ.[1]

ರುದ್ರನಾಟಕಗಳಲ್ಲಿ ಸಾಮಾನ್ಯವಾಗಿ ಪ್ರಧಾನ ಪಾತ್ರಗಳಿಗೆ ಒಳ್ಳೆಯದು ಎಂದರೆ ಅಧಿಕಾರ, ಖ್ಯಾತಿ, ಆದರ್ಶಗಳಲ್ಲಿ ನಂಬಿಕೆ. ಉದಾತ್ತ ಪಾತ್ರಗಳಿಗೆ ದುರಂತ ಪ್ರಾಪ್ತ ವಾಗುವುದು ಜೀವನದ ಮೌಲ್ಯಗಳು, ಅಧಿಕಾರ, ಖ್ಯಾತಿ ಸರಿದಾಗ. ಕೆಲವು ಸಂದರ್ಭ ಗಳಲ್ಲಿ ಒಳ್ಳೆಯ ವ್ಯಕ್ತಿ ತನ್ನ ಪರಿಸರದ ಪ್ರಭಾವಕ್ಕೊಳಗಾಗಿ ದುರಂತಕ್ಕೀಡಾಗುವುದ ಸಹ ವಿಧಿನಿಯಮಿತ. ವಿಧಿಯ ಬಲದಿಂದ ತಪ್ಪಿಸಿಕೊಳ್ಳಲಾರದೆ ಅವನು ದುರಂತಕ್ಕೆ ಒಳಗಾಗುತ್ತಾನೆ. ಅಂಥ ಪಾತ್ರಗಳಿಗೆ ಉದಾಹರಣೆ ಹ್ಯಾಮ್ಲೆಟ್, ಒಫಿಲಿಯಾ, ಒಥೆಲೋ, ಲಿಯರ್ ಮೊದಲಾದವರು. ಉದಾತ್ತನಾಯಕ ಆದರ್ಶವ್ಯಕ್ತಿಯಾಗಿ ಕಂಡುಬಂದರೂ ಯಾವುದೋ ಒಂದು ಸಣ್ಣ ಗುಣದೋಷದಿಂದ ನಾಶವಾಗುತ್ತಾನೆ: ಅಶ್ವತ್ಥಾಮನ್ ಅಸೂಯೆಪಟ್ಟು ದೇವತೆಯ ಕೋಪಕ್ಕೆ ಕಾರಣನಾಗಿ ದುರಂತಕ್ಕೀಡಾಗು ತ್ತಾನೆ. ಪರ್ಷಿಯಾದ ಚಕ್ರವರ್ತಿ ಕ್ಷಯಾರ್ಷ (Xerxes) ತಾನು ಮಹಾಬಲಶಾಲಿ ಎಂದು ದುರಹಂಕಾರದಿಂದ ದಂಡೆತ್ತಿ ಹೋಗಿ ವಿನಾಶವನ್ನು ತಂದುಕೊಳ್ಳುತ್ತಾನೆ. ಹೀಗೆ ಅಧಿಕಾರ, ಖ್ಯಾತಿ, ಆದರ್ಶ ವ್ಯಕ್ತಿತ್ವ ಇವುಗಳಲ್ಲಿ ಯಾವುದನ್ನಾಗಲಿ ಹೊಂದಿದ ನಾಯಕ ಅದನ್ನು ಮರುಕ್ಷಣದಲ್ಲೇ ಕಳೆದುಕೊಳ್ಳುವ ವಿಷಯಕ್ಕೆ ರುದ್ರನಾಟಕದ ಕ್ರಿಯೆ ಕೇಂದ್ರೀಕೃತವಾಗಿರುತ್ತದೆ. ನಾಯಕನಿಗೆ ಆಗುವ ಸೋಲು ರುದ್ರನಾಟಕಕ್ಕೆ ಸಾರೋಕ್ತಿಯನ್ನೊದಗಿಸುತ್ತದೆ.

ದುರಂತನಾಯಕನು ಯಾವುದನ್ನು ಒಳ್ಳಿತು ಎಂದು ಒಪ್ಪಿಕೊಂಡಿರುತ್ತಾನೆಯೋ ಆ ಒಳ್ಳಿತು ಯಾವುದು ಕೆಟ್ಟದ್ದು ಎಂಬುದನ್ನು ನಿರ್ಧರಿಸುತ್ತದೆ. ಕೆಟ್ಟದರ ತೂಕ ಒಳ್ಳಿತದ ತೂಕದಷ್ಟೇ ಬಲಯುತ. ಅವುಗಳ ಘರ್ಷಣೆ ರುದ್ರನಾಟಕಗಳಲ್ಲಿ ಸ್ಪಷ್ಟ. ಅವು ಸಹಜವಾಗಿಯೇ ರುದ್ರನಾಟಕದ ಎರಡು ವ್ಯತಿರಿಕ್ತ ಬಲಗಳು: ಬದುಕು ಉತ್ತಮ

---

[1] Tragedy clenses the soul through pity and terror.

ವಾಗಿ ಕಾಣುವಾಗ ಸಾವು ಪರಮ ಪಾಪವಾಗುವುದು. ಆದರೆ ಬದುಕಿಗೆ, ಬದುಕಿನ ಮೌಲ್ಯಗಳಿಗೆ ಹಾನಿಯನ್ನು ತರುವ ಬಲಗಳು ದುರಂತವನ್ನು ತರುತ್ತವೆ : ಲಿಯರ್ ದೊರೆಗೆ ಕೃತಜ್ಞತೆ ಒಳ್ಳೆಯದಾಗಿರುವಾಗ ಮಕ್ಕಳ ವಂಚನೆ ಪರಮ ಕೇಡಾಗಿ ಪರಿಣಮಿಸಿತು. ಮ್ಯಾಕ್‌ಬತ್‌ನಿಗೆ ಅಧಿಕಾರ ಪ್ರಾಪ್ತಿ ಒಳ್ಳೆಯದೆಂದು ತೋರಿದ್ದಾಗ, ಅಧಿಕಾರ ನಷ್ಟದೊಂದಿಗೆ ಅವನ ದುರಂತ ಪ್ರಾಪ್ತವಾಗುತ್ತದೆ. ನಾಯಕನ ಗುಣದಲ್ಲಿನ ದೋಷ ಅವನಿಗೆ ಹಾನಿತಂದಾಗ ಅವನ ದುಷ್ಕಾರ್ಯಕ್ಕೆ ಹಾಗೂ ದುರ್ಮರಣಕ್ಕೆ ಪ್ರೇಕ್ಷಕರ ಮನ ಕರಗುವುದಿಲ್ಲ. ಆದರ್ಶ ವ್ಯಕ್ತಿ ನಿರಪರಾಧಿಯಾಗಿದ್ದು ಸನ್ನಿವೇಶಗಳ ಬಲದಿಂದ ದುಃಖಿತನಾಗಿ ಪ್ರಾಣಕ್ಕೆ ಹಾನಿತಂದುಕೊಂಡಾಗ ಮಾತ್ರವೇ ಪ್ರೇಕ್ಷಕರು ಅವನಿಗಾಗಿ ಮರುಗುತ್ತಾರೆ. ಅಯಾಸನು (ಅಶ್ವತ್ಥಾಮನ್) ಮತ್ತು ಕ್ಷಯಾರ್ಷನು (xerxes) ತಮ್ಮ ಅಹಂಕಾರದಿಂದ ದುರಂತವನ್ನು ತಂದುಕೊಂಡದ್ದರಿಂದ, ಅರಿಸ್ಟಾಟಲನ ನಾಟಕ ಸಿದ್ಧಾಂತದ ಪ್ರಕಾರ ಅವರು ದುರಂತ ನಾಯಕರಾಗುವುದಿಲ್ಲ.

ಶ್ರೀ ಅವರು ೧೯೧೯ರ ಹೊತ್ತಿಗಾಗಲೆ ಇಂಗ್ಲಿಷ್ ಗೀತೆಗಳನ್ನು ರಚಿಸಿ ಇಂಗ್ಲಿಷ್ ಕಾವ್ಯರಚನೆಯ ಸಂಬಂಧದಲ್ಲಿ ಛಂದಶ್ಶಾಸ್ತ್ರವನ್ನು ಕರಗತಮಾಡಿಕೊಂಡಿದ್ದರು. ಮಿಲ್ಟನ್, ಷೆಲಿ, ಕೋಲ್‌ರಿಡ್ಜ್, ಡ್ರೈಡನ್, ಅಲೆಕ್ಸಾಂಡರ್‌ಪೋಪ್ ಮೊದಲಾದವರು ಗ್ರೀಕ್ ಕಾವ್ಯಶೈಲಿಗಳನ್ನು ಗ್ರಹಿಸಿದ್ದುದನ್ನು ಮನಗಂಡರು. ಗ್ರೀಕ್ ವೀರಕಾವ್ಯಗಳ ಛಂದಸ್ಸು ಹಾಗೂ ದ್ವಿಪದಿಗಳ ನಾದದ ಇಂಪು, ಮೇಳಗಾನದಲ್ಲಿ ಉಪಯೋಗಿಸುವ 'ಓಡ್' (o.le) ಗೀತೆಗಳು, ಗ್ರೀಕ್ ಕಾವ್ಯಗಳಲ್ಲಿ ಐವತ್ತರಿಂದ ಇನ್ನೂರು ಪಂಕ್ತಿಗಳ ವರೆಗೂ ವ್ಯಾಪಿಸುವ ಪ್ರಗಾಥಗಳು—ಇವುಗಳನ್ನು ಮೆಚ್ಚಿದರು. ಗ್ರೀಕ್ ನಾಟಕಗಳ ಗೇಯ ಭವ್ಯತೆ, ಷೇಕ್ಸ್‌ಪಿಯರ್ ನಾಟಕಗಳಲ್ಲಿನ ಸರಳ ರಗಳೆ ಮತ್ತು ಸರಳ ಸಂಭಾಷಣೆ ಅವರನ್ನು ಆಕರ್ಷಿಸಿತು. ಒಂದು ಕಡೆ ಕನ್ನಡದ ಅಭಿಮಾನ, ಮತ್ತೊಂದು ಕಡೆ ಇಂಗ್ಲಿಷ್ ಸಾಹಿತ್ಯದಲ್ಲಿ ಪಾಂಡಿತ್ಯ-ಇವುಗಳಿಂದ ಪೂರ್ಣಪ್ರಜ್ಞರಾಗಿದ್ದ ಶ್ರೀ ಅವರು ಇಂಗ್ಲಿಷ್ ಗೀತೆಗಳನ್ನು ಕನ್ನಡಕ್ಕೆ ತಂದುದಲ್ಲದೆ ಎರಡು ಗ್ರೀಕ್ ನಾಟಕಗಳನ್ನು ಕನ್ನಡ ಕಣಜಕ್ಕೆ ತಂದು ಅವುಗಳ ವೈವಿಧ್ಯವನ್ನು ನಮಗೆ ಪರಿಚಯ ಮಾಡಿಕೊಟ್ಟರು. ಐಯಾಂಬಿಕ್ (Iambic) ವೃತ್ತಗಳು ಗ್ರೀಕ್ ನಾಟಕಗಳಲ್ಲಿ ಕಾಣುವ ಛಂದೋ ವೈಶಿಷ್ಟ್ಯ. ಒಂದು ಲಘು ಒಂದು ಗುರು (u –) ಇರುವ ಗಣಗಳಲ್ಲಿ ಸಾಗುವ ಈ ಪದ್ಯ ಗಳ ಧಾಟಿ ಮೇಳಗಾನಕ್ಕೆ ಅನುಕೂಲವಾಗಿದ್ದು, ಅದನ್ನು ಗ್ರೀಕರು ಕಾವ್ಯಗಳಲ್ಲಿ ವಿಪುಲ ವಾಗಿ ಬಳಸಿದರು. **ಅಯಾಸ್** (Ajax) ಗ್ರೀಕ್ ಮೂಲ ನಾಟಕದಲ್ಲಿ ನಾಟಕಕಾರ ಸೊಫೊಕ್ಲೀಸ್ ಮೇಳಗಾನಕ್ಕೆ ಸ್ಟ್ರೋಫೀ (Strophe), ಆಂಟಿ ಸ್ಟ್ರೋಫೀ (Anti-strophe) ಮತ್ತು ಎಪೋಡ್ (Epod) ಎಂಬ ಮೂರು ವಿಧದ ಗೀತೆಗಳನ್ನು

ನೀಡಿದ್ದಾನೆ. ಸ್ಟ್ರೋಫೀಗೀತೆ ಮೇಳದವರು ಬಲದಿಂದ ಎಡಕ್ಕೆ ಚಲಿಸುವಾಗ ಹಾಡುವ ಮೇಳಗೀತೆ. ಈ ಗೀತೆಗಳಲ್ಲಿ ಪ್ರತಿಪಾದಕಕ್ಕೂ ಒಂದು ಮಾದರಿಯ ಮನೋಹರ ಸಂಗೀತ ವಿರುತ್ತದೆ. ಆಂಟಿ–ಸ್ಟ್ರೋಫೀ ಮೇಳದವರು ಎಡದಿಂದ ಬಲಕ್ಕೆ ಹಿಂದಿರುಗುವಾಗ ಮೊದಲು ಹಾಡಿದ ಮೇಳಗೀತೆಗೆ ಉತ್ತರವಾಗಿ ಹೇಳುವ ಹಾಡು. ಎಪೋಡ್ ಗೀತೆಗಳು ನೀಳವಾಗಿದ್ದು ಅವುಗಳನ್ನು ಹಾಡಿದ ಕೂಡಲೇ ಕಿರುಗೀತೆಗಳನ್ನು ಹಾಡುತ್ತಾರೆ. ಈ ಮೂರು ಬಗೆಯ ಮೇಳಗೀತೆಗಳು ಗ್ರೀಕ್ ರುದ್ರನಾಟಕಗಳ ಸೊಬಗನ್ನು ಹೆಚ್ಚಿಸುವ ರಂಗಸಂಗೀತ. ಬಿ.ಎಂ.ಶ್ರೀ ಅವರು ತಾವು ಕನ್ನಡಕ್ಕೆ ತಂದ ಎರಡು ಗ್ರೀಕ್ ನಾಟಕಗಳಲ್ಲಿಯೂ ಗ್ರೀಕ್ ಮಾದರಿಯಲ್ಲಿ ವೀರಕಾವ್ಯದ ದ್ವಿಪದಿಯನ್ನು (Heroic couplet) ಬಳಸಿದರು. ಪಾತ್ರಗಳಿಗೆ ಭಾವಗೀತೆಗಳನ್ನು ನೀಡಿದರು. ಅಭಿಜಾತ ನಾಟಕಕ್ಕೆ ಒಪ್ಪುವಂತೆ ಹಳಗನ್ನಡವನ್ನು ಧಾರಾಳವಾಗಿ ಬಳಸಿಕೊಂಡರು. ಹಳಗನ್ನಡದ ಸೊಬಗಿನಿಂದಲೇ ಅವರ ನಾಟಕಗಳಿಗೆ ಕಳೆ ಏರಿದೆ. ಶ್ರೀ ಅವರಂತೆ ತರುವಾಯ ಕೆ. ವಿ. ರಾಘವಾಚಾರ್ಯರು ಭಾಷಾಂತರಿಸಿದ **ಅಂತಿಗೊನೆ** ನಾಟಕದಲ್ಲಿ ಹಳಗನ್ನಡದ ಬಳಕೆ ಇದ್ದರೂ, ಭಾಷೆ ಪಾತ್ರಗಳ ಸಂಭಾಷಣೆಗೆ ಬಿಗುಪನ್ನು ಕೊಡುವಷ್ಟು ಸಮರ್ಥವಾಗಿಲ್ಲ. ಬಿ. ಎಂ. ಶ್ರೀ ಅವರೇ ಆ ನಾಟಕದ ಮುನ್ನುಡಿಯಲ್ಲಿ ತಿಳಿಸಿರುವಂತೆ ನಾಟಕ "ಒಂದು ಗ್ರೀಕಿನಿಂದ ಮತ್ತೊಂದು ಗ್ರೀಕಿಗೆ ಭಾಷಾಂತರಿಸಿದಂತಿದೆ." ವಾಸ್ತವಿಕವಾಗಿ ಬಿ. ಎಂ. ಶ್ರೀ ಅವರ ನಾಟಕಗಳಲ್ಲಿ ನಮಗೆ ಆನಂದವನ್ನು ನೀಡುವುದು ಕಾವ್ಯಭಾಗ.

## ೩. ಶ್ರೀ ಅವರ ರುದ್ರನಾಟಕಗಳ ವಸ್ತು

ಬಿ.ಎಂ.ಶ್ರೀ ಅವರು **ಅಯಾಸ್** ಮತ್ತು **ಪರ್ಶಿಯನ್ಸ್** ನಾಟಕಗಳನ್ನು ಕನ್ನಡಕ್ಕೆ ತಂದುಕೊಂಡಿರುವ ವಿಧಾನ ಗಮನಾರ್ಹವಾದದ್ದು. ಅವರು **ಅಯಾಸ್** ನಾಟಕದ ಪಾತ್ರಗಳ ಹೆಸರುಗಳನ್ನು ಬದಲಾಯಿಸಿ, ಆ ನಾಟಕದ ವಸ್ತುವನ್ನು ಯಥಾವತ್ತಾಗಿ **ಅಶ್ವತ್ಥಾಮನ್** ನಾಟಕಕ್ಕೆ ತಂದಿರುವರೆಂಬುದನ್ನು ನಾವು ಗಮನಿಸಬೇಕು. ಹಾಗೇನಾದರೂ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬಂದರೂ ಅವು ಭಾರತೀಯ ಪೌರಾಣಿಕ ಪಾತ್ರಗಳಿಗೆ ಸಂಬಂಧಪಟ್ಟಂತೆ ಮಾತ್ರ. **ಅಯಾಸ್** ನಾಟಕದ ವಸ್ತು ಹೀಗಿವೆ :

ದೇವತೆಗಳಿಗಿಂತಲೂ ತಾನು ಪರಮಶಕ್ತ, ಅವರ ನೆರವಿಲ್ಲದೆ ತಾನು ಯೋಧನಾಗಿ ಖ್ಯಾತಿ ಪಡೆಯಬಲ್ಲೆ ಎಂದು ಗ್ರೀಕ್ ಪಡೆಯ ಅಯಾಸ್ ದುರಂಹಕಾರ ಪಡುತ್ತಾನೆ. ಗ್ರೀಕ್ ಸಮರ ದೇವತೆ ಅಥೀನಾ, ಒಂದು ಸಮಯದಲ್ಲಿ ಅವನನ್ನು ಕಾಳಗದಲ್ಲಿ

ಶತ್ರುಗಳು ಮುತ್ತಿದಾಗ ಅವನ ಸಹಾಯಕ್ಕೆ ಹೋಗುತ್ತಾಳೆ. ಆದರೆ ಅಯಾಸ್ ಅವಳ ಸಹಾಯವನ್ನು ನಿರಾಕರಿಸುತ್ತಾನೆ. ಅದರಿಂದ ಕುಪಿತಳಾದ ಅಥೀನಾ ಅವನಿಗೆ ಪಾಠ ಕಲಿಸಬೇಕೆಂದು ಸಮಯ ಕಾಯುತ್ತಾಳೆ. ಟ್ರಾಯ್ ಪಟ್ಟಣದ ಮುತ್ತಿಗೆಯಲ್ಲಿ ಗ್ರೀಕ್ ವೀರ ಅಕಿಲೀಸನು ಸಾಯಲು, ಅವನ ಸಮರಾಯುಧಗಳನ್ನು ಯುದ್ಧ ನಾಯಕರಾದ ಅಗಮೆಮ್ನಾನ್ ಮತ್ತು ಮೆನಿಲಾಸ್ ಅಯಾಸನಿಗೆ ಕೊಡದೆ, ಅವನಷ್ಟೇ ಪರಾಕ್ರಮಿಯಾದ ಓಡಿಸೀಯುಸನಿಗೆ ಕೊಡುತ್ತಾರೆ. ಅದರಿಂದ ಅಯಾಸನಿಗೆ ಓಡಿಸೀಯುಸನ ಬಗ್ಗೆ ಈರ್ಷೆ, ಯುದ್ಧನಾಯಕರ ಮೇಲೆ ಕೋಪ ಉಂಟಾಗಿ ಆ ಮೂವರನ್ನೂ ಕೊಲ್ಲಲು ಅಯಾಸ್ ಖಡ್ಗಹಿಡಿದು ನಿಶೆಯಲ್ಲಿ ಅವರ ಶಿಬಿರಕ್ಕೆ ಹೋಗುತ್ತಾನೆ. ಅಥಿನಾ ದೇವತೆ ಅದನ್ನು ಕಂಡು ಅವನ ಮೇಲೆ ದೇವಿ ಮೋಹವನ್ನು ಬೀರಲು ಅವನು ಉನ್ಮಾದಿತನಾಗಿ ಶಿಬಿರದಲ್ಲಿ ಕಟ್ಟಿಹಾಕಿದ್ದ ದನಕರುಗಳನ್ನು ಹಾಗೂ ಕುರಿಗಳನ್ನು ಯೋಧರೆಂದು ಭಾವಿಸಿ ಕೊಂಡು, ಮೂರು ಪ್ರಾಣಿಗಳು ಮಲಗಿರುವುದನ್ನು ಕಂಡು ಅವು ತನ್ನ ಮೂವರು ಶತ್ರುಗಳೇ ಎಂದು ಭ್ರಮಿಸಿ, ಅವುಗಳನ್ನು ಹೊತ್ತು ತನ್ನ ಗುಡಾರಕ್ಕೆ ತಂದು, ಕಂಬಕ್ಕೆ ತಟ್ಟಿ ತಳಿಸುತ್ತಾನೆ. ಅವನ ಗುಡಾರದಲ್ಲಿ ಪ್ರಾಣಿಗಳ ಕೊಲೆಯಿಂದ ರಕ್ತ ಹರಿಯುತ್ತದೆ. ಅವನ ಮಾನಸಿಕ ಸ್ಥಿತಿಗೆ ಅವನ ಹೆಂಡತಿ ಟೆಕ್ಮೆಸ್ಸಾ ನೊಂದುಕೊಳ್ಳುತ್ತಾಳೆ. ಅಯಾಸನು ತನಗೆ ಮತ್ತೆಮತಿಬಂದಾಗ, ತಾನು ವೀರನಾದರೂ ಮೂಢನಾಗಿ ಮೂಗು ಪ್ರಾಣಿಗಳನ್ನು ಕೊಂದ ಪಾಪಕ್ಕೆ ಸಾವೇ ಸರಿಯಾದ ಶಿಕ್ಷೆ, ಆ ಘೋರ ಕೃತ್ಯ ತನ್ನ ಗೌರವಕ್ಕೆ ಹಾನಿ ಎಂದು ತಿಳಿದು ಪ್ರಾಣ ತ್ಯಾಗಮಾಡಲು ನಿರ್ಧರಿಸುತ್ತಾನೆ. ಹೆಂಡತಿ ಟೆಕ್ಮೆಸ್ಸಾ ಮತ್ತು ಮೇಳವೃಂದವನ್ನು ಪ್ರತಿನಿಧಿಸುವ ಅವನ ಸೆಲಾಮಿಸ್ ನಾವಿಕರು ಎಷ್ಟು ಸಮಾಧಾನ ಹೇಳಿದರೂ ಪಶ್ಚಾತ್ತಾಪ ಅವನನ್ನು ಕಾಡುತ್ತದೆ. ತಾನು ಸಾಯುವ ನಿರ್ಧಾರವನ್ನು ಅವರಿಗೆ ಸ್ಪಷ್ಟವಾಗಿ ತಿಳಿಸದೆ, ತನ್ನ ಕ್ಷೇಮಕ್ಕಾಗಿ ಕೆಲಸವೊಂದನ್ನು ಸಾಧಿಸಲು ಹೋಗುತ್ತೇನೆಂದು ಹೇಳಿ ಖಡ್ಗಹಿಡಿದು ಸಮುದ್ರ ತೀರಕ್ಕೆ ಹೋಗುತ್ತಾನೆ. ಹೋಗುವಾಗ ತನ್ನ ಪತ್ನಿ ಮತ್ತು ಪುತ್ರ ಯೂರಿಸಾಕೀಸ್—ಇವರಿಬ್ಬರನ್ನು ಶತ್ರುಗಳಿಂದ ರಕ್ಷಿಸಬೇಕೆಂದು ದೂರ ಪ್ರಾಂತ್ಯದಲ್ಲಿ ಯುದ್ಧ ನಡೆಸುತ್ತಿರುವ ತನ್ನ ಸಹೋದರ ಟೂಕರನಿಗೆ ತಿಳಿಸಬೇಕೆಂದು ಸೆಲಾಮಿಸ್ ನಾವಿಕರನ್ನು ಪ್ರತಿನಿಧಿಸುವ ಮೇಳನಾಯಕನಿಗೆ ತಿಳಿಸುತ್ತಾನೆ.

ಅಯಾಸನು ಸಮುದ್ರ ತೀರಕ್ಕೆ ಹೋದಕೂಡಲೆ ದೂತನೊಬ್ಬನು ಟೂಕರನ ಕಡೆಯಿಂದ ಬಂದು, ಅಂದು ಇಡೀ ಹಗಲು ಅಯಾಸ್ ಗುಡಾರದಲ್ಲಿ ಉಳಿದರೆ ಅವನಿಗೆ ಕ್ಷೇಮ, ಹೊರಗೆ ಹೋದರೆ ಸಾವು ಖಂಡಿತ ಎಂದು ಕಲ್ಖಾಸ್ ಎಂಬ ಭವಿಷ್ಯಜ್ಞ

ನುಡಿದಿದ್ದಾನೆಂದೂ, ಹೊರಗೆ ಹೋಗದಂತೆ ಅಯಾಸನಿಗೆ ತಿಳಿಸಲು ಟೂಕರನು ತನ್ನನ್ನು ಕಳುಹಿಸಿರುವನೆಂದೂ ಟೆಕ್ಮೆಸ್ಸಾಳಿಗೂ, ಮೇಳನಾಯಕನಿಗೂ ತಿಳಿಸುತ್ತಾನೆ. ಕೂಡಲೇ ಅವರು ಅಯಾಸನನ್ನು ಹುಡುಕಿಕೊಂಡು ಸಮುದ್ರ ತೀರಕ್ಕೆ ಹೋದಾಗ ಅವನು ಆತ್ಮಹತ್ಯೆ ಮಾಡಿಕೊಂಡಿರುವುದನ್ನು ಕಾಣುತ್ತಾರೆ. ಅಯಾಸ್ ತನ್ನ ಕತ್ತಿಯನ್ನು ಭೂಮಿಯಲ್ಲಿ ನೆಟ್ಟು, ಅದರ ಹರಿತವಾದ ಮೊನೆಯ ಮೇಲೆ ಬಿದ್ದು ಮೃತನಾಗಿರುತ್ತಾನೆ. ಅದೇ ಸಮಯಕ್ಕೆ ಟೂಕರನು ಬಂದು, ಪರಿಸ್ಥಿತಿಯನ್ನು ಕಂಡು ಮರುಗಿ, ಸಹೋದರನ ಅಂತ್ಯಕ್ರಿಯೆಗೆ ನಿಲ್ಲುತ್ತಾನೆ. ಆದರೆ, ಅಲ್ಲಿಗೆ ಬರುವ ಸಮರ ನಾಯಕರಾದ ಅಗೆಮೆಮ್ನಾನ್ ಮತ್ತು ಅವನ ಸಹೋದರ ಮೆನಿಲಾಸ್ ಇಬ್ಬರೂ, ಅಯಾಸನು ಪಶುಹತ್ಯದಿಂದ ತನ್ನ ಯೋಧಲಕ್ಷಣಗಳನ್ನು ಕಳೆದುಕೊಂಡಿರುವುದರಿಂದ ಅವನಿಗೆ ಅಂತ್ಯಸಂಸ್ಕಾರ ಸಲ್ಲದು, ಅವನ ದೇಹವನ್ನು ನಾಯಿನರಿಗಳಿಗೆ ಬಿಡಬೇಕು ಎಂದು ಹಟ ಹಿಡಿಯುತ್ತಾರೆ. ಟೂಕರನು ಅವರ ಮಾತನ್ನು ನಿರಾಕರಿಸಲು ಅವರ ನಡುವೆ ಘರ್ಷಣೆಯಾಗುವ ಸೂಚನೆಗಳು ಕಾಣುತ್ತವೆ. ಆದರೆ, ಈ ಸಂದಿಗ್ಧ ಸನ್ನಿವೇಶದಲ್ಲಿ ಒಡಿಸೀಯಸ್ ಸಂಧಾನ ನಡೆಸಿ, ಯುದ್ಧನಾಯಕರನ್ನು ಒಲಿಸಿ, ಅಯಾಸನ ಶವ ಸಂಸ್ಕಾರಕ್ಕೆ ತಡೆಯಿಲ್ಲದಂತೆ ಮಾಡುತ್ತಾನೆ. ಇಲ್ಲಿಗೆ ನಾಟಕ ಮುಕ್ತಾಯವಾಗುತ್ತದೆ.

**ಪಾರಸಿಕರು** ಈಸ್ಕಿಲಸನ ಮೂಲ ಗ್ರೀಕ್ ರುದ್ರನಾಟಕದ ಭಾಷಾಂತರ. ನಾಟಕ ಗ್ರೀಕ್ ನಾಟಕಶೈಲಿಯಲ್ಲೇ ಸಾಗಿದೆ. ಅದರ ವಸ್ತು ಹೀಗಿದೆ :

ತಾನು ಪರ್ಷಿಯಾದ ಚಕ್ರಾಧಿಪತಿಯೆಂದೂ, ತನ್ನ ಬಲ ಅಪ್ರತಿಮವೆಂದೂ ಅಹಂಕಾರಪಡುವ ಜರ್ಕ್‌ಸಸ್ (Zerxes), ತನ್ನ ಭೂ ಮತ್ತು ನೌಕಾ ಪಡೆಗಳನ್ನು ಜಮಾಯಿಸಿ ಗ್ರೀಕರ ಮೇಲೆ ದಂಡೆತ್ತಿ ಹೋಗುತ್ತಾನೆ. ಆ ಮೊದಲೇ ಅವನ ತಂದೆ ದರೀಯಸನಿಗೆ (Darius) ಗ್ರೀಕರಿಂದ ಮರಾಥನ್ ಯುದ್ಧದಲ್ಲಿ ಸೋಲಾಗಿರುತ್ತದೆ. ಆ ಸೋಲಿಗೆ ಪ್ರತೀಕಾರವಾಗಿ ಜರ್ಕ್‌ಸಸ್ ಈಗ ಗ್ರೀಕರ ಮೇಲೆ ದಂಡೆತ್ತಿದ್ದಾನೆ. ಅದನ್ನು ಗ್ರೀಕ್ ದೇವತೆಗಳು ಸಹಿಸುವುದಿಲ್ಲ. ಗ್ರೀಕ್ ಸಂಪ್ರದಾಯದಲ್ಲಿ ಮಾನವ ತಾನು ದೇವತೆಗಳಿಗಿಂತ ಶಕ್ತಿವಂತ ಎಂದು ಹೇಳಿಕೊಂಡರೆ, ದೇವತೆಗಳ ಕೋಪದಿಂದ ಅವನ ನಾಶ ಖಂಡಿತ. ಜರ್ಕ್‌ಸಸ್‌ನ ಗತಿಯೂ ಹಾಗೆಯೇ ಆಯಿತು.

ನಾಟಕದ ಪ್ರಾರಂಭದಲ್ಲಿ ಜರ್ಕ್‌ಸಸ್‌ನ ತಾಯಿ ಅಟೋಸಳಿಗೆ ತನ್ನ ಮಗ ಸೋತಿರುವನೆಂದು ಬೀಳುವ ಸ್ವಪ್ನ ಪೂರ್ವಸೂಚನೆಯನ್ನು ಕೊಡುವಂತಿದೆ. ತನ್ನ ಕನಸಿನ ವಿಷಯವನ್ನು ಆಕೆ ಪಾರಸಿಕರ ಹಿರಿಯರಿಗೆ ತಿಳಿಸಲು, ಅವರು ಸ್ವಪ್ನದಿಂದ

ಗಾಬರಿಯಾಗಬೇಕಾಗಿಲ್ಲವೆಂದೂ, ಸತ್ತು ಪಿತೃಲೋಕದಲ್ಲಿರುವ ಅವಳ ಗಂಡ ದರೀಯುಸನನ್ನು ಸಮಾಧಿಯಿಂದ ಎಬ್ಬಿಸಿದರೆ ಅವನ ಪ್ರೇತವು ಒಂದು ಸೂಕ್ತ ಸಲಹೆಗಳನ್ನು ಕೊಡಬಹುದೆಂದೂ ಸಲಹೆ ನೀಡುತ್ತಾರೆ. ಅದೇ ಸಮಯಕ್ಕೆ ದೂರದ ಗ್ರೀಕ್ ಸಮರ ಭೂಮಿಯಿಂದ ಬರುವ ದೂತನು, ಜರ್ಕ್ಸಸ್‌ನ ಮಹಾ ನೌಕಾಪಡೆ ಮೂರು ಭಾಗಗಳಾಗಿ ವಿಂಗಡಿಸಿಕೊಂಡು ಸೆಲಾಮಿಸ್ ದ್ವೀಪವನ್ನು ಆಕ್ರಮಿಸಿದಾಗ ಆ ನೌಕಾ ವಿಭಜನೆಯಿಂದ ಪಾರಸಿಕರ ನೌಕಾ ಬಲ ಕುಗ್ಗಿ, ಗ್ರೀಕರು ಸುಲಭವಾಗಿ ಅವರನ್ನು ಸೋಲಿಸಲು, ಪಾರಸಿಕರ ಹಡಗುಗಳು ಮುಳುಗಿ ವೀರಯೋಧರೆಲ್ಲಾ ಜಲಸಮಾಧಿಯಾದರೆಂದೂ ರಾಜಮಾತೆ ಅಟೋಸ ಹಾಗೂ ಪಾರಸಿಕರ ಹಿರಿಯರಿಗೆ ತಿಳಿಸುತ್ತಾನೆ. ಸೋತ ಜರ್ಕ್ಸಸ್ ಅಪಮಾನವನ್ನು ತಾಳಲಾರದೆ ಕೋಪಾವೇಶದಲ್ಲಿ ವಸ್ತ್ರಗಳನ್ನು ಹರಿದುಕೊಂಡು ಯುದ್ಧರಂಗದಿಂದ ಪಲಾಯನಗೊಂಡು ಹಿಂತಿರುಗುತ್ತಿರುವ ವಾರ್ತೆಯು ಸಹ ದೂತನಿಂದ ತಿಳಿದುಬರುತ್ತದೆ. ತನ್ನಮಗ ಸೋತರೂ ಪ್ರಾಣಹಾನಿಯಿಲ್ಲದೆ ಹಿಂತಿರುಗುತ್ತಿರುವುದು ಅಟೋಸಳಿಗೆ ಸಮಾಧಾನ !

ನಾಟಕದ ಎರಡನೆಯ ಭಾಗದಲ್ಲಿ ಪಾರಸಿಕರ ಹಿರಿಯರು ಮಂತ್ರಶಕ್ತಿಯಿಂದ ಸಮಾಧಿಯಿಂದ ಎಬ್ಬಿಸುವ ದರೀಯುಸನ ಪ್ರೇತವು ಮಡದಿ ಅಟೋಸಳಿಗೂ ಮತ್ತು ಪಾರಸಿ ಹಿರಿಯರಿಗೂ ಕೆಲವು ಸಲಹೆಗಳನ್ನು ಸೂಚಿಸುತ್ತದೆ. ಗ್ರೀಕರು ತಾಯ್ನಾಡಿಗಾಗಿ ಹೋರಾಡುವ ವೀರರಾದ ಕಾರಣ ಅವರ ಮೇಲೆ ಮತ್ತೆ ಯುದ್ಧ ಹೂಡಿದರೆ ಪಾರಸಿಕರಿಗೆ ಕೇಡೆಂದೂ, ಜರ್ಕ್ಸಸ್‌ನು ಗ್ರೀಕ್ ದೇವತೆಗಳ ಗುಡಿಗಳನ್ನು ಕೆಡವಿ ಅವರ ಕೋಪಕ್ಕೆ ಪಾತ್ರನಾಗಿ ಸೋಲನ್ನು ಅನುಭವಿಸಬೇಕಾಯಿತೆಂದೂ, ಮತ್ತೆ ಮದವೇರಿ ಯುದ್ಧಕ್ಕೆ ನಿಂತರೆ ಗ್ರೀಕರು ಮುಯ್ಯಿ ತೀರಿಸಿಕೊಳ್ಳದೆ ಬಿಡರೆಂದೂ, ಆದಕಾರಣ ಸೋತು ಹಿಂತಿರುಗುತ್ತಿರುವ ಜರ್ಕ್ಸಸನನ್ನು ಬರಮಾಡಿಕೊಂಡು ಮತ್ತೊಮ್ಮೆ ದುಡುಕಿ ಗ್ರೀಕರ ಮೇಲೆ ಕೈಮಾಡಬಾರದೆಂದು ಅವನಿಗೆ ಬುದ್ಧಿ ಹೇಳಬೇಕೆಂದೂ ಪ್ರೇತವು ತಿಳಿಸಿ ಸಮಾಧಿಯನ್ನು ಸೇರಿಕೊಳ್ಳುತ್ತದೆ. ಪ್ರೇತದರ್ಶನದ ತರುವಾಯ ಅಟೋಸ ಅರಮನೆಗೆ ಹಿಂತಿರುಗುತ್ತಾಳೆ. ಅವಳು ಹೋದನಂತರ ರಂಗವನ್ನು ಪ್ರವೇಶಿಸುವ ಜರ್ಕ್ಸಸ್ ಇಡೀ ಪಾರಸಿ ರಾಷ್ಟ್ರ ತನ್ನಿಂದಲೇ ನಾಶವಾಯಿತು, ತನ್ನ ಧೀರ ಸೈನಿಕರೆಲ್ಲಾ ತನ್ನ ಅವಿವೇಕದಿಂದಲೇ ರಣರಂಗದಲ್ಲಿ ಸೋತು ಮಡಿದರು ಎಂದು ಪ್ರಲಾಪಿಸುತ್ತಾನೆ. ಅವನ ಪ್ರಲಾಪ ನಾಟಕದ ಉಳಿದ ಭಾಗವನ್ನು ಆವರಿಸಿಕೊಳ್ಳುತ್ತದೆ. ಹಿರಿಯರು ಅವನಿಗೆ ಸಮಾಧಾನ ಹೇಳಿ ಅವನನ್ನು ಅರಮನೆಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿಗೆ ನಾಟಕದ ಮುಕ್ತಾಯ.

ಈ ನಾಟಕದಲ್ಲಿ ಬಿ.ಎಂ.ಶ್ರೀ ಪಾತ್ರಗಳ ಹೆಸರುಗಳ ಉಚ್ಚರಣೆಯಲ್ಲಿ ಮಾತ್ರ ಬದಲಾವಣೆ ಮಾಡಿರುತ್ತಾರೆ. ನಾಟಕದಲ್ಲಿ ಬರುವ ಮೂರೇ ಪಾತ್ರಗಳಿಗೆ ಅವರು ಉಪಯೋಗಿಸಿರುವ ಹೆಸರುಗಳು ಹೀಗಿವೆ—

*Atossa*= ಹುತಾಶ ; *Xerxes*= ಕ್ಷಯಾರ್ಷ ; *Darius*= ದರ್‍ಯವುಷ್, ನಾಟಕದಲ್ಲಿನ ದೂತ ಸೆಲಾಮಿಸ್ ಯುದ್ಧವರ್ಣನೆ ಮತ್ತು ಕ್ಷಯಾರ್ಷನ ಸೋಲಿನ ವಿವರಗಳನ್ನು ನೀಡಲು ಸಹಾಯಕ. ಮೇಳದವರು ಪಾರಸಿ ರಾಜಸಭೆಯ ಹಿರಿಯರನ್ನು ಪ್ರತಿನಿಧಿಸುತ್ತಾರೆ.

## ೪. ರುದ್ರನಾಟಕದಲ್ಲಿ ಮೇಳ ಮತ್ತು ದೂತನ ಪಾತ್ರ

ಗ್ರೀಕ್ ನಾಟಕಗಳಲ್ಲಿ ಕಾಲೈಕ್ಯ, ಸ್ಥಳೈಕ್ಯ ಮತ್ತು ಕ್ರಿಯೈಕ್ಯ—ನಾಟಕದ ಈ ಮೂರು ಐಕ್ಯತೆಗಳು (Unities of Time, Place and Action) ಬಹಳ ಮುಖ್ಯ. ನಾಟಕ ಒಂದು ನಿರ್ದಿಷ್ಟ ಕಾಲಕ್ಕೆ ಸಂಬಂಧಪಟ್ಟಿರಬೇಕು : ಘಟನೆಗಳು ಬೇರೆ ಬೇರೆ ಕಾಲಗಳಲ್ಲಿ ನಡೆದಿರಬಾರದು ; ನಾಟಕದ ಕ್ರಿಯೆ ಒಂದೇ ಸ್ಥಳದಲ್ಲಿ ನಡೆಯಬೇಕು : ಬೇರೆ ಬೇರೆ ಸ್ಥಳಗಳಲ್ಲಿ ಅಥವಾ ಊರುಗಳಲ್ಲಿ ನಡೆದಿರಬಾರದು ; ನಾಟಕದ ಕ್ರಿಯೆ ಒಂದೇ ಘಟನೆಗೆ ಸಂಬಂಧಪಟ್ಟಿರಬೇಕು : ಉಪ-ಪ್ರಸಂಗಗಳು ಸೇರಿರಬಾರದು : ಈ ತ್ರಿ-ಐಕ್ಯತೆಗಳನ್ನು ಗ್ರೀಕ್ ನಾಟಕಗಳಲ್ಲಿ ರಕ್ಷಿಸಲು ಮೇಳ ವೃಂದ ಹಾಗೂ ದೂರದ ಸ್ಥಳಗಳಿಂದ ವಾರ್ತೆಯನ್ನು ಹೊತ್ತು ತರುವ ದೂತ ಸಹಾಯಕರಾಗಿದ್ದಾರೆ. ನಾಟಕ ಬಹುಮಟ್ಟಿಗೆ ಮೇಳನಾಯಕ, ದೂತ ಮತ್ತು ಪಾತ್ರಗಳು—ಇವರ ನಡುವೆ ನಡೆಯುವ ಸಂಭಾಷಣೆಗಳ ಮೂಲಕ ಸಾಗುವಾಗ, ಇತರ ಸ್ಥಳಗಳಲ್ಲಿ ಅಥವಾ ಇತರ ಕಾಲಗಳಲ್ಲಿ ನಡೆದಿರಬಹುದಾದ ನಾಟಕಕ್ಕೆ ಸಂಬಂಧಪಟ್ಟ ಕ್ರಿಯೆಗಳು ಅವರಿಂದಲೇ ಪ್ರೇಕ್ಷಕರಿಗೆ ತಿಳಿದುಬರುತ್ತವೆ.

ಈಸ್ಕಿಲಸ್, ಸೊಫೊಕ್ಲೀಸ್ ಮತ್ತು ಯೂರಿಪಿಡೀಸ್—ಈ ಮೂವರು ನಾಟಕಕಾರರು ತಮ್ಮ ನಾಟಕಗಳಲ್ಲಿ ಮೇಳಗಾನವನ್ನು ತಂದುಕೊಳ್ಳುವುದಕ್ಕೆ ಮುಂಚೆ, ಗ್ರೀಸ್ ದೇಶದಲ್ಲಿ ಡಿಯೊನೀಸಸ್ ದೇವತೆಯ ಉತ್ಸವ ಕಾಲದಲ್ಲಿ ಮೇಳಗೀತೆಗಳನ್ನು (Choral odes) ಹಾಡುತ್ತಿದ್ದರು. ಸುಮಾರು ಕ್ರಿ.ಪೂ. ಏಳನೆಯ ಶತಮಾನದಲ್ಲಿ ಈ ಮೇಳಗೀತೆಗಳೊಂದಿಗೆ ಮೇಳನಾಯಕನ ಮಾತುಗಳು ಸೇರಿದವು. ತರುವಾಯ ಮೇಳನಾಯಕನೊಂದಿಗೆ ಒಬ್ಬಿಬ್ಬರು ಪಾತ್ರಧಾರಿಗಳು ಸಹ ಸೇರಿದರು. ಗ್ರೀಕ್ ರುದ್ರನಾಟಕಗಳಿಗೆ ಮೇಳಗಾನ ಪ್ರಧಾನವಾಗಿದ್ದು, ಮೊದಮೊದಲು ಮೇಳದಲ್ಲಿ ಐವತ್ತು ಮಂದಿ ಗಾಯಕರು ಇರುತ್ತಿದ್ದರು ; ತರುವಾಯ ಅವರ ಸಂಖ್ಯೆ ಹನ್ನೆರಡು ಅಥವಾ

ಹದಿನ್ನೈದಕ್ಕೆ ಇಳಿಯಿತು. ಮೇಳಗಾನ ರುದ್ರನಾಟಕದ ವಿವಿಧ ಸನ್ನಿವೇಶಗಳಿಗೆ ಹಿನ್ನೆಲೆಯ ಸಂಗೀತವನ್ನೊದಗಿಸಿ, ಘಟನೆಗಳಿಗೆ ತಕ್ಕಂತೆ ಹರ್ಷ, ಶೋಕ, ರೌದ್ರ, ಮೊದಲಾದ ರಸಭಾವಗಳು ಮೇಳದವರ ವರ್ಣನೆಯಿಂದಲೇ ಪ್ರೇಕ್ಷಕರಿಗೆ ತಿಳಿದು ಬರುತ್ತವೆ. ತೋರಿಸಲು ಸಾಧ್ಯವಿಲ್ಲದ ಘಟನೆಗಳನ್ನು ಹೀಗೆ ವರ್ಣನೆಗಳ ಮೂಲಕ ಜೋಡಿಸಿ ಹಾಡಲು ಹಾಗೂ ನಾಟಕಕ್ಕೆ ಯುಕ್ತ ಸನ್ನಿವೇಶವನ್ನು ತರಲು ಮೇಳಗಾನ ಅತ್ಯಗತ್ಯವಾದ ನಾಟಕದ ಅಂಗವಾಯಿತು. ಬಿ.ಎಂ.ಶ್ರೀ ಅವರು ಕನ್ನಡಕ್ಕೆ ತಂದಿರುವ ಈಸ್ಕಿಲಸನ **ಪರ್ಷಿಯನ್ಸ್** ಮತ್ತು ಸೊಫೊಕ್ಲೀಸನ **ಅಯಾಸ್** ನಾಟಕಗಳಲ್ಲಿ ಮೇಳದ ಪಾತ್ರ ಸ್ಪಷ್ಟವಾಗಿದೆ.

(ಅ) **ಪಾರಸಿಕರು** ನಾಟಕದಲ್ಲಿ ಮೇಳನಾಯಕ ಮತ್ತು ಮೇಳಗಾಯಕರು ಪರ್ಷಿಯಾದ ರಾಜಸಭೆಯ ಹಿರಿಯರನ್ನು ಪ್ರತಿನಿಧಿಸುತ್ತಾರೆ. ಮೇಳನಾಯಕ ಪಾತ್ರ ಗಳೊಂದಿಗೆ ಮಾತನಾಡುವಾಗ ಅವನು ರಾಜಸಭೆಯ ಹಿರಿಯನೆಂದು ನಾವು ಭಾವಿಸಿ ಕೊಳ್ಳಬೇಕು. ಮೇಳನಾಯಕ, ಸೆಲಾಮಿಸ್ ಯುದ್ಧಭೂಮಿಯಿಂದ ಬರುವ ದೂತ ಮತ್ತು ಪಾರಸಿ ಸಾಮ್ರಾಟ ಕ್ಷಯಾರ್ಷನ ತಾಯಿ ಹುತೌಶ—ಇವರ ಸಂಭಾಷಣೆ ಯಿಂದ ನಾಟಕದ ಮುಕ್ಕಾಲು ಭಾಗದ ಘಟನೆಗಳೆಲ್ಲಾ ನಮಗೆ ತಿಳಿದುಬರುತ್ತವೆ. ಯುದ್ಧವೇ ಪ್ರಧಾನ ವಸ್ತುವಾಗಿರುವ ಈ ನಾಟಕದಲ್ಲಿ ಮೇಳನಾಯಕ ಮತ್ತು ದೂತನ ನಿರೂಪಣೆಗಳ ಮೂಲಕ ಸೆಲಾಮಿಸ್ ಯುದ್ಧದಲ್ಲಿ ಗ್ರೀಕರ ವಿಜಯ ಹಾಗೂ ಪಾರಸಿಕರ ಪರಾಜಯಕ್ಕೆ ಸಂಬಂಧಪಟ್ಟ ವಿಷಯಗಳು ತಿಳಿದುಬರುತ್ತವೆ. ನಾಟಕದ ಪ್ರಾರಂಭದಿಂದ ಕೊನೆಯವರೆಗೂ ಮೇಳದ ಪಾತ್ರ ಪ್ರಧಾನವಾಗಿದೆ : ಮೇಳನಾಯಕ ನಾಟಕದ ನಿರೂಪಣೆಗೆ ಸಹಾಯಕ ; ಘಟನೆಗಳ ಜೋಡಣೆಗೆ ನೆರವುಗಾರ. ಪಾತ್ರ ಗಳೊಡನೆ ಸಂಭಾಷಿಸಿ ಇಡೀ ನಾಟಕದ ಓಟಕ್ಕೆ ಅವಿಚ್ಛಿನ್ನತೆಯನ್ನು ತರುವವನು ಸಹ ಮೇಳನಾಯಕನೇ.

ನಾಟಕದ ಪ್ರಾರಂಭದಲ್ಲಿ ಮೇಳದವರು ತಮ್ಮ ಹಾಡುಗಳ ಮೂಲಕ ಪಾರಸಿಕರ ಮಹಾಸೈನ್ಯ ಗ್ರೀಕರ ಮೇಲೆ ದಂಡೆತ್ತಿಹೋಗಿರುವ ಸಂದರ್ಭವನ್ನು ವಿವರಿಸುತ್ತಾರೆ. ತಮ್ಮ ಚಕ್ರಾಧಿಪತಿ ಕ್ಷಯಾರ್ಷನ ಹಿರಿಮೆಯನ್ನೂ ಕೊಂಡಾಡುತ್ತಾರೆ. ಆ ಸಮಯ ದಲ್ಲಿ ರಂಗವನ್ನು ಪ್ರವೇಶಿಸುವ ಕ್ಷಯಾರ್ಷನ ತಾಯಿ ಹುತೌಶಳ ಪರಿಚಯವನ್ನು ಪ್ರೇಕ್ಷಕರಿಗೆ ಮಾಡಿಸಿಕೊಡುವವನು ಮೇಳನಾಯಕ :

"ಅದೆಕೋ, ಬರುವಳು, ಹುತೌಶ ತಾಯಿ,
ದೇವರ ಕಣ್ಬೆಳಪಿನ ದೊರೆತಾಯಿ,
ಹಿರಿಯ ದೇವಿ—ಅಡಿಗೆರಗಿ, ಎರಗಿ."

ಹುತಾಶ ಯುದ್ಧಕ್ಕೆ ಹೋಗಿರುವ ತನ್ನ ಮಗನ ಬಗ್ಗೆ ಕಂಡ ದುಸ್ವಪ್ನವನ್ನು ಮೇಳನಾಯಕನಿಗೆ ತಿಳಿಸಿದಾಗ ಮೇಳನಾಯಕ ಅವಳಿಗೆ ಸಮಾಧಾನ ಹೇಳಿ, ಸತ್ತು ಸಮಾಧಿಯಾಗಿರುವ ಆಕೆಯ ಗಂಡ ದುರ‍್ಯವುಷನ ಪ್ರೇತವನ್ನು ಬರಮಾಡಿ ಅವನ ಸಲಹೆಯನ್ನು ಪಡೆದುಕೊಳ್ಳುವುದು ಯುಕ್ತವೆಂದು ತಿಳಿಸುತ್ತಾನೆ, ಹಾಗೂ ಪ್ರೇತವನ್ನು ಬರಮಾಡಿಕೊಳ್ಳಲು ಮಂತ್ರಶಕ್ತಿಯನ್ನು ಸಹ ಪ್ರಯೋಗಿಸುತ್ತಾನೆ; ಪ್ರಾರ್ಥನೆಗಳನ್ನು ಸಲ್ಲಿಸುತ್ತಾನೆ :

"ಬಾರಯ್ ಒಡೆಯಾ ಈಶ್ವರ, ಬಾರಯ್.
ಹಳೆಯೊಡೆಯಾ, ಕುಪ್ಪೆಯ ಮೇಲ್ ತೋರಯ್.
ಪೊನ್ನಿನ ಕೆರವನ್ ಕಾಲೊಳ್ ಮೆಟ್ಟಿ
ತಲೆಯೊಳ್ ರಾಜರ ಮುಡಿಯನ್ ಕಟ್ಟಿ
ಬಾರ ದುರ‍್ಯವುಷ್, ತಂದೆ, ಬಾರಯ್."

Rise then, sovereign lord to light
On this mound's sepulchral height,
Lift thy sock in saffron died
And rear thy tiara's regal pride.

ದೂರದ ಸಮರ ಭೂಮಿಯಿಂದ ಬರುವ ದೂತನು, ಕ್ಷಯಾರ್ಷನು ಸೋತು ಬರುತ್ತಿರುವ ವಾರ್ತೆಯನ್ನು ತಿಳಿಸಿದಾಗ ಪಾರಸಿಕರನ್ನು ಪ್ರತಿನಿಧಿಸುವ ಮೇಳನಾಯಕ ಗೋಳಿಡುತ್ತಾನೆ :

"ಪಾರಸಿಕರಾರಂಭ, ಸಾಮ್ರಾಜ್ಯಸಂರಂಭ,
ಶಕ್ತಿಭುಕ್ತಿಗಳೆಲ್ಲ ಭಂಗವಾಯ್ತೇ !
ಸುಖ ದುಃಖವಾಯ್ತೇ, ಪೊಡವು ಪುಡಿಯಾಯ್ತೇ,
ಪಾಡೆಲ್ಲ ಗೋಳಾಟವಾಯ್ತೇ !

ಯುದ್ಧದಲ್ಲಿ ಸೋತ ಕ್ಷಯಾರ್ಷನು ರಂಗದ ಮೇಲೆ ಕಾಣಿಸಿಕೊಳ್ಳುವ ಹೊತ್ತಿಗೆ ಅರ್ಧ ಭಾಗ ನಾಟಕ ಮುಗಿದಿರುತ್ತದೆ ; ನಾಟಕ ತೀವ್ರ ಸನ್ನಿವೇಶಕ್ಕೆ ಬಂದಿರುತ್ತದೆ. ಆಗ ಸನ್ನಿವೇಶಗಳಿಗೆ ತಕ್ಕ ರಂಗಸಂಗೀತವನ್ನು ಒದಗಿಸಿ ಹಾಡುವವರು ಮೇಳ ಗಾಯಕರು. ದುರ‍್ಯವುಷನ ಪ್ರೇತದ ಸಲಹೆಯಂತೆ ಕ್ಷಯಾರ್ಷನನ್ನು ಸಮಾಧಾನಪಡಿಸಿ ಅರಮನೆಗೆ ಕರೆದುಕೊಂಡು ಹೋಗುವ ಕಾರ್ಯದಲ್ಲಿ ರಾಜಸಭೆಯ ಹಿರಿಯರ ಪಾತ್ರ ಮುಖ್ಯವಾದದ್ದು. ರಾಜಸಭೆಯ ಹಿರಿಯರನ್ನು ಪ್ರತಿನಿಧಿಸುವ ಮೇಳನಾಯಕನು

ದೇಶದ ಜನರನ್ನು ಸಹ ಪ್ರತಿನಿಧಿಸುತ್ತಾನೆ. ಪಾರಸಿಕರ ಸೈನ್ಯ ಹೇಗೆ ನಾಶವಾಯಿತೆಂಬುದನ್ನು ಅವನು ಕ್ಷಯಾರ್ಷನಿಗೆ ಹಲವಾರು ಪ್ರಶ್ನೆಗಳನ್ನು ಹಾಕಿ ತಿಳಿದುಕೊಳ್ಳುತ್ತಾನೆ. ಗ್ರೀಕ್ ರುದ್ರನಾಟಕಗಳಲ್ಲಿ ಮೇಳವೃಂದದ ಪ್ರಾಮುಖ್ಯವನ್ನು ತಿಳಿದ ಶ್ರೀ ಅವರು ಕ್ಷಯಾರ್ಷ ಮತ್ತು ಮೇಳಗಾಯಕರ ನಡುವಣ ಸಂಭಾಷಣೆಯೊಂದಿಗೆ, ಗ್ರೀಕ್ ಮೂಲ ನಾಟಕದಲ್ಲಿ ಕಂಡುಬರುವಂತೆಯೇ, ನಾಟಕವನ್ನು ಮುಕ್ತಾಯಗೊಳಿಸಿರುವ ವಿಧಾನ ಸೂಕ್ತವೆನಿಸುತ್ತದೆ :

**ಕ್ಷಯಾರ್ಷ** : ದಾರಿತೋರಿ ತಾಯ ಮನೆಗೆ
**ಮೇಳ** : ಇತ್ತ ಬಾ.
**ಕ್ಷಯಾರ್ಷ** : ಆವ ಮೊಗದೊಳವಳ ನೋಳ್ಪೆ ?
**ಮೇಳ** : ನೋಳ್ಪೆ ಬಾ.
**ಕ್ಷಯಾರ್ಷ** : ನನ್ನ ನೋಡಿ ಕರೆವಳೆ ತಾಯ್?
**ಮೇಳ** : ಕರೆವಳು.
**ಕ್ಷಯಾರ್ಷ** : ಮೆಲ್ನುಡಿಗಳ ನುಡಿವಳೆ ತಾಯ್ ?
**ಮೇಳ** : ನುಡಿವಳು :
ನಲ್ನುಡಿಗಳ ನುಡಿವಳು.
**ಕ್ಷಯಾರ್ಷ** : ಮತ್ತೆ ಸೂಸ ಮೆರೆವುದೆ ಪೇಳ್.
**ಮೇಳ** : ಮೆರೆಯುಲಿ.
**ಕ್ಷಯಾರ್ಷ** : ನಮ್ಮ ಪರ್ಸ ಬೆಳೆವುದೆ ಪೇಳ್.
**ಮೇಳ** : ಬೆಳೆಯುಲಿ.
**ಕ್ಷಯಾರ್ಷ** : ಏಷ್ಯಾದ ಸಾಮ್ರಾಜ್ಯಕಾರು ?
**ಮೇಳ** : ದೇವರೇ.
**ಕ್ಷಯಾರ್ಷ** : ಸಾಮ್ರಾಜ್ಯವ ಕಾವರಾರು ?
**ಮೇಳ** : ಧರ್ಮವೇ :
ದೈವ ಕಾವ ಧರ್ಮವೇ.



ಈ ಸಂಭಾಷಣೆಯಿಂದ ನಾಟಕ ಹರ್ಷಾಂತವಾಗಿ ಮುಕ್ತಾಯಗೊಳ್ಳುವಂತೆ ನಮಗೆ ತೋರಬಹುದು. ಆದರೆ, ನಾಟಕಕಾರ ಈಸ್ಕಿಲಸ್ ನಾಟಕದ ರೌದ್ರತೆಯನ್ನು ಪಾರಸಿಕರ ಸೋಲಿನಲ್ಲಿ ಕಂಡಿದ್ದಾನೆ. ಸೋತುಬಂದ ಕ್ಷಯಾರ್ಷನನ್ನು ಪಾರಸಿಕರು

ಕೊಲೆಮಾಡುವುದು ಐತಿಹಾಸಿಕ ವಿಷಯ[1]. ಪಾರಸಿಕರ ಆಕ್ರಮಣದಿಂದ ಗ್ರೀಕರು ತಮ್ಮ ದೇಶವನ್ನು ರಕ್ಷಿಸಿದ ವಿಷಯವನ್ನು ನಾಟಕದ ವಸ್ತುವನ್ನಾಗಿ ಮಾಡಿಕೊಂಡಿರುವ ನಾಟಕಕಾರ ಗ್ರೀಕರ ವಿಜಯವನ್ನು ಪರೋಕ್ಷವಾಗಿ ಕೊಂಡಾಡಿ, ಮತ್ತೆ ಪಾರಸಿಕರು ದಂಡೆತ್ತಿಬಂದರೆ ಅವರ ಸರ್ವನಾಶವೆಂಬುದನ್ನು ಸಾರಿಹೇಳುವ ಉದ್ದೇಶವನ್ನು ವ್ಯಕ್ತಪಡಿಸಿರುವುದರಿಂದ, ಬಹುಶಃ ನಾಟಕವನ್ನು ಕ್ಷಯಾರ್ಷನ ಕೊಲೆಯೊಂದಿಗೆ ಮುಕ್ತಾಯಗೊಳಿಸಿಲ್ಲ.

(ಆ) **ಅಶ್ವತ್ಥಾಮನ್** ( **ಅಯಾಸ್**) : ಸೊಫೊಕ್ಲೀಸನ **ಅಯಾಸ್** ನಾಟಕದಲ್ಲಿ ಮೇಳನಾಯಕ ಮತ್ತು ಮೇಳವೃಂದದವರು ಗ್ರೀಕ್ ಸೈನ್ಯವನ್ನು ಕೂಡಿಕೊಂಡು ಟ್ರಾಯ್ ಪಟ್ಟಣದ ಮುತ್ತಿಗೆಗೆ ಬಂದ ಅಯಾಸನ ನೌಕಾಪಡೆಯ ನಾವಿಕರನ್ನು ಪ್ರತಿನಿಧಿಸಿ ನಾಟಕದ ನಿರೂಪಣೆಯಲ್ಲಿ ಸಹಾಯಕರಾಗುತ್ತಾರೆ. ಬಿಎಂ.ಶ್ರೀ ಅವರು **ಅಶ್ವತ್ಥಾಮನ್** ನಾಟಕದಲ್ಲಿ ಮೇಳನಾಯಕ ಮತ್ತು ಮೇಳವೃಂದ ಬನವಾಸಿಯಿಂದ ಏಕಲವ್ಯನೊಂದಿಗೆ ಬರುವ ಬೇಡರ ಪಡೆಯನ್ನು ಪ್ರತಿನಿಧಿಸುವಂತೆ ಮಾಡಿದ್ದಾರೆ. ಗ್ರೀಕ್ ಮೂಲ ನಾಟಕದಲ್ಲಿ ಹಾಗೂ ಬಿ. ಎಂ. ಶ್ರೀ ಅವರ ಕೃತಿಯಲ್ಲಿ ದುರಂತ ನಾಯಕ ದೇವತೆಯ ಕೋಪದಿಂದ ಮತಿಗೆಟ್ಟು ಪಶುವಧೆ ಮಾಡಿರುವ ವಿಷಯವನ್ನು ಪ್ರಧಾನಪಾತ್ರಗಳು ತಿಳಿಸಿದ ತರುವಾಯ ಮೇಳವೃಂದ ರಂಗವನ್ನು ಪ್ರವೇಶಿಸುತ್ತದೆ. ಶ್ರೀ ಅವರು ಮೇಳದ ಪಾತ್ರವನ್ನು ಮೂಲ ನಾಟಕದಲ್ಲಿರುವಂತೆಯೇ ಅಳವಡಿಸಿಕೊಂಡಿರುವುದರಿಂದ **ಅಶ್ವತ್ಥಾಮನ್** ನಾಟಕವನ್ನು ನಾವು ಮೇಳವೃಂದದ ಬಗ್ಗೆ ಪರಿಶೀಲಿಸಬಹುದು : ಮೇಳಗಾಯಕರು ರಂಗವನ್ನು ಪ್ರವೇಶಿಸುತ್ತಲೆ ಅಶ್ವತ್ಥಾಮನ್ ರಾಸುಗಳನ್ನು ಕೊಂದನೆಂದು ಸುಳ್ಳುಸುದ್ದಿಗಳು ಹರಡುತ್ತಿವೆಯೆಂಬುದನ್ನು ಮೇಳನಾಯಕ ಪ್ರೇಕ್ಷಕರಿಗೆ ತಿಳಿಸಿ, ಆ ಅಪಪ್ರಚಾರದ ಬಗ್ಗೆ ನೊಂದುಕೊಳ್ಳುತ್ತಾನೆ. ಬಹುಶಃ ಅಶ್ವತ್ಥಾಮನಿಗೆ ಹುಚ್ಚು ಹಿಡಿದಿದ್ದರೆ ಅದು ದೇವತೆಗಳ ಇಚ್ಛೆಯಿಂದಲೇ ಆಗಿರಬೇಕೆಂದು ಶಂಕಿಸುತ್ತಾನೆ. ಅಶ್ವತ್ಥಾಮನ ಅಜ್ಜಿ ಭಾರ್ಗವಿ, ಅಶ್ವತ್ಥಾಮ ಆ ಘೋರಕೃತ್ಯವನ್ನು ಎಸಗಿರುವನೆಂದು ತಿಳಿಸಿದಾಗ ಮೇಳನಾಯಕ ಹೆದರುತ್ತಾನೆ. ಶತ್ರುಪಕ್ಷದ ಭೀಮಾದಿಗಳಿಗೆ ಈ ವಿಷಯ ತಿಳಿದರೆ ಅಶ್ವತ್ಥಾಮನನ್ನು ಕೊಲ್ಲುತ್ತಾರೆಂಬ ಭೀತಿಯೂ ಆವನದು. ಹೀಗೆ ನಾಟಕದ ಪಾತ್ರ

[1] At Salamis the Persian fleet was annihilated by the Greeks under Themistocles and Xerxes returned to Persia, where he was murdered.

ಗಳೊಡನೆ ಮೇಳನಾಯಕ ಸಂಭಾಷಣೆಯಲ್ಲಿ ನಿರತನಾಗಿ ತಾನೂ ಒಬ್ಬ ಪಾತ್ರವಾಗಿ ಪರಿವರ್ತಿಸಿಕೊಳ್ಳುತ್ತಾನೆ. ಈಸ್ಕಿಲಸನ **ಪಾರಸಿಕರು** ನಾಟಕದಲ್ಲಿ ಕಂಡುಬರುವಂತೆ ಇತರ ಪಾತ್ರಗಳಿಗೆ ಪ್ರಶ್ನೆಗಳನ್ನು ಹಾಕಿ ನಾಟಕದ ಘಟನೆಗಳ ನಿರೂಪಣೆಗೆ ಮೇಳನಾಯಕ ಸಹಾಯಕನಾಗುತ್ತಾನೆ. ಈ ವಿಧವಾದ ವರ್ಣನಾತ್ಮಕ ನಿರೂಪಣೆಗಳಿಂದ ಗ್ರೀಕ್ ನಾಟಕಗಳಲ್ಲಿ ಪಾತ್ರಗಳ ಕ್ರಿಯೆಗೆ—ಅಭಿನಯಕ್ಕೆ—ಅವಕಾಶವಿಲ್ಲದಂತಾಗುತ್ತದೆ. ಉದಾಹರಣೆಗೆ ಭಾರ್ಗವಿಯಿಂದ ಅಶ್ವತ್ಥಾಮನ ಘೋರಕೃತ್ಯವನ್ನು ತಿಳಿದುಕೊಳ್ಳುವ ಬಗ್ಗೆ ಮೇಳನಾಯಕ ಹಾಕುವ ಪ್ರಶ್ನೆ ಇದು :

"ಅರಿಪು ಎಮಗದನ್ ದಿಟಮುನ್ ಕೇಳ್ವೆನ್.'

How at the start this catastrophe
Swoop down ? Tell us we share the pain of it.

ರುದ್ರನಾಟಕಗಳಲ್ಲಿ ನೊಂದ ಪಾತ್ರಗಳಿಗೆ ಸಮಾಧಾನ ಹೇಳುವ ಗುರುತರ ಕೆಲಸವು ಸಹ ಮೇಳನಾಯಕನದು : **ಪಾರಸಿಕರು** ನಾಟಕದಲ್ಲಿ ಮೇಳನಾಯಕ ರಾಜಮಾತೆ ಹುತೌಶಳಿಗೂ, ದುರಂತಕ್ಕೀಡಾಗಿರುವ ಕ್ಷಯಾರ್ಷನಿಗೂ ಸಮಾಧಾನ ಹೇಳಿ ಸಂತೈಸುವಂತೆ, **ಅಶ್ವತ್ಥಾಮನ್** ನಾಟಕದಲ್ಲಿ ಪಶುವಧೆಮಾಡಿ ಮರುಗುತ್ತಿರುವ ದುರಂತ ನಾಯಕನನ್ನು ಮೇಳನಾಯಕ (ಬೇಡರ ಪಡೆಯ ದಂಡನಾಯಕ) ಸಂತೈಸುತ್ತಾನೆ :

"**ಮೇಳನಾಯಕ** : ಆದುದನ್ ನೆನೆನೆನೆದು ಪಂಬಲಿಸಲ್ ಅಪ್ಪುದೇನ್ ?
ಆದುದಾಗಿ ಪೋಯ್ತು. ಅದನ್ ಅಳಿಸಬರ್ಕುಮೆ ?"

Hush ! check those awful words !
Don't seek a worse cure for an ill disease,
And make your pain still heavier than it is.

ರುದ್ರನಾಟಕಗಳಲ್ಲಿ, ನಾಯಕನ ಸುಖದುಃಖಗಳಲ್ಲಿ ಮೇಳನಾಯಕ ಭಾಗಿಯಾಗಿ ತನ್ನ ಪ್ರತಿಕ್ರಿಯೆಯನ್ನು ಪ್ರಕಟಿಸುವುದು ಸಾಮಾನ್ಯ. ಸೊಫೊಕ್ಲೀಸನ ನಾಟಕದಲ್ಲಿ ಅಯಾಸ್ ಮಾಡಿದ ಹೀನ ಕೃತ್ಯಕ್ಕೆ ದೂರದ ಸೆಲಾಮಿಸ್ ದ್ವೀಪದಲ್ಲಿರುವ ಅಯಾಸನ ತಂದೆತಾಯಿಗಳು ಯಾವ ರೀತಿ ದುಃಖಿತರಾಗುವರು ಎಂಬುದನ್ನು ಮೇಳನಾಯಕ ಕಲ್ಪಿಸಿಕೊಳ್ಳುತ್ತಾನೆ. ಅದೇ ರೀತಿ ಬಿ.ಎಂ.ಶ್ರೀ ಅವರು ಅಶ್ವತ್ಥಾಮನ ಹೀನಕೃತ್ಯದ ಬಗ್ಗೆ ಅವನ ಸ್ವದೇಶವಾದ ಬನವಾಸಿಗೆ ಆಗಿರುವ ಕೊರಗನ್ನು ಮೇಳನಾಯಕನ ಮೂಲಕ ಚಿತ್ರಿಸಿದ್ದಾರೆ. ಅಶ್ವತ್ಥಾಮನ ಅಜ್ಜಿ ಭಾರ್ಗವಿಗೆ ವೃದ್ಧಾಪ್ಯದಲ್ಲಿ ಆಗಿರುವ ಸಂಕಟವನ್ನು ಮೇಳನಾಯಕ ತಿಳಿಸುತ್ತಾನೆ :

ಬಾಳ್ಕೆಯ ಕಡೆಯೊಳ್ ಬಾಗಿದ ಮುದಿಯಳ್,
ತಾಯ್ ಇಲ್ಲದನನ್ ನಡಪಿದ ಮುದಿಯಳ್,
ಕಂದನ ಕೇಡನ್ ನೋಡಲೊ ಬಳ್ದಿಳ್ ?
ನರೆದಲೆ ದುಃಖದ ಮಡುವೊಳ್ ಬಿಳ್ದಳ್.

ಅಶ್ವತ್ಥಾಮನಿಗೆ ಸಂಭವಿಸಲಿರುವ ದುರಂತವನ್ನು ತಡೆಯುವ ಮಾರ್ಗವನ್ನು ಕಣಿಕಾರನೊಬ್ಬನಿಂದ ಕೇಳಿ ಅಶ್ವತ್ಥಾಮನನ್ನು ಉಳಿಸಲು ಏಕಲವ್ಯನು ಕಳುಹಿಸುವ ದೂತನು ಮೇಳನಾಯಕನನ್ನು ಮೊದಲು ಸಂಧಿಸಿ ತಾನು ತಂದ ಸುದ್ದಿಯನ್ನು ತಿಳಿಸುತ್ತಾನೆ. ಅಶ್ವತ್ಥಾಮನು ಮಾಡಿದ ಹೇಯಕೃತ್ಯಕ್ಕೆ ಸಾವು ಸಂಭವಿಸಬಹುದಾದರೂ, ಅವನು ತನ್ನ ಬಿಡಾರದಿಂದ ಒರವೆ ದಿನವೆಲ್ಲಾ ಅಲ್ಲಿ ಉಳಿದರೆ ಸಾವಿನಿಂದ ಪಾರಾಗಬಹುದೆಂದು ಕಣಿಕಾರನು ಭವಿಷ್ಯ ನುಡಿದಿರುತ್ತಾನೆ. ಈ ಸುದ್ದಿಯನ್ನು ಕೇಳಿದ ಮೇಳನಾಯಕನು ತನ್ನ ಪರಿವಾರದೊಡನೆಯೂ, ಭಾರ್ಗವಿಯೊಡನೆಯೂ ಅಶ್ವತ್ಥಾಮನನ್ನು ಹುಡುಕಲು ಹೋಗುತ್ತಾನೆ. ಮೇಳದ ತಂಡದವರು ಎರಡು ಗುಂಪುಗಳಾಗಿ ವಿಂಗಡಿಸಿಕೊಂಡು ಅವನನ್ನು ಹುಡುಕಿತರಲು ಕಾನನವನ್ನು ಪ್ರವೇಶಿಸುತ್ತಾರೆ. ಅಶ್ವತ್ಥಾಮನ ಮರಣದ ತರುವಾಯ ಈ ಎರಡು ಗುಂಪಿನ ಮೇಳಗಾಯಕರು ಶೋಕಗೀತೆಗಳನ್ನು ಹಾಡುತ್ತಾರೆ. ಅವರ ಹಾಡುಗಳು ಸನ್ನಿವೇಶಕ್ಕೆ ತಕ್ಕಂತೆ ದುಃಖಸೂಚಕವಾಗಿವೆ.

ಗ್ರೀಕ್ ನಾಟಕ ಸಂಪ್ರದಾಯದಲ್ಲಿ ಸಾವನ್ನು ರಂಗದ ಮೇಲೆ ತೋರಿಸಬಾರದು. ಅಶ್ವತ್ಥಾಮನು ತಾನು ಭೂಮಿಯಲ್ಲಿ ಹೂತಿಟ್ಟ ಕತ್ತಿಯ ಮೊನೆಯ ಮೇಲೆ ಬೀಳುವುದನ್ನು ರಂಗದ ಮುಂಭಾಗದಲ್ಲಿ ತೋರಿಸಿ, ಅವನು ಸಾಯುವಾಗ ಪೊದೆಗಳ ಹಿಂದೆ ಹೋಗಿ ಬೀಳುವಂತೆ ರಂಗವ್ಯವಸ್ಥೆ ಇರುತ್ತದೆ. ಅಶ್ವತ್ಥಾಮನ ಮರಣಯಾತನೆ ಅವನನ್ನು ಹುಡುಕುತ್ತಿರುವವರಿಗೆ ಕೇಳಿಸುತ್ತದೆ. ಮೇಳನಾಯಕ ಅವನನ್ನು ನೋಡಲು ಬಯಸುವಲ್ಲಿ ಭಾರ್ಗವಿ ಅವನನ್ನು ತಡೆಯುತ್ತಾಳೆ :

"**ಮೇಳನಾಯಕನ್** : ಆ ಘೋರ ಸಂಕಲ್ಪನ್ ಎಲ್ಲಿ ? ನೋಳ್ವೆಂ.
**ಭಾರ್ಗವಿ** : ಇದು ಕಣ್ಗೆ ನೋಟಮೆ ? ಬೇಡ, ಮೇಲುಡುಗೆಯುನ್
ತಲೆಯಿಂದೆ ಕಾಲ್ವರಂ ಮುಸುಕುವೆನ್."

*Tecmessa* : You must not see him ! I'll cover him
With this enfolding garment from all sight.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಹೀಗೆ, ಮೇಳನಾಯಕನ ಪಾತ್ರ ರುದ್ರನಾಟಕಗಳಲ್ಲಿ ವಿವಿಧ. **ಅಶ್ವತ್ಥಾಮನ್** ನಾಟಕದಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಮೇಳವೃಂದ ವಿವಿಧ ಕಾರ್ಯಗಳಲ್ಲಿ ತೊಡಗಿರುತ್ತದೆ. ತನ್ನ ಮಗನ ರಕ್ಷಣೆಯನ್ನು ಏಕಲವ್ಯ ವಹಿಸಿಕೊಳ್ಳಬೇಕೆಂದು ಅಶ್ವತ್ಥಾಮನು ಮೇಳನಾಯಕನಿಗೆ ತಿಳಿಸಿದಾಗ, ಮೇಳನಾಯಕನು ಆ ವಿಷಯವನ್ನು ಏಕಲವ್ಯ ಬರುತ್ತಲೇ ತಿಳಿಸುತ್ತಾನೆ. ಅಶ್ವತ್ಥಾಮನ ಅಂತ್ಯಸಂಸ್ಕಾರದ ಬಗ್ಗೆ ಏಕಲವ್ಯನಿಗೂ ಭೀಮನಿಗೂ ನಡೆಯುವ ವಾದವು ಯುದ್ಧಕ್ಕೆ ತಿರಿಗೀತೆಂಬ ಭಯದಿಂದ ಮೇಳನಾಯಕ ಅವರ ನಡುವೆ ಶಾಂತಿದೂತನಾಗಿ ವರ್ತಿಸುತ್ತಾನೆ. ಭೀಮನನ್ನು ಶವಸಂಸ್ಕಾರಕ್ಕೆ ಒಪ್ಪಿಸಿದ ಕೃಷ್ಣನ ಗುಣಗಾನ ಮಾಡುವವರು ಮೇಳನಾಯಕ ಮತ್ತು ಅವನ ಗಾನ ವೃಂದ. ಈ ಎಲ್ಲ ವಿಷಯಗಳಿಂದಲೂ ರುದ್ರನಾಟಕಗಳಲ್ಲಿ ಮೇಳವೃಂದಕ್ಕಿರುವ ಪ್ರಾಮುಖ್ಯವನ್ನು ನಾವು ಗ್ರಹಿಸಬಹುದು.

ಗ್ರೀಕ್ ನಾಟಕಗಳಲ್ಲಿ ಕಾಲೈಕ್ಯ ಮತ್ತು ಸ್ಥಳೈಕ್ಯಗಳನ್ನು (unities of time and place) ರಕ್ಷಿಸಲು ದೂತನ ಪಾತ್ರ ಸಹಾಯಕ. ಅವನು ಬೇರೊಂದು ಸ್ಥಳದಲ್ಲಿ ನಡೆದಿರುವ ವಿಷಯಗಳನ್ನು ಹಾಗೂ ರಂಗದ ಮೇಲೆ ತರಲು ಸಾಧ್ಯವಿಲ್ಲದ ಘಟನೆಗಳನ್ನು ಇತರ ಪಾತ್ರಗಳಿಗೆ ತಿಳಿಸಿ ನಾಟಕದ ಸಂಘಟನೆಗೆ ನೆರವು ನೀಡುತ್ತಾನೆ: **ಅಶ್ವತ್ಥಾಮನ್** ನಾಟಕದಲ್ಲಿ ದೂತನು ನಾಯಕನ ದುರಂತವನ್ನು ತಡೆಗಟ್ಟಬಲ್ಲ ಸಾಧ್ಯತೆಯ ಬಗ್ಗೆ ವಿಷಯವನ್ನು ಹೊತ್ತು ಬರುತ್ತಾನೆ : ಅಶ್ವತ್ಥಾಮನು ಇಡೀ ಹಗಲು ತನ್ನ ಗುಡಾರದಲ್ಲಿ ಉಳಿದರೆ ಕ್ಷೇಮ, ಇಲ್ಲವಾದರೆ ಅವನಿಗೆ ಅಪಾಯ. ಆದ್ದರಿಂದ ಅವನನ್ನು ಡೇರೆಯಲ್ಲೇ ನಿಲ್ಲಿಸಿಕೊಳ್ಳಬೇಕೆಂಬ ಜರೂರು ವಾರ್ತೆಯನ್ನು ದೂತನು ತರುತ್ತಾನೆ. ಅಲ್ಲದೆ, ಪಶುಹತ್ಯೆ ಮಾಡಿ ಶತ್ರುಗಳಿಂದ ಅಪಾಯಕ್ಕೊಳಗಾಗಿರುವ ಅಶ್ವತ್ಥಾಮನನ್ನು ರಕ್ಷಿಸಲು ಏಕಲವ್ಯನು ಬರುತ್ತಿರುವನೆಂಬ ಸುದ್ದಿಯನ್ನು ಸಹ ದೂತನು ಮೇಳನಾಯಕನಿಗೆ ತಿಳಿಸುತ್ತಾನೆ. ನಾಟಕದ ಉತ್ತರಾರ್ಧದ ಘಟನೆಗಳಿಗೆ ಬಹು ಮುಖ್ಯಪಾತ್ರವಾದ ಏಕಲವ್ಯನ ಬರವನ್ನು ತಿಳಿಸುವ ದೂತನ ಪಾತ್ರ ಸಣ್ಣದಾದರೂ, ಮುಖ್ಯವಾದದ್ದು. ಇದೇ ರೀತಿ **ಪಾರಸಿಕರು** ನಾಟಕದಲ್ಲಿ ಕ್ಷಯಾರ್ಷನು ಸೋತು ಹಿಂತಿರುಗುತ್ತಿರುವ ವಾರ್ತೆಯನ್ನು ತರುವ ದೂತನು ಸೆಲಾಮಿಸ್ ಯುದ್ಧದಲ್ಲಿ ಪಾರಸಿಕರ ಭೂ ಮತ್ತು ನೌಕಾ ಸೈನ್ಯ ನಾಶವಾದ ವಿವರಗಳನ್ನು ಕಣ್ಣಿಗೆ ಕಟ್ಟುವಂತೆ ಪ್ರೇಕ್ಷಕರ ಗಮನಕ್ಕೆ ತರುತ್ತಾನೆ. ಕ್ಷಯಾರ್ಷನ ಅವಿವೇಕದಿಂದಲೇ ಪಾರಸಿಕರ ಪಡೆ ನಾಶವಾಗಿ, ಅವನು ಸೋಲಿನಿಂದ ಅಪಮಾನಿತನಾದುದನ್ನು ದೂತನು ರಾಜಮಾತೆಗೂ ಮತ್ತು ಮೇಳನಾಯಕನಿಗೂ ತಿಳಿಸುತ್ತಾನೆ :

"ತೀರದೆತ್ತರದೊಂದು ಗುಡ್ಡದೊಳ್ ಸಿಂಹಪೀಠದೊಳಿದ್ದು, ಯುದ್ಧಂ ಮುರಿದುದನ್ ಕ್ಷೀಕ್ಷಯಾರ್ಷನ್ ಕಂಡು, ತನ್ನಣುಗ ಮಕ್ಕಳ್ಗೆನೊಂದು, ಬೇಗೆದ್ದು, ವಸ್ತ್ರಮನ್ ಪರಿಯುತ್ತ, ಭೂ ಸೈನ್ಯವೆಲ್ಲ ಹಿಮ್ಮೆಟ್ಟಲ್ ಬೆಸಸಿದನ್."

Deep were the groans of Xerxes when he saw
This havoc ; for his seat, a lofty mound
Commanding the wide sea, overlook'd his hosts.
With rueful cries he rent his royal robes,
And through his troops embattled on the shore
Gave signal of retreat.

ನಡೆದು ಹೋದ ಘೋರ ಸಮರದ ವಿವರಗಳನ್ನು ಕೂಲಂಕಷವಾಗಿ ತಿಳಿಸಿ ರಣರಂಗದ ಚಿತ್ರಣವನ್ನು ಪ್ರೇಕ್ಷಕರ ಮುಂದೆ ನಿಲ್ಲಿಸುವ **ಪಾರಸಿಕರು** ನಾಟಕದ ದೂತನ ಪಾತ್ರ ನಿಜಕ್ಕೂ ಪ್ರಧಾನವಾದದ್ದು. ಅವನ ಸಮರ ವರ್ಣನೆ ಸೋತು ರಂಗದ ಮೇಲೆ ಕಾಣಿಸಿಕೊಳ್ಳುವ ಕ್ಷಯಾರ್ಷನನ್ನು ನೋಡಲು ಪ್ರೇಕ್ಷಕರನ್ನು ಸಿದ್ಧಗೊಳಿಸುತ್ತದೆ.

## ೫. ರುದ್ರನಾಟಕದಲ್ಲಿ ಅತಿಮಾನುಷದ ಪಾತ್ರ

ಗ್ರೀಕ್ ರುದ್ರನಾಟಕಗಳಲ್ಲಿ ವಿಶಿಷ್ಟವಾಗಿ ದೇವತೆಗಳು, ದೇವಮಾನವರು ಹಾಗೂ ಉದಾತ್ತ ವೀರರು ಪಾತ್ರವಹಿಸುತ್ತಾರೆ. ಈ ನಾಟಕಗಳಲ್ಲಿ ಪ್ರಾಚೀನ ಗ್ರೀಕರಿಗೆ ದೇವತೆಗಳಲ್ಲಿದ್ದ ಭಕ್ತಿ, ಅವರ ಪೌರಾಣಿಕ ಕಲ್ಪನೆಗಳು ಹಾಗೂ ನಂಬಿಕೆಗಳು ವ್ಯಕ್ತವಾಗುತ್ತವೆ. ವಿಧಿಯ (Fates) ಬಗ್ಗೆ ಅವರಿಗೆ ಬಹಳ ನಂಬಿಕೆ. ಮಾನವರ ಕ್ರಿಯೆಗಳಲ್ಲಿ ದೇವತೆಗಳ ನೆರವು ಪ್ರಧಾನ. ದೇವತೆಗಳು ಮುಳಿದರೆ ಮಾನವನ ನಾಶ. ಸತ್ತವರು ಪಿತೃಲೋಕಕ್ಕೆ (Hades) ಹೋಗುತ್ತಾರೆಂಬ ನಂಬಿಕೆ ಅವರದು. ಅತಿಮಾನುಷ ಶಕ್ತಿಗಳಲ್ಲಿ ದೇವತೆಗಳು ಒಂದು ಗುಂಪಾದರೆ, ಪ್ರೇತಗಳು ಮತ್ತೊಂದು ಗುಂಪು. ರುದ್ರನಾಟಕಗಳಲ್ಲಿ ಸತ್ತವರ ಪ್ರೇತಗಳು ಕಾಣಿಸಿಕೊಳ್ಳುವುದು ಒಂದು ವಿಶೇಷ ರಂಗತಂತ್ರ. ನಾಟಕದ ಭೀಕರತೆಗೆ ಅವುಗಳ ಆಗಮನ ಪೋಷಕವಾಗಿರುತ್ತದೆ.

**ಅಶ್ವತ್ಥಾಮನ್** ನಾಟಕದಲ್ಲಿ ಅಶ್ವತ್ಥಾಮನು ಮಹಾದೇವತೆಯಾದ ರುದ್ರನ ನೆರವನ್ನು ನಿರಾಕರಿಸಿ, ತಾನೇ ದೈವಬಲವಿಲ್ಲದೆ ವೀರಯೋಧನೆಂಬ ಖ್ಯಾತಿಯನ್ನು ಪಡೆದು ಮೆರೆಯಬಲ್ಲೆ ಎಂಬ ದುರಭಿಮಾನವನ್ನು ತಾಳುತ್ತಾನೆ. ಅವನಿಗೆ ಪಾಠಕಲಿಸ

ಬೇಕೆಂದು ರುದ್ರನು ಅವನ ಮೇಲೆ ಮಾಯೆಯನ್ನು ಬೀಸಿ ಉನ್ಮಾದವನ್ನು ತರುತ್ತಾನೆ. ಮತಿಗೆಟ್ಟ ಅಶ್ವತ್ಥಾಮ ತನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡು, ಪಶುಹತ್ಯೆ ಮಾಡಿ ಘೋರ ಅಪರಾಧಕ್ಕೆ ಒಳಗಾಗಿ ಸಾವನ್ನಪ್ಪುತ್ತಾನೆ.

ಅಹಂಭಾವನೆಯಿಂದಲೇ ಅಶ್ವತ್ಥಾಮ ತನಗೆ ಅಪ್ರಿಯನಾದನೆಂದು ರುದ್ರದೇವತೆ ಕೃಷ್ಣನಿಗೆ ಹೇಳುವ ಮಾತುಗಳಿವು :

''**ರುದ್ರನ್ :** ಏನ್ ಪಿರಿದು ನೋಡಿದೆಯ ದೈವಬಲಂ, ಎಲೆ ಕೃಷ್ಣ.
ಆರಿರ್ದರ್ ಈತನಿಗಿನ್ ಜ್ಞಾನಿಯುಂ ಶೂರನುಂ ?
ಬಲ್ಲಯ್ ಆರಾನುಮುನ್ ?''

*Athena to Odysseus—*

Do you see, Odysseus, how great the gods' power is ?
Who was more full of foresight than this man,
Or abler, do you think, to act with judgment.

ಸೊಫೊಕ್ಲೀಸ್, **ಅಯಾಸ್** ನಾಟಕದಲ್ಲಿ ಮಾನವನಿಗೆ ಸಭ್ಯತೆಯೇ ಭೂಷಣ, ಅಹಂಭಾವನೆ ಅವನ ವಿನಾಶಕ್ಕೆ ಕಾರಣ ಎಂಬ ನೀತಿಯನ್ನು ಬೋಧಿಸುತ್ತಾನೆ. ಗ್ರೀಕ್ ದೇವತೆಗಳಿಗೆ ಮಾನವನ ಅಸಭ್ಯತೆ ಹಿಡಿಸುವುದಿಲ್ಲ. ದೇವತೆಗಳ ಬಲಕ್ಕಿಂತಲೂ ತನ್ನ ಬಲವೇ ಹೆಚ್ಚೆಂದು ಮೆರೆದ ಅಯಾಸನ ಮರಣಕ್ಕೆ ಅಥೀನಾ ದೇವತೆಯೇ ಕಾರಣ. ದೇವತೆಗಳು ಸಭ್ಯರನ್ನು ರಕ್ಷಿಸುತ್ತಾರೆ, ಅಹಂಕಾರಿಗಳಿಗೆ ಅವರು ಒಲಿಯುವುದಿಲ್ಲ. ಇದೇ ನಾಟಕದಲ್ಲಿ ಅಗಮೆಮ್ನಾನ್ ಮಾನವನಿಗೆ ಭೂಷಣ ದೈವದತ್ತವಾದ ಸಭ್ಯತೆ ಎನ್ನುತ್ತಾನೆ:

ಬಿ.ಎಂ.ಶ್ರೀ ಅವರು **ಅಶ್ವತ್ಥಾಮನ್** ನಾಟಕದಲ್ಲಿ ಕೃಷ್ಣನನ್ನು ಒಬ್ಬ ಪ್ರಧಾನ ವೀರನಂತೆ, ಅಶ್ವತ್ಥಾಮನಿಗೆ ಸಮನಾದ ಯೋಧನಂತೆ ಚಿತ್ರಿಸಿದ್ದಾರೆ. ಅಶ್ವತ್ಥಾಮನಂತೆ ದೈವವನ್ನು ಧಿಕ್ಕರಿಸಿ ನಾಶವಾಗಬೇಡವೆಂದು ಮಹಾದೇವತೆ ರುದ್ರನು ಕೃಷ್ಣನಿಗೆ ಹೇಳುವ ಮಾತುಗಳು ಹೀಗಿವೆ :

''ಇಂತಪ್ಪ ನೋಟಂಗಳನ್ ನೋಡಿ, ದೈವದೊಳ್
ಸೊರ್ಕುನುಡಿ ನುಡಿಯದಿರ್ ; ಕೊರ್ಬದಿರ್, ನಿನಗೊರ್ಮೆ
ಸಿರಿಯೆನಿತು, ಬಲಮೆನಿತು, ಕಯ್ಮೆನಿತು ನಡೆದೊಡಂ !
ಒಂದುಪಗಲ್ ಎತ್ತುವುದು, ಒಂದು ಪಗಲ್ ಉರುಳಿಪುದು
ಮಾನುಷಮನ್ ಎಲ್ಲಮನ್. ಮಿತಿಯರಿದು ನೆಗಳ್ವರ್ಗೆ
ದೇವರ್ಕಳ್ ಒಸೆದಪರ್—ಮುಳಿದಪರ್ ಮಿಕ್ಕರನ್."

ಈಸ್ಕಿಲಸನ **ಪರ್ಷಿಯನ್ಸ್** ನಾಟಕದಲ್ಲಿ ಸಹ ನಾಯಕನು ತಾನು ಮಹಾ ಚಕ್ರಾಧಿಪತ್ಯದ ಸಾಮ್ರಾಟ, ತನ್ನ ಬಲಕ್ಕೆ ಗ್ರೀಕರ ಬಲ ಸಾಟಿಯಲ್ಲ ಎಂಬ ಅಹಂಭಾವನೆಯನ್ನು ಹೊತ್ತು, ಸಮರ ಕಾಲದಲ್ಲಿ ಗ್ರೀಕರ ನುಡಿಗಳನ್ನು ನಾಶಮಾಡಿದ ಕಾರಣ ಗ್ರೀಕ್ ದೇವತೆಗಳು ಮುಳಿದು ಅವನ ಸೈನ್ಯವನ್ನು ನಾಶಮಾಡಿದರು. ಈ ವಿಷಯವನ್ನು ನಾಟಕಕಾರ ಈಸ್ಕಿಲಸ್, ದುರ್ಯವುಷನ ಪ್ರೇತದ ಬಾಯಿಂದ ಹೊರಡಿಸುತ್ತಾನೆ :

> "ಹೆಲಸಿಂಗೆ[1] ಹೋದವರು ಭಯ ಮರೆತು ಕೊಬ್ಬಿನಲ್ಲಿ,
> ದೇವಾಲಯಂಗಳ್ಗೆ ಕಿಚ್ಚಿಕ್ಕಿ ಸೂರೆಗೆಯ್ದರ್.
> ಭಕ್ತಿಯೆಂಬುದ ಕಾಣೆ—ಬಲಿಪೀಠಗಳನೊಡೆದು,
> ಪ್ರತಿಮೆಗಳ ಕಿತ್ತಿಸೆದು, ಪೂಜೆ ಸಾಮಗ್ರಿಗಳ
> ನಿಟ್ಟಾಡಿ, ಹೊಲೆಗೆಯ್ದರೆಲ್ಲಮುಮ್. ಮಾಡಿದೀ
> ಪಾಪಂಗಳುಣ್ಣದೇ ಪೋಕುಮೇ ?"

ಗ್ರೀಕರ ದೇವತೆಗಳ ಸಾಲಿನಲ್ಲಿ ಪ್ರಧಾನ ಸ್ಥಾನ ಜೆಯೂಸನದು. ರೋಮನರಲ್ಲಿ ಜೆಯೂಸನಿಗೆ (Zeus) ಸಮನಾದವನು ಜೂಪಿಟರ್. ಇವರ ಆಜ್ಞೆಯಂತೆ ಮಾನವರ ಆಗು-ಹೋಗುಗಳು ನಡೆಯುತ್ತವೆ. **ಪಾರಸಿಕರು** ನಾಟಕದಲ್ಲಿ ಪಾರಸಿಕರ ಪರಾಜಯ ಪರಮ ದೇವತೆ ಜೆಯೂಸನ ಆಜ್ಞೆಯಿಂದ ನಡೆಯಿತೆಂದು ಸಂಬುವ ಮೇಳನಾಯಕ, ತಾನು ಕಂಡ ದುಸ್ವಪ್ನದಿಂದ ಹೆದರಿದ ರಾಜಮಾತೆ ಹುತೌಶಳಿಗೆ ಶಾಂತಿಗಾಗಿ ಪೂಜೆ ಸಲ್ಲಿಸಿ, ಸತ್ತು ಪಿತೃಲೋಕದಲ್ಲಿರುವ ದುರ್ಯವುಷನನ್ನು ಕರೆಯುವುದು ಯುಕ್ತವೆಂದು ತಿಳಿಸುತ್ತಾನೆ. ಹುತೌಶಳು ಅವನ ಸಲಹೆಯನ್ನು ಮನ್ನಿಸಿ, "ಹರಕೆಯಿಡಲು ತೆರಳುವೆ, ತಣಿದು ದೇವತೆಗಳು, ಪಿತೃಗಳೆಮ್ಮ ಪೊರೆದು ತಣಿಸಲಿ" ಎಂದು ಹೊರಡುತ್ತಾಳೆ. ಸಮಾಧಿಯಿಂದ ಎದ್ದು ಬರುವ ದುರ್ಯವುಷನ ಪ್ರೇತವು ಸಹ, ಗ್ರೀಕ್ ದೇವತೆಗಳು ತನ್ನ ಮಗ ಕ್ಷಯಾರ್ಷನ ಬಗ್ಗೆ ಕೋಪಗೊಂಡ ಕಾರಣ ಪಾರಸಿಕರಿಗೆ ಯುದ್ಧದಲ್ಲಿ ಸೋಲಾಯಿತೆಂದು ಹೇಳಿ ಮತ್ತೊಮ್ಮೆ ದೇವತೆಗಳನ್ನು ಕೆಣಕಬಾರದೆಂದು ಕ್ಷಯಾರ್ಷನು ಬಂದಾಗ ತಿಳಿಸಿ ಎಂದು ಪಾರಸಿಕರ ಹಿರಿಯರಿಗೂ, ತನ್ನ ಹೆಂಡತಿಯಾಗಿದ್ದ ಹುತೌಶಳಿಗೂ ತಿಳಿಸುತ್ತಾನೆ :

> "ಆದುದರಿನವನಿಲ್ಲಿ ಬಂದಾಗ, ಮಂತ್ರಿಗಳೆ,
> ಒಳ್ಳಾತುಗಳನಾಡಿ ಬುದ್ಧಿಯನು ಹೇಳುವುದು,
> ಮದ ಹೆಚ್ಚಿ ಮತ್ತೊಮ್ಮೆ ದೇವರನು ಕೆಣಕದಂತೆ."

---

[1] ಹೆಲಾಸ್ : *Hellas*, name for ancient Greece.

ಗ್ರೀಕರಿಗೆ ವಿಧಿವಾದದಲ್ಲಿ ನಂಬಿಕೆ ಹೆಚ್ಚು. ವಿಧಿದೇವತೆಗಳು (The Fates) ಮಾನವರನ್ನು ನಿಯಂತ್ರಿಸುವರೆಂಬ ಪೌರಾಣಿಕ ಕಲ್ಪನೆಯನ್ನು ಗ್ರೀಕ್ ನಾಟಕಗಳಲ್ಲಿ ಕಾಣುತ್ತೇವೆ : ರುದ್ರನಾಟಕದ ನಾಯಕನು ಎಷ್ಟೇ ಜೋಪಾನವಾಗಿದ್ದರೂ, ಯಾವುದೋ ಒಂದು ವಿಷಗಳಿಗೆಯಲ್ಲಿ ಮಾಡುವ ಅಪರಾಧದಿಂದ ಅಥವಾ ವಿಧಿನಿಯಮಿತವಾದ ದುರದೃಷ್ಟದಿಂದ ಬಿಡಿಸಿಕೊಳ್ಳಲಾರದೆ ದುರಂತದತ್ತ ಸಾಗುತ್ತಾನೆ. ಈ ವಿಧಿವಾದವನ್ನು **ಪಾರಸಿಕರು** ಹಾಗೂ **ಅಯಾಸ್** (ಅಶ್ವತ್ಥಾಮನ್) ನಾಟಕಗಳಲ್ಲಿ ಕೆಲವು ಪಾತ್ರಗಳು ಸ್ಪಷ್ಟವಾಗಿ ಅಭಿವ್ಯಕ್ತಿಸುತ್ತವೆ :

ಕ್ಷಯಾರ್ಷನ ಸೈನ್ಯ ನಾಶವಾಗಿ ಪಾರಸಿಕರಿಗೆ ಸೋಲಾಯಿತೆಂದು ದೂತನಿಂದ ತಿಳಿಯುವ ಹುತೌಶ ಮಗನ ದುರ್ವಿಧಿಯ ಬಗ್ಗೆ ಈ ರೀತಿ ಸಮಾಧಾನಮಾಡಿಕೊಳ್ಳುತ್ತಾಳೆ :

"ದೇವರ್ಕಳೆಢರ ಕೊಡೆ, ಹೊರಬೇಕು ತಾಳ್ಮೆಯಲಿ
ಮರ್ತ್ಯರಾದವರು."

Yet, ev'n such,
Inflicted by the gods, must mortal men
Constraine'd by hard necessity endure.

ಕ್ಷಯಾರ್ಷನು ಹಿಂದಿರುಗುತ್ತಲೇ ಪಾರಸಿಕರ ಹಿರಿಯರು ಅವನನ್ನು ಸುತ್ತುಗಟ್ಟಿ "ಅಪಪಾ ವಿಧಿಯೇ, ಅಯೊ ಅಯೊ ವಿಧಿಯೆ ! ಕೇಳುವೆ ನಿನ್ನನ್ ಪೇಳೆನಗೆ" ಎಂದು ವಿಧಿಯನ್ನು ನಿಂದಿಸಿ ಸೋಲಿನ ವಿವರಗಳನ್ನು ಕ್ಷಯಾರ್ಷನಿಂದ ತಿಳಿಯುತ್ತಾರೆ. ಹುತೌಶಳು ಸಹ ವಿಧಿಯ ಶಾಪಕ್ಕೆ ಸಂಕಟಪಟ್ಟುಕೊಂಡು "ಓ ದುಷ್ಟ ದೈವವೆ ! ಪಾರ್ಸಿಕರ ಬುದ್ಧಿಯನ್ ನೀನೆಂತು ಮುನಿದು ಕೆಡಿಸಿದಯ್" ಎಂದು ವಿಧಿಯನ್ನು ನಿಂದಿಸುತ್ತಾಳೆ.

ವಿಧಿವಾದದಲ್ಲಿ ನಂಬಿಕೆಯಿರುವಂತೆಯೇ ಅತಿಮಾನುಷ ಶಕ್ತಿಗಳ ಬಗ್ಗೆ ನಂಬಿಕೆಗಳು ಸಹ ಗ್ರೀಕ್ ನಾಟಕಗಳಲ್ಲಿ ಎದ್ದು ಕಾಣುತ್ತವೆ : **ಪಾರಸಿಕರು** ನಾಟಕದಲ್ಲಿ ಹುತೌಶಳು ಕಾಣುವ ದುಸ್ವಪ್ನ ಮುಂಬರುವ ದುರಂತವನ್ನು ಸೂಚಿಸುವ ಸಂಕೇತವಾಗಿದೆ. ನಿರ್ದಿಷ್ಟವಾಗಿ ಅದು ವಿಧಿವಿಡಂಬನೆ—dramatic irony. ಸ್ವಪ್ನ ಹಾಗೂ ಶಕುನಗಳಲ್ಲಿ ಪ್ರಾಚೀನ ಗ್ರೀಕ್ ಮತ್ತು ರೋಮನರಿಗೆ ನಂಬಿಕೆ ಇದ್ದ ಕಾಲದಲ್ಲಿ ರಚಿತವಾದ ಈಸ್ಕಿಲಸ್ ಮೊದಲಾದವರ ರುದ್ರನಾಟಕಗಳಲ್ಲಿ ಕಂಡುಬರುವ ಸ್ವಪ್ನ ಹಾಗೂ ಶಕುನಗಳು ನಡೆಯಲಿರುವ ದುರಂತವನ್ನು ಸೂಚಿಸುತ್ತವೆ. ನಾಯಿ-ನರಿಗಳ ಕೂಗು, ನಕ್ಷತ್ರಗಳು ಬೀಳುವುದು, ಪಕ್ಷಿಗಳು ಹಡಗಿನಲ್ಲಿ ಗೂಡುಕಟ್ಟುವುದು—ಇಂಥ

ವಿಷಯಗಳೆಲ್ಲಾ ಕೇಡಿನ ಸಂಕೇತಗಳೆಂದು ಗ್ರೀಕರು ಭಾವಿಸಿದ್ದರು. **ಅಯಾಸ್** (ಅಶ್ವತ್ಥಾಮನ್) ನಾಟಕದಲ್ಲಿ ಕಣಿ ಹೇಳುವವನು ನಾಯಕನ ಪ್ರಾಣವನ್ನು ಉಳಿಸುವ ಬಗ್ಗೆ ತಿಳಿಸುವ ಸೂಚನೆಗಳು ಆಗಿನ ಕಾಲದಲ್ಲಿ ಜನರಿಗೆ ಜೋಯಿಸರ ಭವಿಷ್ಯದ್ ನುಡಿಗಳಲ್ಲಿದ್ದ ನಂಬಿಕೆಯನ್ನು ವ್ಯಕ್ತಪಡಿಸುತ್ತವೆ. ಇಂಥ ನಂಬಿಕೆಗಳು ನಾಯಕನ ದುರಂತದ ಬಗ್ಗೆ ಪರಿಣಾಮಕಾರಿಯಾಗಿದ್ದು ನಾಟಕದ ರೌದ್ರತೆಗೆ ಸಹಾಯಕ.

ರುದ್ರನಾಟಕಗಳಲ್ಲಿ ಸತ್ತವರ ಪ್ರೇತಗಳು ಕಾಣಿಸಿಕೊಂಡು ನಾಟಕದ ಸನ್ನಿವೇಶ ಗಳಿಗೆ ಭೀಕರತೆಯನ್ನು ಕಲ್ಪಿಸುತ್ತವೆ. ಗ್ರೀಕ್ ನಾಟಕಗಳ ಮಾರ್ಗವನ್ನೇ ಅನುಸರಿಸಿ ಎರಡು ಸಾವಿರ ವರ್ಷಗಳ ತರುವಾಯ ಷೇಕ್ಸ್‌ಪಿಯರನು ತನ್ನ ರುದ್ರನಾಟಕಗಳಲ್ಲಿ ಪ್ರೇತಗಳನ್ನು ತಂದಿರುವುದನ್ನು ನಾವು ಕಾಣಬಹುದು: **ಹ್ಯಾಮ್ಲೆಟ್** ನಾಟಕದಲ್ಲಿ ಸತ್ತ ದೊರೆಯ ಪ್ರೇತ, **ಜೂಲಿಯಸ್ ಸೀಸರ್** ನಾಟಕದಲ್ಲಿ ಜೂಲಿಯಸ್ ಸೀಸರನ ಪ್ರೇತ ಕಾಣಿಸಿಕೊಳ್ಳುತ್ತವೆ. ಈಸ್ಕಿಲಸನ **ಪಾರಸಿಕರು** ನಾಟಕದಲ್ಲಿ ಪ್ರೇತ ಕಾಣಿಸಿ ಕೊಳ್ಳುವುದು ದೇಶ ಸೋಲಿನಿಂದ ವಿಷಮಸ್ಥಿತಿಗೆ ಒಂದಿರುವಾಗ. ರುದ್ರನಾಟಕಗಳಲ್ಲಿ ಪ್ರಾಪ್ತವಾಗಲಿರುವ ಕೇಡನ್ನು ಸೂಚಿಸಲು ಪ್ರೇತಗಳು ಪ್ರತ್ಯಕ್ಷವಾಗುತ್ತವೆ. ಸೋಲಿ ನಿಂದ ಪ್ರಾಪ್ತವಾಗಿರುವ ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸುವ ಬಗ್ಗೆ ಮೇಳನಾಯಕ ಸಮಾಧಿಯಾಗಿರುವ ದುರ್ಯವುಷನ ಪ್ರೇತವನ್ನು ಮಂತ್ರಶಕ್ತಿಯಿಂದ ಒರಮಾಡಿ ಸಲಹೆ ಗಳನ್ನು ಕೇಳುತ್ತಾನೆ. ಸಾವಿಗ್ರಾಬನಾಗಿ ಮೆರೆದ ದುರ್ಯವುಷನು ಗ್ರೀಕರಿಂದ ಸೋಲನ್ನು ಅನುಭವಿಸಿದ್ದ ಕಾರಣ, ಪಾರಸಿಕರು ಮತ್ತೆ ಗ್ರೀಕರ ಮೇಲೆ ದಂಡೆತ್ತಿ ಹೋಗಬಾರ ದೆಂದು ಅವನ ಪ್ರೇತ ಈ ಸಂದರ್ಭದಲ್ಲಿ ತಿಳಿಸುತ್ತದೆ : ತನ್ನ ಮಗ ಅಪಮಾನಿತನಾಗಿ, ರಾಷ್ಟ್ರಕ್ಕೆ ಅಪಕೀರ್ತಿ ತಂದು ಹಿಂದಿರುಗುತ್ತಿರುವಾಗ ಅವನನ್ನು ರಾಜಮರ್ಯಾದೆ ಗಳೊಡನೆ ಸ್ವಾಗತಿಸಬೇಕೆಂದು ದುರ್ಯವುಷನ ಪ್ರೇತ ಹೇಳಬಹುದೆ ಎಂಬ ಪ್ರಶ್ನೆ ನಮ್ಮಲ್ಲಿ ಮೂಡುತ್ತದೆ. ಪಾರಸಿಕರ ಹಿರಿಯರಿಗಂತೂ ಪ್ರೇತದ ಮಾತುಗಳು ಹಿಡಿಸಿದಂತೆ ಕಾಣುವುದಿಲ್ಲ. ಯುದ್ಧಭೂಮಿಯಿಂದ ಹಿಂತಿರುಗುತ್ತಲೇ ಕ್ಷಯಾರ್ಷನಿಗೆ ಕಾದಿರುವ ದುರಂತವನ್ನು ಅವರು ಚೆನ್ನಾಗಿ ಬಲ್ಲರು. ಏನೆ ಆಗಲಿ, ದುರ್ಯವುಷನ ಪ್ರೇತವು, ಕ್ಷಯಾರ್ಷನು ತನ್ನ ಮಾತನ್ನು ಕೇಳದೆ ದುಡುಕಿ ಗ್ರೀಕರ ಮೇಲೆ ದಂಡೆತ್ತಿ ಹೋಗಿ ದೇಶಕ್ಕೆ ಕಂಟಕ ಪ್ರಾಯನಾದ ಎಂದು ಹೇಳುವುದು ಪ್ರೇಕ್ಷಕರಿಗೆ ಸಮಾಧಾನ ವನ್ನುಂಟುಮಾಡುತ್ತದೆ :

''ಕ್ಷಯಾರ್ಷನ್, ನನ್ನಮಗನೆಳೆಯನಾಗೆಳತನದ
ಬುದ್ಧಿಯನ್ ಮಾತುವನ್, ನಾನ್ ಪೇಳ್ದ ಬುದ್ಧಿಯನ್
ಕೈಬಿಟ್ಟು, ನೀವ್ ಬಲ್ಲಿರ್, ಓ ಎನ್ನ ಮಂತ್ರಿಗಳೆ.''

## ೬. ಪರಿಸಮಾಪ್ತಿ

ನವೋದಯ ಕಾಲದಲ್ಲಿ ಬಿ. ಎಂ. ಶ್ರೀ ಅವರು ನೀಡಿರುವ **ಅಶ್ವತ್ಥಾಮನ್** ಮತ್ತು **ಪಾರಸಿಕರು**—ಈ ಎರಡು ನಾಟಕಗಳು ಗ್ರೀಕ್ ರುದ್ರನಾಟಕಗಳ ಮಾದರಿಗಳನ್ನು ನಮಗೆ ಪರಿಚಯ ಮಾಡಿಕೊಟ್ಟಿರುವುದಲ್ಲದೆ, ನಾಟಕ ರಚನೆಯ ಬಗ್ಗೆ ಮುಂದಿನ ನಾಟಕಕಾರರಿಗೆ ಒಂದು ಚೌಕಟ್ಟನ್ನು ಸಿದ್ಧಪಡಿಸಿಕೊಟ್ಟಂತಾಗಿದೆ. ಆಗಿನ ಕಾಲದಲ್ಲಿ ಇಂಗ್ಲಿಷ್ ನಾಟಕಗಳನ್ನು ಮೆಚ್ಚಿದ ಶ್ರೀಕಂಠೇಶಗೌಡ, ಎ. ಆನಂದರಾವ್, ಕೆರೂರು ವಾಸುದೇವಾಚಾರ್ಯ, ಎ. ಎನ್. ಮೂರ್ತಿರಾವ್ ಮೊದಲಾದವರು ಇಂಗ್ಲಿಷ್ ಮತ್ತು ಫ್ರೆಂಚ್ ನಾಟಕಗಳನ್ನು ಆಧಾರವಾಗಿಟ್ಟುಕೊಂಡು ನಾಟಕಗಳನ್ನು ಬರೆದರು ಸಹ, ಕೆಲವರು ಇಂಗ್ಲಿಷ್ ಮೂಲ ನಾಟಕಗಳನ್ನು ಕನ್ನಡೀಕರಿಸುವಾಗ ಅವುಗಳ ರೂಪವನ್ನೇ ಕೆಡಿಸಿ, ಸ್ವಂತ ಕಲ್ಪನೆಗಳನ್ನು ತಂದು, ಪಾತ್ರಗಳ ಬಾಯಲ್ಲಿ ಇಷ್ಟಬಂದಂತೆ ಹಾಡುಗಳನ್ನು ತುಂಬಿದರು. ಪಾತ್ರಗಳ ಸಂಭಾಷಣೆಗಳನ್ನು ಸಹ ಮಾರ್ಪಡಿಸಿದರು. ಈ ವಿಧಾನಗಳಿಂದ ಅವರು ನಾಟಕ ಕ್ಷೇತ್ರಕ್ಕೆ ಪ್ರಯೋಜನಾತ್ಮಕವಾಗಿ ಏನನ್ನೂ ಕೊಟ್ಟಂತಾಗಲಿಲ್ಲ. ಬಿ. ಎಂ. ಶ್ರೀ ಅವರು ಸೊಫೊಕ್ಲೀಸನ **ಅಯಾಸ್** (Ajax) ನಾಟಕವನ್ನು ಮಹಾಭಾರತದ ಘಟನೆಯೊಂದಕ್ಕೆ ಹೊಂದಿಸಿಕೊಂಡು, ಪಾತ್ರಗಳ ಹೆಸರುಗಳನ್ನು ಮಾತ್ರವೇ ಬದಲಾಯಿಸಿ, ಮೂಲ ವಸ್ತುವಿಗೆ ಏನೊಂದು ಕೊರತೆಯನ್ನೂ ಉಂಟುಮಾಡದೆ ಕನ್ನಡಕ್ಕೆ ಯಥಾವತ್ತಾಗಿ ತಂದರು. **ಪಾರಸಿಕರು** ನಾಟಕವನ್ನಂತೂ ಗ್ರೀಕ್ ಮೂಲ ನಾಟಕದ ರೂಪದಲ್ಲೆ ಭಾಷಾಂತರಿಸಿದರು. ಅವರ ಲೇಖನಿಯಿಂದ ಕನ್ನಡ ಸಾಹಿತ್ಯಕ್ಕೆ ಎರಡು ಅಭಿಜಾತ ರುದ್ರನಾಟಕಗಳು ಬಂದಂತಾಯಿತು : ಆ ಎರಡು ನಾಟಕಗಳೂ ಗ್ರೀಕ್ ತೊಡಿಗೆಯಲ್ಲಿ ಕರ್ಣಾಟಕ ರಂಗಭೂಮಿಯನ್ನೇರಲು ಯೋಗ್ಯವಾದ ಮಾದರಿ ನಾಟಕಗಳಾದವು. ಕಥಾವಸ್ತು, ಪಾತ್ರವೈವಿಧ್ಯ, ನಿರೂಪಣೆ, ಸಂಭಾಷಣೆ, ಮೇಳಗಾನ ಪ್ರಾಧಾನ್ಯ, ನಾಟಕೀಯತೆ—ಇವುಗಳನ್ನೆಲ್ಲಾ ಸ್ವಯಂಪೂರ್ಣವಾಗಿ ಹೊಂದಿ ಸರ್ವಾಂಗಸುಂದರವಾಗಿರುವ ಈ ಎರಡು ನಾಟಕಗಳು ಬಿ.ಎಂ.ಶ್ರೀ ಅವರು ಕನ್ನಡಿಗರಿಗೆ ನೀಡಿರುವ ಶ್ರೇಷ್ಠ ಕೊಡುಗೆಗಳಾಗಿವೆ. ಈ ಎರಡು ನಾಟಕಗಳಿಗಾಗಿ ಕನ್ನಡ ಸಾರಸ್ವತಲೋಕ ಶ್ರೀ ಅವರಿಗೆ ಚಿರಋಣಿ ; ಶ್ರೀ ಅವರು ಚಿರಸ್ಮರಣೀಯರು.

ಚಿದಂಬರಂ ದೀಕ್ಷಿತ

# 'ಶ್ರೀ'ಯವರಿಗೆ*

ಕನ್ನಡದ ಕಾವ್ಯ ಹರಿಗಟ್ಟಿನಿಂದ ಬರುಬಯಲ ಕ್ಷ್ಮಾಮದಲ್ಲಿ
ನೀ ತಂದೆ ಬಂದೆ ಹರಿಕಾರನಾಗಿ ಬಾಳಿಸಲು ಕ್ಷೇಮವಲ್ಲಿ.

ಕರೆದಿದ್ದೆ ಮಳೆಯ ಋಷಿಮಾಳ್ಕೆಯಿಂದ ಪರ್ಜನ್ಯ ಸೂಕ್ತಪಾಡಿ
ಕಡಲಾವಿ ಘನಿಸಿ ಮುಗಿಲೋಳಿ ಹಣಿಸಿ ಹರಿದಿತ್ತು ಅಮೃತ ಕೋಡಿ.

ಎಲ್ಲೆಲ್ಲು ಹಸಿರು ಹೂಗಂಪಿನುಸಿರು ಕಲಕಂಠ ವೃಂದಗಾನ
ನವ ಉದಯ ಸೇರಿದು ರಸರಾಗ ಜೇರಿದು ಫಲಿಸಿತ್ತು ನಿನ್ನ ಧ್ಯಾನ.

ಆಂಗ್ಲೇಯ ಮನ್ನೆ ತಾಯ್ನುಡಿಯ ಚೆನ್ನೆ ಇವಳವಳ ತೊಡುಗೆ ಇಟ್ಟು
ನರ್ತನದ ಬಂಧ ಜನಪದದ ಛಂದ ಪದರಚನೆ ಜೇನುಹುಟ್ಟು.

ಗ್ರೀಕೀಯ ರುದ್ರರೂಪಕದ ಭಂಗಿ ಸ್ವಪ್ರಜ್ಞೆಯಲಿ ಹೂತು
ನಡೆಸಿದ್ದೆ ರಂಗ ಅನುಭಾವಸಂಗ ಜಗವುಲಿಯೆ ಪೂತು ಪೂತು ।

ಕವಿಪಂಪ ರನ್ನ ನಾರಣರು ಧನ್ಯ ತವ ವಚನಸ್ತ್ರೋತವುಂಡು
ಶಿವಶರಣದಾಸಿ ಹರಿಚರಣವಾಸಿ ಭವಭಕ್ತಿ ಹೊಳವುಗೊಂಡು.

ನಾಡಗಲ ಇಡಿದ ಕಡು ಮಂಜು ಸರಿದು ರಂಜಿಸಿತು ಆತ್ಮಸ್ಫುರಣ
ಕರುಣಾಳು ದೊರೆಯೆ ಶ್ರೀಕಂಠ ಸಿರಿಯೆ ಚಿರವಿರಲಿ ನಿನ್ನ ಸ್ಮರಣ ।

* 'ಲೋಚನ', ಸಂ. ೧, ಸಂ. ೨, ಪು. ೧, ಡಿಸೆಂಬರ್ ೧೯೮೪.

ಡಾ. ಸಿ.ಪಿ. ಸಿದ್ಧಾಶ್ರಮ



# ಗದಾಯುದ್ಧ ನಾಟಕಂ

ಬಿ.ಎಂ.ಶ್ರೀಯವರು ರಚಿಸಿದ 'ಗದಾಯುದ್ಧ ನಾಟಕಂ' ಕೃತಿ ಐದಂಕದ ಒಂದು ಚಿಕ್ಕ ನಾಟಕ. ಇದರ ಹೆಸರೇ ಸೂಚಿಸುವಂತೆ ಇದು ರನ್ನ ಕವಿಯ 'ಗದಾಯುದ್ಧಂ' (ಸಾಹಸಭೀಮ ವಿಜಯಂ) ಕಾವ್ಯದ ಆಧಾರದ ಮೇಲೆ ರಚಿತವಾದದ್ದು. ೫೮೬ ಪದ್ಯಗಳಿಂದಲೂ ಹಲವಾರು ದೀರ್ಘ ವಚನಗಳಿಂದಲೂ ಕೂಡಿದ ರನ್ನನ ದೀರ್ಘ ಕಾವ್ಯದ ಸಾರವನ್ನು ಕೇವಲ ೧೪೭ ಪದ್ಯಗಳಲ್ಲಿ, ಕೆಲವೊಂದು ಚಿಕ್ಕ ಚಿಕ್ಕ ವಚನಗಳಲ್ಲಿ ಸಂಗ್ರಹಿಸಿ ನಾಟಕ ರಚಿಸಿದ್ದಾರೆ ಶ್ರೀ. ಸಂಭಾಷಣೆಯ ಅನುಕೂಲಕ್ಕಾಗಿ ಕೆಲವೆಡೆ 'ಕೊಂಡಿ' ಮಾತುಗಳನ್ನು ತಾವೇ ಸೇರಿಸಿದ್ದಾರೆ; ಕಾವ್ಯದಿಂದ ಎತ್ತಿಕೊಂಡ ಪದ್ಯಗಳಲ್ಲಿ ಕೆಲವನ್ನು ಹಿಂದು ಮುಂದೆ ಮಾಡಿ ಸೇರಿಸಿ ನಾಟಕದ ಅಚ್ಚುಕಟ್ಟಿಗೆ ಪ್ರಯತ್ನಿಸಿದ್ದಾರೆ; ಒಂದೆರಡು ಪದ್ಯಗಳನ್ನು ತಾವೇ ಹಳಗನ್ನಡದಲ್ಲಿ ರಚಿಸಿದ್ದಾರಲ್ಲದೆ, ಮುಖ್ಯ ಪಾತ್ರಗಳ ಸನ್ನಿವೇಶದಲ್ಲಿ ಕಾವ್ಯದ ಪದ್ಯಭಾಗಗಳನ್ನು ತಮ್ಮ ಧೋರಣೆಗೆ ತಕ್ಕನಾಗಿ ಬದಲಾವಣೆ ಮಾಡಿಕೊಳ್ಳುವ, ತ್ಯಜಿಸುವ ಸ್ವಾತಂತ್ರ್ಯವನ್ನೂ ವಹಿಸಿದ್ದಾರೆ. ಒಟ್ಟನಲ್ಲಿ ರನ್ನನ ಹತ್ತು ಆಶ್ವಾಸಗಳ ದೀರ್ಘ ಕಾವ್ಯವನ್ನು ಚಿಕ್ಕಪುಟ್ಟ ಬದಲಾವಣೆ, ಸೇರ್ಪಡೆಗಳಿಂದ ಐದಂಕದ ನಾಟಕವನ್ನಾಗಿ ಸಂಗ್ರಹಿಸುವ ಪ್ರಯತ್ನಮಾಡಿದ್ದಾರೆ ಶ್ರೀ.

ರನ್ನನ ಕಾವ್ಯದಲ್ಲಿಯೇ ನಾಟಕದ ಎಲ್ಲ ಲಕ್ಷಣಗಳೂ ತುಂಬಿಕೊಂಡಿವೆಯಾದ್ದರಿಂದ ಶ್ರೀಯವರ ನಾಟಕ ರಚನೆಯ ಪ್ರಯತ್ನದಲ್ಲಿ ಅಂಥ ಯಾವ ಸ್ವಂತಿಕೆಯೂ ಕಂಡು ಬರುವುದಿಲ್ಲ. ಅಷ್ಟೇ ಅಲ್ಲ, ನಾಟಕದ ಶೈಲಿಯ, ಸಂವಿಧಾನದ ಶ್ರೇಯಸ್ಸೂ ರನ್ನನಿಗೇ ಸಲ್ಲುತ್ತದೆ. ನಾಟಕದ ಕ್ರಿಯೆ ಉದ್ದಕ್ಕೂ ಕಾವ್ಯದ ವಿನ್ಯಾಸವನ್ನೆ ಸಂಪೂರ್ಣವಾಗಿ ಅನುಸರಿಸಿಕೊಂಡು ಹೋಗಿದೆ. ಅಲ್ಲದೆ ಮುಖ್ಯಪಾತ್ರಗಳ ಬೆಳವಣಿಗೆಯಲ್ಲೂ ಅಂಥ ಯಾವ ಬದಲಾವಣೆಯೂ ಇಲ್ಲದೆ, ಕಾವ್ಯವನ್ನೇ ಅನುಸರಿಸಿದೆ. ಹೀಗೆ ನಾಟಕ ರಚನೆಯಲ್ಲಿ ಶ್ರೀಯವರ ಸ್ವಂತಿಕೆ, ಕೊಡುಗೆ ಮಹತ್ವದ್ದಾಗಿ ಕಂಡುಬರುವುದಿಲ್ಲ. ಆದರೆ ದುರ್ಯೋಧನನ ಪಾತ್ರವನ್ನು ಗ್ರೀಕ್ ದುರಂತ ನಾಯಕನ ಮಟ್ಟಕ್ಕೆ ಏರಿಸಿರುವುದರಿಂದ, ನಾಟಕ, ಕನ್ನಡ ರುದ್ರನಾಟಕವಾಗಿರುವುದೊಂದು ಮಹತ್ವದ ಸಂಗತಿ ಎಂದು ಭಾವಿಸಲಾಗಿದೆ.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ರನ್ನನ ಕಾವ್ಯದಲ್ಲಿಯೆ ದುರ್ಯೋಧನನನ್ನು ಸ್ವಲ್ಪಮಟ್ಟಿಗೆ ದುರಂತ ಎನ್ನಬಹುದಾದ ಪಾತ್ರವನ್ನಾಗಿ ಚಿತ್ರಿಸಲಾಗಿದೆ. ರನ್ನನ ಕಾವ್ಯದ ನಾಯಕ ಭೀಮನೇ ಆಗಿದ್ದರೂ ಓದುಗರ ಕರುಣೆ ಅನುಕಂಪೆಗಳಿಗೆ ಪಕ್ಕಾಗುವವನು ಪ್ರತಿನಾಯಕ ದುರ್ಯೋಧನ. ಅಲ್ಲದೆ ಕಾವ್ಯದ ದುರ್ಯೋಧನ ಛಲ, ಅಭಿಮಾನಗಳ ಮೂರ್ತಿಯಾಗಿ ಚಿತ್ರಿತವಾಗಿದ್ದಾನೆ. ಅಭಿಮನ್ಯುವಿನ ಕಳೇಬರವನ್ನು ಕಂಡಾಗ ಆತನ ಪರಾಕ್ರಮವನ್ನು ಮುಕ್ತಕಂಠನಾಗಿ ಕೊಂಡಾಡಿ, ಅವನಿಗೆ ನಮಸ್ಕಾರ ಮಾಡಿ ತನ್ನ ದೊಡ್ಡತನವನ್ನು ತೋರಿಸುತ್ತಾನೆ. ದುಶ್ಶಾಸನ ಕರ್ಣರ ಕಳೇಬರಗಳನ್ನು ಕಂಡಾಗಂತೂ ಆತನ ದುಃಖ ಮೇರೆ ಮೀರಿ ಹರಿಯುತ್ತದೆ. ಗದಾಯುದ್ಧದ ಸನ್ನಿವೇಶದಲ್ಲಿ ಮೂರ್ಛೆಹೋದ ಭೀಮನಿಗೆ ತನ್ನ ಗದೆಯಿಂದ ಗಾಳಿ ಬೀಸಿ ಎಚ್ಚರಿಸಿ ಯುದ್ಧಧರ್ಮವನ್ನು ಕಾಪಾಡಿ ತನ್ನ ಔದಾರ್ಯವನ್ನು ಮೆರೆಯುತ್ತಾನೆ. ಹೀಗೆ ಹಲವಾರು ಸಂದರ್ಭಗಳಲ್ಲಿ ರನ್ನನ ದುರ್ಯೋಧನನೇ ವ್ಯಾಸ ಪಂಪರ ದುರ್ಯೋಧನರಿಗಿಂತ ಸ್ವಲ್ಪ ಎತ್ತರದವನಾಗಿ, ಭಿನ್ನವಾಗಿ, ಸ್ವಲ್ಪಮಟ್ಟಿಗೆ ದುರಂತಪಾತ್ರವಾಗಿ ಚಿತ್ರಿತವಾಗಿದ್ದಾನೆ. ಶ್ರೀಯವರ ದುರ್ಯೋಧನನಾದರೂ ರನ್ನನ ದುರ್ಯೋಧನನೇ ಆಗಿದ್ದಾನೆ. ಅಲ್ಲದೆ ಶ್ರೀಯವರು ದುರ್ಯೋಧನನ ಪಾತ್ರವನ್ನು ಏರಿಸುವುದಕ್ಕಾಗಿ ಭೀಮನ ಪಾತ್ರಮಹಿಮೆಯನ್ನು ಸ್ವಲ್ಪಮಟ್ಟಿಗೆ ಇಳಿಸಿದ್ದಾರೆ; ಆ ಮೂಲಕ ರನ್ನನಲ್ಲಿ ಪ್ರತಿನಾಯಕನಾಗಿದ್ದವನನ್ನು ನಾಟಕದಲ್ಲಿ ನಾಯಕ ಸ್ಥಾನಕ್ಕೇರಿಸಲು ಪ್ರಯತ್ನಿಸಿದ್ದಾರೆ. ಹೀಗೆ ಶ್ರೀಯವರ ದುರ್ಯೋಧನ ರನ್ನನ ದುರ್ಯೋಧನನಾಗಿದ್ದರೂ ಗ್ರೀಕ್ ರುದ್ರನಾಟಕದ ದುರಂತನಾಯಕನ ಮಟ್ಟಕ್ಕೆ ಏರಿದ್ದಾನೆಯೆ ? ಇದು ಚರ್ಚೆಗೆ ಒಳಪಡುವಂಥ ವಿಷಯ.

ದುರಂತನಾಯಕ ಮಹಾಸತ್ವ, ಔನ್ನತ್ಯ, ಅಂತಃಶಕ್ತಿಗಳಿಂದ ಕೂಡಿದ ಮಹಾನುಭಾವ, ಮಹಾವ್ಯಕ್ತಿ ಆಗಿರಬೇಕು. ಅಂಥ ವ್ಯಕ್ತಿ ಯಾವುದೋ ಒಂದು ಅಭಿಮಾನಕ್ಕೆ, ಛಲಕ್ಕೆ, ಕ್ರೋಧಕ್ಕೆ, ಸತ್ಯಕ್ಕೆ, ಧರ್ಮಕ್ಕೆ, ಮದಕ್ಕೆ, ಮತ್ಸರಕ್ಕೆ ಒಳಗಾಗಿ ಬಾಳ ಹೆಣಗಾಟದ ದುರ್ಭರ ಸಮಯ ಸನ್ನಿವೇಶಗಳ ಸುಳಿಯಲ್ಲಿ ಸಿಕ್ಕು, ವಿಧಿಯ ಕೈಗೊಂಬೆಯಾಗಿ ಸೋತು ಘನವಾದ ಸ್ಥಾನವೊಂದರಿಂದ ಪತನಹೊಂದಬೇಕು. ಹೀಗೆ ದುರಂತನಾಯಕ ಮಹಾ ವ್ಯಕ್ತಿಯಾಗಿದ್ದುಕೊಂಡು ಸ್ವಭಾವದಲ್ಲಿನ ಒಂದು ಸಣ್ಣ ದೋಷದಿಂದಲೋ ಇಲ್ಲವೆ ಪ್ರತಿಕೂಲ ದೈವದಿಂದಲೋ ಉನ್ನತ ಸ್ಥಾನದಿಂದ ಪತನಹೊಂದಿದರೂ, ಅದೂ ಒಂದು ರೀತಿಯಲ್ಲಿ ಅವನ ವರ್ಣಮಯ ಜೀವನದ ಭೀಷಣ ಸುಂದರತೆಯೇ ಆಗಿರುತ್ತದೆ: ಇಂಥ ದುರಂತ ನಾಯಕ, ರುದ್ರವೀರ ತೋರಿಸುವ ಧೈರ್ಯ ಸಾಹಸಗಳಲ್ಲಿ, ಸಾಧಿಸ ಹೊರಟ ಧ್ಯೇಯಾದರ್ಶಗಳಲ್ಲಿ, ಅನುಭವಿಸುವ ಯಾತನೆ, ಸಂಕಟ, ಪರಾಭವ ಪತನಗಳಲ್ಲಿ ಮಾನವ ಮಹತ್ವವನ್ನು

ಬೆಳಕಿಗೆ ಹಿಡಿಯುವ, ಅಂತರಂಗವನ್ನು ಜಿದಕಿ ಕೆರಳಿಸುವ ಒಂದು ಬಗೆಯ ಅಲೌಕಿಕ ಎನ್ನಬಹುದಾದ ಶಕ್ತಿ ಇರುತ್ತದೆ. ಶ್ರೀಯವರು ಚಿತ್ರಿಸಿದ ದುರ್ಯೋಧನ ಈ ಬಗೆಯ ಅಪ್ಪಟ ದುರಂತ ನಾಯಕನಾಗಿಲ್ಲ.

ದುರ್ಯೋಧನನಲ್ಲೂ ಛಲ ಇದೆ: ಅವನೂ ಒಬ್ಬ ಉನ್ನತಸ್ಥಾನದಲ್ಲಿದ್ದ ಪರಾಕ್ರಮಿ ಎಂಬುದನ್ನು ಯಾರೂ ಒಪ್ಪಬೇಕು. ಆದರೆ ದುರ್ಯೋಧನನ ಛಲ ಅದು ಎಂಥ ಛಲ? ಪಾಂಡವರಿಗೆ ನ್ಯಾಯವಾಗಿ ದಕ್ಕಬೇಕಾದ ಅರ್ಧರಾಜ್ಯವನ್ನು ಕೊಡಲಾರೆನೆಂಬ, ಅವರನ್ನು ಸರ್ವನಾಶಗೊಳಿಸೇನೆಂಬ ದುರುದ್ದೇಶಪೂರಿತ ಕೆಟ್ಟ ಛಲ. ತಾನು ಸರ್ವನಾಶವಾದರೂ ಚಿಂತೆಯಿಲ್ಲ, ಇನ್ನೊಬ್ಬರು ಸುಖದಿಂದ ಇರಬಾರದೆಂಬ ಕುಛಲ. ಇಂಥ ಛಲದಿಂದ ಯಾವ ವ್ಯಕ್ತಿಯೂ ಉದ್ಧಾರವಾಗಲಿಕ್ಕೆ ದೊಡ್ಡವನಾಗಿ ಬೆಳೆಯಲಿಕ್ಕೆ ಸಾಧ್ಯವಿಲ್ಲ. ಪಾಂಡವರ ಜೊತೆಗೆ ಸಂಧಿಮಾಡಿಕೊಳ್ಳಲಾರೆನೆಂಬ ದೃಢ ನಿಶ್ಚಯದ ಛಲ ಇದ್ದರೂ ಅದಕ್ಕೆ ಪ್ರಚಂಡ ಕಾರ್ಯಶಕ್ತಿ ಇಲ್ಲ. "ನೆಲಕಿಱುವೆನೆಂದು ಬಗೆದಿರೆ? ಛಲಕಿಱುವೆಂ ಪಾಂಡುಸುತರೊಳ್" ಎಂದು ಉದ್ಗರಿಸಿದರೂ ಇರಿಯುವ ಆತುರ ಉತ್ಸಾಹಗಳೇನೂ ಕಂಡುಬಾರದೆ ಕರ್ಣ ದುಶ್ಶಾಸನರ ಕಳೇಬರ ಕಂಡು ಗೋಳೋ ಎಂದು ಅಳುತ್ತಾನೆ. ದ್ರೋಣ ಅಶ್ವತ್ಥಾಮರನ್ನೂ ಹಳಿಯುವುದರಲ್ಲಿ ತಾನು ಪಾಂಡವರಿಗೆ ಮಾಡಿದ ಅವಮಾನ ಅಕೃತ್ಯಗಳನ್ನೂ ಹೆಮ್ಮೆಯಿಂದ ನೆನೆಯುವುದರಲ್ಲಿ, ಕೃಷ್ಣ, ಪಾಂಡವರನ್ನು ನಿಂದಿಸುವುದರಲ್ಲಿ ಕಾಣುವ ಕಾರ್ಯತತ್ಪರತೆ ಇರಿಯುವುದರಲ್ಲಿ ಕಂಡುಬರುವುದಿಲ್ಲ. ಹೀಗೆ ಅವನ ಛಲ ನಾಟಕದ ಸಂದರ್ಭದಲ್ಲಿ ಮಹತ್ವವನ್ನೇ ಪಡೆಯುವುದಿಲ್ಲ.

ಅವನು 'ಕುರುಕುಲ ಚಕ್ರವರ್ತಿ' 'ಸಕಲಧರಿತ್ರೀಕಾಂತ' ಆಗಿರುವುದರಿಂದ ಒಂದು ಬಗೆಯ ಔನ್ನತ್ಯ ಆತನಿಗೆ ಅಂಟಿಕೊಂಡಿದೆ ಎಂದು ಹೇಳಬೇಕು. ಅಂಥ ಔನ್ನತ್ಯವನನ್ನು ಭೀಷ್ಮರು ಬಣ್ಣಿಸುತ್ತಾರೆ:

ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ
ಧವಳವಿಲೋಚನೋತ್ಪಲವಧೂಜನಮುಂ ಬೆರಸಪ್ಪದಿಕ್ತಟಂ
ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌ
ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ

ರಾಜಲಾಂಛನಗಳಾದ ಪಟ್ಟದಾನೆ, ಚಾಮರ, ಧವಳ ಛತ್ರಗಳಂಥವುಗಳು ಒಂದು ರೀತಿಯಲ್ಲಿ ಕೌರವನಿಗೆ ವೈಭವವನ್ನು, ಹಿರಿಮೆಯನ್ನು ತಂದುಕೊಟ್ಟರೂ ಅವು ಕೇವಲ ಬಾಹ್ಯ ಹಿರಿಮೆಗೆ ಸಂಬಂಧಪಟ್ಟವುಗಳು, ಅಧಿಕಾರಬಲದಿಂದ ಬಂದಂಥವುಗಳು. ಸ್ಥಾನ

ಪಲ್ಲಟವಾದರೆ ಇಲ್ಲವೆ ಅಧಿಕಾರ ಹೋದರೆ ಇಂಥ ಬಾಹ್ಯ ಆಡಂಬರ ವೈಭವಗಳೂ ಮಾಯವಾಗಿಬಿಡುತ್ತವೆ. ಆದ್ದರಿಂದ ರುದ್ರನಾಯಕನಾಗಲು ಕೇವಲ ಬಾಹ್ಯ ಆಡಂಬರ ವೈಭವಗಳು ಸಹಾಯಕವಾಗಿ ನಿಂತುಕೊಳ್ಳುವುದಿಲ್ಲ. ಆಂತರಿಕ ಅಂತಸ್ಸತ್ವವೊಂದು ಇರಬೇಕು. ಅಂದರೆ ರುದ್ರನಾಯಕ ಕೇವಲ ಸದ್ಗುಣಿಯೇ ಆಗಿರಬೇಕೆಂದೇನೂ ಇಲ್ಲ. ಸದ್ಗುಣದ ಅಭಾವವಿದ್ದರೂ ಉನ್ನತಮಟ್ಟದ ಸತ್ವವೊಂದು ಅವನಲ್ಲಿದ್ದು, ಅದು ಅವನನ್ನು ಅಸಾಮಾನ್ಯ ವ್ಯಕ್ತಿಯ ಮಟ್ಟಕ್ಕೆ ಒಯ್ದಿರಬೇಕು ; ಉದ್ದಿಷ್ಟ ಗುರಿಯತ್ತ ನಾಟಕದ ಕ್ರಿಯೆಯನ್ನು ಹೊತ್ತು ನಡೆಸಬೇಕು. ಈ ದೃಷ್ಟಿಯಿಂದ ಭೀಮನೇ ಇಲ್ಲಿ ಮೇಲುಗೈ ಪಡೆಯುತ್ತಾನೆ. ಯಾಕೆಂದರೆ ನಾಟಕದ ಆರಂಭದಲ್ಲಿ ಊರುಭಂಗ, ಕಿರೀಟಭಂಗಗಳ ಪ್ರತಿಜ್ಞೆ ಮಾಡಿ, ಆ ಗುರಿಯನ್ನು ಸಾಧಿಸುವತ್ತ ಆತ ನೇರವಾಗಿ ಛಲದಿಂದ ಸಾಗಿ, ಕೊನೆಯ ಅಂಕದಲ್ಲಿ ಕೌರವನ ಊರುಭಂಗ ಕಿರೀಟಭಂಗಗಳ ಮೂಲಕ ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸುತ್ತಾನೆ. ಆದರೆ ಕೌರವ ತನ್ನ ನೂರು ಜನ ಸೋದರರು, ಗುರುಗಳು, ಆಪ್ತ ಸ್ನೇಹಿತರು, ಬಂಧುಗಳು, ಮಕ್ಕಳು—ಎಲ್ಲರೂ ಯುದ್ಧಭೂಮಿಯಲ್ಲಿ ಮಡಿದಿದ್ದರೂ, ಹೃದಯದಲ್ಲಿ ಸೋಲಿನ, ಅವಮಾನದ, ದುಃಖದ ಭಾವನೆಗಳು ತುಂಬಿಕೊಂಡಿದ್ದರೂ ಭೀಮನ ಮೇಲಿನ ಸೇಡನ್ನು ಆದಷ್ಟು ತೀವ್ರಗತಿಯಲ್ಲಿ ತೀರಿಸಿ ಕೊಳ್ಳಬೇಕೆಂಬ ಕೋಪ, ಛಲ ತೋರಿಸದೆ ಜೀವಗಳ್ಳನಂತೆ ಹಿಂದು ಹಿಂದು ಹೆಜ್ಜೆ ಇಟ್ಟು ವೈಶಂಪಾಯನ ಸರೋವರದಲ್ಲಿ ಅಡಗಿ ಕುಳಿತುಕೊಳ್ಳುತ್ತಾನೆ. ಈ ಎಲ್ಲ ದೃಷ್ಟಿಯಿಂದ ನೋಡಿದಾಗ ಕೌರವನ ಛಲ ಮಹತ್ವದ, ಕಾರ್ಯೋನ್ಮುಖತೆಯ ಛಲ ಅಲ್ಲ ಎಂಬುದು ದೃಢವಾಗಿಬಿಡುತ್ತದೆ.

ಯುದ್ಧಭೂಮಿಯಲ್ಲಿ ಕರ್ಣನ ಕಳೇಬರವನ್ನು ಕಂಡು ಆತನ ಶಕ್ತಿ, ಪರಾಕ್ರಮ, ಸ್ನೇಹತ್ವ, ದಾನಗುಣಗಳನ್ನು ದುರ್ಯೋಧನ ಕೊಂಡಾಡುತ್ತ ದುಃಖಿಸುವುದೊಂದು ಆತನ ದೊಡ್ಡಗುಣ ಎಂದು ಪರಿಗಣಿಸಲಾಗಿದೆ. ಕರ್ಣನ ಬಗೆಗಿನ ಕೌರವನ ಈ ಪ್ರೀತಿ, ಸ್ನೇಹಗಳನ್ನು ಮೆಚ್ಚೋಣ. ಆದರೆ ದುರ್ಯೋಧನನೇ ಹೇಳುವ ಈ ಮಾತನ್ನು ಗಮನಿಸಿ :

ಅನಱಿವೆಂ ಪೃಥೆಯಱಿವಳ್
ದಾನವರಿಪುವಱಿವನರ್ಕನಱಿವಂ ದಿವ್ಯ
ಜ್ಞಾನಿ ಸಹದೇವನಱಿವಂ
ನೀನಾರ್ಗೆಂದಾರುಮಱಿಯರಂಗಾಧಿಪತೀ

ಕರ್ಣ ಯಾರು, ಅವನ ಜನನ ಹೇಗಾಯಿತೆಂಬುದು ಕುಂತಿ, ಕೃಷ್ಣ, ಸೂರ್ಯ,

ಸಹದೇವರಿಗೆ ಗೊತ್ತಿರುವಂತೆ ಕೌರವನಿಗೂ ತಿಳಿದಿದೆ. ಹಾಗಿದ್ದ ಮೇಲೆ ಈತ ಕೌರವ-ಪಾಂಡವರೆಲ್ಲರಿಗೂ ಜ್ಯೇಷ್ಠನಾದ ಕರ್ಣನಿಗೆ ಅವನ ಹುಟ್ಟಿನ ಬಗ್ಗೆ ಹೇಳಿ ಅವನಿಗೆ ದೊರಕಬಹುದಾಗಿದ್ದ ರಾಜ್ಯತ್ವವನ್ನು ಏಕೆ ಬಿಟ್ಟುಕೊಡಲಿಲ್ಲ ? ಜ್ಯೇಷ್ಠನೂ ಮಹಾ ಪರಾಕ್ರಮಿಯೂ ಆದ ಕರ್ಣನನ್ನು ಮಾಂಡಲಿಕನನ್ನಾಗಿ ಮಾತ್ರ ಇಟ್ಟುಕೊಳ್ಳುತ್ತಾನೆ. ಕೌರವ ಇಲ್ಲಿಯೂ ತನ್ನ ವಂಚನೆಯನ್ನು ವ್ಯಕ್ತಪಡಿಸಿದ್ದಾನೆ. ಕರ್ಣನಿಗೆ ಆತನ ಜನ್ಮರಹಸ್ಯವನ್ನು ಹೇಳದೆ ಮಹಾ ಪ್ರತಾಪಿಯಾದ ಅವನಿಗೆ ಆಶ್ರಯಕೊಟ್ಟು ಪೋಷಿಸಿ, ಸಮಯ ಬಂದಾಗ ಪಾಂಡವರನ್ನು ಕರ್ಣನ ಮೂಲಕ ನಾಶಗೊಳಿಸುವ ಕುಯುಕ್ತಿಯನ್ನು ಹೊಂದಿದವನಾಗಿದ್ದಾನೆ. ಹೀಗೆ ಕರ್ಣನ ಬಗ್ಗೆ ಮೂಲಭೂತವಾದಂಥ ವಂಚನಾ ಮನೋಭಾವವನ್ನೇ ಹೊಂದಿದ ದುರ್ಯೋಧನ ಅವನ ಕಳೇಬರ ಕಂಡಾಗ ವ್ಯಕ್ತಪಡಿಸುವ ದುಃಖ, ಸ್ನೇಹಗಳು ಪ್ರಾಮಾಣಿಕವಾದುವುಗಳೆಂದು ಅನಿಸುವುದಿಲ್ಲ. ಪಾಂಡವರ ಮೇಲಿನ ದ್ವೇಷದಿಂದಾಗಿ, ತನ್ನ ಅಧಿಕಾರದಾಹಕ್ಕಾಗಿ ಯುದ್ಧದಲ್ಲಿ ದ್ರೋಣ, ಶಲ್ಯ, ಕರ್ಣ, ದುಶ್ಶಾಸನಾದಿಗಳನ್ನು ಕಳೆದುಕೊಂಡ ಈತ ಗೋಳೋ ಎಂದು ಅಳುವುದರಲ್ಲಿ, ಪಶ್ಚಾತ್ತಾಪ ವ್ಯಕ್ತಪಡಿಸುವುದರಲ್ಲಿ ಅರ್ಥವಿಲ್ಲ. ಬದಲಾಗಿ ದುಃಖವನ್ನು ಸಹಿಸಿಕೊಂಡು, ನೋವನ್ನು ನುಂಗಿಕೊಂಡು ಯುದ್ಧಕ್ಕೆ ನುಗ್ಗಿದ್ದರೆ ಹೆಚ್ಚು ವೀರೋಚಿತವಾಗುತ್ತಿತ್ತು. ಅಭಿಮನ್ಯು, ಘಟೋತ್ಕಚ ಮುಂತಾದ ಆಪ್ತರನ್ನೂ ಶೂರರನ್ನೂ ಸಾಕಷ್ಟು ಕಳೆದುಕೊಂಡ ಪಾಂಡವರು ಇವನಂತೆ ದುಃಖಿಸದೆ ನೋವನ್ನು ನುಂಗಿಕೊಂಡು ಯುದ್ಧಕ್ಕೆ ನಡೆಯುವುದನ್ನು ನಾವು ಕಾಣುತ್ತೇವೆ.

ಅಭಿಮನ್ಯುವಿನ ಕಳೇಬರವನ್ನು ಕಂಡಾಗ ಆತನ ಪರಾಕ್ರಮವನ್ನು ಮುಕ್ತಕಂಠನಾಗಿ ಹೊಗಳಿ ಆತನಿಗೆ ನಮಸ್ಕಾರಮಾಡಿ ಗೌರವ ಸೂಚಿಸಿದ್ದು, ಗದಾ ಹೊಡೆತದಿಂದ ಮೂರ್ಛೆಹೋದ ಭೀಮನನ್ನು ತನ್ನ ಗದೆ ಬೀಸಿ ಗಾಳಿಹಾಕಿ ಎಚ್ಚರಿಸಿದ್ದು, ಕೌರವನ ದೊಡ್ಡಗುಣ ಔದಾರ್ಯಗಳ ಪ್ರತೀಕ ಎಂದು ಭಾವಿಸಲು ಅವಕಾಶವಿದೆ. ಎಂಥ ಕೆಟ್ಟ ವ್ಯಕ್ತಿಯಲ್ಲೂ ಒಂದೆರಡು ಸಂದರ್ಭಗಳಲ್ಲಿ ಸದ್ಗುಣ ಸದ್ಭಾವನೆಗಳು ಕಾಣಿಸಿಕೊಳ್ಳುತ್ತವೆ ಎಂದೂ ಸಮಾಧಾನ ಹೊಂದಬಹುದು. ಆದರೆ ಅಖಂಡ ಮತ್ತು ನಿಷ್ಠಪಾಂಡವ ದ್ವೇಷಿಯಾದ ದುರ್ಯೋಧನನ ಸಂದರ್ಭದಲ್ಲಿ ಇದು ಸಂಭಾವ್ಯವೆ ಎಂದು ಅನುಮಾನ ಆರಂಭವಾಗುತ್ತದೆ. ಯಾಕೆಂದರೆ ಭೀಮನಿಗೆ ವಿಷಾನ್ನ ಹಾಕಿದವನಲ್ಲಿ, ಅರಗಿನ ಮನೆಯಲ್ಲಿ ಪಾಂಡವರನ್ನು ಮೋಸದಿಂದ ಸುಡಬೇಕೆಂದವನಲ್ಲಿ, ತುಂಬಿದ ಸಭೆಯಲ್ಲಿ ದ್ರೌಪದಿಗೆ ಅವಮಾನ ಮಾಡಿದವನಲ್ಲಿ, ಮೋಸದ ಜೂಜಿನಿಂದ ಪಾಂಡವರನ್ನು ಕಾಡಿಗೆ ಅಟ್ಟಿ, ಅವರು ಪಡುವ ನೋವು ಕಷ್ಟಗಳನ್ನು ಕಂಡು ಹಿಗ್ಗಿದವನಲ್ಲಿ ಇದ್ದಕ್ಕಿದ್ದ ಹಾಗೆ ಧರ್ಮಬುದ್ಧಿ, ಒಳ್ಳೆತನ, ಔದಾರ್ಯಗಳು ಹುಟ್ಟಿದವೆನ್ನು

ವುದು ಸಂಭಾವ್ಯವಾಗಿ ತೋರುವುದಿಲ್ಲ; ಅಷ್ಟೇ ಅಲ್ಲ, ಗದಾಯುದ್ಧಕ್ಕೆ ಸ್ವಲ್ಪ ಮುಂಚೆ ಕೌರವ ತಾನು ಪಾಂಡವರಿಗೆ, ಪಾಂಚಾಲಿಗೆ ಮಾಡಿದ ಅವಮಾನಗಳನ್ನು, ಪಾಪಕೃತ್ಯಗಳನ್ನು ಹೆಮ್ಮೆಯಿಂದ ನೆನಸಿಕೊಳ್ಳುವುದನ್ನು ನೋಡಿದರೆ ಪಾಂಡವರ ಒಗೆಗಿನ ಕೌರವನ ಮೇಲಿನ ರೀತಿಯ ಔದಾರ್ಯ, ದೊಡ್ಡ ಗುಣಗಳು ಅಸಾಂಭವ್ಯ, ಅಸಾಧ್ಯ ಎನಿಸುತ್ತದೆ. ಹೀಗೆ ದುರ್ಯೋಧನ ಓದುಗರ, ಪ್ರೇಕ್ಷಕರ ಕರುಣೆ, ಅನುಕಂಪೆಗಳನ್ನು ಪಡೆದರೂ ಆತನ ವ್ಯಕ್ತಿತ್ವ ಮಹೋನ್ನತವಾಗಿಲ್ಲದಿರುವುದರಿಂದ ಆತನ ಪತನದಿಂದ ಆಶ್ಚರ್ಯ ಗೌರವಗಳು ಹುಟ್ಟುವುದಿಲ್ಲವಾದ್ದರಿಂದ ಅವನಿಗೆ ರುದ್ರನಾಯಕನ ಪಟ್ಟ ಸಲ್ಲುವುದಿಲ್ಲ.

ಶ್ರೀಯವರ ದುರ್ಯೋಧನ ರನ್ನನ ದುರ್ಯೋಧನನೇ ಆಗಿದ್ದರೂ ಭೀಮನ ಮಹತ್ವವನ್ನು ಇಳಿಸುವುದರ ಮೂಲಕವಾಗಿ ದುರ್ಯೋಧನನ್ನು ಏರಿಸುವ ಪ್ರಯತ್ನ ಮಾಡಿದ್ದಾರೆ. ಹಾಗಾಗಿ ಭೀಮನ ಪಾತ್ರಮಹಿಮೆಗೆ ಕುಂದು ಬಂದು ಅವನಿಗೆ ಸ್ವಲ್ಪ ಅನ್ಯಾಯವಾಯಿತೆ ಹೊರತು ದುರ್ಯೋಧನನೇನೂ ದುರಂತನಾಯಕನಾಗಲಿಲ್ಲ. ನಾಟಕದ ನಾಲ್ಕನೇ ಅಂಕದಲ್ಲಿ ಭೀಮನ ಭೀಕರ ಪ್ರತಿಜ್ಞೆಯನ್ನು ಕೇಳಿದ ಧರ್ಮರಾಜ ಭೀಮನಿಗೆ "ಭೀಮ, ಈ ಮಸಕಂ ಮಸಗಲ್ ತಗದು" ಎಂದು ಬುದ್ಧಿವಾದ ಹೇಳುತ್ತಾನೆ. ಅದಕ್ಕೆ ಉತ್ತರ ರೂಪವಾಗಿ ಭೀಮ "ಓಹೋ! ಧರ್ಮಶ್ರವಣಂ" ಎಂದು ಅವಿನಯವನ್ನು ವ್ಯಕ್ತಪಡಿಸುತ್ತಾನೆ. ಈ ಮಾತು ಮೂಲದಲ್ಲಿ ಇಲ್ಲ. ಪಾಂಚಾಲಿಯ ಗೋಳಿಗೆ ಕಾರಣನಾದ ದುರ್ಯೋಧನನನ್ನು ನಾಶಮಾಡುವಲ್ಲಿ, ಪ್ರತಿಜ್ಞೆ ಪೂರೈಕೆಯಲ್ಲಿ ಧರ್ಮರಾಜನ ಧರ್ಮ ಪ್ರಜ್ಞೆ ಅಡ್ಡಿಯಾಗಬಹುದೆಂದು ಭಾವಿಸಿದ ಭೀಮ ಧರ್ಮರಾಜನಿಗೆ "ಆನಂ ವಿಧೇಯನಲ್ಲಂ ನೀನುಂ ಗುರುವಲ್ಲಮಿಂದಿನೊಂದೆವಸದೊಳ್" ಎಂದು ನುಡಿಯುತ್ತಾನೆ. ನಾಟಕದಲ್ಲಿ ಈ ಮಾತನ್ನು ಮಾತ್ರ ಶ್ರೀಯವರು ಇಟ್ಟುಕೊಂಡಿದ್ದಾರೆ. ಆದರೆ ಕಾವ್ಯದಲ್ಲಿನ ಭೀಮ ಈ ಮಾತನ್ನು ಹೇಳುವುದಕ್ಕಿಂತ ಮುಂಚೆ ಅಜಾತಶತ್ರುವಾದ ಅಣ್ಣನಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ. ಶ್ರೀಯವರು ನಮಸ್ಕಾರಮಾಡಿ ವಿನಯವನ್ನು ತೋರಿಸುವ ಈ ಭಾಗವನ್ನು ಕೈಬಿಟ್ಟಿದ್ದಾರೆ. ಭೀಮನ ಮೂದಲಿಕೆಯ ಮಾತು ಕೇಳಿ ವೈಶಂಪಾಯನ ಸರೋವರದಲ್ಲಿ ಅಡಗಿದ್ದ ಕೌರವ ಎದ್ದು ಯುದ್ಧಕ್ಕೆ ಸಿದ್ಧನಾಗಿ "ನಿಜಭುಜಗವೆಯಂ" ತೂಗುತ್ತ ಬರುವುದನ್ನು ಭೀಮ "ಮೆಚ್ಚಿ ತಲೆಯಂ" ತೂಗುತ್ತಾನೆ. ಶ್ರೀಯವರು ಭೀಮ, ವೈರಿಯನ್ನು ಮೆಚ್ಚಿಕೊಳ್ಳುವ ಈ ಭಾಗವನ್ನೂ ಕೈಬಿಟ್ಟಿದ್ದಾರೆ. ಹೀಗೆ ಶ್ರೀಯವರು ಭೀಮನನ್ನು ಉದಾತ್ತ ಗುಣಗಳಿಂದ ಕೆಳಗಿಳಿಸುವುದರ ಮೂಲಕ ಕೌರವನ ಪಾತ್ರಕ್ಕೆ ಮಹತ್ತನ್ನು ಒದಗಿಸಲು ಹೆಣಗಿದ್ದರೂ ಆತ ಆಶ್ಚರ್ಯ ಗೌರವಗಳಿಗೆ ಪಕ್ಕಾಗುವ ಮಹಾನ್ ವ್ಯಕ್ತಿತ್ವದ ದುರಂತನಾಯಕನಾಗಿ ನಿರ್ಮಾಣಗೊಂಡಿಲ್ಲ.

ಭೀಮ, ಕೌರವನ ಊರು ಭಂಗ ಕಿರೀಟಭಂಗ ಮಾಡುವುದು, ಒದೆಯುವುದು ಆತನ ಮೂಲ ಪ್ರತಿಜ್ಞೆಗೆ ಸೇರಿದ ವಿಷಯ. ಅದು ಭೀಮನ ಅವಿನಯ, ಉದ್ಧಟತನ ಎಂದು ಹೇಳುವಂತಿಲ್ಲ. ಯಾಕೆಂದರೆ ಭೀಮನಂಥ ಅಸಾಮಾನ್ಯ ವ್ಯಕ್ತಿಯ ಕೋಪ ತಾಪಗಳನ್ನು, ಪರಾಕ್ರಮ ಪ್ರತಿಜ್ಞೆಗಳನ್ನು ಸಾಮಾನ್ಯರ ಎಣಿಕೆಯಿಂದ ನೋಡುವುದು ಸಾಧುವಲ್ಲ. ಕೌರವನ ಅವಸಾನಕ್ಕೆ ದೈವದ ಕೈವಾಡ ಯಾವುದೂ ಇಲ್ಲ. ಅವನ ಅಂತ್ಯಕ್ಕೆ ಅವನೇ ಕಾರಣವಾಗಿದ್ದಾನೆ. ದೈವ ಅವನಿಗೆ ಪ್ರತಿಕೂಲವಾಗಿಲ್ಲ. ಅವನ ಪಾಪ ಕೃತ್ಯಗಳು ದುಷ್ಟತನಗಳು ಅವನ ಪತನಕ್ಕೆ ಕಾರಣವಾಗಿವೆ.

ನಾಟಕದಲ್ಲಿಯ ಕೃಷ್ಣನ ಪಾತ್ರವೂ ಉನ್ನತ ಗುಣಗಳಿಂದ ವಂಚಿತವಾಗಿದೆ. ರನ್ನನಲ್ಲಿಯೂ ಕೃಷ್ಣ ಪಾಂಡವಪಕ್ಷಪಾತಿಯೆ ಆಗಿದ್ದರೂ ಅಲ್ಲಿ ಆತ ವಿನಯದ ಗಡಿಯನ್ನು ಮೀರಿ ಹೋಗುವುದಿಲ್ಲ ; ಸೂಕ್ಷ್ಮತೆಯನ್ನು ಕಳೆದುಕೊಂಡು ರೂಕ್ಷನಾಗುವುದಿಲ್ಲ. ನಾಟಕದಲ್ಲಿನ ಕೃಷ್ಣನಿಗೆ ಭೀಮನನ್ನು ಯುದ್ಧಕ್ಕೆ ಪ್ರಚೋದಿಸುವುದೊಂದೇ ಕೆಲಸವಾಗಿಬಿಟ್ಟಿದೆ. ಒಂದನೆಯ, ನಾಲ್ಕನೆಯ ಮತ್ತು ಕೊನೆಯ ಅಂಕದಲ್ಲಿ ಈ ಕೆಲಸವನ್ನು ಅವನು ತುಂಬ ಅವಸರದಿಂದ, ನಿಷ್ಠೆಯಿಂದ ಮಾಡುತ್ತಾನೆ. ಕಾವ್ಯದಲ್ಲಿ, ಧರ್ಮರಾಜನು ಕೊಳದಿಂದ ಎದ್ದುಬಂದ ಕೌರವನಿಗೆ ಇನ್ನಾದರೂ ದ್ವೇಷವನ್ನು ಮರೆತು ಪ್ರೀತಿಯಿಂದ ರಾಜ್ಯವಾಳು ; ನಾವೆಲ್ಲರೂ ನಿನ್ನ ಸೇವೆ ಮಾಡುತ್ತೇವೆಂದು ಹೇಳುತ್ತಾನೆ. ಅವನ್ನು ಅನುಮೋದಿಸುತ್ತ ಕೃಷ್ಣ,

> ..............ದುರ್ಯೋ
> ಧನ ಧರ್ಮತನೂಜನೊಳ್ಳಿತಂ ಪೇಳ್ದಪನಾ
> ತನ ಪೇಳ್ದುದೆಸಗಿ ನೀನರ
> ಸನಾಗಿ ವಸುಮತಿಯನಾಳ್ದು ಸುಖಮಿರಲಾಗಾ

ಎಂದು ಒಳ್ಳೆಯ ಮಾತನ್ನೇ ನುಡಿಯುತ್ತಾನೆ (ಇಲ್ಲೂ ಕೆಲವರು ವ್ಯಂಗ್ಯವನ್ನು ಕಾಣುವವರಿದ್ದಾರೆ. ಆ ವಿಷಯ ಬೇರೆ). ಆದರೆ ನಾಟಕದ ಕೃಷ್ಣ "ಧರ್ಮಜಂ ಕೃಪೆಯಿಂದೊಳ್ಳಿತಂ ಪೇಳ್ದಪಂ ; ಈಗಳುಂ ಕೇಳ್ದು ಬರ್ದುಕು" ಎಂದು ಕಟುವ್ಯಂಗ್ಯವನ್ನು ನುಡಿಯುತ್ತಾನೆ. ಹೀಗೆ ಶ್ರೀಯವರು ಕೃಷ್ಣನ ಪಾತ್ರವನ್ನು ಹೆಚ್ಚು ಪಾಂಡವ ಪಕ್ಷಪಾತಿಯಾಗುವಂತೆ ಮಾರ್ಪಡಿಸಿ, ದುರ್ಯೋಧನನಿಗೆ ವ್ಯಂಗ್ಯ ನುಡಿಯುವಂತೆ ಮಾಡಿ ಆ ಮೂಲಕ ದುರ್ಯೋಧನನನ್ನು ಹೆಚ್ಚು ಅನುಕಂಪೆಗೆ ಗುರಿಮಾಡುವ ಪ್ರಯತ್ನ ಮಾಡಿದ್ದಾರೆ. ಆದರೆ ನಾಟಕದ ಸಂದರ್ಭದಲ್ಲಿ ಕೃಷ್ಣ ಪಾತ್ರದ ಈ ರೂಕ್ಷತೆ ಅನಾವಶ್ಯಕ. ಯಾಕೆಂದರೆ ಭೀಮ, ಕೃಷ್ಣ ಪಾತ್ರಗಳ ಮಹತಿಯನ್ನು ಎಷ್ಟು ಕೆಳಗಿಳಿಸಿದರೂ ದುರ್ಯೋಧನನ ಪಾತ್ರ ಮೇಲಕ್ಕೆ, ಮಹೋನ್ನತಿಗೆ ಏರಲು ಸಾಧ್ಯವಾಗಿಲ್ಲ.

ನಾಟಕದ ಕೊನೆಗೆ ಬರುವ ಲಕ್ಷ್ಮೀ–ಅಶ್ವತ್ಥಾಮರ ಪ್ರಸಂಗವೂ ನಾಟಕಕ್ಕೆ ಹೊರತಾಗಿದ್ದು ನಾಟಕದ ಕ್ರಿಯೆಗೆ ಸಹಕಾರಿಯಾಗಿಲ್ಲ. ಅದನ್ನು ಕೈಬಿಟ್ಟಿದ್ದರೆ ನಾಟಕಕ್ಕೆ ಯಾವ ಕುಂದೂ ಬರುತ್ತಿರಲಿಲ್ಲ ; ಬದಲಾಗಿ ನಾಟಕದ ಅಚ್ಚುಕಟ್ಟುತನ ಹೆಚ್ಚುತ್ತಿತ್ತು. ಧರ್ಮರಾಯನ ಕಣ್ಣಿಗೆ ಕಾಣುವ ಭೀಮನ ತಲೆಯ ಮೇಲಾಡುವ ಸೇಡುಮಾರಿಗಳು ಗ್ರೀಕ್ ದುರಂತ ನಾಟಕದವುಗಳಾಗಿದ್ದು, ನಾಟಕದ ದುರ್ಯೋಧನನನ್ನು ದುರಂತನಾಯಕನನ್ನಾಗಿ ಮಾಡಬೇಕೆಂದು ಶ್ರೀಯವರೇ ಅವುಗಳನ್ನು ಎಳೆತಂದಿದ್ದಾರೆ. ಭೀಮನ ಪ್ರಶಂಸೆ ಪ್ರತಿಜ್ಞೆಗಳಿಂದ ಆರಂಭವಾಗುವ ನಾಟಕ ಒಂದು ದೃಷ್ಟಿಯಲ್ಲಿ ಆತನ ಪ್ರತಿಜ್ಞಾಪೂರ್ಣದಲ್ಲಿಯೇ ಮುಕ್ತಾಯಗೊಂಡು ಆತನೇ ನಾಯಕನೆಂದು ಅನಿಸಿದರೂ ದುರ್ಯೋಧನನೇನೂ ದುರಂತ ನಾಟಕದ ರುದ್ರನಾಯಕನ ಮಟ್ಟಕ್ಕೂ ಏರಿಲ್ಲ ; ಪಟ್ಟವೂ ಸಂದಿಲ್ಲ. ಇಲ್ಲಿನ ದುರ್ಯೋಧನ ಅಪ್ಪಟ ರನ್ನನ ದುರ್ಯೋಧನನೇ ಆಗಿದ್ದಾನೆ.

ಡಾ. ಕೆ.ಜಿ. ನಾರಾಯಣ ಪ್ರಸಾದ್

# ಕನ್ನಡ ಛಂದಸ್ಸಿನ ಚರಿತ್ರೆ

ಕನ್ನಡ ಛಂದಸ್ಸನ್ನು ಚಾರಿತ್ರಿಕ ದೃಷ್ಟಿಯಿಂದ ವಿಶ್ಲೇಷಿಸಿ, ಅದಕ್ಕೂ ಒಂದು ಚರಿತ್ರೆಯಿದೆಯೆಂಬುದನ್ನು ಮೊದಲ ಬಾರಿಗೆ ತೋರಿಸಿಕೊಟ್ಟ ಕೀರ್ತಿ, ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರಿಗೆ ಸಲ್ಲುತ್ತದೆ. 'ಕನ್ನಡ ಕೈಪಿಡಿ'ಯ ಮೊದಲನೆಯ ಸಂಪುಟದ ಛಂದಸ್ಸಿನ ಭಾಗದಲ್ಲಿ ಸೇರ್ಪಡೆಯಾಗಿರುವ 'ಕನ್ನಡ ಛಂದಸ್ಸಿನ ಚರಿತ್ರೆ'[1] ಎಂಬ ಅವರ ಸುದೀರ್ಘಲೇಖನ ಈ ಕೀರ್ತಿಗೆ ಕಾರಣವಾಗಿದೆ. Saintsbury ಅವರ History of English Prosodyಯ ಸಂಪುಟಗಳು, Historical Manual of English Prosody, History of English Prose Rhythm ಗಳಂತಹ ಕೃತಿಗಳು ಈ ರೀತಿಯ ಚಾರಿತ್ರಿಕ ಅಧ್ಯಯನಕ್ಕೆ ಅವರಿಗೆ ಪ್ರೇರಣೆ ನೀಡಿರಬೇಕು.

ಕನ್ನಡ ಛಂದಸ್ಸನ್ನು, "ಸಂಸ್ಕೃತದಿಂದ ತೆಗೆದುಕೊಂಡ ಛಂದಸ್ಸು, ಕನ್ನಡದಲ್ಲಿಯೇ ಹುಟ್ಟಿ ಬೆಳೆದು ದ್ರಾವಿಡ ಭಾಷೆಗಳಿಗೆ ಸಹಜವಾದ ಛಂದಸ್ಸು ಎಂದು ಎರಡು ಭಾಗವಾಗಿ ಒಡೆಯಬಹುದು"[2] ಎಂಬ ದೃಷ್ಟಿಯಿಂದ ಈ ಲೇಖನದಲ್ಲಿ ಅವರು ಎರಡು ವಿಭಾಗಗಳನ್ನು ಮಾಡಿಕೊಂಡಿದ್ದಾರೆ. ಮೊದಲನೆಯ ವಿಭಾಗವು ಸಂಸ್ಕೃತ ಛಂದಸ್ಸನ್ನೂ ಎರಡನೆಯ ವಿಭಾಗವು ಕನ್ನಡ ಛಂದಸ್ಸನ್ನೂ ಕುರಿತಿದೆ. ಇಂಗ್ಲಿಷ್ ಛಂದಸ್ಸಿಗೆ ಕೈಹಾಕಿಲ್ಲ. "ಇಂಗ್ಲಿಷ್ ಛಂದಸ್ಸಿನ ಪ್ರಭಾವವನ್ನೂ ಸಹಾಯವನ್ನೂ ಬೇರೆ ಕಡೆ ವಿಮರ್ಶಿಸಲಾಗುತ್ತದೆ. ಕನ್ನಡ ಛಂದಸ್ಸಿನ ತಾಯಿಬೇರಿನ ಮೇಲೆ ಹೊಸ ಸೌಂದರ್ಯವನ್ನು ಕಸಿಮಾಡಿ ಕಟ್ಟಿ ಬೆಳೆಸುವವರು ಈ ವಿಮರ್ಶೆಯನ್ನು ಮುಂದುವರಿಸಬೇಕು"[3]—ಎಂಬುದಾಗಿ ಅವರೇ ಈ ಲೇಖನದಲ್ಲಿ ಮತ್ತೊಂದೆಡೆ ಹೇಳಿದ್ದಾರೆ. ಆದರೆ ಅವರು ಅದನ್ನು ಬರೆಯಲಿಲ್ಲ; ಅಥವಾ ಬರೆದಿದ್ದರೂ ಪ್ರಕಟವಾಗುವ ಭಾಗ್ಯ ಅದಕ್ಕೆ ಬರಲಿಲ್ಲ.

---

[1] ಮುಂದೆ 'ಶ್ರೀ ಸಾಹಿತ್ಯ' (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1983) ದಲ್ಲಿಯೂ ಈ ಲೇಖನ ಸೇರ್ಪಡೆಯಾಗಿದೆ.

[2] 'ಶ್ರೀ ಸಾಹಿತ್ಯ', ಪು. ೫೩೫.

[3] ಅದೇ, ಪು. ೫೭೭.

ಸಂಸ್ಕೃತ ಛಂದಸ್ಸು ಎಂಬ ವಿಭಾಗದಲ್ಲಿ ವೈದಿಕ ಛಂದಸ್ಸು, ಗಾಯತ್ರಿ, ಅನುಷ್ಟುಭ್, ತ್ರಿಷ್ಟುಭ್, ಜಗತೀ, ಪ್ರಗಾಥ, ಲೌಕಿಕ ಛಂದಸ್ಸು — ವೃತ್ತಗಳು, ಕಂದ, ವೃತ್ತ ಕಂದಗಳ ಪ್ರಯೋಗದ ಮೇಲೆ ಭಾಷಾವ್ಯತ್ಯಾಸದ ಪರಿಣಾಮ ಎಂಬ ಉಪವಿಭಾಗಗಳಿವೆ. ಕನ್ನಡ ಛಂದಸ್ಸು ಎಂಬ ವಿಭಾಗದಲ್ಲಿ ನಾಗವರ್ಮನ ಛಂದೋಂಬುಧಿ, ಕನ್ನಡ ಪದ್ಯಗಳು—ಇವುಗಳ ದ್ರಾವಿಡಮೂಲ, ದ್ರಾವಿಡಗಣ, ತ್ರಿಪದಿ, ಅಕ್ಕರ, ಅಕ್ಕರಿಕೆ, ಮದನವತಿ, ಛಂದೋವತಂಸ, ಚೌಪದಿ, ಗೀತಿಕೆ, ಸಾಂಗತ್ಯ, ಏಳೆ, ರಗಳೆ, ಷಟ್ಪದಿ, ಯಕ್ಷಗಾನ ಹೊಸಪ್ರಯೋಗಗಳು : ದ್ವಿಪದಿ, ಸೀಸಪದ್ಯ, ತ್ರಿಪುಡೆ, ಗೋವಿನ ಕಥೆಯ ಮಟ್ಟು, ಸಾಂಗತ್ಯ (ಎರಡೇ ಪಾದಗಳು), ತ್ಯಾಗಮಾನ, ಯಾಲಪದ, ಪಾರ್ಥಜೋಗಿ ಹಾಡು, ಸುಲಿಯ ಚಂದಯ್ಯನ ಶಾರದ, ಗೀತಗೋಪಾಲ, ಉಪಸಂಹಾರ : ತಮಿಳು ಛಂದಸ್ಸು—ಎಂಬ ಉಪವಿಭಾಗಗಳಿವೆ.

ವೈದಿಕ ಛಂದಸ್ಸನ್ನು ಮುಂದಿನ ಸಂಸ್ಕೃತಕವಿಗಳೇ ಬಳಸಲಿಲ್ಲ ; ಕನ್ನಡ ಕವಿಗಳಂತೂ (ಅದರಿಂದ ನಿಷ್ಪನ್ನವಾದ ಶ್ಲೋಕವೊಂದನ್ನುಳಿದಂತೆ) ಅದರ ಕಡೆಗೆ ಕಣ್ಣು ಕೂಡ ತಿರುಗಿಸಿದಂತಿಲ್ಲ. ನಾಗವರ್ಮ ಅದನ್ನು ಕೈಬಿಟ್ಟಿದ್ದಾನೆ. ಹೀಗಿರುವಾಗ ಶ್ರೀಯವರು ಮೊದಲು ಅದರ ಬಗ್ಗೆ ಏಕೆ ಹೇಳಿದರು ಎಂಬ ಸಂಶಯ ಬರುವುದು ಸಹಜ. ಅದಕ್ಕೆ ಸಮಾಧಾನವನ್ನು ಅವರೇ ಹೀಗೆ ನೀಡಿದ್ದಾರೆ : "ವೈದಿಕಛಂದಸ್ಸುಗಳನ್ನು ಕನ್ನಡಕವಿಗಳು ಉಪಯೋಗಿಸಿಲ್ಲವಾದರೂ, ಲೌಕಿಕ ಛಂದಸ್ಸುಗಳಿಗೆ ಅವು ಮೂಲವಾಗಿರುವುದರಿಂದಲೂ, ಅವುಗಳಲ್ಲಿ ಗಣನಾರ್ಹವಾದ ತೇಜಸ್ಸೂ ಗಾಂಭೀರ್ಯವೂ ಸೌಂದರ್ಯವೂ ಕಾಣಬರುವುದರಿಂದಲೂ, ಅವುಗಳಲ್ಲಿ ಮುಖ್ಯವಾದ ವೃತ್ತಗಳನ್ನು ಕನ್ನಡ ಕವಿಗಳು ಮುಂದಾದರೂ ಗಮನಿಸಬೇಕು"[4]—ಎಂಬುದಾಗಿ. ಅಂದರೆ ವೈದಿಕ ಛಂದಸ್ಸುಗಳ ಸೊಗಸನ್ನು ಪರಿಚಯಮಾಡಿಕೊಟ್ಟು, ಆ ಕಡೆಗೆ ಹೊಸಬರು ಗಮನ ಹರಿಸುವಂತೆ ಮಾಡಬೇಕೆಂಬುದೇ ವೈದಿಕಛಂದಸ್ಸನ್ನು ಕುರಿತ ಭಾಗದ ರಚನೆಯ ಪ್ರಧಾನ ಉದ್ದೇಶ. ಈ ಉದ್ದೇಶದಿಂದ ಇಲ್ಲಿ ಗಾಯತ್ರಿ, ಅನುಷ್ಟುಭ್-ಶ್ಲೋಕ, ತ್ರಿಷ್ಟುಭ್, ಜಗತೀ ಮತ್ತು ಪ್ರಗಾಥ ಈ ಬಂಧಗಳ ಲಕ್ಷಣಗಳ ದಿಗ್ದರ್ಶನ ಮಾಡಿಸಿದ್ದಾರೆ. (ಇದರಲ್ಲಿ ಆರ್ನಾಲ್ಡರ Vedic Metres ಗ್ರಂಥವು ನೆರವಾಗಿರುವ ಸಾಧ್ಯತೆಯಿದೆ). ಇವುಗಳ ಪೈಕಿ ಶ್ಲೋಕವನ್ನು ಮಾತ್ರ ಪ್ರಾಚೀನ ಕನ್ನಡ ಕವಿಗಳು ಕ್ವಚಿತ್ತಾಗಿ ಬಳಸಿರುವುದನ್ನು ಗುರುತಿಸಿ, "ಕನ್ನಡಕವಿಗಳು ಮೊದಲು ಈ ಶ್ಲೋಕವನ್ನು ಹೆಚ್ಚಾಗಿ ಬಳಸಿಕೊಂಡರೋ ಇಲ್ಲವೋ ಹೇಳುವುದು ಕಷ್ಟ ; ಸಾಕಾದಷ್ಟು

[4] ಅದೇ. ಪು.೫೪೫

ನಿದರ್ಶನಗಳಿಲ್ಲ.................ಒಂದು ವೇಳೆ ಅನುಷ್ಟುಪ್ಪನ್ನು ಪ್ರಯೋಗಿಸಿ ನೋಡಿ ಕನ್ನಡ ಭಾಷೆಗೆ ಹೊಂದುವುದಿಲ್ಲವೆಂದು ಬಿಟ್ಟಿರಬಹುದು"[5]—ಎಂಬುದಾಗಿ ನಿರ್ಣಾಯಕ ಮಾತನ್ನು ಆಡಿದ್ದಾರೆ. ಅಂತೆಯೇ, ಕೊನೆಗೆ, "ಈ ವೈದಿಕವೃತ್ತಗಳು ಸಂಸ್ಕೃತದಲ್ಲಿಯೇ ಮುಂದೆ ಬಿಟ್ಟುಹೋದುವು. ಕನ್ನಡ ಕವಿಗಳಿಗೂ ಕಣ್ಮರೆಯಾದವು. ಶ್ಲೋಕವೊಂದು ಸ್ವಲ್ಪ ಆಸೆದೋರಿಸಿ ದಕ್ಕದೆ ಹೋದ ಹಾಗೆ ಕಾಣುತ್ತದೆ. ಮುಂದೆ ಬರುವ ಕವಿಗಳಾದರೂ ಜೀವಕಳೆಯಿಂದ ನಲಿಯುವ ಈ ವೈದಿಕ ಛಂದಸ್ಸಿನ ಕಡೆಗೆ ಕಣ್ಣು ತಿರುಗಿಸಬಹುದಲ್ಲವೆ ?[6]—ಎಂದು ಕನ್ನಡ ಛಂದಸ್ಸಿನ ಮುಂದಿನ ದಾರಿಯ ಬಗ್ಗೆ ಕೈತೋರಿಸಿದ್ದಾರೆ. ಆದರೆ ಹೊಸ ಕವಿಗಳ ಪೈಕಿ ಬೇಂದ್ರೆಯವರನ್ನು ಬಿಟ್ಟರೆ ಬೇರೆ ಯಾರೂ ಈ ಮಾರ್ಗದಲ್ಲಿ ಮುಂದುವರಿಯಲಿಲ್ಲ. ಶ್ಲೋಕವನ್ನು ಮಾತ್ರ ಬಹಳ ವಿರಳವಾಗಿ ಕೆಲವರು ಪ್ರಯೋಗ ಮಾಡಿ ನೋಡಿದರು. ಪ್ರಗಾಥದ ಲಕ್ಷಣದ ಮೂಲ ಸೂತ್ರವನ್ನು ಹೋಲುವಂತಹ ಮೂಲಸೂತ್ರದ, ಅಂತೆಯೇ ಇಂಗ್ಲಿಷಿನ ಓಡ್‌ಗೆ ಸಂವಾದಿಯಾಗಿ ರಚಿಸಿದ, ಕಾವ್ಯರೂಪಕ್ಕೆ ಬಿ. ಎಂ. ಶ್ರೀಯವರು 'ಪ್ರಗಾಥ'ವೆಂದು ಹೆಸರಿಟ್ಟು ಪ್ರಚಾರಕ್ಕೆ ತಂದರು. ಆದರೆ ಒಟ್ಟು ಉತ್ಪನ್ನವನ್ನು ಗಮನಿಸಿದಾಗ ಮಾತ್ರ ಕನ್ನಡ ಛಂದಸ್ಸಿನ ಇತಿಹಾಸದಲ್ಲಿ ವೈದಿಕ ಛಂದಸ್ಸಿನ ಪಾತ್ರ ಬಹಳ ಬಹಳ ಕಡಿಮೆಯೆಂದೇ ಹೇಳಬೇಕಾಗುತ್ತದೆ.

ಲೌಕಿಕ ಛಂದಸ್ಸಿನ ವಿಚಾರದಲ್ಲಿ ಶ್ರೀಯವರು ಹೇಳಿರುವ ಸಾಮಾನ್ಯ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು : ೧. ವೈದಿಕ ಛಂದಸ್ಸಿನಲ್ಲಿದ್ದ ನಾಲ್ಕು ಅಕ್ಷರಗಳ ಗಣಗಳ ಅಳತೆಗೆ ಬದಲಾಗಿ ಲೌಕಿಕ ಛಂದಸ್ಸಿನಲ್ಲಿ ಮೂರು ಅಕ್ಷರಗಳ ಗಣಗಳ ಅಳತೆ ಬಳಕೆಗೆ ಬಂತು. ೨. ಛಂದೋಗ್ರಂಥಗಳಲ್ಲಿ ೧೫೦ ಕ್ಕೂ ಮೀರಿ ವೃತ್ತಗಳನ್ನು ಹೇಳಿದ್ದರೂ ಅವುಗಳಲ್ಲಿ ಉತ್ಪಲಮಾಲೆ-ಚಂಪಕಮಾಲೆ, ಶಾರ್ದೂಲವಿಕ್ರೀಡಿತ-ಮತ್ತೇಭವಿಕ್ರೀಡಿತ, ಸ್ರಗ್ಧರೆ-ಮಹಾಸ್ರಗ್ಧರೆ ಈ ಆರು ವೃತ್ತಗಳು ಮಾತ್ರ ವಿಶೇಷವಾಗಿ ಬಳಕೆಗೆ ಬಂದವು. ಮಾಲಿನಿ, ಪೃಥ್ವಿ, ಶಿಖರಿಣಿ, ಮಂದಾಕ್ರಾಂತ, ಹರಿಣಿ, ಮಲ್ಲಿಕಾಮಾಲೆ, ತರಳ ಮುಂತಾದುವು ವಿರಳವಾಗಿಯೂ ಉಪೇಂದ್ರವಜ್ರ, ಇಂದ್ರವಜ್ರ, ವಂಶಸ್ಥ, ವಸಂತತಿಲಕ ಮುಂತಾದುವು ಬಹಳ ವಿರಳವಾಗಿಯೂ ಬಳಕೆಯಾದವು.

ಈ ಸಂಬಂಧದಲ್ಲಿ ಅವರು ಹೇಳಿರುವ ಮಹತ್ವದ ಸಂಗತಿಗಳು ಇವು : ಮೊದಲನೆಯದು, "ಉತ್ಪಲ, ಶಾರ್ದೂಲ, ಸ್ರಗ್ಧರೆ—ಇವುಗಳ ಮೊದಲಿನ ಗುರುವಿಗೆ ಎರಡು

---

5 ಅದೇ, ಪು. ೫೩೭

6 ಅದೇ, ಪು. ೫೩೯

ಲಘುಗಳನ್ನು ಇಟ್ಟು ಚಂಪಕ, ಮತ್ತೇಭ, ಮಹಾಸ್ರಗ್ಧರೆಗಳನ್ನು ಕನ್ನಡಕವಿಗಳು ಮಾಡಿಕೊಂಡಂತೆ ಕಾಣುವುದು"[7]—ಎಂಬ ಅವರ ಹೇಳಿಕೆ. ಇದು ಬಹಳ ಬೆಲೆಯುಳ್ಳದು. ವೃತ್ತಗಳ ಗುಂಪಿಗೆ ಕನ್ನಡ ಕವಿಗಳ ಕೊಡುಗೆ ಏನಿದ್ದಿರಬಹುದೆಂಬುದರ ಬಗ್ಗೆ ಕೈತೋರಿಸುವುದರ ಜೊತೆಗೇ ಇದು, ವೃತ್ತಗಳ ಬೆಳವಣಿಗೆಯ ಹಾದಿಯತ್ತ ಬೆಳಕನ್ನೂ ಚೆಲ್ಲುತ್ತದೆ. ಎರಡನೆಯದು, ವೃತ್ತಗಳನ್ನು ಕನ್ನಡಕ್ಕೆ ತರುವಾಗ ಆದ ಮಾರ್ಪಾಡುಗಳನ್ನು ಕುರಿತದ್ದು. ಆಗ "ಪ್ರಾಸ ಸೇರಿತು; ಯತಿ ಮಾರಿತು; ಪಾದಗಳ ಕೊನೆಯಲ್ಲಿ ನಿಲವು ಸಾಧಾರಣವಾಗಿ ಇಲ್ಲ; ಅಲ್ಲಿ ದೀರ್ಘವಾಗಬಹುದಾದ ಹ್ರಸ್ವ ಬರಲು ಎಡೆಯಿಲ್ಲ ಮುಂದಕ್ಕೋಡುವುದರಿಂದ. ಎಲ್ಲಕ್ಕಿಂತ ಹೆಚ್ಚಾಗಿ ವೃತ್ತದ ಧಾಟಿ, ಘೋಷಗಳನ್ನು ಪಾಲಿಸುವುದಕ್ಕಾಗಿ ಹೆಚ್ಚು ಹೆಚ್ಚಾಗಿ ಸಂಸ್ಕೃತದ ದೀರ್ಘಸಮಾಸಗಳನ್ನು ಹೆಣೆಯುವಂತಾಯಿತು; ಕನ್ನಡ ನುಡಿಗಳು ತಮ್ಮ ಸ್ವರಗಳೊಡನೆ ಎದ್ದು ನಿಂತು ಕಾಣದಂತಾಯಿತು"[8]—ಎಂಬ ವಿಚಾರಗಳನ್ನು ತಿಳಿಸಿ, ವೃತ್ತಗಳ ರಚನೆಯಲ್ಲಿ ಸಂಸ್ಕೃತದ ಮಾರ್ಗ ಪ್ರಬಲಿಸಿತೆಂಬ ಅಂಶವನ್ನೂ, ವಿರಳವಾಗಿ ದೇಶಿ ಮಿಂಚುವುದನ್ನೂ ಉದಾಹರಣೆಗಳ ಮೂಲಕ ಸೂಚಿಸಿದ್ದಾರೆ. ಕೆಲವು ಅಕ್ಷರವೃತ್ತಗಳಲ್ಲಿ ಕಂಡುಬರುವ ಮಾತ್ರಾಲಯದ ಲಕ್ಷಣಗಳನ್ನು ಗುರುತಿಸಿರುವುದು ಮೂರನೆಯ, ಮಹತ್ವದ ಸಂಗತಿ. ಮಲ್ಲಿಕಾಮಾಲೆ, ತರಳಗಳಲ್ಲಿ ೩.೪ ಲಯ, ಕ್ರೌಂಚದಲ್ಲಿ ಚತುರ್ಮಾತ್ರಾಲಯ, ಶಂಭುನಟನದಲ್ಲಿ ಪಂಚಮಾತ್ರಾಲಯ ಕಂಡುಬರುವುದನ್ನು ಉದಾಹರಣೆಗಳ ಮೂಲಕ ನಿರೂಪಿಸಿದ್ದಾರೆ. ನಾಲ್ಕನೆಯದು, "ಮೂರಕ್ಷರದ ಯಗಣ ಮುಂತಾದ ಎಂಟು ಗಣಗಳಿಂದ ವೃತ್ತಗಳ ಪಾದಗಳನ್ನು ವಿಭಾಗಮಾಡಿ ಲಕ್ಷಣ ಹೇಳುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ವೃತ್ತಗಳ ನಿಜಸ್ವರೂಪವಾಗಲಿ, ರಚನೆಯ ರಹಸ್ಯವಾಗಲಿ ಈ ಪದ್ಧತಿಯಿಂದ ತಿಳಿಯುವುದಿಲ್ಲ"[9]—ಎಂಬ ಅವರ ಹೇಳಿಕೆ. ವೃತ್ತಗಳ ಲಕ್ಷಣವನ್ನು ಅವುಗಳ ನಡೆಯ ಮೂಲಕ ವಿವರಿಸಬೇಕೆಂಬ ಹೊಸ ದೃಷ್ಟಿಕೋನವನ್ನು ಇಲ್ಲಿ ಕಾಣಬಹುದು.

ಇನ್ನು ಕಂದದ ವಿಚಾರ. "ಸಂಸ್ಕೃತದ ಆರ್ಯಾ ಅಥವಾ ಗಾಥಾ ವೃತ್ತವು ಪ್ರಾಕೃತದಲ್ಲಿ ಆರ್ಯಾಗೀತ ಅಥವಾ ಸ್ಕಂಧಕವೆಂಬ ೬೪ ಮಾತ್ರೆಯ ವೃತ್ತವಾಗಿ ಕನ್ನಡದಲ್ಲಿ ಮತ್ತು ತೆಲುಗಿನಲ್ಲಿ ವಿಶೇಷವಾಗಿ ಕಂದ ಎಂಬ ಹೆಸರಿನಲ್ಲಿ ಪ್ರಚಾರದಲ್ಲಿದೆ"[10]—

---

7 ಅದೇ, ಪು, ೫೩೯.

8 ಅದೇ, ಪು. ೫೪೦

9 10 ಅದೇ, ಪು. ೫೪೧.

ಎಂಬುದಾಗಿ ಅವರು ಅದರ ಜೀವನ ವೃತ್ತಾಂತವನ್ನು ನಿರೂಪಿಸಿದ್ದಾರೆ. ಮುಂದುವರಿದು, "ಚಂಪೂಕಾವ್ಯವೆಂದರೆ ಮುಕ್ಕಾಲುಪಾಲು ಕಂದ, ಕಾಲುಪಾಲು 'ಆರು ವೃತ್ತಗಳು'"[11] ಎಂಬ ಹೇಳಿಕೆಯನ್ನು ಕೂಡ ನೀಡಿದ್ದಾರೆ. ಆದರೆ ಈ ಹೇಳಿಕೆಯನ್ನು ಲಾಕ್ಷಣಿಕವಾಗಿ ಮಾತ್ರ ತೆಗೆದುಕೊಳ್ಳಬೇಕು ; ಕಂದದ ಬಳಕೆ ಹೆಚ್ಚು ಎಂಬುದನ್ನಷ್ಟೇ ಇದು ಸೂಚಿಸುತ್ತದೆ ಎಂಬುದನ್ನು ಮರೆಯಬಾರದು. ಏಕೆಂದರೆ ಶ್ರೀಯವರೇ ನೀಡುವ ಅಂಕಿಅಂಶಗಳಿಂದ, 'ಪಂಪಭಾರತ'ದ ಮೂರು ಆಶ್ವಾಸಗಳ ೩೩೩ ಪದ್ಯಗಳ ಪೈಕಿ ೧೫೬ ಮಾತ್ರ ಕಂದಗಳಾಗಿರುವುದಾಗಿ ತಿಳಿಯುತ್ತದೆ. ಕಂದದ ಬಳಕೆಯ ಪ್ರಮಾಣ ಅರ್ಧಕ್ಕಿಂತ ಸ್ವಲ್ಪ ಮಾತ್ರ ಹೆಚ್ಚು ಎಂಬುದನ್ನು ಇದು ಸ್ಪಷ್ಟಪಡಿಸುತ್ತದೆ.

ಅಲ್ಲಿಂದ ಮುಂದಕ್ಕೆ ಕಂದದ ಸಂಬಂಧದಲ್ಲಿ ಅವರು ನಿರೂಪಿಸಿರುವ ಅಂಶಗಳು ಇವು : ೧. 'ಕಾದಂಬರಿ'ಯಿಂದ ಆರ್ಯೆಗೆ ಉದಾಹರಣೆ ಕೊಟ್ಟು, ಅದರ ಭಾಷಾಂತರದಿಂದ ಕಂದಕ್ಕೆ ಉದಾಹರಣೆ ಕೊಟ್ಟು ಆರ್ಯೆ-ಕಂದಗಳಿಗಿರುವ ಸಂಬಂಧವನ್ನು ಸ್ಪಷ್ಟಪಡಿಸಿದ್ದಾರೆ. ೨: ಶುದ್ಧ ಹೊಸಗನ್ನಡದಲ್ಲಿ (ಶ್ರೀಯವರ ಪ್ರಕಾರ ಇದರಲ್ಲಿ ನಡುಗನ್ನಡವೂ ಸೇರಿರುತ್ತದೆ ; ಈ ಮಾತು ಪ್ರಮುಖವಾಗಿ ನಡುಗನ್ನಡವನ್ನೇ ಕುರಿತದ್ದು) ಕಂದವನ್ನು ಬರೆಯುವುದು ಅಷ್ಟು ಸುಲಭವಲ್ಲ ಎಂಬ ಅಂಶವನ್ನು ಸೂಚಿಸಿದ್ದಾರೆ. ೩. ಕಂದಗಳ ರಚನೆಯಲ್ಲಿ, "ಕೆಲವರು ನಿಯಮನಿರ್ಬಂಧಗಳನ್ನು ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟಿದ್ದಾರೆ. ಕೆಲವು ಕಡೆ, ಗಣವಿಭಾಗಕ್ಕೆ ಲಕ್ಷ್ಯಕೊಟ್ಟಿಲ್ಲ. ಎರಡನೆಯ ಪದದ ಕೊನೆಯ ಗುರುವಿನ ಸ್ಥಾನದಲ್ಲಿ ಎರಡು ಹ್ರಸ್ವಗಳನ್ನು ಹಾಕಿರುತ್ತಾರೆ"[12]—ಎಂಬ ಅಂಶಗಳನ್ನು ಉದಾಹರಣೆಗಳೊಂದಿಗೆ ಸೂಚಿಸಿದ್ದಾರೆ. ೪. ಮಾರ್ಗ, ದೇಸಿ ಮತ್ತು ಅವೆರಡರ ಮಿಶ್ರಣ—ಈ ಮೂರೂ ಪ್ರಕಾರಗಳ ಶೈಲಿಯ ಕಂದಗಳಿಗೆ ಉದಾಹರಣೆಗಳನ್ನು ಕೊಟ್ಟಿದ್ದಾರೆ.

ಸಂಸ್ಕೃತ ಛಂದಸ್ಸಿಗೆ ಸಂಬಂಧಿಸಿದ ವಿಭಾಗದ ಕೊನೆಗೆ ಬಂದಿರುವ "ವೃತ್ತಕಂದಗಳ ಪ್ರಯೋಗದ ಮೇಲೆ ಭಾಷಾವ್ಯತ್ಯಾಸದ ಪರಿಣಾಮ" ಎಂಬ ವಿಭಾಗವು ಮೌಲಿಕವಾದುದಾಗಿದೆ. ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಕಂಡುಬರುವ ಒಂದು ಪ್ರಮುಖ ಪರಿವರ್ತನೆಯ ಬಗ್ಗೆ ಇದರಲ್ಲಿ ಅವರು ಮೊದಲಬಾರಿಗೆ ವಿಚಾರ ಮಾಡಿದ್ದಾರೆ. "ಹಳಗನ್ನಡ ಹೊಸಗನ್ನಡಕ್ಕೆ ತಿರುಗಿ ಹಳಗನ್ನಡ ಪ್ರತ್ಯಯಗಳೂ ಶಬ್ದರೂಪಗಳೂ ಹೊಸಗನ್ನಡದ ರೂಪಾಂತರಗಳನ್ನು ಪಡೆದ ಮೇಲೆ, ಹಳಗನ್ನಡದ ಮಿಶ್ರಣವಿಲ್ಲದೆ ವೃತ್ತಕಂದಗಳನ್ನು ರಚಿಸುವುದು ಕಷ್ಟವಾಗುತ್ತ ಬಂತು. ಮತ್ತು ಈ ಸಂಸ್ಕೃತಛಂದಸ್ಸು

---

11–12 ಅದೇ, ಪು. ೫೪೧

ಕನ್ನಡಕ್ಕೆ ಸಹಜವಾದ ಛಂದಸ್ಸಲ್ಲವೆಂಬುದೂ ಸ್ಪಷ್ಟವಾಗುತ್ತ ಬಂತು"[13]—ಎಂಬ ಪ್ರಮುಖ ಅಂಶವನ್ನು ಸೂಚಿಸಿ, ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಕವಿಗಳು ಕನ್ನಡಛಂದಸ್ಸುಗಳಿಗೆ ಪ್ರಾಶಸ್ತ್ಯ ತಂದುಕೊಟ್ಟರೆಂಬ ವಿಚಾರವನ್ನು ಅಲ್ಲಿ ನಿರೂಪಿಸಿದ್ದಾರೆ. (ಇಲ್ಲೆಲ್ಲ 'ಹೊಸಗನ್ನಡ' ಎಂಬುದನ್ನು ಶ್ರೀಯವರು 'ನಡುಗನ್ನಡ' ಎಂಬ ಅರ್ಥದಲ್ಲಿ ನಿರೂಪಿಸಿದ್ದಾರೆಂಬುದನ್ನು ಮರೆಯಬಾರದು.)

ಸಂಸ್ಕೃತ ಛಂದಸ್ಸಿನ ವಿಭಾಗಕ್ಕೆ ಹೋಲಿಸಿದಾಗ, ಈ ಲೇಖನದಲ್ಲಿ, ಕನ್ನಡ ಛಂದಸ್ಸಿನ ಭಾಗಕ್ಕೆ ಶ್ರೀಯವರು ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಕನ್ನಡ ಛಂದಸ್ಸನ್ನು ಹೊಸ ದೃಷ್ಟಿಯಿಂದ ನೋಡಿ, ಅದರ ಬಗ್ಗೆ ಇಲ್ಲಿ ಹೆಚ್ಚಿನ ಮಾಹಿತಿ ನೀಡಿದ್ದಾರೆ. ಈ ದಿಶೆಯಲ್ಲಿ ಇವರದೇ ಮೊದಲ ಪ್ರಯತ್ನ. ಕನ್ನಡ ಛಂದಸ್ಸನ್ನು ಕುರಿತ ನಮ್ಮ ಅಧ್ಯಯನವೆಲ್ಲ ಇದನ್ನು ಆಧರಿಸಿಯೇ ಸಾಗುತ್ತಿದೆಯೆಂದರೆ ಇದರ ಬೆಲೆಯೆಷ್ಟೆಂಬುದು ಅರಿವಾಗದಿರದು.

ಈ ವಿಭಾಗದಲ್ಲಿ ಮೊದಲು, ನಾಗವರ್ಮನ ಛಂದೋಂಬುಧಿಯ ವಸ್ತುವಿನ್ಯಾಸದ ಬಗ್ಗೆ ಹೇಳಿ, ಅಲ್ಲಿ ಕನ್ನಡ ಛಂದಸ್ಸಿಗೆ ಸಿಕ್ಕಿರುವ ಜಾಗ ಅಲ್ಪವೆಂಬುದನ್ನು ಸೂಚಿಸಿ, ಅದರ ಬಗ್ಗೆ ಹೆಚ್ಚಿನ ಅಧ್ಯಯನಕ್ಕೆ ಅವಕಾಶವಿದೆಯೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಕಾವ್ಯಗಳಲ್ಲಿ ಹೆಚ್ಚಿನ ಸ್ಥಾನ ದೊರೆಯದೆ ಇದ್ದ ಕಾಲದಲ್ಲೂ ಕನ್ನಡ ಛಂದಸ್ಸು ಜನಪದ ಸಾಹಿತ್ಯದಲ್ಲಿ ವಿಶೇಷವಾಗಿ ಪ್ರಚಾರದಲ್ಲಿತ್ತು ; ಇದೇ ನಿಜವಾದ ಕನ್ನಡ ಭಾಷೆಯ, ಕನ್ನಡ ಜನರ ಛಂದಸ್ಸು ; "ತೆಲುಗು ತಮಿಳುಗಳೊಡನೆ ಹೋಲಿಸಿ ನೋಡಿದರೆ ಇದೇ ಮುಂದೆ ವೀರಶೈವ ಕವಿಗಳು ಮುಂದಕ್ಕೆ ತಂದ ಛಂದಸ್ಸುಗಳ 'ತಾಯಿ' ಎಂದೂ ಚರಿತ್ರೆಯ ದೃಷ್ಟಿಯಿಂದ ನೋಡತಕ್ಕವರಿಗೆ ಸ್ಪಷ್ಟವಾಗದಿರಲಾರದು"[14]—ಎಂಬ ಅವರ ಮಾತುಗಳು ಛಂದಸ್ಸಿನ ಅಧ್ಯಯನದ ಹೊಸ ಮಾರ್ಗವನ್ನು ತೆರೆದು, ಅತ್ತ ನಡೆಯಲು ದಾರಿ ತೋರಿಸುತ್ತವೆ. ಛಂದಸ್ಸಿನ ತೌಲನಿಕ ಅಧ್ಯಯನದ ಅವಶ್ಯಕತೆಯನ್ನು ಇಲ್ಲಿ ಎತ್ತಿ ಹಿಡಿಯಲಾಗಿದೆ. ಕನ್ನಡ, ತಮಿಳು, ತೆಲುಗುಗಳ ಪೈಕಿ ನಿಜವಾದ ದ್ರಾವಿಡತನ ಉಳಿದಿರುವುದು ತಮಿಳಿನಲ್ಲಿಯೇ ; ಕನ್ನಡ ತೆಲುಗುಗಳು ಸಂಸ್ಕೃತಕ್ಕೆ ಶರಣು ಹೋಗಿ ಸ್ವದೇಶೀಯತೆಯನ್ನು ಹಿಂದಕ್ಕೆ ತಳ್ಳಿವೆ ಎಂಬ ಅಂಶವನ್ನು ಸೂಚಿಸಲಾಗಿದೆ. "ಮಲೆಯಾಳದಲ್ಲಿಯೂ ಕೊಡಗು ತುಳು ಮುಂತಾದ, ಸಾಹಿತ್ಯಕ್ಕೇರದ, ಭಾಷೆಗಳ ಹಾಡುಗಳಲ್ಲಿಯೂ, ದ್ರಾವಿಡ ದೇಶಗಳ ಎಲ್ಲಾ ಜನಪದ ಸಾಹಿತ್ಯ

---

13 ಅದೇ, ಪು. ೫೪೪.
14 ಅದೇ, ಪು. ೫೪೫

ಗಳಲ್ಲಿಯೂ, ಹೆಂಗಸರ ಹಾಡುಗಳಲ್ಲಿಯೂ, ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು"[15] —ಎಂಬ ಮಾತಂತೂ ಎಲ್ಲ ದ್ರಾವಿಡಭಾಷೆಗಳ ಛಂದಸ್ಸುಗಳನ್ನೂ ತೌಲನಿಕವಾಗಿ ಅಧ್ಯಯನಮಾಡಬೇಕೆಂಬ ಅಂಶವನ್ನು ಒತ್ತಿ ನುಡಿಯುತ್ತವೆ.

"ಕನ್ನಡ ಪದ್ಯಗಳು—ಇವುಗಳ ದ್ರಾವಿಡ ಮೂಲ" ಎಂಬ ವಿಭಾಗದಲ್ಲಿ ಆರಂಭ ಕಾಲದಿಂದ ೨೦ನೆಯ ಶತಮಾನದವರೆಗಿನ ಕನ್ನಡ ಛಂದಸ್ಸಿನ ಸಮಗ್ರ ಇತಿಹಾಸದ ಬಹುಸಂಕ್ಷಿಪ್ತ ನಿರೂಪಣೆಯಿದೆ. ಹನ್ನೆರಡನೆಯ ಶತಮಾನದವರೆಗೆ ವಿರಳವಾಗಿ ಬಳಕೆಯಾಗುತ್ತಿದ್ದ ಕನ್ನಡ ಬಂಧಗಳು ಹನ್ನೆರಡನೆಯ ಶತಮಾನದಿಂದೀಚೆಗೆ ಬಹು ಮುಖವಾಗಿ ಬೆಳವಣಿಗೆಯನ್ನು ಹೊಂದಿ ವಿಶೇಷ ಪ್ರಚಾರವನ್ನು ಪಡೆದದ್ದು, ಹತ್ತೊಂಬತ್ತನೆಯ ಶತಮಾನದಿಂದ ಈಚೆಗೆ ಹಳೆಯದರ ತಳಹದಿಯ ಮೇಲೆ ಹೊಸ ಬಂಧಗಳು ರೂಪಿತವಾಗುತ್ತಿರುವುದು—ಇವನ್ನೂ ಅಲ್ಲಿ ಹೇಳಿದ್ದಾರೆ.

ಮುಂದೆ ಕನ್ನಡ ಛಂದೋಬಂಧಗಳ ವಿವರಣೆಯಿದೆ. ಮೊದಲಿಗೆ ದ್ರಾವಿಡಗಣಗಳ ಹಿನ್ನೆಲೆಯಲ್ಲಿ ಕನ್ನಡಗಣಗಳ ಲಕ್ಷಣ ವಿಶ್ಲೇಷಣೆ ಬರುತ್ತದೆ. ನಾಗವರ್ಮ ಹೇಳುವ ತ್ರಿಮೂರ್ತಿಗಣಗಳಿಗೆ ತೆಲುಗಿನಲ್ಲಿ ಸೂರ್ಯ, ಚಂದ್ರ, ಇಂದ್ರಗಣಗಳೆಂದೂ ತಮಿಳಿನಲ್ಲಿ ಈರಶ್ಶೈಶೀರ್, ಮೂವಶ್ಶೈಶೀರ್, ನಾಲಶ್ಶೈಶೀರ್ ಎಂದೂ ಹೆಸರಿಸುವ ವಿಚಾರವನ್ನು ತಿಳಿಸಿ, ಈ ಗಣಗಳ ಮೂಲ ಘಟಕಗಳನ್ನು, ತಮಿಳಿನ 'ಅಶೈ' ಎಂಬ ಹೆಸರಿನ ಆಧಾರದ ಮೇಲೆ 'ಅಂಶ'ಗಳೆಂದು ಕರೆಯಲಾಗಿದೆ. ಈ ಗಣಗಳನ್ನು ಕುರಿತು "ಇವನ್ನು ಅಕ್ಷರಗಣ ಎನ್ನುವುದಕ್ಕಿಂತಲೂ ಅಂಶಗಣ ಎಂದು ಹೇಳುವುದು ಉತ್ತಮ. ಸಂಸ್ಕೃತದ ಅಕ್ಷರಗಣಕ್ಕೂ ಇವಕ್ಕೂ ಭ್ರಮೆಯಾಗಬಹುದಲ್ಲದೆ ಅಕ್ಷರವೆಂದರೆ ಒಂದೇ ಅಕ್ಷರ (ವರ್ಣ) ಎಂಬ ಭ್ರಾಂತಿಯೂ ಹುಟ್ಟಬಹುದು[16]—ಎಂಬುದಾಗಿ ಹೇಳಲಾಗಿದೆ. ಹೀಗೆ ಇವನ್ನು ಅಂಶ-ಅಂಶಗಣ ಎಂದು ಮೊದಲು ಕರೆದವರು ಶ್ರೀಯವರು. ಮುಂದೆ ಈ ಹೆಸರುಗಳೇ ಪ್ರಚಾರಕ್ಕೆ ಬಂದವು.

ಈ ಅಂಶಗಣಗಳ ಸ್ವರೂಪವನ್ನು ಕುರಿತಂತೆ ಶ್ರೀಯವರು ಕೊಡುವ ವಿವರಣೆ ಹೀಗಿದೆ: "ಮೂಲಾಂಶದ ಮೇಲೇರಿದ ಅಂಶಗಳಿಗೆ ಬದಲಾಗಿ ಎರಡು ಲಘುಗಳ ಪ್ರಯೋಗ ಇಲ್ಲ. ಅಂಶಗಣಗಳು ಸ್ವಚ್ಛವಾಗಿ ಹಾಗೇ ಇರುವವರೆಗೂ ಈ ನಿಯಮವಿತ್ತು. ಆದರೆ ಕ್ರಮೇಣ, ಮೊದಲನೆಯ ಸ್ಥಾನದಂತೆ, ಮಿಕ್ಕ ಸ್ಥಾನಗಳಲ್ಲಿಯೂ

15 ಅದೇ, ಪು. ೫೪೫
16 ಅದೇ, ಪು. ೫೪೬ ಅಡಿಟಿಪ್ಪಣಿ.





ಈ ಬದಲಾವಣೆ ಹಬ್ಬಿಕೊಂಡು ಅಂಶಗಣವಾಗಿದ್ದದ್ದು ಮಾತ್ರಾಗಣವಾಗಿ ಪರಿಣಮಿಸಿತು. ಆಗ ಬ್ರಹ್ಮ, ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಣಗಳು ಹೋಗಿ ೩, ೪, ೫ ಮಾತ್ರೆಗಳುಳ್ಳ ಮೂರು ಗಣಗಳು ಉಳಿದುವು"[17]—ಎಂಬುದಾಗಿ. ಮುಂದೆ ಈ ವಿಭಾಗದ ವಿಚಾರಗಳನ್ನು ಸಂಗ್ರಹಿಸುವಲ್ಲಿ ಕೂಡ, "ಮೊದಲನೆಯ ಅಂಶ ಒಂದು ಗುರು ಅಥವಾ ಎರಡು ಲಘುವಾಗಿರುಬಹುದು, ಮಿಕ್ಕ ಅಂಶಗಳು ಒಂದು ಗುರು ಅಥವಾ ಒಂದು ಲಘುವಾಗಿರಬೇಕು ಎಂಬ ತತ್ವವನ್ನೂ, ಅಂಶಗಣಗಳು ಕಾಲಕ್ರಮದಲ್ಲಿ ಮಾತ್ರಾಗಣಗಳಾದುವೆಂಬುದನ್ನೂ, ಮೊದಲ ಅಂಶಕ್ಕೆ ಮಾತ್ರ ಎರಡು ಲಘುವಿನ ಸಮಾನತೆ ಇದ್ದದ್ದು ಸರ್ವತ್ರ ಹರಡಿ ಈ ಬದಲಾವಣೆಗೆ ಅವಕಾಶ ಕೊಟ್ಟಿರಬಹುದೆಂಬುದನ್ನೂ ಗಮನದಲ್ಲಿಟ್ಟರೆ ಸಾಕು"[18]—ಎಂದು ಹೇಳಿದ್ದಾರೆ. ಅಂಶಗಣಗಳು ಕಾಲಕ್ರಮದಲ್ಲಿ ಮಾತ್ರಾಗಣಗಳಾಗಿ ಪರಿವರ್ತನೆ ಹೊಂದಿದವೆಂಬ ಒಂದು ಗಮನಾರ್ಹ ಅಂಶವನ್ನು ಇಲ್ಲಿ ಮೊದಲಬಾರಿಗೆ ತಿಳಿಸಿ ಅದಕ್ಕೆ ಕಾರಣವನ್ನು ಕೂಡ ಕೊಡಲಾಗಿದೆ. ಇಲ್ಲಿ, ಮೂಲಾಂಶದ ಮೇಲೇರಿದ ಅಂಶಗಳೆಂದರೆ, ಮೊದಲನೆಯ ಅಂಶದಿಂದ ಮುಂದಿನ—ಎಂದರೆ ಎರಡು, ಮೂರು, ನಾಲ್ಕನೆಯ—ಅಂಶಗಳು ಎಂದು ಅರ್ಥ. ಈ ಸಂದರ್ಭದಲ್ಲಿ ಒಂದು ಅಂಶ ವಿಚಾರಣೀಯವಾಗಿದೆ: ಎರಡು, ಮೂರು, ನಾಲ್ಕನೆಯ ಅಂಶಗಳಲ್ಲಿ ಕೂಡ ಒಂದು ಗುರುವಿಗೆ ಬದಲು ಎರಡು ಲಘು ಬಂತು ; ಅನಂತರ ಅಂಶಗಣವು ಮಾತ್ರಾಗಣವಾಗಿ ಪರಿಣಮಿಸಿತು ಎಂಬ ವಿಚಾರ ಸರಿಯೇ ?—ಎಂಬುದು. ಶ್ರೀಯವರು ಕೊಟ್ಟಿರುವ ಈ ಕಾರಣ ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಅಂಶಗಣಗಳಲ್ಲಿ ಬರುವ ಸಹಜ ಎಳೆತವು ಕಡಮೆಯಾಗಿ, ಅಕ್ಷರಗಳ ಕಾಲಮೌಲ್ಯಕ್ಕೆ ಅನುಗುಣವಾದ ಉಚ್ಚಾರಣೆ ಒಂದು, ಗಣಗಳ ಕಾಲ ಮೌಲ್ಯದಲ್ಲಿ ನಿಯತತೆ ತೋರಿದಾಗ ಸಹಜವಾಗಿಯೇ ಅಂಶಗಣಗಳು ಮಾತ್ರಾಗಣಗಳಂತೆ ತೋರಿಬಂದು ಅವುಗಳಲ್ಲಿ ಮಾತ್ರಾಬಂಧಗಳ ನಡೆ ಕಾಣಿಸಿಕೊಳ್ಳುತ್ತದೆ. ಬಂಧವು ಒಮ್ಮೆ ಹೀಗೆ ಅಂಶದ ನಡೆಯಿಂದ ಮಾತ್ರೆಯ ನಡೆಗೆ ಹೊರಳಿತೆಂದರೆ, ಅನಂತರ ಅದರಲ್ಲಿ ಅಂಶಗಳ ಗಣನೆಯಾಗಲಿ, ಅಂಶಗಳ ಸ್ಥಾನದ ಗಣನೆಯಾಗಲಿ ಉಳಿಯುವುದಿಲ್ಲ ; ಗಣದ ಒಟ್ಟು ಕಾಲ ಮೌಲ್ಯ ಮಾತ್ರ ಉಳಿಯುತ್ತದೆ. ಆದ್ದರಿಂದ, ಎರಡು, ಮೂರು, ನಾಲ್ಕನೆಯ ಅಂಶಗಳ ಗುರುಗಳಿಗೆ ಬದಲಾಗಿ ಎರಡು ಲಘು ಬರಲು ಪ್ರಾರಂಭಿಸಿದ್ದರಿಂದ ಅಂಶಗಣವು ಮಾತ್ರಾಗಣವಾಗಿ ಪರಿಣಮಿಸಿತೆಂದು ಹೇಳುವುದಕ್ಕಿಂತ, ಗಣದ ಕಾಲಮೌಲ್ಯಕ್ಕೆ ಹೆಚ್ಚು ಪ್ರಾಶಸ್ತ್ಯ ಸಿಕ್ಕಿದಾಗ ಅಂಶಗಣವು ಮಾತ್ರಾಗಣವಾಯಿತೆಂದು ಹೇಳುವುದು

17–18 ಅದೇ, ಪು. ೫೪೭

ಹೆಚ್ಚು ಉಚಿತವಾಗಿದೆ. ಆದರೆ ಇಲ್ಲಿ ಒಂದು ಅಂಶವನ್ನು ಗಮನದಲ್ಲಿಟ್ಟಿರಬೇಕು : ಈ ಮಾತು, ಅಂಶಬಂಧಗಳಿಂದ ಹುಟ್ಟಿದ ಮಾತ್ರಾಬಂಧಗಳಿಗೆ ಮಾತ್ರ ಅನ್ವಯವಾಗುತ್ತದೆಯೇ ಹೊರತು ಎಲ್ಲ ಮಾತ್ರಾಬಂಧಗಳಿಗೂ ಅಲ್ಲ. ಉಳಿದವಕ್ಕೆ ಅಂತಹ ಸಂಬಂಧವೇ ಇಲ್ಲ.

ಮುಂದೆ, ರುದ್ರಗಣದ ವಿಭಜನೆಯ ವಿಚಾರದಲ್ಲಿ ಶ್ರೀಯವರು ಹೇಳಿರುವ ಮಾತುಗಳು ಕೂಡ ಗಮನಾರ್ಹವಾಗಿವೆ. "ರುದ್ರಗಣ ಬ್ರಹ್ಮ + ವಿಷ್ಣುವಾಗಿ (೩+೪) ಒಡೆದು ನಿಜಸ್ವರೂಪದಲ್ಲಿ ಕಣ್ಮರೆಯಾಯಿತು ; ಪಾದಗಳ ಕೊನೆಯಲ್ಲಿ ವಿಷ್ಣು + ಗುರು ಆಯಿತು"[19]—ಎಂದಿದ್ದಾರೆ. ಪಾದಾಂತ್ಯದ ರುದ್ರವು ವಿಷ್ಣು + ಗುರು ಆಗುವುದು ಸಹಜ ಮತ್ತು ಒಂದು ಪ್ರಧಾನ ಲಕ್ಷಣ ಕೂಡ. ಆದರೆ ಪಾದಮಧ್ಯದ ರುದ್ರವು ಮಾತ್ರ ಬ್ರಹ್ಮ+ಬ್ರಹ್ಮವಾಗಿ ಒಡೆಯುವುದೇ ಹೆಚ್ಚು ; ಬ್ರಹ್ಮ+ವಿಷ್ಣು ವಾಗುವುದು ಅಷ್ಟಾಗಿ ಕಂಡುಬರುವುದಿಲ್ಲ.

ಮಾತ್ರಾಗಣಗಳ ಸಂಬಂಧದಲ್ಲಿ, "ಬ್ರಹ್ಮ, ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ ೩, ೪, ೫ ಮಾತ್ರೆಗಳುಳ್ಳ ಮೂರು ಗಣಗಳು ಉಳಿದುವು : ಇವಕ್ಕೆ ಉತ್ಸಾಹಗಣ, ಮಂದಾನಿಲಗಣ, ಲಲಿತಗಣ ಎಂದು ಆಯಾ ರಗಳೆಗಳ ಮೇಲೆ ಹೆಸರು ಕಟ್ಟಬಹುದು"[20]—ಎಂದಿದ್ದಾರೆ. (ಇಲ್ಲಿ ಕೂಡ ಈ ಮಾತು, ಅಂಶಬಂಧಗಳಿಂದ ಹುಟ್ಟಿದ ಮಾತ್ರಾಬಂಧಗಳಿಗೆ ಮಾತ್ರ ಅನ್ವಯ ವಾಗುತ್ತದೆಯೆಂಬುದನ್ನು ನೆನಪಿನಲ್ಲಿಟ್ಟಿರಬೇಕು.) ಮಾತ್ರಾಗಣಗಳಿಗೆ ಹೆಸರು ಕೊಟ್ಟಿರುವುದು ಶ್ರೀಯವರ ಕೊಡುಗೆಗಳಲ್ಲೊಂದು. ಇವುಗಳ ಆಧಾರದ ಮೇಲೆ ಮುಂದೆ ಉತ್ಸಾಹಲಯ, ಮಂದಾನಿಲಲಯ ಮತ್ತು ಲಲಿತಲಯ ಎಂಬ ಹೆಸರುಗಳು ಪ್ರಚಾರಕ್ಕೆ ಬಂದುದನ್ನು ತಿಳಿದಿದ್ದೇವೆ. ಬಿ.ಎಂ.ಶ್ರೀಯವರ ಕಾಲಕ್ಕೆ, 'ಲಯ'ವೆಂಬ ಮಾತು ಇನ್ನೂ ಪ್ರಚಾರಕ್ಕೆ ಬಂದಿರಲಿಲ್ಲ. ಹಾಗಾಗಿ ಅವರ ಈ ಲೇಖನದಲ್ಲಿ 'ಲಯ'ದ ಹೆಸರು ಎಲ್ಲಿಯೂ ಕಾಣುವುದಿಲ್ಲ.

ಇಲ್ಲಿಂದ ಮುಂದಕ್ಕೆ ಕನ್ನಡ ಬಂಧಗಳನ್ನು ಕುರಿತ ವಿವರಣೆಯಿದೆ. ತ್ರಿಪದಿ, ಏಳೆ, ಯಾಲಪದ ಇವುಗಳ ಬಗ್ಗೆ ಬೇರೆ ಬೇರೆ ಕಡೆ ಹೇಳಲಾಗಿದೆ. ಅವನ್ನು ಒಟ್ಟಿಗೆ ನೋಡುವುದು ಅಧ್ಯಯನದ ದೃಷ್ಟಿಯಿಂದ ಒಳ್ಳೆಯದು. ಏಳೆ, ಯಾಲಪದಗಳ ಇತಿಹಾಸದ ಬಗ್ಗೆ ಇಲ್ಲಿ ಏನೂ ಹೇಳಿಲ್ಲ. ಲಭ್ಯಸಾಮಗ್ರಿಯು ಕಡಿಮೆಯಿದ್ದುದೇ ಈ ಮೌನಕ್ಕೆ ಕಾರಣವೆಂದು ತೋರುತ್ತದೆ. ತ್ರಿಪದಿಯ ಇತಿಹಾಸದ ಬಗ್ಗೆ ಮಾತ್ರ

---

19–20 ಅದೇ, ಪು. ೫೪೭.

ಸಾಕಷ್ಟು ಮಾಹಿತಿ ನೀಡಿದ್ದಾರೆ. ವಿವಿಧ ಉದಾಹರಣೆಗಳನ್ನು ಸಂಗ್ರಹಿಸಿ, ಕಾವ್ಯಗಳಲ್ಲಿ ಶಾಸನಗಳಲ್ಲಿ ಅದು ಪ್ರಯೋಗವಾಗಿರುವುದನ್ನು ತಿಳಿಸಿದ್ದಾರೆ. (ಆದರೆ ಜನಪದ ಗೀತೆಗಳಲ್ಲಿ ತ್ರಿಪದಿಯ ಒಳಕೆ ವಿಪುಲವಾಗಿರುವ ಅಂಶ ಅವರ ಗಮನಕ್ಕೆ ಬಂದಂತಿಲ್ಲ.) ತ್ರಿಪದಿಯನ್ನು ಹಾಡುವ ವಿಧಾನವನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ. ತ್ರಿಪದಿಯು ಮೊದಲು ಅಂಶಗಣಘಟಿತವಾಗಿದ್ದು ಅನಂತರ ಮಾತ್ರಾಗಣಕ್ಕೆ ತಿರುಗಿತೆಂಬ ಅಂಶವನ್ನು ಗುರುತಿಸಿದ್ದಾರೆ. ಸರ್ವಜ್ಞನಿಗಿಂತ ಹಿಂದಿನ ತ್ರಿಪದಿಗಳು ಅಂಶಗಣಗಳಿಂದಾದುವೆಂದೂ ಅನಂತರವವು ಸಾಮಾನ್ಯವಾಗಿ ಮಾತ್ರಾಗಣ ಘಟಿತವಾದುವೆಂದೂ ಹೇಳಿದ್ದಾರೆ. ನಾಗವರ್ಮನ ಲಕ್ಷಣಪದ್ಯದಲ್ಲಿ, ಎರಡನೆಯ ಪಾದದ ಪುನರಾವರ್ತನೆಯ ಪ್ರಸ್ತಾಪವಿಲ್ಲವೆಂಬುದನ್ನೂ ಆರಂಭದ ಕೆಲವು ತ್ರಿಪದಿಗಳಲ್ಲಿ ಕೂಡ ಹಾಗೆಯೇ ಇರುವುದನ್ನೂ ತೋರಿಸಿಕೊಟ್ಟಿದ್ದಾರೆ. ಹಾಡುವಿಕೆಯ ಧಾಟಿಯ ಬಗ್ಗೆ ಬಹುಶಃ ಗಮನ ಹರಿಸದಿದ್ದುದರಿಂದ ಹೀಗಾಗಿರಬಹುದೆಂದು ಇದಕ್ಕೆ ಕಾರಣವನ್ನೂ ಊಹಿಸಿದ್ದಾರೆ.

ಇವೆಲ್ಲಕ್ಕಿಂತ ಮುಖ್ಯವಾದುದೆಂದರೆ ತ್ರಿಪದಿಯ ಮೂಲದ ಒಗ್ಗೆ ಅವರು ಹೇಳಿರುವ ಮಾತು. "ತ್ರಿಪದಿಯ ರಚನೆಯನ್ನು ನೋಡಿದರೆ ಇದು ಮೊದಲು ಎರಡು ಸಾಲಿನ ಹಾಡಾಗಿದ್ದು, ಈಗಿನ ಎರಡನೆಯ ಸಾಲಿನ ೩ನೆಯ ಗಣದಿಂದ ಕೊನೆಗೊಂಡು, ಆಮೇಲೆ ಮತ್ತೊಂದು ಮೂರಂಶದ ಗಣ ಸೇರಿ, ಎರಡನೆಯ ಪೂರ್ವದ ಪಾದ ಮತ್ತೊಮ್ಮೆ ಮುಗುಚಿ ಒಂದು, ಮೂರು ಸಾಲಾಯಿತೆಂದು ಊಹಿಸಬಹುದಾಗಿದೆ"[21]— ಎಂಬುದಾಗಿ ಹೇಳಿದ್ದಾರೆ. ಈ ಎರಡು ಸಾಲಿನ ಬಂಧವೇ ಏಳೆಯೆಂಬುದು ಅವರ ಗಮನಕ್ಕೆ ಬಂದಿಲ್ಲ. ಇದಕ್ಕೆ ಕಾರಣ, ಆಗ ಏಳೆಯ ಲಕ್ಷಣ ಸ್ಪಷ್ಟವಾಗದೆ ಇದ್ದುದು. ಚಿತ್ರ-ಚಿತ್ರಲತಿಕೆಗಳ ಲಕ್ಷಣವನ್ನು ವಿವರಿಸುತ್ತ ಅವುಗಳ ಆದಿಯ ಗಣವು ರುದ್ರಗಣವಾಗಬೇಕೆಂದು ಹೇಳಿದ್ದಾರೆ. ಅದರ ಮೊದಲ ಎರಡು ಸಾಲುಗಳನ್ನು ಏಳೆ ಹೋಲುವುದೆಂದು ಹೇಳಿದ್ದಾರೆ. ಏಳೆಯ ಲಕ್ಷಣ ಅವರಿಗೆ ಸ್ಪಷ್ಟವಾಗಿಲ್ಲ. ಆಗ ಇದ್ದ ಶುದ್ಧ ಪಾಠದ ಕೊರತೆ ಇದಕ್ಕೆ ಪ್ರಧಾನ ಕಾರಣ. ಇದರಿಂದಾಗಿ, "ಏಳುಗಣ (೪+೩) ಒಟ್ಟಿನಲ್ಲಿ ; ಆರನೆಯ ಗಣವಲ್ಲಿ ಬ್ರಹ್ಮ-ಮಿಶ್ರವು ವಿಷ್ಣು ಅಥವಾ ರುದ್ರ ಆಗಬಹುದೆಂಬಂತಿದೆ"[22]—ಎಂಬುದಾಗಿ ಅದರ ಲಕ್ಷಣವನ್ನು ಊಹಿಸಿದ್ದಾರೆ. ಅಂತೆಯೇ ಲಕ್ಷಣ ಪದ್ಯಕ್ಕೆ ಪ್ರಸ್ತಾರ ಹಾಕಿ, ಏಳೆಯು

ರು. ವಿ. ವಿ. ವಿ.
ವಿ. ಬ್ರ. ವಿ.

---

21 ಅದೇ, ಪು. ೫೫೧.

22 ಅದೇ, ಪು. ೫೫೮.

ಎಂಬಂತಿರಬಹುದು ಎಂದೂ ಹೇಳಿದ್ದಾರೆ.[23] ಯಕ್ಷಗಾನ ಕೃತಿಗಳಲ್ಲಿ ಯಾಲಪದವೆಂಬುದೊಂದು ಸಿಕ್ಕುತ್ತದೆಯೆಂದು ಹೇಳಿ ಒಂದು ಉದಾಹರಣೆಯನ್ನು ಕೊಟ್ಟು ಅದನ್ನು ಹೀಗೆ ಪ್ರಸ್ತಾರಿಸಿದ್ದಾರೆ :

ಬಿದಿರ ದೆಬ್ಬೆ | ಹೆಗಲ ಮೇಲೆ |
ಎದಿರ ಬಂದಾ | ನಾರ ನೋಡಿ |
ಚದುರು ಕೊರಚಿಯು | ಕಾಣೆನೆನುತಾ | ಲಿ-ಓ, ಸಿಂಗೀಯೆನು | ತಾ |
ಒದಗಿ ಬಂದಾ | ಬೇಗ ಸಿಂಗಾ | ನು |

ಈ ಸಂಬಂಧದಲ್ಲಿ ಅವರು ಕೊಟ್ಟಿರುವ ವಿವರಣೆ ಹೀಗಿದೆ : "ಇದರಲ್ಲಿ (ಮಾತ್ರಾ ದೃಷ್ಟಿಯೂ ಸೇರಿ) ಆರು ರುದ್ರಗಣಗಳೂ ಕೊನೆಯಲ್ಲಿ ಒಂದು ದೀರ್ಘವೂ ಇದ್ದಂತಿವೆ. ಆಮೇಲೆ ಪಾದ ಹೆಚ್ಚಿ, ಒಂದು ಗಣ ಕೊನೆಯ ಪಾದಕ್ಕೆ ಸೇರಿ, ಕೊನೆಯ ಪಾದ ಪುನರಾವೃತ್ತಿಯಾಗಿದೆ. ಇದು ಏಳೆಯ ರೂಪಾಂತರವಾಗಿದ್ದಲ್ಲಿ ಏಳೆಗೆ ಆರು ರುದ್ರ ಗಣ+೧ ಗುರು ಎಂದು ಲಕ್ಷಣ ಹೇಳಬೇಕಾಗುತ್ತದೆ. ಅಲ್ಲಲ್ಲಿ ರುದ್ರಕ್ಕೆ ವಿಷ್ಣು ಬ್ರಹ್ಮಗಳು ಪರ್ಯಾಯವಾಗಿ ಬರಬಹುದು"[24]—ಎಂಬುದಾಗಿ. ಆದರೆ ಇಲ್ಲಿ ಅಂಶಗಣಗಳ ನಡೆ ಅಷ್ಟಾಗಿ ಕಾಣುವುದಿಲ್ಲ. ಜೊತೆಗೆ, 'ಚದುರು ಕೊರಚಿಯು' ಮತ್ತು 'ಕಾಣೆನೆನುತಾ' ಎಂಬವಂತೂ ರುದ್ರದ ಮೇರೆಯನ್ನು ಮೀರುತ್ತವೆ. ಎರಡು, ಮೂರು ಮತ್ತು ನಾಲ್ಕನೆಯ ಅಂಶಗಳ ಸ್ಥಾನದಲ್ಲಿ ಕೂಡ ಗುರುವಿಗೆ ಬದಲು ಎರಡು ಲಘುಗಳನ್ನಿಡುವ ಪರಿಪಾಠ ಅನಂತರದಲ್ಲಿ ಬಂತು ಎಂಬ ಶ್ರೀಯವರ ಸಿದ್ಧಾಂತವನ್ನು ಹಿಡಿದರೆ ಮಾತ್ರ

೧ ೨ ೩ ೪ ೧ ೨ ೩ ೪

ಇವನ್ನು "ಚದು. ರು. ಕೊರ. ಚಿಯು.", "ಕಾ. ಣೆ. ನೆನು. ತಾ." ಎಂದು ರುದ್ರ ಗಣಗಳಾಗಿ ಪರಿಗಣಿಸಬಹುದು. ಮುಂದೆ ಯಾಲಪದವನ್ನು ಲಕ್ಷಣಿಸುವಾಗ[25] ಕೂಡ ಹೀಗೆಯೇ ಮಾಡಿದ್ದಾರೆ. ಅಲ್ಲಿ ಹೀಗಿದೆ :

"**ಯಾಲಪದ** : ರುದ್ರಗಣಗಳು

ನನ್ನ ಮಾತು ಸಟೆ | ಯೆನ್ನ ಬೇಡಾ |
ನಿನ್ನ ಗರ್ಭಾ | ದಲ್ಲಿ ಕೇಳು |
ಚೆಲ್ವ ರಾಮನು | ಜನಿಸಿ ಬರುವಾ—ನು—

23 ಅದೇ, ಪು. ೫೫೮

24 ಅದೇ, ಪು. ೫೫೭.

25 ಅದೇ, ಪು. ೫೭೪

ಕೌಸಲ್ಯಾ ದೇ—ವೀ—
ಚೆನ್ನಾಗಿ ಕೇ | ಳಮ್ಮ ಕಣೆ | ಯಾ ||
೭.೭ | ೭.೭ | ೭.೭-೨ | ೭-೨ | ೭.೭.೨)”

ಇದರಲ್ಲಿ 'ನನ್ನ ಮಾತು ಸಟೆ', 'ಚೆಲ್ವರಾಮನು', 'ಜನಿಸಿ ಬರುವಾ' ಎಂಬವನ್ನು ಅದೇ
೧ ೨ ೩ ೪ ೧ ೨ ೩ ೪
ರೀತಿ 'ಚೆ. ಲ್ವ. ರಾ.ಮನು', 'ಜನಿ.ಸಿ.ಬರು.ವಾ.'— ಎಂಬಂತೆ ರುದ್ರಗಣಗಳಾಗಿ ಪರಿಗಣಿಸಬೇಕಾಗುತ್ತದೆ. 'ನನ್ನ ಮಾತು ಸಟೆ' ಎಂಬುದನ್ನು ಮಾತ್ರ 'ನನಮಾತು ಸಟೆ' ಎಂದು ಬದಲಾಯಿಸಿದಲ್ಲದೆ ರುದ್ರಗಣವಾಗಿ ಪರಿಗಣಿಸುವುದು, ಶ್ರೀಯವರ ಸಿದ್ಧಾಂತದ ಪ್ರಕಾರವೂ ಸಾಧ್ಯವಿಲ್ಲ. ಅದರ ಮಾತ್ರಾಪ್ರಮಾಣ ಕೂಡ ಏಳಕ್ಕೆ ಬದಲು ಎಂಟು ಆಗುತ್ತದೆ. ('ನನ'—ಎಂಬುದು ಮುದ್ರಣ ದೋಷದಿಂದ 'ನನ್ನ'— ಎಂದಾಗಿರಬಹುದೆ ?)

ಹೀಗೆ, ಏಳೆಯ ಲಕ್ಷಣವನ್ನು ಸರಿಯಾಗಿ ಕಾಣುವುದು ಕಷ್ಟವಾದ್ದರಿಂದ ಏಳೆ—ತ್ರಿಪದಿಗಳಿಗಿರುವ ಸಂಬಂಧವನ್ನು ಸ್ಪಷ್ಟವಾಗಿ ಗುರುತಿಸುವುದು ಶ್ರೀಯವರಿಗೆ ಸಾಧ್ಯವಾಗಿಲ್ಲ. ಆದರೆ ಆ ದಿಶೆಯಲ್ಲಿ ಅವರು ನೇರವಾಗಿಯೇ ಸಾಕಷ್ಟು ದೂರ ನಡೆದಿದ್ದಾರೆಂಬುದು ಅವರ ಪಾಂಡಿತ್ಯ-ಸಂಶೋಧನ ಬುದ್ಧಿಗಳಿಗೆ ಸಾಕ್ಷಿಯಾಗಿದೆ. ಸಿಕ್ಕಷ್ಟು ಮಾಹಿತಿಯಿಂದಲೇ ಸತ್ಯಾನ್ವೇಷಣೆಗೆ ಎಷ್ಟರಮಟ್ಟಿಗೆ ಅವರು ಶ್ರಮಿಸಿದ್ದಾರೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಅಕ್ಕರಗಳ ಬಗ್ಗೆ ಹೇಳುವಾಗ ಅವರು, ತೆಲುಗಿನಲ್ಲಿ ಇದಕ್ಕೆ ಸಂವಾದಿಯಾಗಿ ಬರುವ ಬಂಧಗಳ ಲಕ್ಷಣಗಳನ್ನು ಗಮನಕ್ಕೆ ತರುತ್ತಾರೆ. ಇವನ್ನೂ ಅವನ್ನೂ ಹೋಲಿಸುವುದರ ಮೂಲಕ ಇವುಗಳ ಲಕ್ಷಣಗಳನ್ನು ಸರಿಯಾಗಿ ಊಹಿಸುವುದರಲ್ಲಿ ಸಫಲರಾಗಿದ್ದಾರೆ ; ಹಲವಾರು ಪಾಠ ಸಮಸ್ಯೆಗಳಿದ್ದರೂ ಅವನ್ನೆಲ್ಲ ದಾಟಿ ಬರುವುದು ಅವರಿಗೆ ಸಾಧ್ಯವಾಗಿದೆ. ತಮಿಳಿನ ಆಶಿರಿಯವಿರುತ್ತದಲ್ಲಿ ಕೆಲವನ್ನು ಇವು ಹೋಲುತ್ತವೆಯೆಂಬುದು ಅವರು ಗಮನಿಸಿದ ಹಲವು ಪ್ರಮುಖ ಅಂಶಗಳಲ್ಲಿ ಒಂದು.

ಅವರ ಕಾಲಕ್ಕೆ ಪಿರಿಯಕ್ಕರದ ಉದಾಹರಣೆಗಳು ಮಾತ್ರ ಲಭ್ಯವಿದ್ದವು ; ಉಳಿದವಕ್ಕೆ, ನಾಗವರ್ಮನ ಲಕ್ಷಣಪದ್ಯಗಳಿಗೇ ಶರಣುಹೋಗಬೇಕಾಗಿತ್ತು. ಅದರಿಂದಾಗಿ ಪಿರಿಯಕ್ಕರದ ಬಗ್ಗೆ ಹಲವು ಉದಾಹರಣೆಗಳನ್ನು ಕೊಟ್ಟು, ಬೇರೆ ಬೇರೆ ಕಡೆ ಅದು ಹೇಗೆ ಪ್ರಯೋಗವಾಗಿದೆಯೆಂಬುದನ್ನು ತೋರಿಸಿ ಬ್ರಹ್ಮ-ವಿಷ್ಣುಗಳ ಪರ್ಯಾಯದ ವಿವಿಧ ರೀತಿಗಳತ್ತ ಗಮನ ಸೆಳೆದು, ಕೊನೆಗೆ ಈ ತೀರ್ಮಾನಕ್ಕೆ ಬಂದಿದ್ದಾರೆ: "ಒಟ್ಟಿನ

ಮೇಲೆ ಪಿರಿಯಕ್ಕರದ ಲಕ್ಷಣವನ್ನು ಹೀಗೆ ಹೇಳಬಹುದೆಂದು ತೋರುತ್ತದೆ : ನಾಲ್ಕು ಪಾದ : ಪ್ರತಿ ಪಾದದಲ್ಲಿಯೂ ಏಳು ಗಣ : ಮೊದಲು ಬ್ರಹ್ಮ, ಆಮೇಲೆ ಐದು ವಿಷ್ಣು : ಕೊನೆಯಲ್ಲಿ ಒಂದು ರುದ್ರ : ವಿಷ್ಣುವಿಗೆ ಬದಲಾಗಿ ಹಾಡಿಗೆ ಹೊಂದಿ ಬ್ರಹ್ಮ ಬರಬಹುದು : ಮೊದಲನೆಯ ಬ್ರಹ್ಮಕ್ಕೆ ಅಪೂರ್ವವಾಗಿ ವಿಷ್ಣು ಬರಬಹುದು : ಕೊನೆಯ ರುದ್ರ ನಿತ್ಯ. ನ್ಯಾಯವಾಗಿ ನೋಡಿದರೆ ಒಂದನೆಯ ಮತ್ತು ನಾಲ್ಕನೆಯ ಗಣದ ಮುಂದೆ ಯತಿ."[26] ಈ ತೀರ್ಮಾನಕ್ಕೆ ಬರುವಲ್ಲಿ ಲಕ್ಷಣಪದ್ಯದಂತೆಯೇ ಲಕ್ಷ್ಯಗಳ ವಿಶ್ಲೇಷಣೆಯನ್ನು ಕೂಡ ಅವರು ಸಹಾಯಕ್ಕೆ ತಗೆದುಕೊಂಡಿದ್ದಾರೆಂಬುದು ಗಮನಾರ್ಹ. ಅವರ ಸಂಶೋಧನ ಪ್ರತಿಭೆಯನ್ನು ಇದು ಸ್ಪಷ್ಟಪಡಿಸುತ್ತದೆ.

ಅಕ್ಕರಿಕೆ, ಮದನವತಿ, ಛಂದೋವತಂಸ, ಚೌಪದಿ, ಗೀತಿಕೆ, ಸಾಂಗತ್ಯ, ಏಳೆ ಇವನ್ನು ಶ್ರೀಯವರು ಅಕ್ಕರದ ಪ್ರಸ್ತಾರದೊಳಗೇ ಸೇರಿಸುತ್ತಾರೆ. (ಏಳೆಯ ಬಗ್ಗೆ ಈ ಹಿಂದೆಯೇ ವಿಚಾರ ಮಾಡಿದೆ.) ಇವಕ್ಕೆ ಕೂಡ ತಮಗೆ ನಾಗವರ್ಮನಲ್ಲಿ ಹೊರತಾಗಿ ಬೇರೆ ಕಡೆ ಉದಾಹರಣೆಗಳು ಸಿಕ್ಕಿಲ್ಲವೆಂದು ಹೇಳಿ ಅಷ್ಟರ ಆಧಾರದಿಂದಲೇ ಇವುಗಳ ಲಕ್ಷಣಗಳನ್ನು ವಿವರಿಸಿದ್ದಾರೆ. ಇವುಗಳ ಪೈಕಿ ಸಾಂಗತ್ಯಕ್ಕೆ ಮಾತ್ರ ಅವರಿಗೆ ಉದಾಹರಣೆಗಳು ಸಿಕ್ಕಿವೆ. ಹಾಗಾಗಿ ಅದಕ್ಕೆ ಸಂಬಂಧಿಸಿದ ಭಾಗ ಮಾತ್ರ, ಇವುಗಳ ಪೈಕಿ ಸ್ವಲ್ಪ ವಿಸ್ತಾರವಾಗಿದೆ.

೭-೧೪ರಲ್ಲಿ ಬ್ರಹ್ಮಗಣಕ್ಕೆ ಬದಲು ವಿಷ್ಣುಗಣ ಬರುವಂತಹ, ಸಾಂಗತ್ಯದಂತಹ-ಇಂದು ಸೊಬಗಿನ ಸೋನೆಯ ವರ್ಣವೆಂದು ಗುರುತಿಸುವ-ಬಂಧ ಕೂಡ ಶ್ರೀಯವರ ಕಣ್ಣಿಗೆ ಬಿದ್ದಿದೆ. ಆದರೆ ಅದನ್ನು ಅವರು, ಸಾಂಗತ್ಯದ ೨-೪ನೆಯ ಪಾದಗಳಿಗೆ ಮತ್ತೊಂದು ಗಣವನ್ನು ಸೇರಿಸಿರುವ ಉದಾಹರಣೆಯೆಂದು ಬೇರೆ ರೀತಿಯಲ್ಲಿ ವಿವರಿಸಲು ಹೋಗಿದ್ದಾರೆ. ಅದರ ಪ್ರಕಾರ ೨-೪ನೆಯ ಪಾದಗಳು 'ವಿ. ವಿ. ಬ್ರ. ಗುರು' ಮಾದರಿಯಲ್ಲಿರುತ್ತವೆ.

ಸಮಸ್ಯಾತ್ಮಕವಾದ ಗೀತಿಕೆಯ ಲಕ್ಷಣದ ಬಗ್ಗೆ ಅವರು, ಒಂದು ರೀತಿಯ ವಿವರಣೆ ಕೊಡಲು ಪ್ರಯತ್ನಿಸಿದ್ದಾರೆ. "ಏಳೇಳು ಗಣದ ಎರಡು ಪಾದ ಮಾತ್ರ. ನಾಲ್ಕನೆಯ ಗಣದಲ್ಲಿ ಒಳಪ್ರಾಸ. ಕಡೆಯಲ್ಲಿ ರುದ್ರ. ಮಿಕ್ಕ ಕಡೆ ವಿಷ್ಣು. (ರುದ್ರ ಪರ್ಯಾಯಗಣ) ೨, ೬ರಲ್ಲಿ ಬ್ರಹ್ಮ ಎಂದು ಹೇಳಬಹುದೆ ? ಗೀತಿಕೆ ಎಂಬುದರಿಂದ ಸಾಂಗತ್ಯ ಸಂಬಂಧಿಯಾಗಿರಬಹುದೆ ?"[27]—ಎಂದು ಹೇಳಿ, ಗೀತಿಕೆಗೂ ಸಾಂಗತ್ಯಕ್ಕೂ

---

26 ಅದೇ, ಪು. ೫೫೫

27 ಅದೇ, ಪು. ೫೫೭

ಇರಬಹುದಾದ ಹೋಲಿಕೆಯತ್ತ ಬೆಳಕು ಬೀರಿದ್ದಾರೆ. ಆದರೆ ಈ ಸಂಬಂಧವನ್ನು ಸ್ಪಷ್ಟಪಡಿಸುವುದು ಇನ್ನೂ ಸಾಧ್ಯವಾಗಿಲ್ಲ. ಬೇರೆ ಬೇರೆ ರೀತಿಯ ವಿವರಣೆಗಳು ಬಂದಿದ್ದರೂ ಗೀತಿಕೆಯ ಲಕ್ಷಣ ಇನ್ನೂ ಸಮಸ್ಯಾತ್ಮಕವಾಗಿಯೇ ಉಳಿದಿದೆ.

ರಗಳೆಯ ಮೂಲದ ಬಗ್ಗೆ ಶ್ರೀಯವರಿಗೆ ಸಂದೇಹವಿದೆ. ಅದರಿಂದಾಗಿ, "ರಗಳೆ ಸಂಸ್ಕೃತಕ್ಕೆ (ಪ್ರಾಕೃತಕ್ಕೆ) ಸೇರಬೇಕೋ, ಅಂಶಗಣದ ಕರ್ಣಾಟಕ ವಿಷಯ ಜಾತಿಯೋ ಸಂಶಯ ಉಳಿಯುತ್ತದೆ. ತೆಲುಗಿನ ರಗಡಗಳು ಏಳು ಬಗೆ ಎಂದು ಹೇಳಿದ್ದರೂ ಹೆಚ್ಚು ಸಂಗತಿಗಳೇನೂ ಹೊರಪಡುವುದಿಲ್ಲ. ತಮಿಳಿನಲ್ಲಿ ಅಗವಲ್ ಪಾವಿನಲ್ಲಿ, ಆಶಿರಿಯವಿರುತ್ತದಲ್ಲಿ ಕೆಲವು ಕಡೆ ರಗಳೆಯನ್ನು ಹೋಲುವ ಛಂದಸ್ಸು ಕಾಣವುದು"[28]—ಎಂದಿದ್ದಾರೆ. ತಮಿಳಿನಲ್ಲಿ ಕಂಡುಬರುವ ಹೋಲಿಕೆಯ ಜೊತೆಗೇ, ಚತುರ್ಮಾತ್ರಾಗಣಗಳ ವಿಭಜನೆಯಲ್ಲಿ ಪಾದಾಂತ್ಯದಲ್ಲಿ ಬರುವ ಜಗಣ ಮತ್ತು 'ನಲ' ಕೂಡ ಅವರ ಈ ಸಂದೇಹಕ್ಕೆ ಕಾರಣವಾಗಿದೆ. ಅಂತಹ ಗಣಗಳು ಬರುವುದುಂಟೇ ?—ಎಂಬ ಸಂಶಯ ಅವರನ್ನು ಕಾಡಿದೆ. ಇದರಿಂದಾಗಿ ಕೊನೆಗೆ ಕೂಡ, "ಒಟ್ಟಿನ ಮೇಲೆ, ೩ ಮಾತ್ರೆಯ, ೫ ಮಾತ್ರೆಯ ಗಣಗಳಲ್ಲಿ ಮಾತ್ರಾಗಣ ಸ್ಪಷ್ಟವಾಗಿವೆ. ೪ ಮಾತ್ರೆಯ ಗಣಗಳಲ್ಲಿ ಅಂಶವೂ, ಮಾತ್ರೆಯೂ ಬೆರೆಸಿರುವಂತೆ ಕಾಣುತ್ತದೆ. ಜಗಣ, ನಲ ಇವು ಉಂಟೋ ಇಲ್ಲವೋ ನಿರ್ಧರಿಸಿ ಹೇಳುವಂತಿಲ್ಲ"[29] —ಎಂದು ಅವರು ಸಂಶಯವನ್ನೇ ವ್ಯಕ್ತಪಡಿಸಿದ್ದಾರೆ.

ಇವು ಹೇಗೇ ಇದ್ದರೂ, ರಗಳೆಯ ಮೂಲದ ಬಗೆಗಿನ ಈ ಸಂದೇಹದಿಂದಾಗಿ, ಅವರು ರಗಳೆಗೆ ಅಂಶಗಣಗಳಂತೆ ಪ್ರಸ್ತಾರಹಾಕಲು ಹೋಗಿದ್ದಾರೆ. ಅದೂ ಅವರ ಸಿದ್ಧಾಂತದ (ಎಂದರೆ, ೨, ೩, ೪ನೆಯ ಅಂಶದ ಗುರುಗಳಿಗೆ ಬದಲಾಗಿ ಕೂಡ ಎರಡೆರಡು ಲಘುಗಳನ್ನು ತರಬಹುದೆಂಬುದರ) ಪ್ರಕಾರ. ಈ ಸಂಬಂಧದಲ್ಲಿ, ಮೊದಲನೆಯದರ ನಂತರದ ಯಾವುದೇ ಅಂಶದ ಸ್ಥಾನದಲ್ಲಾದರೂ ಒಂದು ಗುರುವಿಗೆ ಬದಲು ಮೂರು ಲಘುಗಳಾಗಲಿ ತ್ರಿಮಾತ್ರಾ ಮೌಲ್ಯದ ಗುರುಲಘು ಮಿಶ್ರಣವಾಗಲಿ ಬರಬಹುದು ; ಆದರೆ ಹಾಗೆ ಬಂದಾಗ ಅದನ್ನು ದ್ವಿಮಾತ್ರಾಮೌಲ್ಯಕ್ಕೆ ಕುಗ್ಗಿಸಿ ಹೇಳಬೇಕು—ಎಂಬಷ್ಟು ದೂರದವರೆಗೂ ಹೊರಟುಹೋಗಿದ್ದಾರೆ. "ಲವಣಾಬ್ಧಿಯೆ ಬಳಸಿದುದೆನಿಸುವಗಲ...."[30] —ಎಂಬ ಪದ್ಯಭಾಗಕ್ಕೆ ಹಾಕಿರುವ ಪ್ರಸ್ತಾರದಲ್ಲಿ ಇದನ್ನು ಗಮನಿಸಬಹುದು. ಅಲ್ಲಿ, "ಲವಣಾ.ಬ್ಧಿಯೆ ಬಳ.ಸಿದುದೆನಿ.ಸುವಗಲ"—ಎಂಬ ರೀತಿಯ ಚತುರ್ಮಾತ್ರಾಗಣಗಳ ವಿಭಜನೆಗೆ ಬದಲಾಗಿ,

---

28–29 ಅದೇ, ಪು. ೫೬೪.

20 ಅದೇ, ಪು. ೫೬೨.

ಗ ಎ ಷ ಳ ಗ ಎ ಷ ಳ
"ಲವ.ಣಾ.ಬ್ಧಿಯೆ. ಬಳ. | ಸಿದು.ದೆನಿಸು.ವಗ. ಟ | "

—ಎಂಬ ರೀತಿಯಲ್ಲಿ ರುದ್ರಗಣಗಳ ವಿಭಜನೆಯನ್ನು ಸೂಚಿಸಿದ್ದಾರೆ. 'ದೆನಿಸು' ಎಂಬ ಅಂಶದಲ್ಲಿ 'ದೆನಿ' ಕೂಡಿ ಒಂದು ಲಘುವಾಗಿ ತೇಲಿಕೆಯ ಉಚ್ಚಾರವನ್ನು ಪಡೆಯ ಬೇಕು; ಅನಂತರ ಅದರ ಜೊತೆಗೆ 'ಸು' ಸೇರಿ ಒಟ್ಟಾರೆ ದ್ವಿಮಾತ್ರಾಪ್ರಾಬಲ್ಯ ಬರ ಬೇಕು ಎಂಬುದು ಅವರ ಅಭಿಪ್ರಾಯ. ಆದರೆ ಈ ರೀತಿಯ ವಿಭಜನೆ ಬಹಳ ಕೃತಕ ವಾಗಿರುವುದು ಅನುಭವಕ್ಕೆ ಬರದೆ ಇರದು. ಇದೆಲ್ಲ ಹೇಗೇ ಇದ್ದರೂ ಅವರ ಚಿಕಿತ್ಸಕ ಬುದ್ಧಿ, ಪ್ರಯತ್ನಗಳಂತೂ ಮೆಚ್ಚುವಂತಹವೇ.

ಷಟ್ಪದಿಯ ಸಂಬಂಧದಲ್ಲಿ ಸಮಸ್ಯೆಗಳೇನೂ ಇಲ್ಲ. ಅದರ ವಿವಿಧ ಪ್ರಕಾರ ಗಳನ್ನು ಸೂಚಿಸಿದ್ದಾರೆ; ಮೂಲ ಷಟ್ಪದಿಯು ಅಂಶಬಂಧವಾಗಿದ್ದು ಅನಂತರ ಅದೇ ಮಾತ್ರಾಬಂಧಕ್ಕೆ ತಿರುಗಿ ಶರಷಟ್ಪದಿಯಾಯಿತು; ಅದರ ಅನುಕರಣೆಯ ಮೇಲೆ ಇತರ ಷಟ್ಪದಿಗಳು ಹುಟ್ಟಿದವು—ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ವಿವಿಧ ಷಟ್ಪದಿಗಳ ನಡೆಯನ್ನು ಪ್ರಸ್ತಾರಸಹಿತ ಸೂಚಿಸಿರುವುದು, ಯತಿಸ್ಥಾನವು ವಿವಿಧ ರೀತಿಗಳಲ್ಲಿ ವ್ಯತ್ಯಾಸವಾಗುವುದನ್ನು ಗುರುತಿಸಿರುವುದು, ಇಲ್ಲಿಯ ಗಮನಾರ್ಹ ಅಂಶ. ಕೆಲವು ಕಡೆ, ಗಣವಿಭಜನೆ ಕೃತಕವಾಗಿರುವುದಕ್ಕೆ ಕಾರಣ ಸೂಚಿಸುತ್ತ, ಅಂಶದ ದೃಷ್ಟಿಯಿಲ್ಲದ್ದರಿಂದ ಹಾಗಾಗುತ್ತದೆಯೆಂದಿದ್ದಾರೆ. ಆದರೆ ಅದನ್ನು ಅಂಶದ ದೃಷ್ಟಿಯೆಂದು ಹೇಳುವುದರ ಬದಲು, ಅರ್ಥಭಂಗವಾಗುವಂತಹ ಗಣವಿಭಜನೆ ಎಂದು ಹೇಳಿದ್ದರೆ ಸರಿಯಾಗಿರುತ್ತಿತ್ತು. ಅಂಶಗಣವನ್ನು ಗಮನದಲ್ಲಿಟ್ಟುಕೊಂಡು ಅದರಂತೆ ಮಾತ್ರಾಗಣವನ್ನು ಹೊಂದಿಸಬೇಕೆಂದು ಹೇಳುವುದು ಅಷ್ಟು ಸರಿಯಾಗಿ ಕಾಣುವುದಿಲ್ಲ. ಲಕ್ಷ್ಮೀಶನ ಉದಾಹರಣೆಯ ಸಂಬಂಧದಲ್ಲಿ, "ಪ್ರತಿಯೊಂದು ಗಣದಲ್ಲಿ ೫ ಮಾತ್ರೆ ಯಿದ್ದರೂ ಅಂಶವಿನ್ಯಾಸ ಬೇರೆ ಬೇರೆಯಾಗಿ ಛಂದಸ್ಸಿನ ಹರಿತ ಸುಖವಾಗಿದೆ"[31]— ಎಂದು ಹೇಳುವಲ್ಲಿ ಕೂಡ, ಅಂಶವಿನ್ಯಾಸ ಬೇರೆ ಬೇರೆಯಾಗಿದೆಯೆನ್ನುವುದಕ್ಕಿಂತ ಗಣಗಳ ಗುರುಲಘುವಿನ್ಯಾಸ ಬೇರೆ ಬೇರೆಯಾಗಿದೆಯೆಂದು ಹೇಳುವುದೇ ಹೆಚ್ಚು ಉಚಿತ ವಾಗಿ ತೋರುತ್ತದೆ.

ಇಲ್ಲಿಂದ ಮುಂದಿನ, "ಯಕ್ಷಗಾನ, ಹೊಸ ಪ್ರಯೋಗಗಳು" ಎಂಬ ವಿಭಾಗವು ಸಂಪೂರ್ಣವಾಗಿ ಹೊಸ ವಿಚಾರಗಳಿಂದ ತುಂಬಿದೆಯೆಂದು ಹೇಳಬಹುದು. ವೀರಶೈವ ಕವಿಗಳ ಕೃತಿಗಳಲ್ಲೂ ಹರಿದಾಸರ ಕೃತಿಗಳಲ್ಲೂ ಅಂತೆಯೇ ಜನಪದ ಗೀತೆಗಳಲ್ಲೂ ಅನೇಕ

---

51 ಅದೇ, ಪು. ೫೭೨

ಅಂಶಬಂಧಗಳೂ ಮಾತ್ರಾಬಂಧಗಳೂ ಇವೆ. "ಅವುಗಳ ರಹಸ್ಯವನ್ನು ತಿಳಿದವ ರಾಗಿಟ್ಟುಕೊಂಡು, ಆಧುನಿಕ ಕವಿಗಳು ಹೊಸ ಹೊಸ ಬಗೆಯ ಪದ್ಯಗಳನ್ನೂ, ಸರಳ ರಗಳೆಯನ್ನೂ, ಪ್ರಗಾಥಗಳನ್ನೂ ರಚಿಸುತ್ತಿದ್ದಾರೆ. ಪ್ರಾಸವನ್ನು ಬಿಟ್ಟೋ, ಇಟ್ಟೋ, ಹೊಸ ಥಳುಕನ್ನು ಕೊಟ್ಟೋ, ಪರೀಕ್ಷಿಸುತ್ತಿದ್ದಾರೆ. ಕಥೆಗೆ, ಗೀತಕ್ಕೆ, ನಾಟಕಕ್ಕೆ, ಗ್ರೀಕ್ ನಾಟಕ, ಷೇಕ್ಸ್‌ಪಿಯರ್ ನಾಟಕಗಳ ಭಾಷಾಂತರಕ್ಕೆ ತಕ್ಕ ಛಂದಸ್ಸುಗಳನ್ನು ಸರಿಪಡಿಸಿಕೊಳ್ಳುತ್ತಿದ್ದಾರೆ. ಇವಕ್ಕೆಲ್ಲ ಸಂಪೂರ್ಣ ವಿವರಣೆ ಸಾಧ್ಯವಲ್ಲ; ಮತ್ತು ಅನಾವಶ್ಯಕ. ದಿಕ್ಪ್ರದರ್ಶನಾರ್ಥವಾಗಿ ಕೆಲವು ಉದಾಹರಣೆಗಳು ಸಾಕಾಗಿವೆ"[32]— ಎಂದು ಹೇಳಿ, ದ್ವಿಪದಿ, ಚೌಪದಿ, ಸೀಸ, ತ್ರಿಪುಡೆ, ಸಾಂಗತ್ಯ (ಎರಡೇ ಪಾದಗಳು), ತ್ಯಾಗಮಾನ, ಯಾಲಪದಗಳ ಲಕ್ಷಣವನ್ನೂ, ಅಂತೆಯೇ, ಗೋವಿನ ಕಥೆ, ಪಾರ್ಥಜೋಗಿ ಹಾಡು, ನುಲಿಯಚಂದಯ್ಯನ ಶಾರದ, ಗೀತಗೋಪಾಲಗಳಲ್ಲಿ ಕಂಡುಬರುವ ಛಂದೋರೂಪಗಳ ಲಕ್ಷಣವನ್ನೂ, ಅಂಶಗಣಗಳು ಮಾತ್ರಾಗಣಗಳು ಎರಡರಿಂದಲೂ ತೋರಿಸಿದ್ದಾರೆ. ಕನ್ನಡದಲ್ಲಿ ವಡಿಯ ಪ್ರಯೋಗವನ್ನು ಗುರುತಿಸಿ ಅದಕ್ಕೆ ಉದಾ ಹರಣೆಗಳನ್ನು ಸೂಚಿಸಿರುವುದು ಈ ಸಂದರ್ಭದಲ್ಲಿ ಕಂಡುಬರುವ ಮತ್ತೊಂದು ಹೊಸ ಅಂಶ.

ಒಟ್ಟಾರೆ, ಹೊಸ ಕವಿಗಳ ರಚನೆಗಳೆಲ್ಲ ಸಂಪೂರ್ಣವಾಗಿ ಹೊರಗಿನಿಂದ ಬಂದವಲ್ಲ; ಅವುಗಳ ಮೂಲ ಇಲ್ಲಿಯೇ ಇದೆ—ಎಂಬ ಅಂಶವನ್ನು ಇಲ್ಲಿ ಶ್ರೀಯವರು ಎತ್ತಿಹಿಡಿ ದಿದ್ದಾರೆಂದು ಹೇಳಬಹುದು.

"ಪುರಾತನ ತಮಿಳು ಛಂದಸ್ಸಿನಲ್ಲಿ ಕನ್ನಡ ಛಂದಸ್ಸಿನ ಹಿಂದಿನ ಹೆಜ್ಜೆ ಕಾಣಬರು ವುದು;"[33] ಆದ್ದರಿಂದ ಅದರ ಬಗ್ಗೆ ಅರಿಯಬೇಕಾದದ್ದು ಅಗತ್ಯ ಎಂಬ ದೃಷ್ಟಿಯಿಂದ, ಇದರ ಮುಂದಿನ ಉಪಸಂಹಾರಭಾಗವನ್ನು ತಮಿಳು ಛಂದಸ್ಸಿಗೇ ಮೀಸಲಾಗಿರಿಸಿದ್ದಾರೆ. ಅಲ್ಲಿ, ತಮಿಳಿನ ಅಶೈ ಮತ್ತು ಶೀರ್‌ಗಳನ್ನೂ ಅವುಗಳ ಬಗೆಗಳನ್ನೂ ಕುರಿತು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಅವಕ್ಕೂ ಕನ್ನಡದ ಅಂಶಗಣಗಳಿಗೂ ಇರುವ ಸಾಮ್ಯಗಳನ್ನೂ ವೈಷಮ್ಯ ಗಳನ್ನೂ ತಿಳಿಸಿದ್ದಾರೆ. ತಮಿಳಿಗೂ ಹಳಗನ್ನಡಕ್ಕೂ ಇರುವ ಹತ್ತಿರದ ಸಂಬಂಧವನ್ನೂ, ಕನ್ನಡ ಛಂದಸ್ಸಿನ ವಿಮರ್ಶೆಯಲ್ಲಿ ಮತ್ತು ವೃದ್ಧಿಯಲ್ಲಿ ತಮಿಳಿನ ಬೆಳಕು ಬೀಳಬೇಕೆನ್ನು ವುದನ್ನೂ, ತೋರಿಸುವ ಸಲುವಾಗಿ ತಮಿಳಿನ ಕೆಲವು ಬಂಧಲಕ್ಷಣಗಳನ್ನೂ ಪ್ರಸ್ತಾರ ಸಹಿತ ನಿರೂಪಿಸಿದ್ದಾರೆ. ಕನ್ನಡ ತಮಿಳು ಛಂದಸ್ಸುಗಳನ್ನು ಅಧ್ಯಯನ ಮಾಡಿ ಮೂಲ

---

32 ಅದೇ, ಪು. ೫೭೨.

33 ಅದೇ, ಪು. ೫೭೫

ದ್ರಾವಿಡ ಗಣಗಳ ಸ್ವರೂಪವನ್ನು ಕಂಡುಹಿಡಿಯಬೇಕೆಂಬ ಅಂಶದ ಮೇಲೆ ಹೆಚ್ಚು ಒತ್ತುಕೊಟ್ಟು ಮಾತಾಡಿದ್ದಾರೆ. ಆದರೆ ಈ ದಿಶೆಯಲ್ಲಿ ಅಧ್ಯಯನ-ಸಂಶೋಧನೆ ಮಾತ್ರ ಇನ್ನೂ ನಡೆಯಬೇಕಾಗಿದೆ.

ಈ ವರೆಗಿನ ಅಧ್ಯಯನದ ಆಧಾರದ ಮೇಲೆ, 'ಕನ್ನಡ ಛಂದಸ್ಸಿನ ಚರಿತ್ರೆ' ಎಂಬ ಲೇಖನದಲ್ಲಿ ಶ್ರೀಯವರ ಪ್ರಮುಖ ಸಾಧನೆಗಳೇನು ಎಂಬುದನ್ನು ಹೀಗೆ ನಿರೂಪಿಸಬಹುದು : ೧. ಚಾರಿತ್ರಿಕ ದೃಷ್ಟಿಯಿಂದ ಕನ್ನಡ ಛಂದಸ್ಸಿನ ಅಧ್ಯಯನ ಮಾಡುವ ಮಾರ್ಗವನ್ನು ತೆರೆದರು. ೨. ವೈದಿಕ ಛಂದಸ್ಸಿನಿಂದ ಕನ್ನಡ ಛಂದಸ್ಸು ಪ್ರಯೋಜನ ಪಡೆಯಬಹುದೆಂಬುದರತ್ತ ಕೈತೋರಿಸಿದರು. ೩. ಪ್ರಾಚೀನ ಕಾವ್ಯಗಳಲ್ಲಿ ಕಂದ ವೃತ್ತಗಳ ಸ್ಥಾನವೇನೆಂಬುದನ್ನು ತೋರಿಸಿದರು. ೪. ಸಂಸ್ಕೃತದಿಂದ ಕನ್ನಡಕ್ಕೆ ಬರುವಾಗ ವೃತ್ತಗಳಲ್ಲಾದ ಒದಲಾವಣೆಗಳೇನೆಂಬುದನ್ನು ನಿರೂಪಿಸಿದರು. ೫. ಕನ್ನಡದಲ್ಲೇ, ಭಾಷಾಸ್ವರೂಪದ ವ್ಯತ್ಯಾಸದಿಂದ ಛಂದಸ್ಸಿನ ಮೇಲಾದ ಪರಿಣಾಮವನ್ನು ಸೂಚಿಸಿದರು. ೬. ಹಲವಾರು ಸಮಸ್ಯಾತ್ಮಕ ಬಂಧಗಳ ಲಕ್ಷಣಗಳನ್ನು ಸಾಧ್ಯವಿದ್ದ ಮಟ್ಟಿಗೂ ಸ್ಪಷ್ಟಪಡಿಸಲು ಪ್ರಯತ್ನಿಸಿದರು. ೭. ಹಲವು ಬಂಧಗಳ ಬೆಳವಣಿಗೆಯ ಹಾದಿಯನ್ನು ಗುರುತಿಸಿ ನಿರೂಪಿಸಿದರು. ೮. ಯಕ್ಷಗಾನಗಳು ಮುಂತಾದವುಗಳಲ್ಲಿ ಕಂಡುಬರುವ ಹಲವು ಹೊಸಬಂಧಗಳ ಲಕ್ಷಣಗಳನ್ನು ತಿಳಿಸಿದರು. ೯. ಜನಪದ ಛಂದಸ್ಸಿನ ಅಧ್ಯಯನದ ಅಗತ್ಯವನ್ನು ನಿರೂಪಿಸಿದರು. ೧೦. ದ್ರಾವಿಡ ಛಂದಸ್ಸುಗಳ ತೌಲನಿಕ ಅಧ್ಯಯನದ ಅಗತ್ಯವನ್ನು ಸ್ಪಷ್ಟಪಡಿಸಿದರು. ೧೧. ಕನ್ನಡ ಛಂದಸ್ಸಿನ ವಿಮರ್ಶೆಯಲ್ಲಿ ತಮಿಳು ಛಂದಸ್ಸಿನ ಅಧ್ಯಯನದ ಅಗತ್ಯವಂತೂ ವಿಶೇಷವಾಗಿದೆಯೆಂಬುದನ್ನು ಸೂಚಿಸಿ, ಹಲವು ತಮಿಳು ಬಂಧಗಳ ಪರಿಚಯ ಮಾಡಿಕೊಟ್ಟರು.

ಇಂದು ಕನ್ನಡ ಛಂದಸ್ಸಿನ ಅಧ್ಯಯನ ಬಹಳ ದೂರ ಸಾಗಿದೆ. ಆದ್ದರಿಂದ ಶ್ರೀಯವರ ಈ ಲೇಖನದಲ್ಲಿ ನಮಗೆ ಹಲವು ಅರೆಕೊರೆಗಳು ಕಾಣಬಹುದು. ಎಂದ ಮಾತ್ರಕ್ಕೆ ನಾವು ಇದನ್ನು ಅಪಮೌಲ್ಯಗೊಳಿಸುವಂತಿಲ್ಲ. ನಮ್ಮ ಎಲ್ಲ ಅಧ್ಯಯನದ ಬುನಾದಿಯೂ ಈ ಲೇಖನವೇ ಆಗಿದೆ ಎಂಬುದನ್ನು ಮರೆಯುವಂತಿಲ್ಲ. ಈ ಅರೆಕೊರೆಗಳಿಗೆ ಕಾರಣವೂ ಇಲ್ಲದಿಲ್ಲ. ಅಂದು ಕೆಲವು ಕಾವ್ಯಗಳು ಮಾತ್ರ ಲಭ್ಯವಿದ್ದವು ; ಜಯಕೀರ್ತಿಯ ಛಂದೋನುಶಾಸನ ಲಭ್ಯವಿರಲಿಲ್ಲ ; ಕನ್ನಡ ಛಂದಸ್ಸನ್ನು ಕುರಿತ ಸಂಶೋಧನೆಗಳು ನಡೆದಿರಲಿಲ್ಲ. ಇಷ್ಟೆಲ್ಲ ಇದ್ದರೂ ಲಭ್ಯಮಾಹಿತಿಯಷ್ಟರಿಂದಲೇ, ತಮಿಳು ತೆಲುಗುಗಳ ಸಹಾಯವನ್ನೂ ತೆಗೆದುಕೊಂಡು ಸತ್ಯದ ಪಥದಲ್ಲಿ ಸಾಕಷ್ಟು ದೂರ ಸಾಗಿರುವುದು ಶ್ರೀಯವರ ಹಿರಿಮೆಯ ದ್ಯೋತಕವಾಗಿದೆ.

ಚೆಲುವೆಯರ, ಚೆನ್ನಿಗರ, ಹಿರಿಯ ತಾಯ್ ಮಕ್ಕಳಿರ, ಒಡಹುಟ್ಟಿದವರಾ,
ಒಸಗೆನುಡಿ ಕೇಳಿದಿರ, ತಾಳಿದಿರ ಎದೆಯಲ್ಲಿ, ತಾಳಿ ಬಾಳುವಿರಾ.
ನಾಡು ನುಡಿ ನಡೆಗಳನು ಮುನ್ನಡೆಗೆ ನಡಸುತ್ತ, ಮುಂದೆ ಸಾಗುವಿರಾ ?
ಭಾರತದ, ಲೋಕದಾ ಮಕ್ಕಳಲಿ ಹಿರಿದಾಗಿ ತೂಕ ತೂಗುವಿರಾ ?
ಬನ್ನಿ, ಓ ಮಕ್ಕಳಿರ,
ಒಕ್ಕೊರಲಲೆಲ್ಲರೂ ಕೂಗಿ ಈ ಒಕ್ಕೂಗ—ಈ ಹಿರಿಯ ಕೂಗ—
"ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಬಾಳ್ಗೆ—
ಕನ್ನಡ ತಾಯ್ ಗೆಲ್ಗೆ, ಬಾಳ್ಗೆ ! "

ಕನ್ನಡ ತಾಯ ನೋಟ, 'ಹೊಂಗನಸುಗಳು',
'ಶ್ರೀ ಸಾಹಿತ್ಯ'ದಲ್ಲಿ, ಪು. ೧೩೬

ಡಾ. ಬಿ. ನಂ. ಚಂದ್ರಯ್ಯ

# ಕನ್ನಡ ಸಾಹಿತ್ಯ ಚರಿತ್ರೆ

"ಸಂಶೋಧನ ವಿಮರ್ಶೆ, ರಸವಿಮರ್ಶೆ, ದರ್ಶನ ವಿಮರ್ಶೆಗಳ ಸಲುವಾಗಿ ಸಾಹಿತ್ಯ ಚರಿತ್ರೆ ರೂಪುಗೊಳ್ಳಬೇಕಾಗುತ್ತದೆ. ಕೃತಿಸ್ವರೂಪ, ಕವಿ ಜೀವನ ಮತ್ತು ಯುಗಧರ್ಮಗಳ ಬಗ್ಗೆ ಸಂಶೋಧನೆ ನಡೆಸುತ್ತ ಕಾವ್ಯದಲ್ಲಿ ಪ್ರವಹಿಸಿದ್ದ ರಸ ತರಂಗಗಳನ್ನು ಗಮನಿಸುತ್ತ ಕೊನೆಗೆ ಕವಿ ದರ್ಶನವನ್ನು ಎತ್ತಿ ಹೇಳುವಲ್ಲಿ ಸಾಹಿತ್ಯ ಚರಿತ್ರೆ ಸಾರ್ಥಕ್ಯವನ್ನು ಪಡೆಯುತ್ತದೆ"[1] ಎಂದು ಹೇಳುತ್ತಾರೆ. ಬಹುಮಟ್ಟಿಗೆ ಈ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಇಂದು ಆಂಗ್ಲಭಾಷೆಯಲ್ಲಿ ನಾನಾ ಪ್ರಕಾರದ ಸಾಹಿತ್ಯ ಚರಿತ್ರೆಗಳು ಹೊರಬರುತ್ತಿವೆ. ಆದರೆ ನಮ್ಮಲ್ಲಿ ಬರುತ್ತಿರುವ ಸಾಹಿತ್ಯಚರಿತ್ರೆಗಳ ವೈವಿಧ್ಯ ತೌಲನಿಕ ದೃಷ್ಟಿಯಿಂದ ಗಮನಿಸಿದಾಗ ಬಹಳ ಕಡಿಮೆಯೆಂದೇ ಹೇಳಬೇಕಾಗುತ್ತದೆ. ಆದರೂ ಕಳೆದ ಶತಮಾನವನ್ನು ಗಮನಿಸಿದಾಗ ಈ ಶತಮಾನದಲ್ಲಿ, ಆ ದಿಸೆಯಲ್ಲಿ ನಡೆಯುತ್ತಿರುವ ಕಾರ್ಯ ಅಲ್ಪವೇನಲ್ಲ. ಈ ದೃಷ್ಟಿಯಿಂದ 'ಶ್ರೀ' ಅವರ ಸಾಹಿತ್ಯ ಚರಿತ್ರೆಯ ಭಾಗ ಕನ್ನಡ ಸಾಹಿತ್ಯ ಚರಿತ್ರೆಯ ಕ್ಷೇತ್ರದಲ್ಲಿ ಒಂದು ಐತಿಹಾಸಿಕವಾದರೂ ಗಣನೀಯ ಕೊಡುಗೆಯೇ.

ಯಾವುದೇ ಜೀವಂತ ಸಾಹಿತ್ಯದ ಚರಿತ್ರೆಯ ರಚನೆ ಪರಿಪೂರ್ಣವಾಗಲು ಸಾಧ್ಯವಿಲ್ಲ. ಅದೊಂದು ನಿರಂತರ ಕ್ರಿಯೆ. ಸಾಹಿತ್ಯ ಸೃಷ್ಟಿಯಷ್ಟೇ ಸಾಹಿತ್ಯ ಚರಿತ್ರೆಯ ಸೃಷ್ಟಿಯೂ ನಿರಂತರ. ಅಂತೆಯೇ ಆಚಾರ್ಯ ಬಿ.ಎಂ.ಶ್ರೀ ಅವರ 'ಕನ್ನಡ ಸಾಹಿತ್ಯ ಚರಿತ್ರೆ' ಪರಿಪೂರ್ಣ ಎಂದು ಹೇಳುವಂತಿಲ್ಲ. ಅವರೇ ಹೇಳಿಕೊಂಡಿರುವಂತೆ "....ಇದರಲ್ಲಿ ದೊಡ್ಡಗ್ರಂಥದಲ್ಲಿ ಹೇಳಬಹುದಾದ ಕವಿಗಳನ್ನೆಲ್ಲಾ ಹೇಳಲಾಗುವುದಿಲ್ಲ. ಕಾವ್ಯ, ಸಾಹಿತ್ಯ ಎಂಬ ಶಬ್ದಗಳ ಶ್ಲಾಘ್ಯವಾದ ಅರ್ಥದ ಮೇಲೆ ದೃಷ್ಟಿಯಿಟ್ಟು, ವಿದ್ಯಾರ್ಥಿಗಳ ಪ್ರಥಮ ಪರಿಚಯಕ್ಕಾಗಿ, ಪ್ರಸಿದ್ಧರಾಗಿಯೂ, ಬೇರೆ ಬೇರೆ ಮತಗಳಿಗೆ ಪ್ರತಿನಿಧಿಗಳಾಗಿಯೂ, ಯಾವುದಾದರೂ ಒಂದು ಕಾರಣದಿಂದ ಗಣ್ಯರಾಗಿಯೂ ಇರುವ

---

1 ಡಾ. ಆರ್.ಸಿ. ಹಿರೇಮಠರ ಮುನ್ನುಡಿ, ಸದಾನಂದ ಕನವಳ್ಳಿ (ಸಂ) ಅವರ ವೀರಶೈವ ಸಾಹಿತ್ಯ ಸಮೀಕ್ಷೆ.

ಕವಿಗಳನ್ನು ಮಾತ್ರ ಆಯ್ದುಕೊಂಡು, ಒಟ್ಟಿನ ಮೇಲೆ ಕನ್ನಡ ಸಾಹಿತ್ಯದ ಬೆಳವಣಿಗೆ, ವಿಭಾಗಗಳು, ಸ್ವರೂಪ, ಯೋಗ್ಯತೆ ಇವುಗಳನ್ನು ಸ್ಪಷ್ಟಪಡಿಸಬೇಕೆಂದು ಪ್ರಯತ್ನ ಪಟ್ಟಿರುತ್ತದೆ. ಕಾವ್ಯ ವಿಮರ್ಶೆಯ ಭಾಗದಲ್ಲಿ ವ್ಯವಸ್ಥೆಯಾಗಿ ಎಲ್ಲರೂ ಒಪ್ಪಬಹುದಾದ ಅಭಿಪ್ರಾಯಗಳು ಪ್ರಚಾರದಲ್ಲಿಲ್ಲವಾದ್ದರಿಂದಲೂ, ಹೊಸದಾಗಿ ಸಿಕ್ಕಿರುವ ನಿಕ್ಷೇಪವನ್ನು ಕನ್ನಡಿಗರು ಇನ್ನೂ ಆಶ್ಚರ್ಯಪಟ್ಟು ಹೊಗಳಿಕೊಳ್ಳುವ ಸಂಭ್ರಮದಲ್ಲಿಯೇ ಇರುವುದ ರಿಂದಲೂ, ಪೂರ್ವದ ಸಂಪ್ರದಾಯದ ಸಂಸ್ಕೃತ ಕಾವ್ಯಲಕ್ಷಣ ರುಚಿಗೂ ಈ ಕಾಲದ ಇಂಗ್ಲಿಷ್ ಕಾವ್ಯಾಭ್ಯಾಸ ಬಲದಿಂದ ಉಂಟಾಗಿರುವ ಹೊಸ ರುಚಿಗೂ ಬಹಳ ತಾರತಮ್ಯವಿರುವುದರಿಂದಲೂ, ಆ ಭಾಗಕ್ಕೆ ಇಲ್ಲಿ ಹೆಚ್ಚಾಗಿ ಪ್ರವೇಶ ಮಾಡುವುದು ಸೂಕ್ತವಾಗಿ ಕಾಣಿಸಲಿಲ್ಲ."[2] ಎಂಬ ಮಾತುಗಳು ಅವರ ಈ ಗ್ರಂಥದ ಮಿತಿ, ವ್ಯಾಪ್ತಿ, ಉದ್ದೇಶಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ.

ಸಹಜವಾಗಿಯೇ ವಿದ್ವಾಂಸರಿಗೆ ಒಪ್ಪುವಂತೆ ಈ ದಿಸೆಯಲ್ಲಿ ತಮಗಿಂತ ಹಿಂದೆ ನಡೆದಿರುವ ಪ್ರಯತ್ನಗಳನ್ನು ತಮ್ಮ ಗ್ರಂಥದಲ್ಲಿ ಸಂಕ್ಷೇಪವಾಗಿ ನಿರೂಪಿಸಿದ್ದಾರೆ. ತಮ್ಮ ಕಾಲಕ್ಕೆ ದೊರೆಯುತ್ತಿದ್ದ ಗ್ರಂಥಗಳನ್ನು ಶೇಖರಿಸಿ, ಪರಿಷ್ಕರಿಸಿ, ಮುದ್ರಿಸುವ ಪ್ರಯತ್ನದಲ್ಲಿ ಪ್ರಸಿದ್ಧರಾಗಿದ್ದ ಪಾಶ್ಚಾತ್ಯ ವಿದ್ವಾಂಸರಾದ ಕಿಟ್ಟೆಲ್ ಕೇಶಿರಾಜನ ಶಬ್ದಮಣಿದರ್ಪಣ (1872)ವನ್ನೂ, ನಾಗವರ್ಮನ ಛಂದೋಂಬುಧಿ (1875)ಯನ್ನೂ, ಕನ್ನಡ-ಇಂಗ್ಲಿಷ್ ನಿಘಂಟು (1894) ವನ್ನೂ, ಇಂಗ್ಲಿಷಿನಲ್ಲಿ ಕನ್ನಡವ್ಯಾಕರಣ (1903) ವನ್ನೂ ಬರೆದದ್ದಲ್ಲದೆ, ಅಷ್ಟುಹೊತ್ತಿಗೆ ಪ್ರಕಟವಾಗಿದ್ದ ಗ್ರಂಥಗಳನ್ನೆಲ್ಲಾ ಕ್ರೋಡೀಕರಿಸಿ, ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇಂಗ್ಲಿಷಿನಲ್ಲಿ ಒಂದು ಪ್ರಬಂಧ ವನ್ನು ಬರೆದು ಛಂದೋಂಬುಧಿಯಲ್ಲಿ ಪೀಠಿಕೆ ರೂಪವಾಗಿ ಪ್ರಕಟಿಸಿದರು. ಇದು ಕನ್ನಡ ಸಾಹಿತ್ಯ ಚರಿತ್ರೆಯ ಸೃಷ್ಟಿಕಾರ್ಯಕ್ಕೆ ನಾಂದಿಯಾಯಿತು. ಅನಂತರ ಮೈಸೂರು ಸರ್ಕಾರದ ವಿದ್ಯಾಭ್ಯಾಸ ಮತ್ತು ಪುರಾತನ ವಿಷಯ ಸಂಶೋಧನಾ ಇಲಾಖೆಗಳ ಅಧ್ಯಕ್ಷರಾಗಿದ್ದ ಮತ್ತೊಬ್ಬ ಪಾಶ್ಚಾತ್ಯ ವಿದ್ವಾಂಸ ಲೂಯಿಸ್‌ರೈಸ್ ಅವರು ನಾಡಿನ ಉದ್ದಗಲಕ್ಕೂ ಸಂಚರಿಸಿ ಅನೇಕ ಓಲೆಗರಿಗಳನ್ನು ಸಂಗ್ರಹಿಸಿ, ಕಾಗದದ ಮೇಲೆ ಪ್ರತಿ ಮಾಡಿಸಿ, ಪರಿಷ್ಕರಿಸಿ, ಕನ್ನಡ ಭಾಷಾವ್ಯಾಸಂಗಕ್ಕೆ ಅನುಕೂಲವಾಗುವಂತೆ ನಾಗವರ್ಮನ ಭಾಷಾಭೂಷಣ (1898), ಭಟ್ಟಾಕಳಂಕನ ಶಬ್ದಾನುಶಾಸನ (1890), ಶ್ರೀ ವಿಜಯನ ಕವಿರಾಜಮಾರ್ಗ (1898) ಮತ್ತು ನಾಗವರ್ಮನ ಕಾವ್ಯಾವಲೋಕನ (1903) ಲಕ್ಷಣಗ್ರಂಥಗಳನ್ನೂ ಪಂಪರಾಮಾಯಣ (1892) ಮತ್ತು ಪಂಪಭಾರತ (1898)

---

[2] ಶ್ರೀಸಾಹಿತ್ಯ, ಪು. 409.

ಕಾವ್ಯಗಳನ್ನೂ ಪ್ರಕಟಪಡಿಸಿದ್ದಲ್ಲದೆ, ನಾಡಿನಾದ್ಯಂತ ಸಂಚರಿಸಿ ಸಂಗ್ರಹಿಸಿದ್ದ ಶಾಸನ ಮುಂತಾದುವುಗಳ ಸಹಾಯದಿಂದ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದಂತೆ ಅನೇಕ ಹೊಸ ಸಂಗತಿಗಳನ್ನು ಕಂಡುಹಿಡಿದು ಇಂಗ್ಲಿಷಿನಲ್ಲಿ ಒಂದು ಪ್ರಬಂಧವನ್ನು ಬರೆದು ಶಬ್ದಾನುಶಾಸನಕ್ಕೆ ಪೀಠಿಕೆಯಾಗಿ (1890) ಸೇರಿಸಿದರು. ತಮ್ಮ ಮೈಸೂರು ಗೆಜೆಟಿಯರ್‌ನಲ್ಲಿಯೂ ಸಂಕ್ಷೇಪವಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯದ ವಿಚಾರವಾಗಿ ಒಂದು ಅಧ್ಯಾಯವನ್ನು ಸೇರಿಸಿದರು. ಇದು ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣದಲ್ಲಿ ಎರಡನೆಯ ಹಂತವಾಯಿತು. ಇದೇ ಸಮಯದಲ್ಲಿ ಈ ವಿದೇಶೀ ವಿದ್ವಾಂಸರಜೊತೆಗೆ ಬಿ. ಮಲ್ಲಪ್ಪ, ಎಸ್. ಜಿ. ನರಸಿಂಹಾಚಾರ್ಯ, ಆರ್. ನರಸಿಂಹಾಚಾರ್ಯ, ಎಂ. ಎ. ರಾಮಾನುಜಯ್ಯಂಗಾರ್ಯರು ಅನೇಕ ಗ್ರಂಥಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ, ಪ್ರಕಟಿಸಿದರು. ಆರ್. ನರಸಿಂಹಾಚಾರ್ಯರು ಮೊದಮೊದಲು ಇವರ ಸಹಾಯದಿಂದ ಕನ್ನಡ ಕವಿಚರಿತೆ, ಪ್ರಥಮ ಸಂಪುಟವನ್ನು ಹೊರ ತಂದರು. ಅನಂತರ ಎರಡು, ಮೂರನೆಯ ಸಂಪುಟಗಳು ಹೊರಬಂದವು. ಇದು ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣಕಾರ್ಯದಲ್ಲಿ ಮೂರನೆಯ ಹಂತವಾಯಿತಲ್ಲದೆ ಕನ್ನಡ ಸಾಹಿತ್ಯ ಚರಿತ್ರೆಯ ಸ್ಪಷ್ಟರೂಪರೇಷೆಗಳಿಗೆ ನಾಂದಿಯಾಯಿತು. ಇವೆಲ್ಲವುಗಳ ಸಹಾಯದಿಂದ ಕನ್ನಡ ಸಾಹಿತ್ಯದ ಕ್ರಮಬದ್ಧವಾದ ಚಾರಿತ್ರಿಕ ಅಭ್ಯಾಸವನ್ನು ಮಾಡಿ ಮತ್ತೊಬ್ಬ ಪಾಶ್ಚಾತ್ಯ ವಿದ್ವಾಂಸರಾದ ಇ.ಪಿ. ರೈಸ್ ಅವರು ಇಂಗ್ಲಿಷಿನಲ್ಲಿ 'A History of Kanarese Literature'* ಗ್ರಂಥವನ್ನು (1915) ಬರೆದರು. ಇದರ ಸಂಸ್ಕರಣಗೊಂಡ ಎರಡನೆಯ ಆವೃತ್ತಿ 1920 ರಲ್ಲಿ ಅವರ ಸಂಪಾದಕತ್ವದಲ್ಲಿಯೇ ಹೊರ ಬಂದಿತು. ಆ ಷ್ಟೊಂದು ಪ್ರಮುಖರಲ್ಲದ ಕೆಲವರು ಕವಿಗಳನ್ನು ಬಿಟ್ಟು, ಸಾಧ್ಯವಾದಷ್ಟು ಪ್ರಾದೇಶಿಕ ಬಣ್ಣ ಕೊಟ್ಟು, ಆ ಕವಿಗಳು ಬಾಳಿದ ಕಾಲಮಾನದ ಹಿನ್ನೆಲೆಯನ್ನೂ, ಅವರು ನಂಬಿದ ಧರ್ಮನಿಷ್ಠೆಯ ಸಂಪ್ರದಾಯಗಳ ವಾತಾವರಣವನ್ನೂ ಚಿತ್ರಿಸಿ, ಇಂಗ್ಲಿಷ್ ಓದುಗನಿಗಾಗಿ ಇದರಲ್ಲಿ ಬಂದಿರುವ ಅನೇಕ ಭಾರತೀಯ ವಿಶಿಷ್ಟ ಶಬ್ದಗಳಿಗೆ ವಿವರಣೆಯನ್ನು ಕೊಟ್ಟು ಈ ಕನ್ನಡ ಸಾಹಿತ್ಯ ಚರಿತ್ರೆಯನ್ನು ಇಂಗ್ಲಿಷಿನಲ್ಲಿ ಬರೆದಿದ್ದಾರೆ. ಕನ್ನಡ ಸಾಹಿತ್ಯದ ಒಂದು ಪರಿಪೂರ್ಣ ಕಲ್ಪನೆಯನ್ನು ತಂದುಕೊಟ್ಟ ಜರ್ಮನಿಯ ಧರ್ಮೋಪದೇಶಕರಾದ ವರ್ಥ್ (Wurth), ಕಿಟೆಲ್ ಮತ್ತು ಲೂಯಿಸ್‌ರೈಸ್ ಹಾಗೂ ಆರ್. ನರಸಿಂಹಾಚಾರ್ಯರನ್ನು ಗೌರವಪೂರ್ವಕವಾಗಿ ಸ್ಮರಿಸಿರುವುದಲ್ಲದೆ ತಮ್ಮ ಗ್ರಂಥವನ್ನು ಪ್ರಾಕ್ತನ ವಿಮರ್ಶಾ

* 'ಕನ್ನಡ ಸಾಹಿತ್ಯ ಚರಿತ್ರೆ' (E.P.R.), ಅನು : ಸಂಗಮನಾಥ ಹಂಡಿ ಮತ್ತು ಕು. ಪೌಲೀನ ನಂದಗಾಂವ.

ವಿಚಕ್ಷಣ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯ ಅವರಿಗೆ ಅರ್ಪಿಸಿ ತಮ್ಮ ವಿದ್ವಜ್ಜನ ಪ್ರೀತಿಯನ್ನೂ ಅವ್ಯಾಜ ಪ್ರೇಮವನ್ನೂ ಮೆರೆದಿದ್ದಾರೆ. ಈ ವಿದ್ವಾಂಸರನ್ನು ಸ್ಮರಿಸಿ, ಅವರ ಗ್ರಂಥಗಳಿಂದ ಸಹಾಯ ಪಡೆದು ಬಿ.ಎಂ.ಶ್ರೀ ಅವರು ತಮ್ಮ 'ಕನ್ನಡ ಸಾಹಿತ್ಯ ಚರಿತ್ರೆ'ಯನ್ನು ಬರೆದಿದ್ದಾರೆ.

'ಸಾಹಿತ್ಯ ಚರಿತ್ರೆಯ ವಿಷಯಗಳು' ಎಂಬ ಎರಡನೆಯ ಭಾಗದಲ್ಲಿ ಸಾಹಿತ್ಯ ಚರಿತ್ರೆಯಲ್ಲಿ ಏನಿರಬೇಕು ಎಂಬುದನ್ನು ಪ್ರಸ್ತಾಪಿಸುವಾಗ ಸಾಹಿತ್ಯದ ಲಕ್ಷಣ, ಕವಿಗಳ ಚರಿತ್ರೆ ಮತ್ತು ಕಾಲ ಹಾಗೂ ಸಾಹಿತ್ಯ ವಿಭಾಗ ಎಂಬುದಾಗಿ ವಿಂಗಡಿಸಿಕೊಂಡಿದ್ದಾರಲ್ಲದೆ ಅವುಗಳ ಅಧ್ಯಯನದ ರೀತಿ-ವಿಧಾನಗಳನ್ನು ಗೊತ್ತುಪಡಿಸಿದ್ದಾರೆ. ಅವರ ಈ ಪದ್ಧತಿಗಳನ್ನು ಇಂದಿಗೂ ಬಳಸುತ್ತಿರುವುದನ್ನು ಕಾಣಬಹುದು. "........ಕೇವಲ ಜ್ಞಾನಪ್ರಸಾರಣೆಗಾಗಿ, ಪಾಂಡಿತ್ಯ ಪ್ರದರ್ಶನಕ್ಕಾಗಿ ಬರೆದ ಗ್ರಂಥಗಳಿಗಿಂತಲೂ, ವಿಷಯ ವೇನೇ ಆಗಿರಲಿ, ಸರಸ್ವತೀ ಪ್ರಸಾದವನ್ನು ಪಡೆದು, ರಸೋತ್ಪಾದನ ಶಕ್ತಿ ಕಲ್ಪನಾಶಕ್ತಿ ಗಳಿಂದ ಕೂಡಿ, ತನ್ನದೇ ಒಂದು ಪ್ರತಿಭೆಯೂ ರೀತಿಯೂ ವ್ಯಕ್ತಿತ್ವವೂ ತನ್ನ ಕಾವ್ಯದಲ್ಲಿ ಉಕ್ಕುವಂತೆ ಮಾಡಿ, ಓದುವವರ ಹೃದಯವನ್ನು ಹೊಕ್ಕು, ಅಲ್ಲಿ ಸೌಂದರ್ಯದ, ಆನಂದದ ಅನುಭವವನ್ನುಂಟುಮಾಡಬಲ್ಲ ಕವಿಗಳ ಗ್ರಂಥಗಳೇ ಸಾಹಿತ್ಯವೆನ್ನಿಸಿಕೊಳ್ಳುವುದಕ್ಕೆ ಯೋಗ್ಯವಾದವುಗಳೆಂದು ಹೇಳಬೇಕಾಗುತ್ತದೆ....ಆದರೆ ಶುಷ್ಕಪಾಂಡಿತ್ಯವೂ, ಭಾಷಾಡಂಬರವೂ, ಸಾಧಾರಣ ಭಾವಗಳೂ, ಬರಿಯ ತಿಳಿವಳಿಕೆಯ ಸಂಗತಿಗಳೂ ಸಾಹಿತ್ಯವೆನ್ನಿಸಲಾರವು. ಕವಿಯಲ್ಲದವನ ಕರ್ಮ ಕಾವ್ಯ ವಾಗಲಾರದು,"[3] ಎಂದು ಸಾಹಿತ್ಯದ ಲಕ್ಷಣವನ್ನು ತಿಳಿಸುತ್ತಲೇ ಸಾಹಿತ್ಯ ಹೇಗಿರಬೇಕು, ಹೇಗಿರಬಾರದು ಎಂಬುದನ್ನು ತಿಳಿಸುತ್ತಾರೆ.

ಕವಿಗಳ ಚರಿತ್ರೆ ಮತ್ತು ಕಾಲವನ್ನು ನಿರ್ಧರಿಸುವಲ್ಲಿ 1) ಕವಿಯೇ ಹೇಳಿ ಕೊಂಡಿರುವ ಗ್ರಂಥಸಮಾಪ್ತಿಯ ಕಾಲ, 2) ಶಾಸನಗಳು, 3) ಪೂರ್ವಕವಿ ಪಂಕ್ತಿ ಯಲ್ಲಿ ಕವಿಯು ಹೆಸರಿಸಿರುವ ಕವಿಗಳು, 4) ಅನ್ಯಕವಿಗಳಿಂದ ತೆಗೆದುಕೊಂಡಿರುವ ಉದ್ಧರಣ, ಅನುಕರಣಗಳು, 5) ಪ್ರಚಲಿತ ಐತಿಹ್ಯಗಳು ಹಾಗೂ 6) ಕಾವ್ಯದಲ್ಲಿ ಕಂಡುಬರುವ ಮತ, ವಿಷಯ, ರೂಪ, ಶೈಲಿ ಮುಂತಾದುವುಗಳನ್ನು ಗಮನಿಸಿ ಸತ್ಯಾಂಶಗಳನ್ನು ಹೆಕ್ಕಿ ಪಡೆಯಬೇಕೆಂದು ಹೇಳಿದ್ದರೂ ಅವು ಸ್ವಯಂ ಪರಿಪೂರ್ಣ ಗಳಲ್ಲವೆಂಬುದನ್ನು ಗಮನದಲ್ಲಿರಿಸಿಕೊಳ್ಳಬೇಕೆಂದು ಎಚ್ಚರಿಸುತ್ತಾರಲ್ಲದೆ, ಬಲವಾದ

---

[3] ಅದೇ. ಪು. ೪೧೦.

ಆಧಾರಗಳಿಂದ (ಆಂತರಿಕ ಹಾಗೂ ಬಾಹ್ಯ) ದೃಢಪಡಿಸಿಕೊಳ್ಳಬೇಕೆಂಬುದನ್ನು ಉದಾಹರಣೆಗಳ ಮೂಲಕ ತಿಳಿಸಿದ್ದಾರೆ,

ಕನ್ನಡ ಸಾಹಿತ್ಯವು ನಡೆದುಬಂದಿರುವ ದಾರಿಯನ್ನು ಗಮನಿಸಿ ಸಾಹಿತ್ಯ ಚರಿತ್ರೆಯನ್ನು ವಿಭಾಗಿಸುವ ಅನೇಕ ಪದ್ಧತಿಗಳನ್ನು ಚರ್ಚಿಸಿದ್ದಾರೆ. ಸಾಹಿತ್ಯ ವಿಭಾಗಕ್ರಮ ಅತ್ಯಂತ ಸೂಕ್ಷ್ಮವೂ, ಕಠಿಣವೂ ಆದ ಕೆಲಸ. ಕಾಲ-ಮತಕ್ಕನುಸಾರವಾಗಿ ವಿಭಾಗಿಸಬಹುದೆಂದೂ ಹೇಳಿ, ಕಾಲಮಾರ್ಗದಲ್ಲಿನ ಗುಣದೋಷಗಳನ್ನು ವಿಚಾರಮಾಡಿ, ಅದು ಹೆಚ್ಚು ಔಚಿತ್ಯಪೂರ್ಣವಲ್ಲವೆಂದು ಹೇಳಿ, ಕೊನೆಗೆ ಮತಕ್ಕನುಸಾರವಾದ ವಿಭಾಗವನ್ನು ಮಾಡುತ್ತಾರೆ. ಜಿನ, ಶಿವ, ವಿಷ್ಣು ಪ್ರಾಧಾನ್ಯವನ್ನು ಗುರುತಿಸಿ ಜೈನಯುಗ, ವೀರಶೈವಯುಗ, ವೈಷ್ಣವ/ಬ್ರಾಹ್ಮಣ ಯುಗ ಹಾಗೂ ಆಧುನಿಕ / ಇಂಗ್ಲಿಷ್ ಯುಗವೆಂದು ವಿಭಾಗಿಸಿದ್ದಾರೆ. ಹತ್ತನೇ ಶತಮಾನದವರೆಗಿನ ಅವಧಿಯನ್ನು ಆರಂಭ ಕಾಲವೆಂದೂ 10-19ನೇ ಶತಮಾನದ ಕಾಲವನ್ನು ಮತಪ್ರಾಬಲ್ಯ-ಜೈನಕವಿಗಳು 10ನೇ ಶತಮಾನದಿಂದ, ವೀರಶೈವ ಕವಿಗಳು 12ನೇ ಶತಮಾನದಿಂದ—ಕಾಲವೆಂದೂ, 19ನೇ ಶತಮಾನದಿಂದ ನವೀನ ಕಾಲವೆಂದೂ ವಿಭಾಗ ಮಾಡಿದ್ದಾರೆ.

ಆರಂಭಕಾಲದಲ್ಲಿ ಕರ್ನಾಟಕದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಭಾಷಾ ಪ್ರಭಾವಗಳ ಹಿನ್ನೆಲೆಯನ್ನು ವಿಚಾರ ಮಾಡಿ, ಆ ಹಿನ್ನೆಲೆಯಲ್ಲಿ ಸೃಷ್ಟಿಯಾದ ಸಾಹಿತ್ಯ ಧರ್ಮವನ್ನು ಗಮನಿಸಿ "....ಆ ಅಂಶಗಳ ಪರಾಮರ್ಶೆಯಿಂದ ಸು. 6-7ನೇ ಶತಮಾನಗಳವರೆಗೆ ಸಂಸ್ಕೃತ, ಮತ, ನಾಗರಿಕತೆ ಮತ್ತು ಸಾಹಿತ್ಯಜ್ಞಾನ ಇವು ಕನ್ನಡ ಜನರಲ್ಲಿ ವ್ಯಾಪಿಸಿ ಅವರ ಭಾಷೆ ಪುಷ್ಟಿಯಾಗಿ, ಕಾವ್ಯಕರ್ಮಕ್ಕೆ ಸಾಧ್ಯವಾಯಿತೆಂದೂ, ಆರಂಭವಾದಾಗ ಸಂಸ್ಕೃತದ ಸಂಸ್ಕಾರ ಬಲವೇ ಸರ್ವವ್ಯಾಪಿಯಾಗಿತ್ತೆಂದೂ, ಬಹುಶಃ ಅಚ್ಚಗನ್ನಡದಲ್ಲಿ, ಕನ್ನಡ ಛಂದಸ್ಸಿನಲ್ಲಿ ಕವಿತ್ವವಿದ್ದು ನಶಿಸಿಹೋಗಿ ಆ ಕಾಲದ ಗ್ರಂಥಗಳಲ್ಲಿ ತನ್ನ ಕೆಲವು ಚಿಹ್ನೆಗಳನ್ನು ಸೇರಿಸಿ ಹಾಡಿನ ರೂಪದಲ್ಲಿ ಜನಸಾಮಾನ್ಯರಲ್ಲಿ ಬಳಕೆಯಲ್ಲಿರುತ್ತಾ ವೀರಶೈವರ ಪ್ರೋತ್ಸಾಹದಲ್ಲಿ ಮತ್ತೆ ತಲೆಯೆತ್ತಿತೆಂದೂ ಊಹಿಸಬಹುದಾಗಿದೆ.'[5] ಎಂದು ಹೇಳುತ್ತಾರೆ. ನಂತರದ 7 ರಿಂದ 10ನೇ ಶತಮಾನದವರೆಗೆ ಗ್ರಂಥಗಳ ಮತ್ತು ಶಾಸನಗಳ ಆಧಾರದಿಂದ ನಿಶ್ಚಯಿಸಬಹುದಾದ ಕವಿಗಳನ್ನು ಈ ಕೆಳಕಂಡಂತೆ ಸಂಗ್ರಹಿಸಿದ್ದಾರೆ.

ಶಾಸನ ಮತ್ತು ಭಟ್ಟಾಕಳಂಕ ದೇವಚಂದ್ರರ ಹೇಳಿಕೆಯಿಂದ ಶ್ರೀವರ್ಧದೇವನು ಸು. ಕ್ರಿ. ಶ. 650 ರಲ್ಲಿದ್ದನೆಂದೂ ಚೂಡಾಮಣಿ ಕಾವ್ಯವನ್ನು ರಚಿಸಿದನೆಂದೂ

---

[5] ಅದೇ, ಪು. ೪೨೩

ಹೇಳುತ್ತಾರೆ. ನೃಪತುಂಗನ ಹೇಳಿಕೆಯಿಂದ ದುರ್ವಿನೀತನು 7ನೇ ಶತಮಾನದಲ್ಲಿದ್ದ ನೆಂದೂ ಕಿರಾತಾರ್ಜುನೀಯದ 15ನೇ ಸರ್ಗಕ್ಕೆ ವ್ಯಾಖ್ಯಾನ ಬರೆದಿದ್ದಾನೆಂದೂ, ಮತ್ತೊಬ್ಬ ಕವಿ ಶ್ರೀವಿಜಯನು ನೃಪತುಂಗನ ಹೆಸರಿನಲ್ಲಿ ಕವಿರಾಜಮಾರ್ಗವನ್ನು ಬರೆದಿದ್ದಾನೆಂದೂ ಹೇಳುತ್ತಾರೆ. ನೃಪತುಂಗ (814-77) ನೇ ಕವಿರಾಜಮಾರ್ಗ ಕರ್ತೃವೆಂದು ಭಾವಿಸಿ ಕವಿರಾಜಮಾರ್ಗದ ಪರಿಚಯವನ್ನು ಸ್ವಲ್ಪ ವಿಸ್ತಾರ ವಾಗಿಯೇ ನೀಡುತ್ತಾರೆ. ಕೇಶಿರಾಜ ಮಲ್ಲಿಕಾರ್ಜುನ, ವಿದ್ಯಾನಂದರ ಹೇಳಿಕೆಯಿಂದ ಅಸಗ, ಗುಣನಂದಿ, ಗುಣವರ್ಮರ ವಿಷಯವನ್ನು ಸಂಕ್ಷೇಪವಾಗಿ ತಿಳಿಸುತ್ತಾರೆ. ಒಟ್ಟಿನಲ್ಲಿ ಹತ್ತನೇ ಶತಮಾನದ ಹೊತ್ತಿಗೆ ಸಾಹಿತ್ಯದ ದಾರಿ ಸವೆದು ಸಂಸ್ಕೃತ, ಪ್ರಾಕೃತ ಭಾಷೆಗಳಿಂದ ಶಬ್ದಗಳನ್ನು ಸ್ವೀಕರಿಸಿ ಭಾಷೆ ಪ್ರೌಢವಾಗಿ ಬೆಳೆದು ಮುಂದಿನ ಪ್ರೌಢ ಕಾವ್ಯಗಳ ರಚನೆಗೆ ಹದವಾದ ಭೂಮಿಕೆ ಸಿದ್ಧವಾಯಿತು ಎಂಬುದನ್ನು ನಿರೂಪಿಸಿದ್ದಾರೆ.

ನಾಲ್ಕನೆಯ ಭಾಗದಲ್ಲಿ ಜೈನಯುಗವನ್ನು ಪ್ರಾರಂಭಿಸಿ ಜೈನಕವಿಗಳ ಕಾವ್ಯ ವಿಮರ್ಶೆಯ ಮೂಲಕ ಸಾಹಿತ್ಯ ಚರಿತ್ರೆಯನ್ನು ಆರಂಭಿಸುತ್ತಾರೆ. ರಾಜಕೀಯ ಹಿನ್ನೆಲೆಯಲ್ಲಿ ಕಾಲಮಾನವನ್ನು ದೃಷ್ಟಿಯಲ್ಲಿಟ್ಟುಕೊಂಡು "ರಾಷ್ಟ್ರಕೂಟ-ಚಾಳುಕ್ಯ-ಗಂಗರ ಕಾಲದಲ್ಲಿ (941-1100) ಬರುವ ಪಂಪ (941) : ಆದಿಪುರಾಣ, ವಿಕ್ರಮಾರ್ಜುನವಿಜಯ ; ಪೊನ್ನ (ಸು. 950) ; ಶಾಂತಿಪುರಾಣ, ಭುವನೈಕ ರಾಮಾಭ್ಯುದಯ ; ಚಾವುಂಡರಾಯ (978) : ತ್ರಿಷಷ್ಟಿ ಲಕ್ಷಣ ಮಹಾಪುರಾಣ (ಗದ್ಯ) ; ನಾಗವರ್ಮ-೧ (ಸು. 990) : ಕಾದಂಬರಿ, ಛಂದೋಂಬುಧಿ (ಛಂದಸ್ಸು); ರನ್ನ (993) : ಅಜಿತಪುರಾಣ, ಸಾಹಸಭೀಮ ವಿಜಯ ; ಶ್ರೀಧರಾಚಾರ್ಯ (1049) : ಚಂದ್ರಪ್ರಭಚರಿತೆ, ಜಾತಕ ತಿಲಕ (ಜ್ಯೋತಿಷ) ; ಹಾಗೂ ಶಾಂತಿನಾಥ (1068) : ಸುಕುಮಾರ ಚರಿತೆ ಕವಿ-ಕಾವ್ಯಗಳನ್ನು ಆರಿಸಿಕೊಂಡಿದ್ದಾರೆ.

ನಂತರ ಕಳಚುರ್ಯ-ಹೊಯ್ಸಳರ ಕಾಲದಲ್ಲಿ (1100-1350) ಬರುವ ನಾಗಚಂದ್ರ (ಸು. 1100) : ರಾಮಚಂದ್ರ ಚರಿತ ಪುರಾಣ, ಮಲ್ಲಿನಾಥ ಪುರಾಣ ; ಬ್ರಹ್ಮಶಿವ (ಸು. 1100) : ಸಮಯ ಪರೀಕ್ಷೆ (ಕಂದ-ವೃತ್ತ) ; ನಯಸೇನ (1112): ಧರ್ಮಾಮೃತ ; ಕರ್ಣಪಾರ್ಯ (ಸು. 1140) : ನೇಮಿನಾಥಪುರಾಣ ; ನಾಗವರ್ಮ-೨ (ಸು. 1145) : ಕಾವ್ಯಾವಲೋಕನ (ಅಲಂಕಾರ, ವ್ಯಾಕರಣ), ಕರ್ಣಾಟಕ ಭಾಷಾ ಭೂಷಣ (ವ್ಯಾಕರಣ), ವಸ್ತುಕೋಶ (ನಿಘಂಟು) ; ವೃತ್ತವಿಲಾಸ (ಸು. 1160) : ಧರ್ಮಪರೀಕ್ಷೆ ; ನೇಮಿಚಂದ್ರ (ಸು, 1170) : ಲೀಲಾವತಿ, ನೇಮಿನಾಥಪುರಾಣ ; ಬೊಪ್ಪಣ (ಸು. 1180) : ಗೊಮ್ಮಟ ಸ್ತುತಿ (ವೃತ್ತ) ; ಅಗ್ಗಳ (1189) :

ಚಂದ್ರಪ್ರಭ ಪುರಾಣ ; ಆಚಣ್ಣ (ಸು. 1195) : ವರ್ಧಮಾನ ಪುರಾಣ ; ಬಂಧುವರ್ಮ (ಸು. 1200) : ಹರಿವಂಶಾಭ್ಯುದಯ, ಜೀವಸಂಬೋಧನೆ ; ಪಾರ್ಶ್ವ (1205) : ಪಾರ್ಶ್ವನಾಥಪುರಾಣ; ಜನ್ನ (1209): ಯಶೋಧರ ಚರಿತೆ (ಕಂದವೃತ್ತ), (1230) ; ಅನಂತನಾಥಪುರಾಣ ; ಶಿಶುಮಾಯಣ (ಸು. 1233) : ತ್ರಿಪುರ ದಹನ ಸಾಂಗತ್ಯ, ಅಂಜನಾ ಚರಿತ್ರೆ (ಸಾಂಗತ್ಯ) ; ಗುಣವರ್ಮ-೨ (ಸು. 1235) : ಪುಷ್ಪದಂತಪುರಾಣ, ಚಂದ್ರನಾಥಾಷ್ಟಕ ; ಕಮಲಭವ (ಸು. 1235) : ಶಾಂತೀಶ್ವರ ಪುರಾಣ ; ಆಂಡಯ್ಯ (ಸು. 1235) : ಕಬ್ಬಿಗರ ಕಾವ ; ಮಲ್ಲಿಕಾರ್ಜುನ (ಸು. 1245) : ಸೂಕ್ತಿಸುಧಾರ್ಣವ (ಕಾವ್ಯಸಂಗ್ರಹ) ; ಮಹಾಬಲ (1254) : ನೇಮಿನಾಥಪುರಾಣ ; ಕೇಶಿರಾಜ (1260) : ಶಬ್ದಮಣಿದರ್ಪಣ (ವ್ಯಾಕರಣ) ; ಕುಮುದೇಂದು (ಸು. 1275) : ರಾಮಾಯಣ (ಷಟ್ಪದಿ) ; ನಾಗರಾಜ (1331) : ಪುಣ್ಯಾಸ್ರವ ಕವಿ-ಕಾವ್ಯಗಳನ್ನು ಆರಿಸಿಕೊಂಡಿದ್ದಾರೆ.

ವಿಜಯನಗರದ ರಾಜರ ಕಾಲದಲ್ಲಿ (1350-1565) ಬರುವ ಮಂಗರಾಜ (ಸು. 1360) : ಖಗೇಂದ್ರಮಣಿದರ್ಪಣ (ವೈದ್ಯ) ; ಮಧುರ (ಸು. 1385) : ಧರ್ಮನಾಥ ಪುರಾಣ ; ಆಯತವರ್ಮ (ಸು. 1400) : ರತ್ನಕರಂಡಕ ; ಭಾಸ್ಕರ (1424) : ಜೀವಂಧರ ಚರಿತೆ (ಷಟ್ಪದಿ) ; ಬೊಮ್ಮರಸ (ಸು. 1485) : ಸನತ್ಕುಮಾರ ಚರಿತೆ (ಷಟ್ಪದಿ), ಜೀವಂಧರ ಸಾಂಗತ್ಯ ; ಮಂಗರಸ (1508) : ಜಯನೃಪ ಕಾವ್ಯ (ಷಟ್ಪದಿ), ಸಂಯಕ್ತ್ವಕೌಮುದಿ (ಷಟ್ಪದಿ) ; ವಿದ್ಯಾನಂದ (1533) : ಕಾವ್ಯಸಾರ (ಕಾವ್ಯಸಂಗ್ರಹ) ; ಸಾಳ್ವ (ಸು. 1550) : ಭಾರತ (ಷಟ್ಪದಿ), ರಸರತ್ನಾಕರ (ಅಲಂಕಾರ) ; ದೊಡ್ಡಯ್ಯ (ಸು. 1550) : ಚಂದ್ರಪ್ರಭ ಚರಿತೆ (ಸಾಂಗತ್ಯ) ; ರತ್ನಾಕರ (1557) : ಭರತೇಶ ವೈಭವ (ಸಾಂಗತ್ಯ) ಶತಕಗಳು ಕವಿಕಾವ್ಯಗಳನ್ನು ಆರಿಸಿಕೊಂಡಿದ್ದಾರೆ.

ಮೈಸೂರು ರಾಜರ ಕಾಲದ (1565-1800) ಬಾಹುಬಲಿ (ಸು. 1565) : ನಾಗಕುಮಾರ ಕಥೆ (ಸಾಂಗತ್ಯ) ; ಪದ್ಮರಸ (1599) : ಶೃಂಗಾರ ಕಥೆ (ಸಾಂಗತ್ಯ) ; ಭಟ್ಟಾಕಳಂಕ (1604) : ಕರ್ಣಾಟಕ ಶಬ್ದಾನುಶಾಸನ (ಸಂಸ್ಕೃತ ಸೂತ್ರ ವ್ಯಾಕರಣ) ಪಂಚಬಾಣ (1614) : ಭುಜಬಲಿ ಚರಿತೆ (ಸಾಂಗತ್ಯ) ; ಚಂದ್ರಮ (1646) : ಗೊಮ್ಮಟ ಚರಿತೆ (ಸಾಂಗತ್ಯ) ; ಧರಣಿಪಂಡಿತ (ಸು. 1650) : ಬಿಜ್ಜಳರಾಯ ಚರಿತೆ (ಸಾಂಗತ್ಯ) ; ಚಿದಾನಂದ (ಸು. 1680): ಮುನಿವಂಶಾಭ್ಯುದಯ (ಸಾಂಗತ್ಯ); ದೇವಚಂದ್ರ (1797) : ರಾಮಕಥಾವತಾರ (1830), ರಾಜಾವಳೀ ಕಥೆ (ಗದ್ಯ) ;

ಚಂದ್ರಸಾಗರ ವರ್ಣಿ (1810) : ಕದಂಬ ಪುರಾಣ (ಷಟ್ಪದಿ), ಪರಶುರಾಮ ಭಾರತ (ಷಟ್ಪದಿ), ಭವ್ಯಾಮೃತ (ಕಂದ)—ಕವಿ-ಕಾವ್ಯಗಳನ್ನು ಆರಿಸಿಕೊಂಡಿದ್ದಾರೆ."[5]

ಹತ್ತನೆಯ ಶತಮಾನ ಕನ್ನಡ ಸಾಹಿತ್ಯದ ಇಬ್ಬರು-ಮೂವರು ಮಹಾಕವಿಗಳಿಂದ ಕವಿತಾ ಸ್ರಾಮ್ರಾಜ್ಯದ ತಳಹದಿಯನ್ನು ಭದ್ರವಾಗಿ ಹಾಕಿ ಚಿನ್ನದ ಮೊದಲ ಬೆಳೆಯನ್ನು ಬೆಳೆಯಿತು. ಉತ್ತರ ಕರ್ನಾಟಕದಲ್ಲಿ ಚಾಳುಕ್ಯ ರಾಷ್ಟ್ರಕೂಟರ ಆಶ್ರಯದಲ್ಲಿ ಪಂಪ-ಪೊನ್ನರೂ, ದಕ್ಷಿಣ ಕರ್ನಾಟಕದಲ್ಲಿ ಗಂಗರ ಆಶ್ರಯದಲ್ಲಿ ಚಾವುಂಡರಾಯ, ನಾಗವರ್ಮರೂ, ಉಭಯರ ಆಶ್ರಯದಲ್ಲಿ ರನ್ನನೂ, ಧಾರ್ಮಿಕ, ಲೌಕಿಕ, ಶೃಂಗಾರ ಕಾವ್ಯಗಳನ್ನೂ, ಲಕ್ಷಣ ಗ್ರಂಥವನ್ನೂ ರಚಿಸಿ ಮುಂದಿನ ಕವಿಗಳಿಗೆ ಆದರ್ಶಪ್ರಾಯರಾದರು. ಹಿಂದಿನ ಕಾವ್ಯಗಳ ಸಾರವೆಲ್ಲಾ ಇವರ ಕಾವ್ಯಗಳಲ್ಲಿ ಸೇರಿ ಹೋಯಿತು. ಚಾವುಂಡರಾಯನು ತೀರ್ಥಂಕರರ, ಜೈನರ ಇತಿಹಾಸಗಳ, ಕಥಾಸಾರಾಂಶವನ್ನೆಲ್ಲಾ ಗದ್ಯವಲ್ಲಿ ಸಂಗ್ರಹಿಸಿದನು. ನಾಗವರ್ಮನು ಸಂಸ್ಕೃತ ಮತ್ತು ಕನ್ನಡ ಛಂದಸ್ಸುಗಳನ್ನು ವಿವರಿಸಿ ಪ್ರದರ್ಶಿಸಿದನು. "ರತ್ನತ್ರಯ"ರೆಂದು ಪ್ರಸಿದ್ಧರಾದ ಪಂಪ ಪೊನ್ನರನ್ನರು ಶಾಂತಿ ರಸಪ್ರಧಾನವಾದ ತೀರ್ಥಂಕರ ಚರಿತ್ರೆಗಳನ್ನು; ವೀರರಸ ಪ್ರಧಾನವಾದ ಭಾರತ ರಾಮಾಯಣ ಕಥೆಗಳನ್ನು ಉತ್ತಮವಾದ ಚಂಪೂ ಕಾವ್ಯಗಳಲ್ಲಿ ಎರಕಹೊಯ್ದು ದಿವ್ಯವಿಗ್ರಹಗಳನ್ನಾಗಿ ಮಾಡಿ ನಿಲ್ಲಿಸಿದರು. ನಾಗವರ್ಮನು ಬಾಣನ ಕಾದಂಬರಿಯನ್ನು ಕನ್ನಡಿಸಿ ಅದ್ಭುತರಸ ಶೃಂಗಾರರಸಗಳು ತುಂಬಿರುವ ಪ್ರೇಮ ಕಥೆಗೆ ಮೇಲುಪಂಕ್ತಿಯನ್ನು ಹಾಕಿದನು. ಅಂದಿನಿಂದ ಇಂದಿನವರೆಗೂ, ಸುಮಾರು ಸಾವಿರ ವರ್ಷಗಳ ಕಾಲ, ಧರ್ಮಕಥೆ, ವೀರಕಥೆ, ಪ್ರೇಮಕಥೆಯನ್ನು ಬರೆಯುತಕ್ಕವರಿಗೆಲ್ಲಾ ಪಂಪ, ರನ್ನ ನಾಗವರ್ಮರು "ಗುರುತಾಪ್ರತೀತಿ"ಯನ್ನು ಕೈಕೊಂಡಿದ್ದಾರೆ."[6] ಎಂದು ರಾಷ್ಟ್ರಕೂಟ-ಚಾಳುಕ್ಯ ಗಂಗರ ಕಾಲದ ಸಾಹಿತ್ಯದ ವೈಶಿಷ್ಟ್ಯಗಳ ಸಾರವನ್ನು ಸಂಗ್ರಹವಾಗಿ ನಿರೂಪಿಸಿದ ನಂತರ ಪಂಪನಿಂದ ಆರಂಭಿಸಿ ಆ ಅವಧಿಯ ಕವಿ-ಕಾವ್ಯ ವಿಮರ್ಶೆಯ ಮೂಲಕ ಸಾಹಿತ್ಯ ಚರಿತ್ರೆಯನ್ನು ಬರೆದಿದ್ದಾರೆ.

ಸಾಹಿತ್ಯಚರಿತ್ರೆಯ ವಿಷಯಗಳನ್ನು ಕುರಿತು ವಿವರಿಸುವಾಗ ನಿರೂಪಿಸಿರುವ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಕವಿಗಳ ಚರಿತ್ರೆ, ಕಾಲ ಹಾಗೂ ಕಾವ್ಯ ಹಾಗೂ ಕಾವ್ಯವಿಮರ್ಶೆಯನ್ನು, ಪ್ರತಿಯೊಬ್ಬ ಕವಿಯ ವಿಷಯವನ್ನು ಚರ್ಚಿಸುವಾಗಲೂ, ಮಾಡಿದ್ದಾರೆ. ಪಂಪನ ವಿಕ್ರಮಾರ್ಜುನ ವಿಜಯ ಹಾಗೂ ಆದಿಪುರಾಣ

---

[5] ಅದೇ, ಪು. ೪೨೯–೪೩೦.

[6] ಅದೇ, ಪು. ೪೩೦–೪೩೧.

ಕಾವ್ಯಗಳಲ್ಲಿ ಬರುವ ಕವಿ-ಕಾವ್ಯ ರಸ ವಿಷಯಗಳನ್ನು ಕವಿಯ ಮಾತುಗಳಲ್ಲಿ ವಿವರಿಸಿದ್ದಾರೆ. ಶ್ರೀಯವರು ಪಂಪನ ವ್ಯಕ್ತಿತ್ವ, ಕಾವ್ಯಸೌಶ್ಠ್ಯ ಮುಂತಾದುವುಗಳ ಬಗ್ಗೆ ಹೇಳಿರುವ ಕೆಲವು ಮಾತುಗಳನ್ನೇ ಇಂದಿಗೂ ಸಾಹಿತ್ಯ ಚರಿತ್ರಕಾರರೂ, ವಿಮರ್ಶಕರೂ ಬಳಸುತ್ತಿರುವುದನ್ನು ಗಮನಿಸಿದಾಗ ಅವರ ಕಾವ್ಯವಿಮರ್ಶೆಯ ತೂಕ ಎಂಥದು ಎಂಬುದು ಅರಿವಿಗೆ ಬರುತ್ತದೆ. ರಸವಿಮರ್ಶೆ, ದರ್ಶನ ವಿಮರ್ಶೆಯನ್ನು ಮಾಡುತ್ತಿದ್ದರೂ ಕವಿಯ ನ್ಯೂನತೆಗಳನ್ನು ಮರೆತಿಲ್ಲ. ಆದರೆ ಆ ನ್ಯೂನತೆಗಳನ್ನು ಎತ್ತಿ ತೋರಿಸುವಾಗ ಒರಟಾಗಿ, ನೋವಾಗುವಂತೆ ಝಂಕಿಸದೆ, ನಯವಾಗಿ ಪ್ರಿಯವಾಗಿ ಎತ್ತಿ ತೋರುವುದು ಶ್ರೀಯವರ ಸಮತೋಲನಕ್ಕೆ ಸಾಕ್ಷಿ ನುಡಿಯುತ್ತದೆ. ನಿಜವಾದ ವಿಮರ್ಶಕನ ಪ್ರಾಮಾಣಿಕ ಸ್ಥಿತಿ ಎಂದರೆ ಇದಲ್ಲವೆ! ಕಥಾನಾಯಕ ಅರ್ಜುನನನ್ನು ಅರಿಕೇಸರಿಗೆ ಹೋಲಿಸಿ ವಿಕ್ರಮಾರ್ಜುನ ವಿಜಯವನ್ನು ಬರೆದ. ಕಥಾಮೂಲದಲ್ಲಿಯೇ ಪಂಪ ಜಾರಿದ. ಒಮ್ಮೆ ಅರ್ಜುನ, ಒಮ್ಮೆ ಭೀಮ, ಕಥಾನಾಯಕರಂತೆ ಕಂಡುಬರುವುದನ್ನು ಶ್ರೀಯವರು ಸೊಗಸಾಗಿ ಎತ್ತಿತೋರಿ ಜಾಣ ಪಂಪ ಜಾರಿಬಿದ್ದಿರುವುದನ್ನು ನಯವಾಗಿ ತೋರಿದ್ದಾರೆ. "........ಕಡೆಗೆ ಪಟ್ಟಾಭಿಷೇಕ ಮಾಡುವುದು : ಆಗಬಹುದು : ಪಟ್ಟಕ್ಕೆ ಯಾರು ? ಸುಭದ್ರೆ. ಏಕೆ ? ದ್ರೌಪದಿ ಏನಾದಳು ?—ಅರಿಕೇಸರಿಯ ಮಹಾರಾಣಿ ಯಾದವ ವಂಶದ ರಾಜಪುತ್ರಿಯಾಗಿದ್ದಳೋ ಏನೋ !" "ಯಾದವ ವಂಶಸಂಭೂತೆಯುಮನೇಕಲಕ್ಷಣೋಪೇತೆಯುಮಪ್ಪ ಸುಭದ್ರೆಗೆ ಮಹಾದೇವಿವಟ್ಟಮಂ ಕಟ್ಟಿ .. .... ಪುರುಷೋತ್ತಮನ ತಂಗೆಯುಂ ತಾನುಂ ತುಳಾಪುರುಷಮನಿರ್ದು......" (14-18ವ· ~ 20 ವ). ಇರಲಿ. ಉಂಡದ್ದು ಬಂತು ಸುಭದ್ರೆಗೆ : ನಮೆದದ್ದು ಬಂತು ದ್ರೌಪದಿಗೆ —ನ್ಯಾಯ !"[7] ಕೇವಲ ಕುಂದನ್ನೇ ಹೇಳದೆ ಗುಣವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ವಿಕ್ರಮಾರ್ಜುನನ ವೀರ್ಯ ಪ್ರತಾಪಗಳನ್ನು ವರ್ಣಿಸುವಲ್ಲಿ ಪಂಪನ ಕೌಶಲವನ್ನು ಕೊಂಡಾಡಿದ್ದಾರೆ. ಪ್ರತಿನಾಯಕನಾದ ಕರ್ಣನಿಗಂತೂ ತನ್ನ ಹೃದಯವನ್ನೇ ಅರ್ಪಿಸಿದ್ದನೆಂದು ಹೊಗಳಿದ್ದಾರೆ. ಪಂಪನು ಕರ್ಣನನ್ನು ಚಿತ್ರಿಸಿರುವ ರೀತಿಯನ್ನು ತೊಳೆತೊಳೆಯಾಗಿ ಬಿಡಿಸುತ್ತಾ ಮಹಾಕವಿಯ ಬರವಣಿಗೆಯನ್ನು ಶ್ರೀಯವರು ಹೇಗೆ ಹೊಗಳಿದ್ದಾರೆ ನೋಡಿ— "....ತಿಳಿಯಾದ ಕನ್ನಡ ಶೈಲಿ, ಗಂಭೀರ ಭಾವ ಪ್ರವಾಹ, ಒಂದು ಮಾತು ಹೆಚ್ಚಿಲ್ಲದ ವಾಕ್ಸಂಯಮ, ಸ್ವಾಭಾವಿಕತೆಯನ್ನು ಸ್ಪಷ್ಟವಾಗಿ ಕಂಡ ಕಲ್ಪನಾ ವೈದೃಶ್ಯ ; ಮೈತ್ರಿಯ, ಸ್ವಾಮಿಭಕ್ತಿಯ, ಧರ್ಮನಿಷ್ಠೆಯ, ಸ್ವಾರ್ಥತ್ಯಾಗದ ಪರಾಕಾಷ್ಠೆ—ಈ ಪಂಪನ ಕರ್ಣನ ಮುಂದೆ ವಿಕ್ರಮಾರ್ಜುನನೇನು? ಕಡೆಗೆ ಕೃಷ್ಣನೂ

---

7 ಅದೇ, ಪು. ೪೬೩

ಏನು ? "ಕರ್ಣಂ ತನಗೆಂತುವೊಡಂಬಡದುದಂ ನಿರ್ಣಯಮಾಗಱಿದು ಪೋದ ನಾರಾಯಣಂ" ಸ್ವಲ್ಪ ನಾಚಿಕೆಪಟ್ಟುಕೊಂಡು ಹೋಗಿರಬೇಕಲ್ಲವೆ ?"[8] ಶ್ರೀಯವರ ಈ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ಇಂಥ ಮಾತುಗಳನ್ನು, ವಿಚಾರಪರಿಪ್ಲುತವಾಗಿರುವ ವಿಮರ್ಶಾಖಂಡಗಳನ್ನು ಕಾಣಬಹುದು. ಇದೇ ರೀತಿಯಲ್ಲಿ ತಾವು ಆರಿಸಿಕೊಂಡಿರುವ ಕವಿಗಳ ಮತ್ತು ಅವರ ಕಾವ್ಯಗಳ ವಿಷಯದಲ್ಲಿ ಸಮತೂಕದ ವಿಮರ್ಶೆಯನ್ನು ಮಾಡಿದ್ದಾರೆ. ಆಯಾ ಕಾವ್ಯಗಳಿಂದ ಪ್ರತಿಯೊಂದು ಸಂದರ್ಭದಲ್ಲಿ ಹೇರಳವಾಗಿ ಪದ್ಯಗಳನ್ನು ಎತ್ತಿಕೊಡುತ್ತ ತಮ್ಮನ್ನು ಸಮರ್ಥಿಸಿಕೊಂಡಿದ್ದಾರೆ. ಕಾವ್ಯ ಮುಂತಾದುವುಗಳಲ್ಲಿ ಕಂಡುಬರುವ ಕವಿಯ ಜೀವನ ಚರಿತ್ರೆ, ವ್ಯಕ್ತಿತ್ವ, ಕಾವ್ಯದ ಕಥಾವಸ್ತು, ಕಾವ್ಯಸ್ವರೂಪ, ಕಾವ್ಯಮೌಲ್ಯ ಮುಂತಾದುವುಗಳ ಸಾಧಾರವಾದ ವಿವರವಾದ, ಸಮತೂಕದ ಸಮೀಕ್ಷೆ ಇವರ ಸಾಹಿತ್ಯ ಚರಿತ್ರೆಯಲ್ಲಿ ಎದ್ದುಕಾಣುತ್ತದೆ.

ರನ್ನನನ್ನು ಕುರಿತು ವಿಚಾರ ಮಾಡುವಾಗ ಶ್ರೀಯವರ ಹೃದಯವನ್ನು ನೋಡಿ—"....ಅರ್ಜುನ ಅರಿಕೇಸರಿಯಾಗಿ ಪಂಪನು ದ್ರೌಪದಿಯನ್ನು ಭೀಮನ 'ತಳೋದರಿ'ಯನ್ನಾಗಿ ಮಾಡಬೇಕಾಗಿ, ಕೊನೆಯಲ್ಲಿ ಪಟ್ಟಮಹಿಷಿಯಾಗದಂತೆ ತಳ್ಳಬೇಕಾಗಿ ಸಂಕಟಕ್ಕೆ ಸಿಕ್ಕಿದನು. ರನ್ನನು ಭೀಮನೇ ಸತ್ಯಾಶ್ರಯನೆಂದು ಹೇಳಿ, ತನ್ನ ಪತ್ನಿಯಾದ ದ್ರೌಪದಿಗೆ ಕೇಶವನ್ನು ಕಟ್ಟುವಂತೆ ಮಾಡಿ, ಭೀಮನಿಗೂ ಆಕೆಗೂ ಪಟ್ಟಾಭಿಷೇಕವನ್ನು ಮಾಡುವ ಪುಣ್ಯವನ್ನು ಪಡೆದನು. ಪಂಪನು ಕಗ್ಗಲ್ಲಿನಿಂದ ಅದ್ಭುತ ವಿಗ್ರಹವನ್ನು ಕಡೆದು ಮಹೋನ್ನತಿಯನ್ನೂ ಶಕ್ತಿಯನ್ನೂ ತೋರಿಸಿದರೆ, ರನ್ನನು ಸಣ್ಣ ವಿಗ್ರಹವನ್ನು ಸುಂದರವಾದ ಸೂಕ್ಷ್ಮಕಲಾಕರ್ಮದಲ್ಲಿ ತೋರಿ, ಉನ್ನತಿಯನ್ನೂ ಶಕ್ತಿಯನ್ನೂ ಬಿಡದೆ, ಪಂಪನಿಗೆ ಸರಿತೂಕವಾಗಿ, ಕಡೆಗೆ ಒಂದು ಕೈ ಮೇಲೋ ಎಂಬಂತೆ ಸಾಹಸಭೀಮ ವಿಜಯದಲ್ಲಿ ಕಾಣುವನು....

ಸಾಹಸ ಭೀಮವಿಜಯದಲ್ಲಿ ಎಲ್ಲಕ್ಕೂ ಆಶ್ಚರ್ಯಕರವಾದ ವಿಶೇಷವೆಂದರೆ, ದುರ್ಯೋಧನನ ಪಾತ್ರದಲ್ಲಿ ರನ್ನನ ಸಹಾನುಭೂತಿ : ನೀತಿ ದೃಷ್ಟಿಯಿಂದಲ್ಲ, ಕರುಣ ದೃಷ್ಟಿಯಿಂದ. ಭೀಮನು ಸತ್ಯರಕ್ಷಕ, ಅನ್ಯಾಯ ಶಿಕ್ಷಕ, ಕಡೆಗೆ ಪಟ್ಟಾಭಿಷಿಕ್ತ: ಅವನ ವಿಜಯವೇ ಗ್ರಂಥದ ವಸ್ತು ; ಅವನ ಶೌರ್ಯಪ್ರತಾಪಗಳೇ ಅದರ ಭೇರೀಧ್ವನಿ; ಅವನು ಇರಿವಬೆಡಂಗನಲ್ಲವೆ ? ಆದರೆ ಗಾಂಧಾರಿಯ ತಾಯಿಕರುಳು ರನ್ನಕವಿಯದು : ಸೋತ, ಕೆಟ್ಟ ಶೂರನಲ್ಲಿಯೂ, ಪ್ರತಿನಾಯಕನಲ್ಲಿಯೂ ಕ್ಷಮೆಯ ಮರುಕದ ಕರುಳು ಕರಗಬಹುದಲ್ಲವೇ ? ಕವಿ-ಹೃದಯ—ಉದಾತ್ತ ಕವಿಯ ಹೃದಯ—ಭಗವಂತನ

---

[8] ಅದೇ, ಪು. ೪೬೬

ಹೃದಯದಂತೆ ಮರಣಶಿಕ್ಷೆಯನ್ನು ವಿಧಿಸುವಾಗಲೂ, ಕರುಣದಿಂದ ಮಿಡಿಯುವುದಲ್ಲವೆ? ಮಾನವೀಯತೆ, ಮನುಷ್ಯ ಹೃದಯ, ಮಿಶ್ರವಾದದ್ದು. ಒಳ್ಳೆಯದು ಕೆಟ್ಟದು ನುಲಿದು ಹೆಣೆದುಕೊಂಡದು; ಮಹಾನುಭಾವತೆಯೂ, ನೀಚತನವೂ ಒಬ್ಬನಲ್ಲಿ ಸೇರಿ ಆತನ 'ರುದ್ರನಾಟಕ'ವನ್ನು ಕಾವ್ಯ ಸಹಾನುಭೂತಿಯಿಂದ ವರ್ಣಿಸಬಹುದಲ್ಲವೆ? ಪಂಪನು ಹಾಗೆ ಮಾಡಿದನು: "ಏನಭಿಮಾನಧನಂ ಸುಯೋಧನಂ"! ಭಾಸ ಹಾಗೆ ಮಾಡಿದ್ದನು—ಊರುಭಂಗದಲ್ಲಿ. ರನ್ನನೂ ಹಾಗೆ ಮಾಡಿರುವನು—ತನ್ನ ದುರ್ಯೋಧನನ ಗುಣವಿಮರ್ಶೆಯಲ್ಲಿ. ಭೀಮನನ್ನು ಇಳಿಸಿಲ್ಲ, ಆದರೆ ದುರ್ಯೋಧನನನ್ನು ಏರಿಸಿರುವನು, ಘನತೆಗೊಯ್ದಿರುವನು. ಪಂಪನ ಕರ್ಣನೂ ಹೀಗೆಯೆ—ಅರಿಕೇಸರಿ, ವಿಕ್ರಮಾರ್ಜುನ ನಾಯಕ; ಮೆಚ್ಚಿಗೆ, ಹೊಗಳಿಕೆ ಅವನಿಗೆ; ಆದರೆ ಕಣ್ಣೀರು, ನಿಟ್ಟುಸಿರು—ಮತ್ತೊಂದು ಬಗೆಯ ಮೆಚ್ಚಿಕೆಯೂ ಹೊಗಳಿಕೆಯೂ ಕರ್ಣನಿಗೆ: "ನೆನೆವೊಡೆ ಕರ್ಣನಂ ನೆನೆಯ"! ದುರ್ಯೋಧನನ ಪಾತ್ರ ತನ್ನನ್ನೊದೆದ ಉದ್ಧತ ಭೀಮನ ಪಾತ್ರ ಅಪಾತ್ರವೆನ್ನಿಸುವ ಮಟ್ಟಗೆ ರನ್ನನ ಬುದ್ಧಿ ಮೀರಿ ಹೃದಯ ಹರಿದಿದೆ. ಮುಂದೆ ನಾಗಚಂದ್ರನೂ ರಾವಣನನ್ನು ಹೀಗೆ ಚಿತ್ರಿಸಿರುವನು—ಉದಾತ್ತ ಭಾವದಿಂದ ಉದಾತ್ತ ರಾವಣನನ್ನಾಗಿ. ಸೇಟನ್ ಪಾತ್ರವನ್ನು ವರ್ಣಿಸಿದ ಮಿಲ್ಟನ್ ಕವಿಗೂ, ಬ್ರೂಟಸ್ ಪಾತ್ರವನ್ನು ರಚಿಸಿದ ಷೇಕ್ಸ್‌ಪಿಯರಿಗೂ ಹೀಗಾಗಿದೆ. ಪಾಪಕ್ಕೆ ಶಿಕ್ಷೆ ವಿಧಿ: ಕರುಣಕ್ಕೆ, ಸಹಾನುಭೂತಿಗೆ ಪಾಪಿಯೂ ಮುದ್ದು, ಲೋಕ ಜರೆಯುವುದೇ ತಬ್ಬುಗೆ. ಈ ರೀತಿಯ ಕವಿತಾ ಹೃದಯ ಕನ್ನಡದಲ್ಲಿ ಉಕ್ಕಿ ಹರಿದಿರುವುದು ಈ ಕರ್ಣ, ದುರ್ಯೋಧನ, ರಾವಣ ಪಾತ್ರಗಳಲ್ಲಿ: ಇದು ನಮ್ಮ ಹೆಮ್ಮೆಯ ಸಿರಿಯೊಡವೆ! ಎಷ್ಟು ಕವಿತಾ ನೀತಿಗಳನ್ನು ಒದರಿದರೂ ಈ ಕವಿತಾ ಸ್ವಾತಂತ್ರ್ಯವನ್ನು ನಾವು ಬಿಟ್ಟು ಕೊಡಲಾರೆವು.

ಭಾರತದ ವಿಷವೃಕ್ಷ ಈ ವಿಜಯ ಮರಣಗಳಲ್ಲಿ ಫಲಿಸುವುದರಿಂದ ಬೇರು ಹೂವುಗಳು ಸೇರಿಯೇ ಸೇರುವುವು; ಆದರೆ ಅವನ್ನು ಎಳೆದು ತಂದು ತುರುಕಬೇಕಾಗಿಲ್ಲ; ನಿಜವಾಗಿ ಮನುಷ್ಯ ಭಾರತದ ಹೋರಾಟವನ್ನು ಇಲ್ಲಿ ಕವಿಗಳ ರನ್ನನು ಸಿಂಹಾವಲೋಕನ ಮಾಡಿರುವನು: ದೊಡ್ಡ, ಆಳದ, ಒಲವಿನ ನೋಟದಿಂದ ಬಾಳ ನಿಟ್ಟನ್ನೆಲ್ಲಾ ತೂಗಿ ಒಳಕೊಂಡಿರುವನು, "Glancing from heaven to earth, from earth to heaven!" ಬಾನಿನಿಂದ ನೆಲಕ್ಕೆ ನೆಲದಿಂದ ಬಾನಿಗೆ ಕಣ್ಣು ಹೊಳೆಯಿಸಿ!"[9]

---

[9] ಅದೇ, ಪು. ೪೯೯–೫೦೦

ಮೇಲಿನ ಒಕ್ಕಣೆಯಲ್ಲಿ ಆಚಾರ್ಯ ಬಿ. ಎಂ. ಶ್ರೀ. ಅವರನ್ನು ಅವರ ಪೂರ್ಣ ಸ್ವರೂಪದಲ್ಲಿ ಕಾಣಬಹುದು. ಕವಿಹೃದಯದೊಂದಿಗೆ ಕವಿಹೃದಯಿಯಾಗಿ, ಸಹೃದಯರಾಗಿ ಸ್ಪಂದಿಸಿದ್ದಾರೆ; ಭಾವುಕರಾಗಿ ವಿಚಾರವಂತರಾಗಿ ಮಿಡಿದಿದ್ದಾರೆ. ತಮ್ಮ ವಿಸ್ತಾರವಾದ ಓದು, ಮಾಗಿದ ಬುದ್ಧಿ, ತೌಲನಿಕ ದೃಷ್ಟಿ, ಮಾನವೀಯ ಅನುಕಂಪಗಳನ್ನು ಧಾರೆ ಎರೆದಿದ್ದಾರೆ. ಆಳವಾದ ಚಿಂತನೆಯ ಪ್ರೌಢಿಮೆಯನ್ನು ಮೆರೆದಿದ್ದಾರೆ. ದುರಂತ ವಸ್ತು ವಿನ್ಯಾಸದ ಬಗೆಗಿನ ಒಲವನ್ನು ಪ್ರಕಟಿಸಿದ್ದಾರೆ. ಕವಿ ಕಾವ್ಯಗಳ ರಸಸಾಗರದಲ್ಲಿ ಮಿಂದು ಈಸಾಡಿದ್ದಾರೆ. ಸಾಹಿತ್ಯ ಚರಿತ್ರೆಯನ್ನೂ ಮನೋಹರವಾಗಿ ಹೃದಯಂಗಮವಾಗಿ ಚಿತ್ರಿಸುತ್ತ ಕಾವ್ಯಮಯವನ್ನಾಗಿ ಮಾಡಿದ್ದಾರೆ.

ಕಳಚುರ್ಯ-ಹೊಯ್ಸಳರ ಕಾಲವನ್ನು ಎತ್ತಿಕೊಂಡು ಆ ಕಾಲದ ಮೊದಲ ಕವಿಯಾದ ನಾಗಚಂದ್ರ (ಅಭಿನವಪಂಪ) (ಸು. 1100)ನಿಗೇ ಶ್ರೀಯವರ ಕನ್ನಡ ಸಾಹಿತ್ಯ ಚರಿತ್ರೆ ನಿಂತುಹೋಗಿದೆ. ಏಕೆ ನಿಂತಿತು ? ಶ್ರೀಮದ್ ಮೌನವೇ ಉತ್ತರ. ಇವನ ಮಲ್ಲಿನಾಥ ಪುರಾಣ ಮತ್ತು ರಾಮಚಂದ್ರ ಚರಿತ ಪುರಾಣಗಳ ವಿಸ್ತಾರವಾದ ಪರಾಮರ್ಶೆ ಇದೆ. "ಇಂಥ ಬರವಣಿಗೆ ಕನ್ನಡ ಸಾಹಿತ್ಯದಲ್ಲಿ ಅಪೂರ್ವ ; ಪದ, ಅರ್ಥ, ಭಾವ, ರಸ, ಮನುಷ್ಯ ಹೃದಯ ಜ್ಞಾನ, ಔದಾರ್ಯ, ಸೀತೆಯ ರಾವಣನ ಉದಾತ್ತ ಚಿತ್ರ-ಎಲ್ಲಕ್ಕೂ ಮೇಲೆ ಧರ್ಮದೃಷ್ಟಿ ; ಒಂದು ನುಡಿ ಬಿಡದ ಹಾಗೆ, ಒಂದು ನುಡಿ ಸೇರಿಸದ ಹಾಗೆ ಕನ್ನಡದ ಸಂಸ್ಕೃತದ ಶಬ್ದ ವಿನ್ಯಾಸ, ಸರಳ, ಗಂಭೀರ, ನಾಟಕೀಯ ಶೈಲಿ, ವೃತ್ತ ಕಂದ ವಚನಗಳ ಸಮಕಟ್ಟು ! ಎಲ್ಲಾ ಹದಿಮೂರೇ ಪದ್ಯ ! ನಮ್ಮ ಕವಿಗಳು ಸಾಮಾನ್ಯವಾಗಿ-ಉತ್ತಮ ಕವಿಗಳೂ ಕೂಡ— " ಕಯ್ಯಿಂದ ಬಿತ್ತು, ಚೀಲವೆಲ್ಲಾ ಬಿತ್ತಬೇಡ" ಎಂಬ ಗ್ರೀಕ್ ಬುದ್ಧಿವಾದವನ್ನು ಮರೆಯುತ್ತಾರೆ. ಒಳಕಟ್ಟು, ಕಟ್ಟಡ, ಭಾವ ಚೆನ್ನಾಗಿಯೇ ಇರುತ್ತದೆ—ಆದರೆ ಕಾಡಿನೊಳಗಣ ಗುಪ್ತಗಾಮಿನಿಯಂತೆ, ತೇದು, ಸೋಸಿ, ಸಂಗ್ರಹಿಸಬೇಕಾಗುತ್ತದೆ. ಇಂತಹ ಕಾವ್ಯ ಸ್ಥಾನಗಳಲ್ಲಿ ನಮ್ಮವರು ಯಾರಿಗೂ ಕಡಮೆಯಲ್ಲ ; ಇಂತಹ ಕಾವ್ಯಘಟ್ಟಗಳೇ ನಮಗೆ ಹೆರರ ಗೌರವವನ್ನೂ ತರತಕ್ಕುವು : ಉತ್ತಮ ಕವಿಗಳಲ್ಲಿ ಕೂಡ ಇರುವ ಚರ್ವಿತ ಚರ್ವಣಗಳಲ್ಲ, ಶಬ್ದಜಾಲವಲ್ಲ, ಅತಿಯಾದ ಉಕ್ತಿ ಚಮತ್ಕಾರಗಳಲ್ಲ, ಸಂಪ್ರದಾಯದ ಸಂಕೋಲೆಗಳಲ್ಲ ; ಅಗ್ಗದ ನೀತಿಯಲ್ಲ, ಇಲ್ಲಿ ಅವರು ಕಾಲಧರ್ಮವನ್ನನುಸರಿಸುತ್ತಾರೆ: ಕಾವ್ಯ ಸನಾತನ ಧರ್ಮವನ್ನಲ್ಲ."[10] ರಾವಣ-ಸೀತೆಯರ ಕೊನೆಯ

---

10 ಅದೇ, ಪು. ೫೩೦

ಸಂವಾದವನ್ನು ಕುರಿತು ಹೀಗೆ ಹೇಳಿದ್ದಾರೆ. ಶ್ರೀಯವರ ಮೇಲಿನ ಮಾತುಗಳು ನಾಗಚಂದ್ರನ ರಾಮಚಂದ್ರಚರಿತ ಪುರಾಣದ ಸಮಗ್ರ ಕಾವ್ಯಕ್ಕೆ ಮಾತ್ರವಲ್ಲ ಅವರ ಇಡೀ ಸಾಹಿತ್ಯ ವಿಮರ್ಶೆಗೆ ಅನ್ವಯಿಸುತ್ತದೆ. ಒಂದು ಕಾವ್ಯದ ಹೃದಯವನ್ನು ಒಳಹೊಕ್ಕು ಅಲ್ಲಿನ ಉತ್ತಮಾಂಶಗಳನ್ನು ಹೆಕ್ಕಿ ಹೊರ ತೆಗೆದು ಆ ಕವಿಯ ಮೌಲ್ಯ ಮಾಪನ ಮಾಡುವಲ್ಲಿ ಅವರು ಬಳಸಿರುವ ಶಬ್ದಸಂಪತ್ತು, ಶೈಲಿ ಅವರು ಕಾವ್ಯವನ್ನು ಎಷ್ಟರಮಟ್ಟಿಗೆ ಅರಿತುಕೊಂಡಿದ್ದಾರೆ ಎಂಬುದಕ್ಕೆ ಕನ್ನಡಿಯಾಗಿದೆ. ಸರಳವೂ, ಸುಷ್ಠುವೂ, ನೇರವೂ ಆದ ಶೈಲಿ ಶ್ರೀಯವರ ಶೈಲಿಯಾಗಿದೆ. ಅವರ ಈ ಪರಿಣತ ಬುದ್ಧಿ, ಸಮತೂಕದ ವಿಮರ್ಶೆಯು ಒರೆಗಲ್ಲಿಗೆ ಸಿಕ್ಕಿ ಹೊರಬಂದ ಸಾಹಿತ್ಯ ಚರಿತ್ರೆ ಅಲ್ಪದರಲ್ಲಿಯೇ ತೃಪ್ತಗೊಂಡು ಅಪೂರ್ಣವಾಗಿ ಉಳಿದದ್ದು ನಮ್ಮ ದೌರ್ಭಾಗ್ಯ ಮಾತ್ರವೇ ಅಲ್ಲ, ಕನ್ನಡ ಸಾಹಿತ್ಯಕ್ಕೇ ಉಂಟಾದ ತುಂಬಲಾರದ ನಷ್ಟ ಎಂದು ಹೇಳಿದರೆ ಅತ್ಯುಕ್ತಿಯೇ ಅಲ್ಲ.

ಕನ್ನಡದಲ್ಲಿ ಅನೇಕ ಪ್ರಥಮಗಳನ್ನು ಸ್ಥಾಪಿಸಿದ ಶ್ರೀ ಅವರು 1927 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆದಮೇಲೆ ಕನ್ನಡ ಆನರ್ಸ್, ಎಂ.ಎ. ತರಗತಿಗಳನ್ನು ಆರಂಭಿಸಿದರು. ಅಧಿಕಾರಸೂತ್ರವನ್ನು ಕೈಯಲ್ಲಿ ಹಿಡಿದ ಶ್ರೀಯವರು ಆಡಳಿತದ ಕೆಲಸವನ್ನು ಮಾತ್ರ ಮಾಡಿ ಕೈಕಟ್ಟಿ ಕೂರದೆ ಆ ತರಗತಿಗೆ ಸೇರಿದ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಬರೆದ ಅನೇಕ ಶಾಸ್ತ್ರಗ್ರಂಥಗಳಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯೂ ಒಂದು. ಕನ್ನಡ ಛಂದಸ್ಸಿನ ಚರಿತ್ರೆಯನ್ನು ತಮಿಳು ಛಂದಸ್ಸಿನ ಅಂಶಗಳ ಜೊತೆಯಲ್ಲಿ ಬರೆದು ತಮ್ಮ ಜವಾಬ್ದಾರಿಯನ್ನು ಸೊಗಸಾಗಿ ನಿರ್ವಹಿಸಿದರು. ಹೀಗಾಗಿ ಹೊಣೆಯರಿತು ಗ್ರಂಥಗಳನ್ನು ಬರೆದು ಸಾಹಿತ್ಯ ಚರಿತ್ರೆಯ ಕಣಜವನ್ನು ತುಂಬಿದರು. ಅವರು ಕೈಕೊಂಡಿದ್ದ ಈ ಕನ್ನಡ ಸಾಹಿತ್ಯ ಚರಿತ್ರೆ ಒಮ್ಮೆ ಪೂರ್ಣಗೊಂಡಿದ್ದಿದ್ದರೆ ಉತ್ತಮವಾದ ಗ್ರಂಥ ನಮಗೆ ಲಭ್ಯವಾಗಿರುತ್ತಿತ್ತೆಂಬುದರಲ್ಲಿ ಸಂಶಯವೇ ಇರುತ್ತಿರಲಿಲ್ಲ. ಆದರೆ ನಮ್ಮ ದುರದೃಷ್ಟ, ಅದು ಅಪೂರ್ಣವಾಗಿಯೇ ಉಳಿಯಿತು.

" ಈ ಕವನಗಳು ( ನಾಡಪದಗಳು ) ವಿದ್ಯಾವಂತರಿಗೂ ಪಂಡಿತರಿಗೂ ಸ್ವಾರಸ್ಯವಾಗಿರುವುದು ಮಾತ್ರವೇ ಅಲ್ಲ; ಈಗ ನಾವು ಸಾಧಿಸಲು ಪ್ರಯತ್ನಿಸುತ್ತಿರುವ ಗ್ರಾಮಜೀವನದ ಪುನರುಜ್ಜೀವನ ಸಾಧನೆಯಲ್ಲೂ ಇವುಗಳ ಪ್ರಾಮುಖ್ಯ ವಿಶೇಷ ಮಹತ್ವಬೀರುವುದೆಂದು ನಾನು ಭಾವಿಸುತ್ತೇನೆ. ಕರುಳು ಕರುಳನ್ನು ಮಿಡಿಯುತ್ತದೆ. ಅಂತರಂಗ ಅಂತರಂಗವನ್ನು ತಟ್ಟಿ ಮಾರ್ದನಿಗೊಡುತ್ತದೆ. ನಮ್ಮ ಹಳ್ಳಿಗರ — ಗಂಡುಹೆಣ್ಣುಗಳೆಲ್ಲರ — ಜೀವನಸಾರವನ್ನೇ ಹೊರಹೊಮ್ಮಿಸುತ್ತಿರುವ ಈ ಹಾಡುಗಳು ಅವರನ್ನು ತಣಿಸಿ ಹುರಿದುಂಬಿಸುವಂತೆ ಮತ್ತೆ ಯಾವುದೂ ಹುರಿದುಂಬಿಸಲಾರದು."

''ನಾಡಪದಗಳು'', 'ಶ್ರೀ ಸಾಹಿತ್ಯ'ದಲ್ಲಿ, ಪು. ೩೯೮

ಮೂಗೂರು ಮಲ್ಲಪ್ಪ

# ಬಿ. ಎಂ. ಶ್ರೀ ಲಾವಣಿ

ಗಣಪತಿ ಘನಮತಿ ಚಣಚಣಕೆರಗುವ ನಿಜಮತಿ ಕೊಡು ನೀ ದಿನಾ ದಿನಾ.
ಗುಣಮಣಿ ಕುಲಮಣಿ ಕನ್ನಡದರಗಿಣಿ ಮಾನ್ಯರ ಕತೆಯಿದ ಪೇಳುವೆನಾ.

ಕನ್ನಡನಾಡಿನ ಅಂದಿನ ವೈಭವ ಎಷ್ಟಂತ್ಹೇಳಲಿ ನಾನದನ
ಚಿನ್ನದ ಬಾಗಿಲು ರನ್ನದ ಗೋಪುರ ಮೆರೆಯುವ ಗುಡಿಗುಂಡಾರವನ
ಹೇ ರನ್ನ ಹೊನ್ನ ಸಂಪನ್ನರು ಬೆಳಗಿದ ಕನ್ನಡಜ್ಯೋತಿಯ ಹಿರಿಮೆಯನ
ಚೆನ್ನಿಗರಾಯರು ಶೌರ್ಯದಿ ಕಟ್ಟಿದ ಕನ್ನಡನಾಡಿನ ಸೊಗನ್ನ
ಮುನ್ನರಾಮ ಬಲಭೀಮರ ಬದುಕಿನ ಹಾಡನು ಹೇಳುವ ಶಿಲ್ಪವನ
ಉನ್ನತ ಕಲೆಗಳ ಸೊಬಗನು ಬೀರಿದ ಕನ್ನಡದೇವಿಯ ಸಿರಿಯನ್ನ....

ಸೂರೆಮಾಡಿದಾರೆ ನಮ್ಮ ಸಿರಿಯ ನಾವಾಗಿದೇವೆ ಬರಿಗೈಯ
ಮೆಟ್ಟಿ ತುಳಿಯುತಾರೆ ನಮ್ಮ ತಾಯ ಕವಿದಿತ್ತು ನಮಗೆ ಬಲುಮಾಯ
ಸಾಹಿತ್ಯ ಬಿಡುತಲಿದೆ ಬಾಯಾ ತಿಳಿದಿಲ್ಲ ನಮಗೆ ಇದುರಾಯ.

ಹೇ ಕನ್ನಡಿಯಂಥ ಕನ್ನಡನಾಡು ಕಟ್ಟುಹರಿದು ಕಳಚಿಬಿದ್ದು
ಮಣ್ಣುಗೂಡಿ ಹೋಗುವುದು ತಿಳಿಯದ್ಹಾಂಗ
ಕಣ್ಣುಮುಚ್ಚಿ ಕುರುಡರ್ಹಂಗೆ ಕೈಯ ಕಟ್ಟಿಕುಳಿತರ್ಹೆಂಗೆ
ದಾಳಿಯಾಗುತಾವೆ ಒಳಗೊಳಗೆ.

ಕರುಳು ಕರಗಿದಾವೆ ಶ್ರೀಯವರ ಸೆರಗ್ಹಿಡಿದು ಒರಸೆ ಕಣ್ಣೀರ
ಮರುಗಿ ಹೇಳುತಾರೆ ಮಾತೆಯರ ನಾಮಾಡತೇನೆ ಪರಿಹಾರ
ಹರಸಿ ಕಳುಹು ತಾಯೆ ನಾ ಕುವರ ಬಿಡು ಇನ್ನು ಮನದ ಬೇಸರ.

ಹೇ ಬಂಟ ನಮ್ಮ ಶ್ರೀಕಂಠಯ್ಯ ಸೊಂಟಕಟ್ಟಿ ನಿಂತರು ನೋಡು
ಸುಂಟರಗಾಳಿ ಬೀಸಿದ್ಹಾಂಗೊಂದ ಚಣಕ
ಎಂಟು ಮೂಲಿಗೆದ್ರು ನಮ್ಮ ನೆಂಟರೆಲ್ಲ ಕೂಡಿಕೊಂಡು
ಶ್ರೀಕಂಠನಗಾರಿ ನಾದಕ್ಕೆ
ಒಳ್ಳಾರಿ ಧಾರವಾಡ ಮಂಗಳೂರು ಕಾರವಾರ ಜಮುಖಂಡಿ ಬೆಳಗಾವಿ ಬಿಜಾಪುರ
ರಾಯಚೂರ ಕಲ್ಬುರ್ಗಿಯವರ್ನೆಲ್ಲ ಕರೆದರು, ಮರ್ತ್ತೆ ನೋಡು! ಬಿದರೆಯನಾಡವರ
ಮೇಳಗೂಡಿ ಮಾತನಾಡಿ ತಾಳಿಮಾಡಿಕೊಂಡರಪ್ಪ ತಾಯಿಯ ಬಂಧನ ಬಿಡಿಸುದಕೆ
ಮೂಲಪುರುಷರಾಗಿ ಮುಂದೆ ಹೆಗಲಕೊಟ್ಟು ನಿಂತರಪ್ಪ ಶ್ರೀಕಂಠ ಗುರು ಕಣ್ವ ಕನ್ನಡಕ
ಕರ್ನಾಟವಮಾತೆಯ ಭಕ್ತ ಸಾಹಿತ್ಯದೊಳಗೆ ಬಲುಶಕ್ತ. ಭಲೆ ರಾಜಸೇವಾಸಕ್ತ
ಬಿರುದಾಂಕಕನ್ನಡದ ರಕ್ತ.
ಕನ್ನಡಕೆ ದುಡಿಯುತಾರೆ ನಿತ್ಯ. ಬಹುಕಾಲ ಬೆಳೆಯಲಿವರ್ ಕೃತ್ಯ.
ಹೇ ಗಡಿಯ ನೋಡಿಗೊತ್ತುಮಾಡಿ ಗುಡಿಯಕಟ್ಟಿ ತೊಡೆಯ ತಟ್ಟಿ ಹೊಡೆದುನಿಂತ
ವೀರಜಯಭೇರಿಯನ
ಪೊಡವಿಗೊಡೆಯ ಶ್ರೀಕಂಠನ ಅಡಿಯನಂಬಿ ಪಡೆಯೊ ಮುಕ್ತಿಗೊಡೆಯನಾದ
ಶ್ರೀಗುರು ಮಲ್ಲೇಶನ.

## 'ಶ್ರೀಸಾಹಿತ್ಯ' ಬಿಡುಗಡೆ ಸಮಾರಂಭದ ಭಾಷಣಗಳು

ಈಗ ನಾಡಿನಾದ್ಯಂತ ನಡೆಯುತ್ತಿರುವ ಆಚಾರ್ಯ ಬಿ.ಎಂ.ಶ್ರೀ ಅವರ ಶತಮಾನೋತ್ಸವ ಸಮಾರಂಭಗಳಿಗೆ ನಾಂದಿಯಾದದ್ದು ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ 'ಶ್ರೀಸಾಹಿತ್ಯ'ದ ಬಿಡುಗಡೆ ಸಮಾರಂಭ. ಜನವರಿ 3, 1983 ರಂದು ಮಾನಸಗಂಗೋತ್ರಿಯ ಮಾನವಿಕ ಸಭಾಂಗಣದಲ್ಲಿ ರಾಷ್ಟ್ರಕವಿ ಕುವೆಂಪು ಅವರು 'ಶ್ರೀಸಾಹಿತ್ಯ' ಸಮಗ್ರಸಂಪುಟವನ್ನು ಬಿಡುಗಡೆ ಮಾಡಿದರು. ಡಾ. ಎಸ್. ವಿ. ರಂಗಣ್ಣನವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಡಾ. ಎ. ಎನ್. ಮೂರ್ತಿರಾವ್ ಮುಖ್ಯ ಅತಿಥಿಗಳಾಗಿದ್ದರು. 'ಶ್ರೀ' ಅವರ ಈ ಮೂವರು ಸುಪ್ರಸಿದ್ಧ ಶಿಷ್ಯರು ಭಾಗವಹಿಸಿದ್ದ ಆ ಸಮಾರಂಭ ಅಪೂರ್ವವಾದುದಾಗಿತ್ತು. ಆ ಮೂವರು ಹಿರಿಯರ ಭಾಷಣಗಳನ್ನೂ, ಕನ್ನಡ ಅಧ್ಯಯನ ಸಂಸ್ಥೆ ನಿರ್ದೇಶಕರಾದ ಡಾ. ಹಾ.ಮಾ.ನಾಯಕ ಅವರು ಆ ಸಮಾರಂಭದಲ್ಲಿ ಮಾಡಿದ ಸ್ವಾಗತಭಾಷಣವನ್ನೂ ಇಲ್ಲಿ ಕೊಡುತ್ತಿದ್ದೇವೆ.




**ಡಾ. ಹಾ.ಮಾ. ನಾಯಕ**

ಕರ್ನಾಟಕ ರಾಜ್ಯ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನೆರವಿನೊಡನೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸುತ್ತಿರುವ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರ ಸಮಗ್ರ ಸಾಹಿತ್ಯ ಸಂಪುಟ 'ಶ್ರೀಸಾಹಿತ್ಯ'ದ ಬಿಡುಗಡೆಯ ಈ ಸಮಾರಂಭಕ್ಕೆ ತಮ್ಮನ್ನೆಲ್ಲ ಸ್ವಾಗತಿಸುವುದು ನನಗೆ ತುಂಬ ಸಂತೋಷದ ಕೆಲಸ.

ಇಂದು ಶ್ರೀಕಂಠಯ್ಯನವರ 99ನೆಯ ಜನ್ಮದಿನ. 1884ರ ಜನವರಿ 3 ರಂದು ಅವರು ಹುಟ್ಟಿದರು. ಅವರು ತೀರಿಹೋಗಿ ನಾಡಿದ್ದಿಗೆ 37 ವರ್ಷಗಳಾಗುತ್ತವೆ. 1946 ಜನವರಿ 5 ನೇ ತಾರೀಖು ಅವರು ಧಾರವಾಡದಲ್ಲಿ ತೀರಿಕೊಂಡರು.

ಈ ಶತಮಾನದ ಕನ್ನಡ ಸಾಹಿತ್ಯಕ್ಕೆ ಶ್ರೀಕಂಠಯ್ಯನವರು ಕೊಟ್ಟಿರುವ ಕೊಡುಗೆ ಏನು ಎನ್ನುವುದನ್ನು ಈ ಸಭೆಗೆ ನಾನು ವಿವರಿಸಬೇಕಾದ ಅಗತ್ಯ ಇಲ್ಲ ಎಂದು ತಿಳಿದಿದ್ದೇನೆ. ಶ್ರೀಕಂಠಯ್ಯನವರ ಪುಸ್ತಕಗಳ ಪಟ್ಟಿ ಬಹಳ ದೊಡ್ಡದೇನೂ ಅಲ್ಲ. ಅವರು ಬರೆದಿರುವ ಪುಸ್ತಕಗಳು ಕೇವಲ ಎಂಟು. ಆದರೆ, ಕನ್ನಡ ಕೈಪಿಡಿಯಲ್ಲಿ ಅವರು ಕನ್ನಡ ಛಂದಸ್ಸಿನ ಇತಿಹಾಸ ಬರೆದಿರುವುದನ್ನು ಒಂದು ಪುಸ್ತಕ ಎಂದು ನಾವು ಗ್ರಹಿಸಿದರೆ ಆ ಸಂಖ್ಯೆ ಒಂಬತ್ತಾಗುತ್ತದೆ. ಜೊತೆಗೆ ಒಂದು ಅನುವಾದ. ಅದು ಪ್ರೊಫೆಸರ್ ಷೂಸ್ತ್ರ ಅವರ 'ಇಸ್ಲಾಂ ಸಂಸ್ಕೃತಿ' ಎಂಬ ಪುಸ್ತಕದ ಅನುವಾದ. ಮತ್ತೊಂದು, ಕನ್ನಡ ಸಾಹಿತ್ಯ ಪರಿಷತ್ತಿಗಾಗಿ ಅವರು ಸಂಪಾದಿಸಿಕೊಟ್ಟಂಥ 'ಕನ್ನಡದ ಬಾವುಟ'—ಸಂಕಲನಗ್ರಂಥ. ಹೀಗೆ ಒಟ್ಟು ಹನ್ನೊಂದು ಪುಸ್ತಕಗಳು.

ಆದರೆ, ಒಬ್ಬ ವ್ಯಕ್ತಿ, ಆತನ ಸಾಹಿತ್ಯ ಗಾತ್ರದಲ್ಲಿ ದೊಡ್ಡದಿರಲಿ, ಚಿಕ್ಕದಿರಲಿ, ಒಂದು ಭಾಷೆ ಸಾಹಿತ್ಯದ ಮೇಲೆ ಎಷ್ಟು ದೊಡ್ಡ ಪ್ರಭಾವವನ್ನು ಬೀರಬಹುದು ಎನ್ನುವುದಕ್ಕೆ, ಈ 20ನೇ ಶತಮಾನದ ಕನ್ನಡ ಸಾಹಿತ್ಯದ ಮೇಲೆ ಶ್ರೀಕಂಠಯ್ಯನವರ ಪ್ರಭಾವ ಒಂದು ಅತ್ಯುತ್ತಮವಾದ ಉದಾಹರಣೆ. ಅವರು ಕವಿ, ವಿಮರ್ಶಕ, ವಿದ್ವಾಂಸ, ಬಹುಭಾಷಾವಿದ, ಜೊತೆಗೆ ನಿಜವಾದ, ಕೆಡದ ಸವೆಯದ ಅರ್ಥದಲ್ಲಿ, ಮೊದಲ ಕನ್ನಡದ ಚಳುವಳಿಗಾರ. ಕನ್ನಡದ ಸ್ಥಾನಮಾನಕ್ಕಾಗಿ ಅವರು ಮಾಡಿದಂತಹ ಕೆಲಸ ನಮ್ಮ ಸಾಂಸ್ಕೃತಿಕ ಚರಿತ್ರೆಯಲ್ಲಿ ಯಾವಾಗಲೂ ಎದ್ದು ಕಾಣುವಂಥದು. ಮೊದಲು ಅವರು ಇಂಗ್ಲಿಷ್ ಪ್ರಾಧ್ಯಾಪಕರಾಗಿ ಇಂಗ್ಲಿಷಿನ ಒಂದು ಬಗೆಯ

ಮೋಹದಿಂದ ಆಕೃಷ್ಟರಾಗಿದ್ದು ಆ ಮೇಲೆ ಕನ್ನಡದ ಕಡೆಗೆ ಬಂದರು. ಬಂದವರು ಸುಮ್ಮನೆ ಜರಲಿಲ್ಲ. ಕನ್ನಡದ ಕಣ್ವರು ಎಂದು ಅನ್ನಿಸಿಕೊಂಡರು. ಚ. ವಾಸುದೇವಯ್ಯ ನವರಂಥ ಹಿರಿಯರು ಅವರನ್ನು 'ದೇಶದ ಭಾಗ್ಯ' ಎಂಬುದಾಗಿ ವರ್ಣಿಸಿದರು. ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕೆಲಕಾಲ ರಿಜಿಸ್ಟ್ರಾರ್ ಆಗಿದ್ದರು ; ಅನೇಕ ವರ್ಷ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು ; ಕನ್ನಡದ ಗೌರವ ಪ್ರಾಧ್ಯಾಪಕರಾಗಿಯೂ ಕೂಡ ಇದ್ದರು. ಅವರು ಯಾವ ವಿಶ್ವವಿದ್ಯಾನಿಲಯದಲ್ಲೆ ಆಗಲಿ ಮೊತ್ತ ಮೊದಲನೆಯ ಕನ್ನಡ ಪ್ರಾಧ್ಯಾಪಕರು. ಮೈಸೂರು ವಿಶ್ವವಿದ್ಯಾನಿಲಯ ದಲ್ಲಿ ಕನ್ನಡವನ್ನು ಬೆಳೆಸುವುದರಲ್ಲಿ ಅವರ ದುಡಿಮೆ ತುಂಬ ದೊಡ್ಡದು. ಹೊಸ ಕಾವ್ಯಕ್ಕೆ ಪ್ರೋತ್ಸಾಹ ನೀಡಲು ಅವರು ಒಂದು ದತ್ತಿಯನ್ನೇ ಸ್ಥಾಪಿಸಿದರು.

ಇವತ್ತು ನಮ್ಮ ಎದುರುಗಡೆ ಇರುವಂಥ ಈ ಮೂವರು—ಕುವೆಂಪು, ರಂಗಣ್ಣ ಮತ್ತು ಮೂರ್ತಿರಾಯರು—ಹಿರಿಯರು, ಅವರನ್ನು ಹತ್ತಿರದಿಂದ ಬಲ್ಲವರು, ಅವರ ವಿದ್ಯಾರ್ಥಿಗಳಾಗಿದ್ದವರು. ಜೊತೆಗೆ, ಮೈಸೂರು ವಿಶ್ವವಿದ್ಯಾನಿಲಯದ ಗೌರವಾನ್ವಿತ ಪ್ರಾಧ್ಯಾಪಕರು ; ಮೂವರೂ ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ಪಡೆದವರು ; ಪ್ರಾಧ್ಯಾಪಕರಾಗಿದ್ದವರು ; ವಯಸ್ಸಾದವರು. ಯಾರೋ ಹೇಳಿದರು, ಮೂವರಿಗೂ ಆರೋಗ್ಯ ಈಗ ಸರಿಯಿಲ್ಲ ಎಂದು. ಆದರೆ, ನಾವು ಮಾನಸಿಕ ಆರೋಗ್ಯಕ್ಕೆ ಗಮನ ಕೊಡಬೇಕೇ ಹೊರತು ದೈಹಿಕ ಆರೋಗ್ಯಕ್ಕಲ್ಲ. ಆದ್ದರಿಂದ, ಈ ಮೂರು ಜನ ಶ್ರೀಕಂಠಯ್ಯನವರನ್ನು, ಬಹಳ ನಿಕಟವಾಗಿ ಬಲ್ಲಂಥವ ರನ್ನು, ಈ ಹೊತ್ತು ಇಲ್ಲಿ ಕಲೆಹಾಕಿರುವಂಥದು ನನಗೆ ವೈಯಕ್ತಿಕವಾಗಿ ಒಂದು ಬಗೆಯ ತೃಪ್ತಿಯನ್ನು ಸಮಾಧಾನವನ್ನು ಸಂತೋಷವನ್ನು ಕೊಟ್ಟಿದೆ. ಶ್ರೀಕಂಠಯ್ಯನವರು ಆತ್ಮದಲ್ಲಿ ನಂಬಿಕೆಯಿದ್ದವರು ಎಂದು ನಾನು ಭಾವಿಸುತ್ತೇನೆ. ಅವರು ಬಹುಶಃ ಇಲ್ಲೆಲ್ಲೋ ಓಡಾಡುತ್ತ ಇರಬಹುದು ಈಗ. ಅವರಿಗೂ ಕೂಡ ಈ ಸಮಾರಂಭ ಸಂತೋಷವನ್ನು ತರುತ್ತದೆ ಎಂದು ನಾನು ಭಾವಿಸುತ್ತೇನೆ.

ಶ್ರೀಕಂಠಯ್ಯನವರ ಶತಮಾನೋತ್ಸವ ಸಮಾರಂಭಕ್ಕೆ ನಾಂದಿಯಾಗಿ, ಅವರ ಎಲ್ಲ ಕೃತಿಗಳನ್ನೂ ಸಂಗ್ರಹಿಸಿ ಅಗ್ಗದ ಬೆಲೆಗೆ ಕೊಡಬೇಕು ಎನ್ನುವ ಒಂದು ಯೋಜನೆ ಯನ್ನು ಕನ್ನಡ ಅಧ್ಯಯನ ಸಂಸ್ಥೆ ಐದು ವರ್ಷಗಳ ಹಿಂದೆ ಕೈಗೊಂಡಿತು. ಆಗ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಲ್ಲಿ ನಿರ್ದೇಶಕರಾಗಿದ್ದ ನನ್ನ ಮಿತ್ರರು ಶ್ರೀಮಾನ್ ಜಯತೀರ್ಥ ರಾಜಪುರೋಹಿತ ಅವರಿಗೆ ನಾನು ಈ ಯೋಜನೆಯನ್ನು ಕೊಟ್ಟಾಗ ಅವರು ಅದನ್ನು ಒಪ್ಪಿ ಕರ್ನಾಟಕ ಸರ್ಕಾರದಿಂದ ನಮಗೆ ಮೂವತ್ತು

ಸಾವಿರ ರೂಪಾಯಿಗಳ ನೆರವನ್ನು ಕೊಡಿಸಿದರು. ಆಗ ವಿಶ್ವವಿದ್ಯಾನಿಲಯದಲ್ಲಿ ಕುಲಪತಿಗಳಾಗಿದ್ದ ಶ್ರೀಮಾನ್ ಡಿ. ವಿ. ಅರಸು ಅವರು ಇದರ ಬಗ್ಗೆ ವಿಶೇಷ ಆಸಕ್ತಿಯನ್ನು ತೋರಿಸಿದರು. ಅವರಿಬ್ಬರ ವಿಶ್ವಾಸದ ಫಲವಾಗಿ ಈ ಪುಸ್ತಕ ಈ ಹೊತ್ತು ಪ್ರಕಟವಾಗುತ್ತಾ ಇದೆ. ಶ್ರೀಕಂಠಯ್ಯನವರು ಬರೆದಿರುವ ಎಲ್ಲ ಪುಸ್ತಕಗಳ ಜೊತೆಗೆ, ಇದುವರೆಗೆ ಯಾವ ಪುಸ್ತಕಗಳಲ್ಲಿಯೂ ಸೇರಿಲ್ಲದ, ಬೇರೆ ಬೇರೆ ಕಡೆ ಪ್ರಕಟವಾಗಿರುವ, ಅವರ ಕವಿತೆಗಳು ಮುನ್ನುಡಿಗಳು ಲೇಖನಗಳು ಮೊದಲಾದುವನ್ನೆಲ್ಲ ಇಲ್ಲಿ ಸೇರಿಸಿದ್ದೇವೆ.

ಇದನ್ನು ಬಹಳ ಕಷ್ಟಪಟ್ಟು ನಮ್ಮ ಮಿತ್ರರು ಶ್ರೀಮಾನ್ ವೆಂಕಟಾಚಲಶಾಸ್ತ್ರಿಗಳು ಹಾಗೂ ಶ್ರೀ ತಾರಾನಾಥ್ ಅವರು ಸಿದ್ಧಪಡಿಸಿಕೊಟ್ಟಿದ್ದಾರೆ ; ಪುಸ್ತಕ ಆದಷ್ಟೂ ಪೂರ್ಣವಾಗುವ ಹಾಗೆ ನೋಡಿಕೊಂಡಿದ್ದಾರೆ.

ಈ ಪುಸ್ತಕದಲ್ಲಿ ಸೇರಿಲ್ಲದೆ ಇರುವಂಥ ಲೇಖನವನ್ನು ಯಾರಾದರೂ ದೊರಕಿಸಿಕೊಟ್ಟರೆ ಅದೂ ಒಂದು ಸಂಶೋಧನೆಯೇ ಆಗುತ್ತದೆ ಎಂಬುದಾಗಿ ನಾನು ಭಾವಿಸುತ್ತೇನೆ. ಸುಮಾರು 900 ಪುಟಗಳ ಪುಸ್ತಕ 10 ಪಾಯಿಂಟ್ ಮೊಳೆಗಳಲ್ಲಿ ಅಚ್ಚಾಗಿದೆ. ಇದನ್ನು ನಾವು ಮಾಮೂಲಿಯಾಗಿ ಅಚ್ಚು ಮಾಡಿದ್ದರೆ ಸುಮಾರು 1250 ಪುಟಗಳಷ್ಟು ಆಗುತ್ತಾ ಇತ್ತು. ಇದರಲ್ಲಿ ಶ್ರೀಕಂಠಯ್ಯನವರ ಇಂಗ್ಲಿಷ್ ಪುಸ್ತಕ ಒಂದೇ ಒಂದು, 1912 ರಲ್ಲಿ ಅವರು ಮೊದಲು ಬರೆದು, ಆಮೇಲೆ ಏಳು ವರ್ಷಗಳ ನಂತರ ಮರುಮುದ್ರಣಗೊಂಡಂಥ ಒಂದು ಪುಸ್ತಕ ಕೂಡ ಸೇರಿದೆ. ಇವತ್ತು ಅದನ್ನು ಬಹಳ ಜನ ನೋಡಿಲ್ಲ. ಮೂರ್ತಿರಾಯರಿಗೆ ಈ 'ಶ್ರೀ ಸಾಹಿತ್ಯ'ದ ವಿಷಯ ಹೇಳಿದಾಗ ಮೊದಲು 'ಆ ಪುಸ್ತಕ ಇದರಲ್ಲಿ ಸೇರಿದೆಯೋ' ಎಂದು ಕೇಳಿದರು. ಆದಷ್ಟು ಕಷ್ಟಪಟ್ಟು ಇಂಥ ಪುಸ್ತಕಗಳನ್ನೆಲ್ಲ ಕಲೆಹಾಕಿದ್ದೇವೆ ; ಇದರಲ್ಲಿ ಸೇರಿಸಿದ್ದೇವೆ. ಆದ್ದರಿಂದ ಇದು ಶ್ರೀಕಂಠಯ್ಯನವರ ಸಮಗ್ರ ಕೃತಿಸಂಪುಟ. ಕನ್ನಡದ ಒಬ್ಬ ಲೇಖಕರ ಎಲ್ಲ ಕೃತಿಗಳೂ ಒಂದು ಸಂಪುಟದಲ್ಲಿ ಹೀಗೆ ಪ್ರಕಟವಾಗುತ್ತಾ ಇರುವುದು ನನಗೆ ತಿಳಿದಹಾಗೆ ಇದು ಎರಡನೆಯ ಸಲ. ಕೆಲವು ವರ್ಷಗಳ ಹಿಂದೆ ಮೊದಲನೆಯದಾಗಿ ಶ್ರೀಮಾನ್ ಎಂ. ಎಲ್. ಶ್ರೀಕಂಠೇಶಗೌಡ ಅವರ ಎಲ್ಲ ಕೃತಿಗಳನ್ನೂ ಕೂಡ ನಾವು ಒಂದೇ ಸಂಪುಟದಲ್ಲಿ ಪ್ರಕಟಿಸಿದ್ದುಂಟು. ಈಗ ಶ್ರೀಕಂಠಯ್ಯನವರ ಈ ಕೃತಿ ಪ್ರಕಟವಾಗುತ್ತಾ ಇದೆ.

ಇದರಿಂದ ಶ್ರೀಕಂಠಯ್ಯನವರ ಕೃತಿಗಳ ನಂಬಿಕೆಗೆ ಅರ್ಹವಾದ ಒಂದು ಅಧಿಕೃತ ಆವೃತ್ತಿ ಪ್ರಕಟವಾಗುತ್ತಾ ಇದೆ ಎಂದು ಹೇಳಿದರೆ, ದಯವಿಟ್ಟು ಯಾರೂ ಜಂಭದ ಮಾತು ಎಂಬುದಾಗಿ ತಿಳಿದುಕೊಳ್ಳಬಾರದು. ಯಾಕೆಂದರೆ, ಶ್ರೀಕಂಠಯ್ಯನವರ

ಮರಣಾನಂತರ ಪ್ರಕಟವಾದಂಥ ಅವರ ಎಲ್ಲ ಪುಸ್ತಕಗಳ ಬೇರೆ ಬೇರೆ ಆವೃತ್ತಿಗಳಲ್ಲೂ ಬೇಕಾದಷ್ಟು ತಪ್ಪುಗಳಿವೆ. ಒಂದು ಉದಾಹರಣೆಯನ್ನು ಹೇಳಬಹುದಾದರೆ, 'ಹೊಳೆ—ಕರೆ' ಅನ್ನುವುದು ಒಂದು ಕವಿತೆ, 'ಇಂಗ್ಲಿಷ್ ಗೀತೆ'ಗಳಲ್ಲಿದೆ. 'ಕರೆ' ಅನ್ನುವುದು ಬಹುಶಃ ಮುಂದಿನವರಿಗೆ ಅರ್ಥವಾಗದೇ ಇದ್ದದ್ದರಿಂದ, ಅದನ್ನು 'ಕೆರೆ' ಮಾಡಿಬಿಟ್ಟರು. 'ಕೆರೆ' ಎಲ್ಲರಿಗೂ ಗೊತ್ತಿರುವ ಪದ! ಅದು ಎಲ್ಲ ಕಡೇನೂ 'ಹೊಳೆ—ಕೆರೆ' ಎಂಬುದಾಗಿಯೇ ಅಚ್ಚಾಗಿಬಿಟ್ಟಿತು. ಇಂಥದು ಇನ್ನೂ ಅನೇಕ ಉದಾಹರಣೆಗಳನ್ನು ಹೇಳಬಹುದು. ಅಚ್ಚಿನ ತಪ್ಪುಗಳಿಂದಾಗಿ, ಓದುವವರಿಗೆ ಅರ್ಥ ವಾಗದೇ ಇದ್ದುದರ ಫಲವಾಗಿ, ಅವರ ಹಳಗನ್ನಡವನ್ನು ನಾವು ಸರಿಯಾಗಿ ತಿಳಿದು ಕೊಳ್ಳದೇ ಇದ್ದುದರ ಕಾರಣವಾಗಿ—ಹೀಗೆ ನಾನಾ ಕಾರಣಗಳಿಂದಾಗಿ, ಬಿ. ಎಂ. ಶ್ರೀಕಂಠಯ್ಯನವರು ಯಾವ ರೀತಿ ಮೊದಲು ಬರೆದರೋ ಅದರಿಂದ ಭಿನ್ನವಾದಂಥ ರೂಪಗಳು ಅನೇಕ ಕಡೆ ನಮಗೆ ಕಾಣಿಸುತ್ತವೆ. ಆದರೆ ನಾವು ಇಲ್ಲಿ, ಬಿ. ಎಂ. ಶ್ರೀಕಂಠಯ್ಯನವರು ಬದುಕಿದ್ದಾಗ, ಅವರೇ ಕರಡು ತಿದ್ದಿದಂಥ ಪುಸ್ತಕಗಳು, ಅವರ ಕಾಲದಲ್ಲಿಯೆ ಪ್ರಕಟವಾದಂಥವು, ಅವನ್ನು ಆಧಾರವಾಗಿ ಇಟ್ಟುಕೊಂಡು, ಬೇರೆ ಇತರ ಎಲ್ಲ ಆವೃತ್ತಿಗಳನ್ನೂ ನೋಡಿ, ಅವರ ಬಿಡಿ ಲೇಖನಗಳಾಗಿದ್ದರೆ ಅದು ಮೊದಲು ಪ್ರಕಟವಾದಂತಹ ಪತ್ರಿಕೆಯಲ್ಲಿಯೇ ನೋಡಿ, ಸಂಗ್ರಹಿಸಿ ಈ ಸಂಕಲನವನ್ನು ಸಿದ್ಧಪಡಿಸಿದ್ದೇವೆ.

ಅವರ ಭಾಷಣಗಳು, ಮುನ್ನುಡಿಗಳು, ವಿಮರ್ಶೆಗಳು, ಇವನ್ನು ಮೊದಲು ಪುಸ್ತಕರೂಪದಲ್ಲಿ ಪ್ರಕಟಪಡಿಸಿದವರು ಶ್ರೀಮಾನ್ ಕೂಡಲಿ ಚಿದಂಬರಂ ಅವರು; ಕಾವ್ಯಾಲಯದ ಪರವಾಗಿ. ಅವರು ಅಲ್ಲಿ ಏನು ಮಾಡಿದರು, ಎಂದರೆ, ಲೇಖನಗಳ ಕೆಲವು ಭಾಗಗಳನ್ನು ಬಿಟ್ಟು ಅವರಿಗೆ ಯಾವುದು ಮುಖ್ಯ ಎಂದು ಕಾಣಿಸುತ್ತಿತ್ತೋ ಅಂತಹ ಭಾಗಗಳನ್ನು ಮಾತ್ರ ಅದರಲ್ಲಿ ಉಳಿಸಿಕೊಂಡರು. ಆದರೆ ನಾವು, ಆ ವಿಮರ್ಶೆ, ಆ ಲೇಖನ, ಆ ಮುನ್ನುಡಿ, ಇವೆಲ್ಲ ಮೊದಲು ಎಲ್ಲಿ ಪ್ರಕಟವಾಗಿದ್ದುವೆಂದು ಪತ್ತೆಹಚ್ಚಿ ಅವನ್ನು ಯಥಾವತ್ತಾಗಿ ಇದರಲ್ಲಿ ಸೇರಿಸಿದ್ದೇವೆ.

ಆದ್ದರಿಂದ, ಶ್ರೀಕಂಠಯ್ಯನವರ ಬರವಣಿಗೆ ಯಾವುದಕ್ಕೂ ಕೂಡ, ಯಾವುದೇ ವಿಧವಾದ ಬದಲಾವಣೆಗೆ ಒಳಗಾಗದ ರೀತಿಯಲ್ಲಿ, ಈ ಸಂಕಲನವನ್ನು ಸಿದ್ಧಪಡಿಸಿ, 'ಶ್ರೀಸಾಹಿತ್ಯ' ಎಂಬ ಹೆಸರಿನಲ್ಲಿ ಪ್ರಕಟಿಸುತ್ತಿದ್ದೇವೆ. ಇದು ನಮ್ಮ ಸಾಹಿತ್ಯದ ವಿದ್ಯಾರ್ಥಿ ಗಳಿಗೆ, ಕನ್ನಡ ಸಾಹಿತ್ಯ ಪ್ರೇಮಿಗಳಿಗ ತುಂಬ ಉಪಯುಕ್ತವಾದಂಥ ಒಂದು ಕೃತಿ ಎಂಬುದಾಗಿ ನಾನು ಭಾವಿಸಿದ್ದೇನೆ.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಈ ಪುಸ್ತಕದ ಬೆಲೆ ಕೇವಲ ಹತ್ತು ರೂಪಾಯಿಗಳು ! ಇದನ್ನು ಆಗುಮಾಡಿದ್ದ ಕ್ಕಾಗಿ ನಾವು ಕರ್ನಾಟಕ ರಾಜ್ಯ ಸರ್ಕಾರಕ್ಕೆ ಕೃತಜ್ಞರಾಗಿರಬೇಕು. ಇಷ್ಟೇ ಅಲ್ಲ, ಈ ಬಗೆಯಾದಂಥ ಇನ್ನೂ ಅನೇಕ ಲೇಖಕರ ಕೃತಿಗಳನ್ನು ಇದೇ ರೀತಿಯಾಗಿ ಪ್ರಕಟಿಸ ಬೇಕು ಎಂಬ ಯೋಜನೆ ಕನ್ನಡ ಅಧ್ಯಯನ ಸಂಸ್ಥೆಗೆ ಇದೆ. ಅದನ್ನು ಮುಂಬರುವ ದಿನಗಳಲ್ಲಿ ನಾವು ಕೈಗೊಳ್ಳಬೇಕಾಗಿದೆ. ಅದಕ್ಕೆ ಸರ್ಕಾರದ ನೆರವು ಇರುತ್ತದೆ ಎಂಬುದರಲ್ಲಿ ನನಗೆ ಭರವಸೆಯಿದೆ. ಒಳ್ಳೆಯ ಕೆಲಸಕ್ಕೆ ಹಣದ ಕೊರತೆ ಇರುವುದಿಲ್ಲ.

ಮುಂದಿನ ವರ್ಷ 1984 ರ ಜನವರಿ 3 ರಿಂದ ಶ್ರೀಕಂಠಯ್ಯನವರ ಶತ ಮಾನೋತ್ಸವ ವರ್ಷ ಆರಂಭವಾಗುತ್ತದೆ. ಕನ್ನಡ ನಾಡಿನಲ್ಲಿ ಅದು ನಾನಾ ಬಗೆಯಾಗಿ ಕಾರ್ಯರೂಪಕ್ಕೆ ಬಂದು ಅನೇಕ ಕೆಲಸಗಳು ಶ್ರೀಕಂಠಯ್ಯನವರ ಹೆಸರಿನಲ್ಲಿ ಆಗುತ್ತವೆ ಎಂಬುದಾಗಿ ನಾನು ನಿರೀಕ್ಷಿಸಿದ್ದೇನೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ, ಶ್ರೀಕಂಠಯ್ಯ ನವರ ಹೆಸರಿನಲ್ಲಿ ಆಧುನಿಕ ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟ ಹಾಗೆ ಒಂದು ಪ್ರಾಧ್ಯಾಪಕ ಪೀಠವನ್ನು ಸ್ಥಾಪಿಸುವುದು ಈ ಶತಮಾನೋತ್ಸವ ವರ್ಷದ ಒಂದು ದೊಡ್ಡ ಕೆಲಸ ಎಂದು ನಾನು ತಿಳಿದಿದ್ದೇನೆ. ಈ ವಿಷಯ ನಾನು ಈಗಾಗಲೇ ಕುಲಪತಿಗಳೊಡನೆ ಚರ್ಚಿಸಿದ್ದೇನೆ. ಇಷ್ಟರಲ್ಲಿಯೇ ಅಖಿಲ ಕರ್ನಾಟಕ ಮಟ್ಟದ ಒಂದು ಸಮಿತಿಯನ್ನು ವ್ಯವಸ್ಥೆಗೊಳಿಸಿ, ಆ ಸಮಿತಿಯ ಮೂಲಕ ಈ ಶತಮಾನೋತ್ಸವ ವರ್ಷದಲ್ಲಿ ಮಾಡಬೇಕಾದಂಥ ಕೆಲಸಗಳನ್ನು ನಾವು ಕೈಗೊಳ್ಳಬೇಕು ಎಂದೂ ಯೋಜಿಸಿದೆ. ಯಾಕೆಂದರೆ, ಶ್ರೀಕಂಠಯ್ಯನವರು ಬಹಳ ದೊಡ್ಡವರು, ಕನ್ನಡದಲ್ಲಿ ಇವತ್ತು ನಾವು ನೋಡುತ್ತಾ ಇರುವ ಉತ್ಕರ್ಷಕ್ಕೆ ಅಡಿಪಾಯ ಹಾಕಿದವರೇ ಅವರು. ಅವರಿಗೆ ಯಾವ ಗೌರವವೂ ಚಿಕ್ಕದೆಂದೇ ಅನ್ನಿಸುತ್ತದೆ.

ಈ ಹೊತ್ತು, ಈ ಪುಸ್ತಕವನ್ನು ಬಿಡುಗಡೆ ಮಾಡುವುದಕ್ಕಾಗಿ ನಮ್ಮ ಮೂವರು ಸಾಹಿತ್ಯಶ್ರೇಷ್ಠರು ಇಲ್ಲಿ ಬಂದಿದ್ದಾರೆ. ಅವರಿಗೆ ದೈಹಿಕವಾಗಿ ತೊಂದರೆ ಗಳಿದ್ದರೂ ಕೂಡ, ಶ್ರೀಕಂಠಯ್ಯನವರ ಮೇಲಿನ ಗೌರವದಿಂದ, ನನ್ನ ಮೇಲಿನ ಪ್ರೀತಿಯಿಂದ, ಜೊತೆಗೆ, ಕನ್ನಡದ ಕೆಲಸ ಎನ್ನುವ ದೃಷ್ಟಿಯಿಂದ, ಈ ಮೂವರೂ ಈ ಹೊತ್ತು ಇಲ್ಲಿ ಬಂದಿದ್ದಾರೆ, ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ನಮ್ಮ ಆಹ್ವಾನವನ್ನು ಒಪ್ಪಿ ತಾವೆಲ್ಲ ಇಲ್ಲಿ ದಯಮಾಡಿಸಿದ್ದೀರಿ. ತಮ್ಮನ್ನೆಲ್ಲ ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. ಶ್ರೀಮಾನ್ ಪುಟ್ಟಪ್ಪನವರು ಪುಸ್ತಕವನ್ನು ಬಿಡುಗಡೆ ಮಾಡಿದ ಮೇಲೆ, ಪುಸ್ತಕ ಮಾರಾಟಕ್ಕೆ ಇಲ್ಲಿ ಹೊರಗಡೆ ಸಿಗುತ್ತದೆ. ಅದು ಶ್ರೀನಿಧಿ. ಆಸಕ್ತರಾದವರು ಅದನ್ನು ಕೊಳ್ಳಬಹುದು. ಪ್ರೊಫೆಸರ್ ರಂಗಣ್ಣನವರು ಅಧ್ಯಕ್ಷತೆ ವಹಿಸಿ ಕಾರ್ಯಕ್ರಮ ನಡೆಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

" ವಿಧಿವಿಲಾಸದಿಂದ ನೂರು ನೂರೈವತ್ತು ವರ್ಷಗಳಿಂದೀಚೆಗೆ ಖಿಲವಾಗಿ ಕೆಟ್ಟಿರುವ ನಮ್ಮ ಹಳ್ಳಿಗಳ ಎಲ್ಲ ಬಗೆಯ ಕೊಳಕು ಕೊರತೆಗಳು ಮಾಯವಾಗಿ ಅವು ಮತ್ತೊಮ್ಮೆ ನಂದನವನಗಳಾಗಬೇಕು. ಜನ ತೇಜಸ್ವಿಗಳಾಗಬೇಕು. ಚೊಕ್ಕಟ, ಆರೋಗ್ಯ, ವಿದ್ಯೆ, ಒಕ್ಕಟ್ಟು, ಸಾಹಸ, ದೇಶಾಭಿಮಾನ, ಧರ್ಮಶ್ರದ್ಧೆ, ತುಂಬು ಬದುಕು ಹಳ್ಳಿಗಳಲ್ಲಿ ಮತ್ತೆ ಮನೆ ಮಾಡಬೇಕು. ಎಲ್ಲೆಲ್ಲಿಯೂ ಸಿರಿಯೂರು, ಸಿರಿಹಟ್ಟಿ, ಸಿರಿಹೊಳಲು ಎಂಬ ಹೆಸರುಗಳು ಒಪ್ಪಿಗೆಯಾಗಿ ಹೊಂದಿ ಜನಪದ ಹಾಡುಗಳು ಮತ್ತೆ ಊಟೆಬುಗ್ಗೆಯಂತೆ ನಲಿದಾಡಬೇಕು. ಗೆಯ್ಮೆಗೆಯ್ಯುತ್ತಾ ಹಾಡು ಹೊಮ್ಮಬೇಕು, ನಾಡು ಹಸನಾಗಬೇಕು."

'ಹಳ್ಳಿಗಳ ಏಳಿಗೆ', 'ಶ್ರೀ ಸಾಹಿತ್ಯ'ದಲ್ಲಿ, ಪು. ೩೯೯

## ಕುವೆಂಪು

"ಬಿ. ಎಂ. ಶ್ರೀಕಂಠಯ್ಯನವರ ಸಮಗ್ರ ಕೃತಿಗಳನ್ನ 'ಶ್ರೀಸಾಹಿತ್ಯ' ಎಂಬ ಒಂದು ಸಂಪುಟದಲ್ಲಿ ಪ್ರಕಟಿಸುತ್ತಿದ್ದೇವೆ, ಅದನ್ನ ನೀವು ಬಿಡುಗಡೆ ಮಾಡಬೇಕು" ಎಂದು ಹಾ. ಮಾ. ನಾಯಕರು ಕೇಳಿಕೊಂಡಾಗ ಸ್ವಲ್ಪ ಹಿಂಜರಿದೆ. ನನಗಿಂತಲೂ ಹಿರಿಯರು ಮತ್ತು ಶ್ರೀಕಂಠಯ್ಯನವರನ್ನು ನನಗಿಂತಲೂ ಹೆಚ್ಚಾಗಿ ಹತ್ತಿರದಿಂದ ಪರಿಚಯ ಮಾಡಿಕೊಂಡಿರುವವರು ಆದ ವ್ಯಕ್ತಿಗಳಿರುವಾಗ ನನ್ನನ್ನು ಯಾಕೆ ಕೇಳುತ್ತಿದ್ದಾರೆ ಎಂದುಕೊಂಡು ಹಿಂಜರಿದೆ. ಆಗ ಅವರು "ಆ ವ್ಯಕ್ತಿಗಳೂ ಬರುತ್ತಾರೆ, ನೀವೂ ಬರಬೇಕು" ಎಂದರು.

ನಾನು ವಿಶೇಷವಾಗಿ ಮಾತನಾಡುವವನಲ್ಲ; ಭಾಷಣ ಮಾಡುವವನಲ್ಲ. ಹಿಂದೆಯೂ ಹೆಚ್ಚಾಗಿ ಮಾತನಾಡಿಲ್ಲ. ವೈಸ್‌ಛಾನ್ಸಲರ್ ಆಗಿದ್ದಾಗ ಅನಿವಾರ್ಯವಾಗಿದ್ದ ಸಂದರ್ಭಗಳನ್ನುಳಿದು ಹೆಚ್ಚಾಗಿ ಮಾತನಾಡಲಿಲ್ಲ. ಈಗಲೂ ಸಹ ಹಾಗೆಯೆ. ನಾನು ಹೊರಗೆಲ್ಲೂ ಹೋಗುತ್ತಾ ಇಲ್ಲ. ಶ್ರೀಕಂಠಯ್ಯನವರು ತೀರಿಕೊಂಡ ಮರುದಿನ ಆಕಾಶವಾಣಿಯಲ್ಲಿ ನಾನು ಒಂದು ಸಣ್ಣ ಭಾಷಣ ಮಾಡಿದ್ದೆ. ಅದನ್ನು ಎಷ್ಟು ಜನ ನೋಡಿದ್ದಾರೆಯೊ ನನಗೆ ಗೊತ್ತಿಲ್ಲ. ನೋಡದೆ ಇರುವವರಿಗಾಗಿ ಅದರ ಪರಿಚಯವನ್ನು ಈಗ ಸ್ವಲ್ಪ ಮಾಡಿಕೊಡುತ್ತೇನೆ :

"ಕನ್ನಡ ಸಾಹಿತ್ಯ ಸರ್ವೋದಯಕ್ಕೆ ನಾಂದೀಸ್ವರೂಪರಾದವರು, ಕನ್ನಡದ ಬಾವುಟವನ್ನು ತೋಳು ನೀಡಿ ನಭಕ್ಕೆತ್ತಿದವರು, ಕನ್ನಡದ ಏಳ್ಗೆಗಾಗಿ ಕನ್ನಡದ ಬಾಳ್ಕೆಗಾಗಿ ನಾನಾ ರಂಗಗಳಲ್ಲಿ ಅನೇಕ ವಿಧಾನಗಳಲ್ಲಿ ಉಸಿರ್ಕಟ್ಟಿ ಒಮ್ಮನಸ್ಸಿನಿಂದ ಹೋರಾಡಿದವರು, "ಬಾಳ್ ಕನ್ನಡ ತಾಯ್, ಏಳ್ ಕನ್ನಡ ತಾಯ್, ಆಳ್ ಕನ್ನಡ ತಾಯ್ !" ಎಂದು ಕೊರಳೆತ್ತಿ ಕೂಗಿದವರು, ಕೈಬೀಸಿ ಕರೆದವರು, ತೆರಪಿಲ್ಲದೆಚ್ಚರಿಸಿದವರು, ಹುರಿದುಂಬಿಸಿದವರು, ಹಾರೈಸಿದವರು, ಹರಸಿದವರು ನಿನ್ನೆ ಹಗಲು ದೇಹತ್ಯಾಗಮಾಡಿದರಂತೆ ! ಕನ್ನಡಮ್ಮನಿಗಾಗಿ ಬಹಿರಂಗವಾಗಿಯೂ ಅಂತರಂಗವಾಗಿಯೂ ಅನೇಕ ತ್ಯಾಗಗಳನ್ನು ಮಾಡಿದ ಆ ಮಹಾದಾನಿಗೆ ಇದು ಕೊನೆಯ ತ್ಯಾಗ, ಈ ಶರೀರತ್ಯಾಗ.

"ಕೊನೆಯದೆಂದು ಹೇಳುವುದು ನಮ್ಮ ಲೋಕವ್ಯವಹಾರ ದೃಷ್ಟಿಯಿಂದ ಮಾತ್ರ. ಏಕೆಂದರೆ ಅಮರಾತ್ಮದ ಅನಂತಯಾತ್ರೆಗೆ ಕೊನೆ ಎಲ್ಲಿ ? ಯಾವುದು

ಅನಂತವೋ ಅದರ ಅನಂತ ಸಾಹಸಗಳಿಗೆ ಅಂತ್ಯವೆಲ್ಲಿ ? ಆದ್ದರಿಂದ ಅದು ಕಡೆಯುದೂ ಅಲ್ಲ, ಕೊನೆಯುದೂ ಅಲ್ಲ. ಕೈಕೊಂಡ ಕಾರ್ಯವನ್ನು ಮುಂದುವರಿಸುವ ಸಲುವಾಗಿ, ಕನ್ನಡದ ಅಭ್ಯುದಯ ಸಾಧನೆಗೆ ಸ್ವರ್ಗವೇದಿಕೆಯಲ್ಲಿ ಸೊಂಟಕಟ್ಟುವ ಸಲುವಾಗಿ, ಅಲ್ಲಿಯ ದೇವತಾಶೀರ್ವಾದ ಶಕ್ತಿಗಳನ್ನು ಇಲ್ಲಿಗೆ ಆಮಂತ್ರಿಸುವುದಕ್ಕಾಗಿ, ನಮ್ಮ ಇಲ್ಲಿಯ ಸಾಧನೆಗೆ ಅಲ್ಲಿಯ ಕೃಪಾ ಸಹಾಯವನ್ನು ಸಂಪಾದಿಸುವುದಕ್ಕಾಗಿ ಪೂಜ್ಯ ಶ್ರೀಕಂಠಯ್ಯನವರು ಅಶರೀರಯಾತ್ರೆ ಹೋಗಿದ್ದಾರೆ. ಯಾರು ಹೇಳಿದರು ಅವರು ಮಡಿದರೆಂದು ? ಈ ಬದುಕಿನಿಂದ ಆ ಬದುಕಿಗೆ ವರ್ಗವಾಗಿದ್ದಾರೆ ! ಕನ್ನಡಕ್ಕಾಗಿ ದುಡಿದು ಮುನ್ನಡೆದ ಮಹನೀಯರೊಡನೆ ಸೇರಿದ್ದಾರೆ, ಕಾರ್ಯಾರ್ಥವಾಗಿಯೆ ! ಕಳಿದವರಿಗಾಗಿ ಅಳುವುದು ಲೋಕದ ರೂಢಿ. ಆದರೆ ಚಿರಂಜೀವಿಯಾದ "ಶ್ರೀ" ಯವರಿಗಾಗಿ ನಾವು ಅಳುವುದು ಸಲ್ಲ. ಏತಕ್ಕೆ ಅಳು ? ನಶ್ವರ ಹೋಯಿತು, ಶಾಶ್ವತ ತೇಜಸ್ಸಿನ ಶಾಶ್ವತ ವೈಭವಕ್ಕಾಗಿ. ಇಂದು ಶ್ರೀಕಂಠಯ್ಯನವರು ಹಿಂದಿಗಿಂತಲೂ ನೂರ್ಮಡಿಯಾಗಿ ಬದುಕಿದ್ದಾರೆ ! ನಮ್ಮೆದೆಯಲ್ಲಿ ಉಕ್ಕುತ್ತಿರುವ ಗೌರವ ಭಾವವೇ ಅದನ್ನು ಸಮರ್ಥಿಸುತ್ತಿದೆ ! ನಮ್ಮ ಹೃದಯ ಭೂಮಿಕೆಯಲ್ಲಿ ಹೆಡೆಯೆತ್ತುತ್ತಿರುವ ದಿವ್ಯೋಲ್ಲಾಸದ ಅಗ್ನಿಶೇಷನೇ ಅದಕ್ಕೆ ಸಾಕ್ಷಿ ! ಆಚಾರ್ಯ ಶ್ರೀಕಂಠಯ್ಯನವರು ದೇಹಬಂಧನದಿಂದ ವಿಮುಕ್ತರಾಗಿ, ಏಕಕಾಲದಲ್ಲಿ ನಮ್ಮೆಲ್ಲರೊಡನೆಯೂ ಯಾವಾಗಲೂ ಇರುವ ದಿವ್ಯಸ್ಥಿತಿಗೇರಿದ್ದಾರೆ."

—ಇದು ಅಂದು ನಾನು ಆಕಾಶವಾಣಿಯಲ್ಲಿ ಮಾಡಿದ ಭಾಷಣದ ಒಂದು ಭಾಗ. ಅಂದಿನ ಆ ಹಾರೈಕೆಗೆ ನಿದರ್ಶನವಾಗಿ, ಸಾರಸ್ವತಸಾಕ್ಷಿಯಾಗಿ ಇಂದಿನ ಈ 'ಶ್ರೀಸಾಹಿತ್ಯ'ದ ಹೆಸರು ಹೊತ್ತ ಮಹಾಗ್ರಂಥದ ಪ್ರಕಟಣೆಯ ಮಹಾ ಸಮಾರಂಭ ನಡೆದಿದೆ. ಇಂತಹ ಹಲವಾರು ಅಮೂಲ್ಯ ಕೃತಿಗಳನ್ನು ಹೊರತಂದ ಮತ್ತು ಹೊರತರುತ್ತಿರುವ ನಮ್ಮ ಕನ್ನಡ ಅಧ್ಯಯನ ಸಂಸ್ಥೆಯನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

'ಶ್ರೀಸಾಹಿತ್ಯ'ದಲ್ಲಿ ಶ್ರೀಕಂಠಯ್ಯನವರ ಕೃತಿ ಸಮಸ್ತವನ್ನೂ ಒಂದೆಡೆ ಶೇಖರಿಸಿ ಕನ್ನಡಿಗರಿಗೆ ಶ್ರೀಯವರ ಮಹಾವ್ಯಕ್ತಿತ್ವದ ಸಮಗ್ರ ಪರಿಚಯವಾಗುವಂತೆ ಮಾಡುವುದರ ಜೊತೆಗೆ, ಆ ಪರಿಚಯ ವಿದ್ವತ್ಪೂರ್ಣವೂ ಸರಸವೂ ಆತ್ಮೀಯವೂ ಆಗುವಂತೆ ಶ್ರೀ ವಿ. ಸೀತಾರಾಮಯ್ಯನವರಿಂದ ಅದಕ್ಕೆ ಒಂದು ಸಿರಿಮುನ್ನುಡಿಯನ್ನು ಬರೆಸಿ ಸಹೃದಯರಿಗೆ ಮಹದುಪಕಾರವನ್ನೆಸಗಿದ್ದಾರೆ. ನನಗೆ ಇದರ ಬಿಡುಗಡೆಯ ಅವಕಾಶವನ್ನು ಕಲ್ಪಿಸಿಕೊಡುವ ನೆವದಿಂದ, ನಾನೂ ಈ ಗುರುಸೇವೆಯಲ್ಲಿ ಭಾಗಿಯಾಗುವಂತೆ

ಮಾಡಿದುದಕ್ಕಾಗಿ ಅಧ್ಯಯನ ಸಂಸ್ಥೆಯ ನೇತಾರರಾಗಿರುವ ಹಾ. ಮಾ. ನಾಯಕರಿಗೆ ಕೃತಜ್ಞನಾಗಿದ್ದೇನೆ.

'ಶ್ರೀ'ಯವರ ಸಾಹಿತ್ಯ ಮುಂದಿನ ಪೀಳಿಗೆಗೆ ಏನಾದರೂ ಸಂದೇಶವನ್ನಿತ್ತಿದೆಯೆ? ಶುದ್ಧ ಸಾಹಿತ್ಯದ ದೃಷ್ಟಿಯಿಂದ ನಾನು ಏನನ್ನೂ ಹೇಳುತ್ತಿಲ್ಲ. ಆದರೆ ಶ್ರೀಕಂಠಯ್ಯನವರ 'ಶುಕ್ರಗೀತೆ' ಮತ್ತು ಅವರು ಆಗಾಗ ಮಾಡುತ್ತಿದ್ದ ಒಂದು ಭಾಷಣ : The Burden of the Prophet — ಇವು ಶ್ರೀಕಂಠಯ್ಯನವರು ಸಾಹಿತ್ಯಕ್ಕೆ ಮಾತ್ರವಲ್ಲ, ಕನ್ನಡ ನಾಡಿಗೆ ಮಾತ್ರವಲ್ಲ, ಪ್ರಪಂಚಕ್ಕೇ ಕೊಟ್ಟ ಸಂದೇಶ ಎಂದು ನಾನು ಭಾವಿಸಿದ್ದೇನೆ. Burden of the Prophet ಎನ್ನುವ ಭಾಷಣದ ತಿರುಳು, ನಿಜವಾಗಿಯೂ ಯಾವ ತತ್ತ್ವವನ್ನು ಶ್ರೀರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಶ್ರೀ ಅರವಿಂದರು ತಾತ್ವಿಕವಾಗಿಯೂ ; ಗಾಂಧೀಜಿ ವಿನೋಬಾಜಿ ಮೊದಲಾದವರು ರಾಜಕೀಯ ಸಾಮಾಜಿಕ ರಂಗದಲ್ಲಿಯೂ ಘೋಷಿಸಿದರೋ ಅದೇ ಆಗಿದೆ. ಅದನ್ನು ನಾವು 'ವಿಶ್ವಮಾನವ ಸಂದೇಶ' ಎಂದು ಕರೆಯಬಹುದು.

'ವಿಶ್ವಮಾನವ ಸಂದೇಶ' ಎಂದರೆ ಒರಿಯು ಯಾವುದೋ ಒಂದು ದೇಶಕ್ಕೆ, ಒಂದು ನಾಡಿಗೆ, ಒಂದು ಭಾಷೆಗೆ, ಅನ್ವಯವಾಗುವಂಥದಲ್ಲ. ಇದುವರೆಗೆ ಎಲ್ಲ ನಾಡಿನ ಎಲ್ಲ ಭಾಷೆಗಳ ಸಾಹಿತಿಗಳೂ ಒಂದಲ್ಲ ಒಂದು ರೀತಿಯಲ್ಲಿ ತಮ್ಮ ತಮ್ಮ ಧರ್ಮ, ಸಂಸ್ಕೃತಿ, ಮತ ಇವುಗಳ ಹಿನ್ನೆಲೆಯಲ್ಲಿ ಸಾಹಿತ್ಯ ಸೃಷ್ಟಿಮಾಡಿದ್ದಾರೆ.; ಆ ಮೂಲಕ ತಮ್ಮ ಸಂದೇಶವನ್ನು ಕೊಟ್ಟಿದ್ದಾರೆ. ಎಲ್ಲಿಯೋ ಅಲ್ಲೊಂದು ಇಲ್ಲೊಂದು ಅಪವಾದವನ್ನುಳಿದರೆ, ಬಹುಪಾಲು ಸಾಹಿತ್ಯ ಮತೀಯತೆಯಿಂದ ಕಲುಷಿತಗೊಂಡಿದೆ. ಇನ್ನು ಮುಂದಿನ ಸಾಹಿತ್ಯವಾದರೂ ಮನುಜಮತ—ವಿಶ್ವಪಥ, ಸರ್ವೋದಯ ಸಮನ್ವಯ ಪೂರ್ಣದೃಷ್ಟಿ—ಈ ತತ್ವಗಳನ್ನು ಮುಂದಿನ ಪೀಳಿಗೆಯ ಜನ ಗ್ರಹಿಸುವಂತೆ ಮಾಡಬೇಕು. ನಮ್ಮ ಲೇಖಕರೆಲ್ಲ ಈ ದಾರಿಯಲ್ಲಿ ನಡೆದು ಎಲ್ಲರೂ ವಿಶ್ವಮಾನವ ದೃಷ್ಟಿಯನ್ನು ಪಡೆಯುವುದು ಸಾಧ್ಯವಾಗುವಂತೆ ಮಾಡುತ್ತಾರೆಂದು ನಾನು ಭಾವಿಸಿದ್ದೇನೆ. ನಾನು ಆಗಲೆ ಹೇಳಿದ ಶ್ರೀಕಂಠಯ್ಯನವರ ಕವಿತೆ ಮತ್ತು ಭಾಷಣ ಈ ಕೆಲಸವನ್ನು ಯಶಸ್ವಿಯಾಗಿ ಮಾಡಿವೆ. ಮುಂದಿನ ಪೀಳಿಗೆಯವರಿಗೆ ಇದೇ ಅವರ ಸಂದೇಶವೆಂದು ನನಗೆ ತೋರುತ್ತದೆ.

ಅಂತರರಾಷ್ಟ್ರೀಯ ಮಕ್ಕಳ ವರ್ಷದಲ್ಲಿ, ಮೈಸೂರಿನ ಭಾರತೀಯ ಭಾಷಾ ಸಂಸ್ಥೆಯವರು ವ್ಯವಸ್ಥೆಗೊಳಿಸಿದ್ದ ಮಕ್ಕಳ ಸಮ್ಮೇಳನದಲ್ಲಿ ನಾನು ಒಂದು ಸಂದೇಶ ಕೊಟ್ಟೆ : 'ಮುಂದಿನ ಪೀಳಿಗೆಗೆ ವಿಶ್ವಮಾನವ ಸಂದೇಶ' ಎಂದು. ಅದು ಬರೀ ಕನ್ನಡ

ದವರಿಗೆ, ತೆಲುಗಿನವರಿಗೆ, ತಮಿಳಿನವರಿಗೆ ಮಾತ್ರವಲ್ಲ ; ಭಾರತೀಯರಿಗೆ ಮಾತ್ರ ಅಲ್ಲ. ಎಲ್ಲ ದೇಶದ ಎಲ್ಲ ಮಕ್ಕಳೂ ಅದನ್ನು ತಿಳಿದು ಅನುಸರಿಸಬೇಕು ಎಂಬುದು ನನ್ನ ಅಪೇಕ್ಷೆ. ಆ ಸಂದೇಶವನ್ನು ಅನೇಕ ಕಡೆ ಅನೇಕ ಸಂಸ್ಥೆಗಳು ಸಾವಿರಾರು ಪ್ರತಿಗಳಲ್ಲಿ ಅಚ್ಚುಹಾಕಿಸಿ ಎಲ್ಲರಿಗೂ ಹಂಚುತ್ತಿದ್ದಾರೆ, ಹಂಚಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ವಿಶ್ವಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಅದನ್ನು ಇಂಗ್ಲಿಷ್, ತೆಲುಗು, ತಮಿಳು, ಮಲಯಾಳಂ, ಮರಾಠಿ, ಉರ್ದು ಮೊದಲಾದ ಭಾಷೆಗಳಿಗೆ ಭಾಷಾಂತರಿಸಿ ಒಂದು ಪುಸ್ತಕ ರೂಪದಲ್ಲಿ ಪ್ರಕಟಿಸಿ ಹಂಚಬೇಕು ಎಂಬ ಅಭಿಪ್ರಾಯವಿದೆ. ಹಾ. ಮಾ. ನಾಯಕರು ಅದನ್ನು ಸಿದ್ಧಪಡಿಸುತ್ತಿದ್ದಾರೆ. ಅದಕ್ಕಾಗಿ ನಾನು ಅವರಿಗೆ ಕೃತಜ್ಞ.

ಶ್ರೀಕಂಠಯ್ಯನವರ ನೆಪದಿಂದ, ಇಂದಿಗೆ ಅಗತ್ಯವಾದ ಈ ಕೆಲವು ಮಾತುಗಳನ್ನು ಆಡಿದ್ದೇನೆ. ಇಷ್ಟನ್ನು ಹೇಳಿ ನಾನು ತುಂಬ ಸಂತೋಷದಿಂದ 'ಶ್ರೀ ಸಾಹಿತ್ಯ' ಸಂಪುಟವನ್ನು ಬಿಡುಗಡೆಮಾಡಿ, ನಿಮ್ಮೆಲ್ಲರಿಗೂ ನಮಸ್ಕಾರ ಹೇಳುತ್ತೇನೆ.




## ಡಾ. ಎ. ಎನ್. ಮೂರ್ತಿರಾವ್

ಸುಮಾರು 10-15 ವರ್ಷಗಳಿಂದೀಚೆಗೆ ನನಗೆ ಭಾಷಣ ಮಾಡುವ ವಿಷಯದಲ್ಲಿ ಸ್ವಲ್ಪ ಅಲರ್ಜಿ ಅಂತ ಹೇಳಬೇಕು. ಆದರೂ ಕೂಡ ಈಗ 8-10 ದಿನಗಳ ಕೆಳಗೆ ನನ್ನ ಮಿತ್ರರು ಬಂದು ಈ ಸಮಾರಂಭದಲ್ಲಿ ಭಾಗವಹಿಸಬೇಕು ಅಂತ ಕೇಳಿದಾಗ ನಾನು "ಇದು ನನ್ನ ಕರ್ತವ್ಯ, ಬೇರೆ ಮಾತು ಆಡುವ ಹಾಗೇ ಇಲ್ಲ" ಅಂತ ಅವರಿಗೆ ಉತ್ತರ ಹೇಳಿದೆ.

ಬಿ. ಎಂ. ಶ್ರೀಕಂಠಯ್ಯನವರು ಐದು ವರ್ಷ ಕಾಲ—ಮೂರು ವರ್ಷ ಬಿ. ಎ. ಕ್ಲಾಸಿನಲ್ಲಿ, ಎರಡು ವರ್ಷ ಎಂ. ಎ. ಕ್ಲಾಸಿನಲ್ಲಿ—ನನ್ನ ಗುರುಗಳಾಗಿದ್ದವರು. ಆಮೇಲೂ ಕೂಡ ಅವರು ಬದುಕಿದ್ದವರೆಗೂ ಗುರುಸ್ಥಾನೀಯರಾಗಿದ್ದರು. ಅವರ ನೆನಪಿಗಾಗಿ ಒಂದು ಸಮಾರಂಭ ಏರ್ಪಡಿಸಿತು ಅಂತಂದರೆ, ಅದರಲ್ಲಿ ಭಾಗಿಯಾಗುವುದು ನನ್ನ ಭಾಗ್ಯ. ಆ ಭಾಗ್ಯವನ್ನು ದೊರಕಿಸಿಕೊಟ್ಟದ್ದಕ್ಕಾಗಿ ನಾನು ಕನ್ನಡ ಅಧ್ಯಯನ ಸಂಸ್ಥೆಯವರಿಗೆ ನಿಜವಾಗಿ ಕೃತಜ್ಞನಾಗಿದ್ದೇನೆ.

ಈ ಸಂದರ್ಭದಲ್ಲಿ ಸ್ವಾಭಾವಿಕವಾಗಿಯೇ ನನ್ನ ಮನಸ್ಸು ನಾನು ಮೊದಲು ಬಿ. ಎಂ. ಶ್ರೀಯವರನ್ನು ಕಂಡ ದಿನವನ್ನು ನೆನೆಯುತ್ತಿದೆ. ಅದು ಸುಮಾರು 67 ವರ್ಷದ ಹಿಂದಿನ ಮಾತು. ನನಗೆ ಆಗ 15 ವರ್ಷ, ಹೈಸ್ಕೂಲಿನಲ್ಲಿದ್ದೆ. ಸ್ಕೂಲಿನಲ್ಲಿ ನಾವು ಒಂದು ಡಿಬೇಟ್ ಏರ್ಪಡಿಸಿದ್ದೆವು. ಆ ಚರ್ಚೆಯ ವಿಷಯ ಏನು ಅಂತ ಹೇಳಿದರೆ ಬಹುಶಃ ತಾವೆಲ್ಲ ನಗುತ್ತೀರಿ. ಶ್ರೀಕಂಠಯ್ಯನವರು ಗಟ್ಟಿಯಾಗಿ ನಗಲಿಲ್ಲ, ಮುಗುಳು ನಗೆ ನಕ್ಕರು, ಅಷ್ಟೆ. ಚರ್ಚೆಯ ವಿಷಯ "ಪುರಾತನ ಭಾರತ ಇಂದಿನ ಭಾರತಕ್ಕಿಂತ ಉತ್ತಮವಾಗಿತ್ತು" (Ancient India was better than Modern India) ಅಂತ. ನಮಗೆ "ಎಂಥ ಸೊಗಸಾದ ಸಬ್ಜೆಕ್ಟ್ ಹುಡುಕಿಬಿಟ್ಟಿದ್ದೀವಿ! ಯಾರ ಹತ್ತಿರ ಹೇಳಿದರೂ ನಮ್ಮ ಬೆನ್ನು ತಟ್ಟುತ್ತಾರೆ" ಅಂತ ಹೆಮ್ಮೆ. ಆವಾಗ ನಾನು ಚರ್ಚಾಕೂಟದ ಸೆಕ್ರೆಟರಿಯಾಗಿದ್ದೆ. ಬಿ. ಎಂ. ಶ್ರೀಯವರನ್ನು 'ಸ್ಪೀಕರ್' ಆಗಿ ಕರಕೊಂಡು ಬಂದರೆ "ದೊಡ್ಡ ಪ್ರೊಫೆಸರನ್ನು ಕರಕೊಂಡು ಬಂದರು ಅನ್ನುವ ಕೀರ್ತಿ ಬರುತ್ತೆ" ಅಂತಂದುಕೊಂಡು ಶ್ರೀಯವರ ಮನೆಗೆ ಹೋದೆವು, ನಾನು ಮತ್ತು ಇನ್ನೊಬ್ಬರು.

ನಾವು ಹೋದದ್ದು ಕನ್ನಡದ ನಾಯಕರಾದ ಶ್ರೀಯ.ವರ ಮನೆಗಲ್ಲ, ಇಂಗ್ಲಿಷ್ ಪ್ರೊಫೆಸರ್ ಶ್ರೀಯ.ವರ ಮನೆಗೆ. ಅವರಿಗೂ ಕನ್ನಡಕ್ಕೂ ಯಾವ ವಿಧವಾದ ಸಂಬಂಧ ವಾದರೂ ಇತ್ತಾ ಅನ್ನುವುದು ನಮಗೆ ಏನೇನೂ ಗೊತ್ತಿಲ್ಲ. ಆ ವೇಳೆಗಾಗಲೆ ಸುಮಾರು 4-5 ವರ್ಷ ಹಿಂದೇನೇ ಅವರು ಧಾರವಾಡದಲ್ಲಿ ಬಹಳ ದೊಡ್ಡ ಭಾಷಣ ವೊಂದನ್ನು ಮಾಡಿದ್ದರು. ಆ ಭಾಷಣ ಇವತ್ತಿಗೂ ಕೂಡ ಉಪಯುಕ್ತವಾದ ವಿಷಯ ಗಳನ್ನು ಒಳಗೊಂಡಿದೆ. ಆದರೆ ನಮಗೆ ಅದೊಂದೂ ಗೊತ್ತಿರಲಿಲ್ಲ. ಆಗಿನ ಕಾಲದಲ್ಲಿ ನಮಗೆಲ್ಲ ಕನ್ನಡ ಅಂದರೆ ಅಸಡ್ಡೆ. ಹೈಸ್ಕೂಲಿನಲ್ಲಿ ನಾವು ಕನ್ನಡ ಕ್ಲಾಸಿಗೆ ಯಾತಕ್ಕೆ ಹೋಗುತ್ತಾ ಇದ್ದಿವು ಅಂದರೆ—ಬಾಕಿ ಕ್ಲಾಸುಗಳಲ್ಲಿ ಸ್ವಲ್ಪ ಬೇಸರವಾಗಿದ್ದರೆ, ಆಯಾಸ ವಾಗಿದ್ದರೆ, ಹುಚ್ಚುಹುಚ್ಚಾಗಿ ಜೊತೆಯವರೊಡನೆ ಮಾತಾಡಿ ಬೇಸರ ಕಳ ಕೊಳ್ಳೋದಕ್ಕೆ! ನಮ್ಮ ಕನ್ನಡ 'ಮುನಷಿ'ಗಳು ಸೂಟ್ ಹಾಕ್ಕೊಂಡು ಬರತಾ ಇರಲಿಲ್ಲ, ಟೈ ಕಟ್ಟಿಕೊಂಡು ಬರತಾ ಇರಲಿಲ್ಲ. ಒಂದು ಕ್ಲೋಸ್ ಕಾಲರ್ ಕೋಟು ಹಾಕ್ಕೊಂಡು ಬರುತ್ತಿದ್ದರು. ಕ್ಲಾಸನ್ನು ಹದದಲ್ಲಿಟ್ಟುಕೊಳ್ಳೋದು ಅಂದರೆ, ಅವರಿಗೆ ವಿಶ್ವಪ್ರಯತ್ನ. ನಾನು ಹೈಸ್ಕೂಲಿನಲ್ಲಿದ್ದ 3 ವರ್ಷದಲ್ಲಿ ಒಂದು ದಿನವಾದರೂ ಆ ಪ್ರಯತ್ನ ಫಲಿಸಿದ್ದನ್ನು ಕಾಣೆ.

ಅಂಥಾದ್ದು—ಆಗ ಕನ್ನಡಕ್ಕಿದ್ದ ಸ್ಥಾನ. ಇಂಥ ಭಾಷೆಗೆ, ಯಾರೂ ಗೌರವಿಸದ ಭಾಷೆಗೆ, ಯಾರಿಗೂ ಬೇಡದ ಭಾಷೆಗೆ, ಬೇರೆ ಒಂದು ಇಲಾಖೆ ಯಾತಕ್ಕಿರಬೇಕು, ವಿಶ್ವವಿದ್ಯಾನಿಲಯದಲ್ಲಿ ? ಅದಕ್ಕೆ ಪ್ರಾಧ್ಯಾಪಕರು ಬೇರೆ ಯಾತಕ್ಕಿರಬೇಕು ? ಇಂಥದೊಂದು ಇಲಾಖೆ ಇರಬೇಕು ಅನ್ನುವ ಅಭಿಪ್ರಾಯ ಕೂಡ ನಮ್ಮಲ್ಲಿ ಯಾರಿಗೂ ಬಂದ ಹಾಗೆ ಕಾಣೆ, ಆ ಕಾಲದಲ್ಲಿ. ವಿಶ್ವವಿದ್ಯಾನಿಲಯದ ಆವರಣದಲ್ಲೇನಾದರೂ ಬಂದಿತ್ತೋ ಏನೋ—ನನಗೆ ಗೊತ್ತಿಲ್ಲ.

ನಾವು ಶ್ರೀಯವರ ಮನೆಗೆ ಹೋಗಿ "ಇಂಥಾದ್ದೊಂದು ಡಿಬೇಟ್ ಏರ್ಪಡಿ ಸಿದ್ದೇವೆ ತಾವು ಆ ದಿನ ಬರಬೇಕು" ಎಂದು ಬೇಡಿದೆವು. ಸಾಧಾರಣವಾಗಿ ಆಗಿನ ಸಂಭಾಷಣೆಯೆಲ್ಲ ಇಂಗ್ಲಿಷಿನಲ್ಲೇ ನಡೆಯುತ್ತಿತ್ತು. ಶ್ರೀಕಂಠಯ್ಯನವರೂ ಯಾವಾಗಲೂ ಇಂಗ್ಲಿಷ್‌ನಲ್ಲೇ ಮಾತಾಡುತ್ತಿದ್ದರು. ನಾನು 5 ವರ್ಷ ಕಾಲೇಜಿನಲ್ಲಿ ಅವರ ಶಿಷ್ಯ ನಾಗಿದ್ದ ಕಾಲದಲ್ಲಿ ಒಂದೇ ಒಂದು ದಿನ ಅವರು ಒಂದೇ ಒಂದು ಕನ್ನಡ ಪದ ಉಪಯೋಗಿಸಿದ್ದನ್ನು ಕಾಣೆ. ಆಗಿನ ವಾತಾವರಣ ಹಾಗಿತ್ತು. ಶ್ರೀಯವರು " I see. you are having a debate................'Ancient India was better than modern India' ! India is better than anything else ; and ancient

India was better than anything modern ! A self-evident proposition, isn't it ?" ಎಂದರು, ಸ್ವಲ್ಪ ಮುಗುಳುನಗೆ ನಗುತ್ತ,

ಇದ್ದಕ್ಕಿದ್ದ ಹಾಗೇ ನಮ್ಮ ಧೈರ್ಯ ಎಲ್ಲ ಇಳಿದು ಹೋಯಿತು. ಇವರು ನಮ್ಮನ್ನ ಮೆಚ್ಚುತ್ತಾರೆ ಅಂದುಕೊಂಡಿದ್ದರೆ—ಇದೇನು ಈ ತರಹ ಮಾತಾಡುತಾರಲ್ಲ ! ಅವರ ಮಾತಿನ ಅರ್ಥ ನಮಗಾಗಲಿಲ್ಲ. Self-evident proposition ಅಂದರೆ ಏನೋ—ನಮಗೆ ಗೊತ್ತಿರಲಿಲ್ಲ. ನಾವು ಹೈಸ್ಕೂಲು ವಿದ್ಯಾರ್ಥಿಗಳಷ್ಟೆ. "ಹಾಗೆಂದರೇನು ಅಂತ ವಿಚಾರ ಮಾಡೋಣ" ಅಂತ ಆ ಮಾತನ್ನು ಗುರುತು ಹಾಕ್ಕೊಂಡದ್ದು ನೆನಪಿದೆ. ಈ ಮಾತನ್ನೆಲ್ಲ ಯಾತಕ್ಕೆ ಹೇಳತಾ ಇದೀನಿ ಅಂದರೆ—ಆಗಿನ ಕಾಲದಲ್ಲಿ ಕೂಡ ಅವರು ಭಾರತದ ವಿಷಯದಲ್ಲೇ ಆಗಲಿ, ಇತರ ದೇಶಗಳ ವಿಷಯದಲ್ಲೇ ಆಗಲಿ, ಒಂದು ಒಗೆಯ ನಿಷ್ಪಕ್ಷಪಾತವಾದ ದೃಷ್ಟಿಯನ್ನು ಬೆಳಸಿಕೊಂಡಿದ್ದರು ಅನ್ನವುದನ್ನು ತಿಳಿಸುವುದಕ್ಕೆ. ನಮ್ಮ ದೇಶವನ್ನು ನಾವು ಹೊಗಳಿದರೆ, ನಮ್ಮ ಪೂರ್ವಿಕರನ್ನು ನಾವು ಹೊಗಳಿದರೆ, ಅದು ಎಲ್ಲರೂ ಮೆಚ್ಚಬೇಕಾದ ವಿಷಯ ಅಂತ ನಮ್ಮ ಭಾವನೆ. ಅವರಿಗೆ ಹೊಗಳಿಕೆ ಬೇಡ ಅಂತಲ್ಲ ; ಆದರೆ ತಿಳಿದು ಹೊಗಳಬೇಕು. ಏನ್ಷಂಟ್ ಇಂಡಿಯಾದಲ್ಲೂ ಕೇಡಿಗರಿದ್ದಿರಬೇಕು ; ತ್ರೇತಾಯುಗದಲ್ಲಿ ಕೂಡ ಇದ್ದಿರಬೇಕು. ರಾವಣ ಆ ಯುಗದವನು ತಾನೆ! ಹಿಂದೆ ಕೇಡಿಗರಿಲ್ಲದೆ ಇದ್ದರೆ ದೇವರಿಗೆ ಅವತಾರ ಮಾಡೋದಕ್ಕೆ ಅವಕಾಶವೇ ಸಿಕ್ಕುವುದಿಲ್ಲವಲ್ಲ ! ಕೆಟ್ಟ ಪ್ರಪಂಚ ಸರಿಪಡಿಸೋದಕ್ಕೆ ತಾನೆ ಅವನು ಅವತಾರ ಮಾಡಬೇಕಾಗಿ ಬಂದದ್ದು ? ಇದನ್ನು ಮರೆತು ನಾವು ಆಗಿನ ಕಾಲದಲ್ಲಿದ್ದದ್ದೆಲ್ಲ ಒಳ್ಳೆಯದು, ಈಗಿನೋದೆಲ್ಲ ಕೆಟ್ಟದ್ದು ಅಂದುಕೊಂಡಿದ್ದೆವು. ಅವರು ಈ ದೃಷ್ಟಿಗೆ ಆಗಲೇನೇ ಒಂದು ಪೆಟ್ಟು ಕೊಟ್ಟರು. ನಮ್ಮ ಮನಸ್ಸನ್ನು ಸರಿಪಡಿಸೋದಕ್ಕೆ ಅವರ ಮಾತು ಸಹಾಯಮಾಡಿತು ಅಂತ ಕಾಣುತ್ತೆ.

ಅವರಿಗೆ ಬೇರೆ ಏನೋ ಕೆಲಸವಿದ್ದದ್ದರಿಂದ ಅವರು ನಮ್ಮ ಡಿಬೇಟಿಗೆ ಬರೋದಕ್ಕಾಗಲಿಲ್ಲ. ಅಲ್ಲಿಂದಾಚೆಗೆ ನಾನು ಅವರನ್ನು ನೋಡಿದ್ದು ಕಾಲೇಜಿಗೆ ವಿದ್ಯಾರ್ಥಿಯಾಗಿ ಸೇರಿದ ಮೇಲೇನೆ—1919ರಲ್ಲಿ. ಆ ಕಾಲದಲ್ಲಿ ನನ್ನ ಹೆಸರಿನವರೇ ಆದ ನನ್ನ ಇನ್ನೊಬ್ಬ ಗುರುಗಳು ಇಲ್ಲೇನೆ, ಈ ಮಾನಸಗಂಗೋತ್ರಿಗೆ ಹತ್ತಿರದಲ್ಲೇ ಇರತಕ್ಕ ಒಂದು ನಾಲೆಯ ಮೇಲೆ ನನ್ನ ಕೂರಿಸಿಕೊಂಡು, ನಾನು ಕನ್ನಡ ಬಿಟ್ಟುಬಿಟ್ಟು ಫ್ರೆಂಚ್ ತಗೊಂಡದ್ದಕ್ಕಾಗಿ ಛೀಮಾರಿ ಮಾಡಿದರು. ಅಲ್ಲದೆ, ಆಗ ಬಹುಶಃ ಯಾವುದೋ ಮಾಸಪತ್ರಿಕೆಯಲ್ಲೋ ಅಥವಾ ಪುಸ್ತಕದಲ್ಲೋ—ಸರಿಯಾಗಿ ನೆನಪಿಲ್ಲ —ಅಚ್ಚಾಗಿದ್ದ ಬಿ. ಎಂ. ಶ್ರೀಯವರ ಕೆಲವು ಕವನಗಳನ್ನು ಓದಿದರು. ಅವನ್ನು

ಕೇಳಿದಾಗ ನನಗೆ ರೋಮಾಂಚನಾಯಿತು. ಅಷ್ಟು ಸರಳವಾದ ಸುಂದರವಾದ ಬರವಣಿಗೆ ಕನ್ನಡದಲ್ಲಿ ಬಂದಿತ್ತು ಅಂತ ನನಗೆ ಗೊತ್ತಿರಲಿಲ್ಲ. ಹೈಸ್ಕೂಲಿನಲ್ಲಿದ್ದಾಗಲೇ ಕೆಲವರು ಹಿರಿಯ ಸ್ನೇಹಿತರು ನನಗೆ ಎಚ್ಚರಿಕೆ ಕೊಟ್ಟಿದ್ದರು : "ಬಿ. ಎ. ಗೆ ಕನ್ನಡ ಮಾತ್ರ ತಗೋಬೇಡ ಕಂಡೆಯ. ಪ್ರಶ್ನಪತ್ರಿಕೆ ಓದೋದಕ್ಕೆ ಒಂದು ಘಂಟೆ ಹಿಡಿಯುತ್ತೆ. ಉತ್ತರ ಬರೆಯೋಕೆ ಪುರಸೊತ್ತೇ ಇರೋದಿಲ್ಲ. ಜೋಕೆ, ಕನ್ನಡ ತಗೊಂಡೀಯ ?" ನಾನು ಫ್ರೆಂಚ್ ತಗೊಂಡೆ. ನನ್ನ (ಮೇಲೆ ಹೇಳಿದ) ಗುರುಗಳು ಮಾತ್ರ "ನೀನು ಮಾಡಿದ್ದು ಶುದ್ಧ ತಪ್ಪು. ಕನ್ನಡ ತಗೊಳ್ಳಬೇಕಾಗಿತ್ತು" ಎಂದು ಛೀಮಾರಿ ಹಾಕಿ "ನೋಡು, ಈಗ ಕನ್ನಡದಲ್ಲಿ ಎಷ್ಟು ಸೊಗಸಾದ ಬರವಣಿಗೆ ಬರತಾ ಇದೆ" ಎಂದು ಮಾಸ್ತಿ ವೆಂಕಟೇಶಯ್ಯಂಗಾರ್ಯರ ಕಥೆಯೊಂದನ್ನೂ ಶ್ರೀಯವರ ಕೆಲವು ಗೀತೆಗಳನ್ನೂ ಓದಿ ತೋರಿಸಿದರು.

ಆಮೇಲೆ, 1926ರಲ್ಲಿ "ಇಂಗ್ಲಿಷ್ ಗೀತಗಳು" ಎಂಬ ಪುಸ್ತಕ ಪ್ರಕಟವಾದ ಮೇಲೆ, ಇಡೀ ಪುಸ್ತಕವನ್ನು ನಾನು ಬಹಳ ಆಸಕ್ತಿಯಿಂದ, ಬಹಳ ಉತ್ಸಾಹದಿಂದ ಓದಿದೆ. ಅಷ್ಟು ಹೊತ್ತಿಗೆ ಸ್ವಲ್ಪಮಟ್ಟಿಗೆ ಇಂಗ್ಲಿಷ್ ಸಾಹಿತ್ಯವನ್ನ ಅಭ್ಯಾಸಮಾಡಿದ್ದದ್ದರಿಂದ ಇಂಗ್ಲೆಂಡಿನಲ್ಲಿ 'ರೊಮ್ಯಾಂಟಿಕ್ ಪೀರಿಯಡ್' ಬರೋದಕ್ಕಿಂತ ಹಿಂದಿನ ಸಾಹಿತ್ಯದಲ್ಲಿ ಯಾವ ಯಾವ ಲಕ್ಷಣಗಳು ಕಾಣುತಾ ಇದ್ದವು ಅನ್ನೋದೂ, ಆ ಲಕ್ಷಣಗಳಿಗೂನೂ ನಮ್ಮಲ್ಲಿ ನವೋದಯ ಕಾಲಕ್ಕಿಂತ ಹಿಂದಿನ ಸಾಹಿತ್ಯದ ಸ್ಥಿತಿಗೂನೂ ಕೆಲವು ಸಾದೃಶ್ಯಗಳಿವೆ ಅಂತನ್ನೋದೂ ನನಗೆ ಮನವರಿಕೆಯಾಗಿತ್ತು. ಛಂದಸ್ಸು ನಮ್ಮನ್ನು ಬಿಗಿಯಾಗಿ ಹಿಡಿದಿಟ್ಟಿವೆ ಅನ್ನೋದು ಗೊತ್ತಾಗಿತ್ತು. Poetic diction ಮೇಲಿನ ವ್ಯಾಮೋಹ—ಅಂದರೆ, "ಸೂರ್ಯನ್ನ ಸೂರ್ಯ ಅಂತ ಕರೆಯ ಬಾರದು, the orb of day ಅಂತ ಕರೆಯಬೇಕು ; ಗಾಳಿಯನ್ನ ಗಾಳಿ ಅಂತ ಕರೆಯ ಬಾರದು, a gentle gale ಅಂತ ಕರೆಯಬೇಕು. ಇಲ್ಲದಿದ್ದರೆ ಕಾವ್ಯ ಹೇಗೋ ಕೆಟ್ಟು ಹೋಗುತ್ತೆ" ಅನ್ನುವ ಭಾವನೆ—ಆವಾಗ ಅನೇಕರ ಮನಸ್ಸಿನಲ್ಲಿ ಇತ್ತು. ಹಾಗೇನೇ ನಮ್ಮಲ್ಲೂ ಕೂಡ ಕಾವ್ಯಕ್ಕೆ ಉಚಿತವಾದ ಪದಗಳೇ ಕೆಲವಿವೆ ಅನ್ನುವ ಭಾವನೆ ಇತ್ತು. ಅದರ ಜೊತೆಗೆ ನಮ್ಮಲ್ಲಿ ಪರ್ಯಾಯ ಪದಗಳ ಹಾವಳಿ ಬೇರೆ : ಅರ್ಜುನ ಅಂತ ಹೇಳಬೇಕಾದರೆ ಒಂದು ಸರತಿ ಅರ್ಜುನ ಅನ್ನಬಹುದು ; ಆಮೇಲೆ ಪಾರ್ಥ ಅನ್ನಬಹುದು ; ಆಮೇಲೆ ಧನಂಜಯ, ಕಿರೀಟಿ, ಫಲ್ಗುಣ—ಒಂದು ಹತ್ತು ಹೆಸರು ಬಳಸಬಹುದು.

ಹೀಗೆ ಒಂದು ಕಡೆ ಕಾವ್ಯೋಚಿತ ಪದಗಳ ಬಂಧನ. ಮತ್ತೊಂದು ಕಡೆ ಹಳೇ ಛಂದಸ್ಸಿನ ಬಂಧನ ; ಅವರಲ್ಲಿ heroic couplets ಇದ್ದಹಾಗೆ ನಮ್ಮಲ್ಲಿ ಷಟ್ಪದಿ

ಮುಂತಾದುವು. ಅವು ಬಹಳ ಬಿಗಿ ಎಂದರೂ ಅವುಗಳ ನಡಗೆ ಚೆನ್ನಲ್ಲ ಎನ್ನುವಂತಿಲ್ಲ: "ಹರಶರಪ್ರಥಮಾವತಾರ ಲೋಚನೆ ಮಹೇಶ್ವರ ಚಾಪತಾಂಗವಷೋಜಾತೆ........"— ಇದನ್ನು ಮೊದಲು ಓದಿದಾಗ 'ನಡಗೆ ಏನು ಸೊಗಸಾಗಿದೆ' ಅಂದುಕೊಂಡು ಮೆಚ್ಚಿ ಚಪ್ಪರಿಸಿದ್ದು ನೆನಪಿದೆ. ಆಮೇಲೆ ಹಾಗೇ ಯೋಚನೆ ಮಾಡಿದಾಗ ಪ್ರಶ್ನೆಗಳೆದ್ದವು : ಇದರ ಅರ್ಥ ಪತ್ತೆ ಮಾಡೋದು ಹೇಗೆ ? ಹರಶರ ಅಂದರೇನು ? ಮೊದಲು ಅದನ್ನ ಪತ್ತೆಮಾಡಿಕೊಳ್ಳಬೇಕು. ಆ ಹರಶರದ ಪ್ರಥಮಾವತಾರ ಯಾವುದು ? ಇದಕ್ಕೆ ನಮ್ಮ ಪುರಾಣದ ಕಥೆಗಳೆಲ್ಲ ನಮಗೆ ಗೊತ್ತಿರಬೇಕು. ಆಮೇಲೆ ಆ ಒಗಟುಗಳನ್ನೆಲ್ಲ ಒಂದೊಂದಾಗಿ ಬಿಡಿಸಿಕೊಂಡು ಪದ್ಯವನ್ನ ಅರ್ಥಮಾಡಿಕೊಳ್ಳಬೇಕು. "ನಾಗಭೂಷಣ ನಾಗಿ ಶಿವನಲ್ಲ........" ಸರಿ, ಮತ್ತೆ ಒಗಟು, ಮತ್ತೆ ಯಥಾಪ್ರಕಾರ ಪುರಾಣಗಳಿಗೆ ಹೋಗು, ಡಿಕ್ಷನರಿ ತೆಗೆದು ನೋಡು ! 'ಹರಶರ ಪ್ರಥಮಾವತಾರಲೋಚನೆ' ಅನ್ನೋದಕ್ಕೆ ಬದಲಾಗಿ ಸುಮ್ಮನೆ "ಮೀನಲೋಚನೆ" ಅಂತ ಅಂದುಬಿಟ್ಟಿದ್ರೆ ನಮಗೆ ಅರ್ಥವಾಗ್ತಾ ಇತ್ತು. ಅರ್ಥವಾಗಿಬಿಡುತ್ತಲ್ಲ ಅಂತಂದ್ಕೊಂಡೇನೇ ತನ್ನ ಪಾಂಡಿತ್ಯ ಪ್ರದರ್ಶನ ಮಾಡಿ ಬರೆಯೋದಕ್ಕೆ ಹೊರಟ, ಕವಿ !

ಇದನ್ನೆಲ್ಲ ಓದಿದ್ದ ನನಗೆ—

ಹೊಳೆ ಬೆಳಗಿ ಜಾರುವುದು
ಗಿಳಿ ನೆಗೆದು ಹಾರುವುದು

ಎಂದು ಮೊದಲಾಗುವ ಪದ್ಯವನ್ನು ಓದಿದಾಗ "ಇದೇನು ಇಷ್ಟು ಸುಲಭವಾಗಿ ಅರ್ಥವಾಗುತ್ತಲ್ಲ! ಕವಿಗಳು ಹೀಗೂ ಬರೆಯುತ್ತಾರೆಯೆ ?" ಎನ್ನಿಸಿತು. ಇನ್ನೂ ಒಂದು ವ್ಯತ್ಯಾಸವೇನು ಅಂತಂದರೆ : ಹೊಳೆ ಬೆಳಗಿ ಜಾರುವುದನ್ನು, ಗಿಳಿ ನೆಗೆದು ಹಾರಿದ್ದನ್ನು, ಆ ಪದ್ಯವನ್ನು ಬರೆದ ಕವಿ ಕಣ್ಣಾರ ನೋಡಿದ್ದ. ಇಲ್ಲಿ ಬರುವುದು ಸ್ವಂತ ಅನುಭವದ ನಿರೂಪಣೆ.

ಹಿಂದಿನ ಕಾಲದ ನಮ್ಮ ಕಥೆಗಳನ್ನು ಡಿ.ವಿ. ಗುಂಡಪ್ಪನವರು "ರಾಯ ಕೇಳೆಂದ ಸಾಹಿತ್ಯ" ಎಂದು ಹೆಸರಿಸಿ ಹಾಸ್ಯಮಾಡಿದ್ದು ನೆನಪಿದೆ. ಈ ರಾಯ ಕೇಳೆಂದ ಸಾಹಿತ್ಯ ವನ್ನು, ರಾಮಾಯಣ ಮಹಾಭಾರತಗಳ ಕಥೆಗಳನ್ನು, ಬೇಕಾದಷ್ಟು ಜನ ಹಿಂದೆ ಬರೆದಿದ್ದಾರೆ. ಮತ್ತೆ ಮತ್ತೆ ಅದರ ಪುನರಾವರ್ತನ. ಪುನರಾವರ್ತನವಾದ ಮಾತ್ರಕ್ಕೆ ಅದರಲ್ಲಿ ಕವಿಯ ಸ್ವಂತ ಕೈವಾಡ ಇರಬಾರದೆಂದಲ್ಲ. ಹಾಗಿಲ್ಲದಿದ್ದರೆ ಪಂಪಭಾರತವನ್ನು ಯಾತಕ್ಕೆ ಓದುತ್ತಿದ್ದೆವು, ಕುಮಾರವ್ಯಾಸನನ್ನು ಯಾತಕ್ಕೆ ಓದುತ್ತಿದ್ದೆವು ? ಆದರೂ ಒಟ್ಟಿನಲ್ಲಿ ನಮ್ಮ ಇಡೀ ಕಾವ್ಯಸಾಹಿತ್ಯ ತಗೊಂಡರೆ, ಇದು ಹಳೇ ಕಾಲದ ಸಾಹಿತ್ಯದ

ಪುನರಾವರ್ತನೆ, ಇದರಲ್ಲಿ ಅನುಭವಕ್ಕಿಂತ, ಸ್ವಂತ ಅನುಭವಕ್ಕಿಂತ, ಅನುಕರಣವೇ ಹೆಚ್ಚು ಅನ್ನಿಸುತ್ತೆ.

ಶ್ರೀಕಂಠಯ್ಯನವರು ಮಾಡಿದ ಎಲ್ಲ ಕೆಲಸಗಳಿಗಿಂತಲೂ ಮುಖ್ಯವಾದವು ಇವು : ಅವರು ಛಂದಸ್ಸಿನಲ್ಲಿ ಸ್ವತಂತ್ರ ಮಾರ್ಗವನ್ನು ಅನುಸರಿಸಿದರು ; ನಮಗೆ ಹೊಸ ಮಾದರಿಗಳನ್ನು ತೋರಿಸಿಕೊಟ್ಟರು. ಸರಳವಾದ ಭಾಷೆ ಕಾವ್ಯಕ್ಕೆ ಉತ್ತಮ ಎಂಬುದನ್ನು, ತಿಳಿಯಾದ ಅಚ್ಚ ಹೊಸಗನ್ನಡದಲ್ಲಿ ಎಷ್ಟು ಪರಿಣಾಮಕಾರಿಯಾಗಿ ಬರೆಯಬಹುದು ಎಂಬುದನ್ನು, ತೋರಿಸಿಕೊಟ್ಟರು. ಇದಕ್ಕಿಂತಲೂ ಹೆಚ್ಚಿನ ಉಪಕಾರ ವೆಂದರೆ : ನಮ್ಮ ಸ್ವಂತ ಅನುಭವ, ನಾವು ಕಣ್ಣಲ್ಲಿ ಕಂಡದ್ದು, ಕಿವಿಯಲ್ಲಿ ಕೇಳಿದ್ದು, ಮನಸ್ಸಿನಲ್ಲಿ ಸಂಕಟಪಟ್ಟದ್ದು ಅಥವಾ ಸಂತೋಷಪಟ್ಟದ್ದು—ಇವೆಲ್ಲ ಕಾವ್ಯಕ್ಕೆ ವಿಷಯ ವಾಗಬಹುದು ಎಂಬುದನ್ನು ಸ್ಪಷ್ಟಪಡಿಸಿದ್ದು. ಆದರಿಂದಲೇ ಇರಬೇಕು—ಯಾವತ್ತು ಅವರ "ಇಂಗ್ಲಿಷ್ ಗೀತೆಗಳು" ಎಂಬ ಪುಸ್ತಕ ಪ್ರಕಟವಾಯಿತೋ, ಹೆಚ್ಚುಕಡಿಮೆ ಆದರ ಮಾರನೆಯ ದಿನದಿಂದಲೇನೇ ಕನ್ನಡ ನಾಡಿನ ಎಲ್ಲ ಕಡೆಗಳಿಂದಲೂ ಹಾಡು ಕೇಳಿಬರುವಂತಾಯಿತು. ಎಲ್ಲರ ಮನಸ್ಸಿನಲ್ಲಿಯೂ ಹಿಂದಿನ ಕಾವ್ಯಗಳ ಬಗ್ಗೆ ಸ್ವಲ್ಪ ಅತೃಪ್ತಿಯಿತ್ತು ಅಂತ ಕಾಣುತ್ತೆ. ಹೊಗೆಯಾಡುತ್ತಿತ್ತು ಆ ಅತೃಪ್ತಿ. ಅದಕ್ಕೆ ಬಿ.ಎಂ. ಶ್ರೀಯವರು ಒಂದು ಜ್ಯೋತಿಸ್ಪರ್ಶಮಾಡಿದರು....ಎಲ್ಲ ಕಡೆಯಲ್ಲೂ ಬೆಳಕು ಹರಡಿಕೊಂಡಿತು. ಈ ಉಪಕಾರ ಅಷ್ಟಿಷ್ಟು ಅಂತ ಹೇಳಲಾಗುವುದಿಲ್ಲ.

ಹಿಂದೆ ಕನ್ನಡನಾಡಿನ ಸಾಹಿತ್ಯಕ್ಷೇತ್ರದಲ್ಲಿ ಬಯಲು ಪ್ರದೇಶ ಎಷ್ಟಿತ್ತೋ ಅದೆಲ್ಲ ಇವತ್ತು ಫಲವತ್ತಾಗಿದೆ. ನಮ್ಮಲ್ಲಿ ಕಾದಂಬರಿ ಇರಲಿಲ್ಲ ; ಸಣ್ಣಕಥೆ ಎಲ್ಲೋ ಇತ್ತು ಅಂತ, ಯಾವುದೋ ಹಿಂದಿನ ದೊಡ್ಡ ಕಾವ್ಯದಲ್ಲಿ ಮಧ್ಯೆ ಒಂದು ಕಥೆ ಅಡಗಿತ್ತು ಅಂತೆಂದುಕೊಂಡು ನಾವು ಸಂತೋಷಪಟ್ಟುಕೊಳ್ಳಬೇಕಾಗಿತ್ತು. ಭಾವಗೀತೆಯ ವಿಷಯದಲ್ಲೂ ಅದೇ ಮಾತು ಹೇಳಬಹುದು. ಈಗಲೋ—ಸಣ್ಣ ಕಥೆ, ಭಾವಗೀತೆ, ಕಾದಂಬರಿ, ಲಲಿತಪ್ರಬಂಧ— ಎಷ್ಟೊಂದು ಸಾಹಿತ್ಯಪ್ರಕಾರಗಳು ಬಂದಿವೆ ? ಶ್ರೀಕಂಠಯ್ಯನವರು ಅವೆಲ್ಲವನ್ನೂ ತಾವೇ ಬರೆಯಲಿಲ್ಲ. ಆದರೆ ಯಾವಾಗ ಮನಸ್ಸಿಗೆ ಒಂದು ಸ್ವಾತಂತ್ರ್ಯವನ್ನು ಕೊಟ್ಟರು, ಆವಾಗ ನಾವು ತಡೆಯಿಲ್ಲದೆ ಸಂಚರಿಸೋದಕ್ಕೆ ಪ್ರಾರಂಭಮಾಡಿದೆವು. ಇಂಥಿಂಥ ಕಡೆ ಇಂಥಿಂಥ ಗಣಿ ಇದೆ ಅನ್ನೋದು ನಮಗೆ ಗೊತ್ತಾಯಿತು. ಗಣಿಗೆ ಹೋಗಿ ನಮಗೆ ಬೇಕಾದ್ದನ್ನೆಲ್ಲ ಹೊತ್ತುಕೊಂಡು ಬಂದೆವು. ಆದ್ದರಿಂದ ನೇರವಾಗಿಯೋ ಅಪ್ರತ್ಯಕ್ಷವಾಗಿಯೋ ಇಂದಿನ ನಮ್ಮ ಎಲ್ಲ ಸಾಹಿತ್ಯದ ಮೇಲೂ ಬಿ.ಎಂ. ಶ್ರೀಯವರ ಮುದ್ರೆ ಇದ್ದೇ ಇದೆ. ಅದಕ್ಕಾಗಿ ನಾವು ಅವರಿಗೆ ಎಷ್ಟು ಕೃತಜ್ಞರಾಗಿದ್ದರೂ ಸಾಲದು.

ಪ್ರಬುದ್ಧ ಕರ್ಣಾಟಕ — ಬಿಎಂಶ್ರೀ : ನೂರರ ನೆನಪು

ಅವರು ಸ್ವತಃ ಬರೆದದ್ದು ಸ್ವಲ್ಪವೇ ಇರಬಹುದು. ಆದರೆ ಅವರ ಪ್ರಭಾವ ಸ್ವಲ್ಪವಲ್ಲ. ಮಾಸ್ತಿ ವೆಂಕಟೇಶಯ್ಯಂಗಾರ್ಯರು ತಮ್ಮ ಕವನವೊಂದರಲ್ಲಿ "ಕನ್ನಡ ನಾಡಿನಲ್ಲಿ ಇವತ್ತು ಯಾರು ಯಾರು ಎಲ್ಲೆಲ್ಲಿ ಏನೇನು ಬರೆಯುತ್ತಿದ್ದಾರೆ ಯಾವ ಯಾವ ವಾಣಿ ಕನ್ನಡದಲ್ಲಿ ಕೇಳಿಬರುತ್ತಿದೆ ಅವೆಲ್ಲವೂ ಕೂಡ ಅವರ ಪ್ರಭಾವದಿಂದ ಬಂದದ್ದು" ಅನ್ನುವ ಅರ್ಥ ಬರುವ ಮಾತನ್ನು ಆಡಿದ್ದಾರೆ. ಅದು ಅಕ್ಷರಶಃ ನಿಜ.

ಈ ಕೆಲಸವನ್ನು ಅವರು ಯಾವ ಕಾಲದಲ್ಲಿ ಮಾಡಿದರೋ ಆಗ ಕನ್ನಡ ಯಾವ ಸ್ಥಿತಿಯಲ್ಲಿತ್ತು ಅನ್ನೋದನ್ನ ಆಗಲೇ ಹೇಳಿದ್ದೇನೆ. ಇದನ್ನು ಮಾಡಲು ಹೊರಟಾಗ ನಮ್ಮ ನಾಡಿನ ಜನರು ಅವರಿಗೆ ಸಾಕಷ್ಟು ಉತ್ತೇಜನ ಕೊಡಲಿಲ್ಲ ಅನ್ನಿಸುತ್ತೆ. ಅದು ಯಾರ ತಪ್ಪೂ ಅಲ್ಲ; ಅಂದಿನ ವಾತಾವರಣದ ತಪ್ಪು. ನಮಗೆ ಯಾರಿಗೂ ಕನ್ನಡ ಅನ್ನೋದು ಬೇಕಾಗಿರಲಿಲ್ಲ. ಇಂಗ್ಲಿಷಿನ ವ್ಯಾಮೋಹ ಅಷ್ಟು ಹೆಚ್ಚಾಗಿತ್ತು, ಒಂದು ಕಡೆ. ಮತ್ತೊಂದು ಕಡೆ, ಸಂಸ್ಕೃತ ಓದಿಕೊಂಡರೆ ಸಾಕು, ಕನ್ನಡದಲ್ಲಿ ಪಾಠವನ್ನೂ ಹೇಳಬಹುದು ಅನ್ನುವ ಭಾವನೆಯಿತ್ತು. ಇಂಗ್ಲಿಷಿನಲ್ಲಿ ವ್ಯಾಮೋಹವಿದ್ದವರಿಗಂತೂ ಕನ್ನಡ ಕೆಲಸಕ್ಕೆ ಬಾರದ ಭಾಷೆ.

ಒಂದು ದಿನ ನಾನು ಕುಕ್ಕನಹಳ್ಳಿ ಕೆರೆಯ ಏರಿಯ ಮೇಲೆ ಹೋಗುತ್ತಿದ್ದಾಗ ನಮ್ಮ ಕಾಲೇಜಿನ ಮತ್ತೊಬ್ಬ ಪ್ರಾಧ್ಯಾಪಕರು—ಅವರ ಹೆಸರನ್ನು ಹೇಳುವುದಿಲ್ಲ. ಅವರೂ ನನ್ನ ಗುರುಗಳಾಗಿದ್ದವರೇನೆ—ಸಿಕ್ಕಿ ನನ್ನನ್ನು ಕೇಳಿದರು : "What is all this fuss your Srikantaiah is making about Kannada ? I mean.... is there anything in it ?" ಅವರ ಪ್ರಶ್ನೆಯ ಒಳ ಅರ್ಥ ಇದು : "ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರಾಧ್ಯಾಪಕರು ; ಅದರಲ್ಲೇನೂ ಹೆಸರು ಮಾಡೋಕಾಗೋದಿಲ್ಲ ಅಂತ ಇದೊಂದು ಪಂದು (stunt) ಮಾಡಿದ್ದಾರೋ ?" ಅಷ್ಟು ಹೊತ್ತಿಗೆ ನಾನು ಶ್ರೀಯವರ ಮಠಕ್ಕೆ ಸೇರಿಲ್ಲದೆ ಹೋದರೂ ಆ ಮಠದ ಬಾಗಿಲಿನಲ್ಲಿ ನಿಂತು, ಯಾರಾದರೂ ಒಳಕ್ಕೆ ಕರೆದಾರೇ ಅಂತ ಕಾಯ್ದುಕೊಂಡಿದ್ದೆ. ಆದ್ದರಿಂದ ಆ ಪ್ರಾಧ್ಯಾಪಕರಿಗೆ ಉತ್ತರ ಹೇಳೋದು ಸುಲಭವಾಯಿತು : " There is something in it. Kannada happens to be our language. Without it we can't survive. Without it we can't create anything. We can understand, read, and use English. But we can't create", ಎಂದು ಉತ್ತರ ಕೊಟ್ಟೆ. ಅವರು "Yes, yes, I suppose there is something in what you say" ಅಂದರು. ನನ್ನ ಮಾತು ನಿಜವಾಗಿ ಅವರಿಗೆ ಮನಸ್ಸಿಗೆ ಮುಟ್ಟಲಿಲ್ಲ. ಅವರ ಉತ್ತರ ಕೇವಲ ಮರ್ಯಾದೆಗೆ ಹೇಳಿದ್ದು.

ನನ್ನ ಉತ್ತರದಲ್ಲಿ ಮುಖ್ಯವಾದ ಪದ create ಅನ್ನೋದು, ನಮ್ಮ ವಿಶ್ವ ವಿದ್ಯಾನಿಲಯದ ಒಳಗೂ ಹೊರಗೂ ಜನ ಏನಾದರೂ ಬರೆಯುವುದಕ್ಕೆ ಷುರುಮಾಡಿದ ರೆಂದರೆ—ಶ್ರೀಕಂಠಯ್ಯನವರು "ಇಂಗ್ಲಿಷ್ ಗೀತೆಗಳು" ಅನ್ನುವ ಪುಸ್ತಕ ಪ್ರಕಟಿಸಿದ ಮೇಲೆ, ನಾಡಿನೆಲ್ಲೆಲ್ಲ ಸಂಚಾರಮಾಡಿ ಕನ್ನಡದ ಪರವಾಗಿ ಪ್ರಚಾರ ಮಾಡಿದ ಮೇಲೆ. ಕನ್ನಡದಲ್ಲಿ ಮಾತ್ರವಲ್ಲ, ಇಂಗ್ಲಿಷಿನಲ್ಲೇ ಆಗಲಿ ಫಿಲಾಸಫಿ ಗಿಲಾಸಫಿ ಮುಂತಾದ ಇತರ ವಿಷಯಗಳನ್ನು ಕುರಿತೇ ಆಗಲಿ, ನಿಜವಾಗಿ ಕಷ್ಟಪಟ್ಟು ಯೋಚನೆ ಮಾಡಿ ಬರೆಯಲಾರಂಭಿಸಿದ್ದು ಆ ಬಗೆಯ ಆಲೋಚನೆ ಕನ್ನಡದಲ್ಲಿ ಆರಂಭವಾದ ಮೇಲೆ. ಅಂದರೆ, ನಾನು ವಿಶ್ವವಿದ್ಯಾನಿಲಯದಲ್ಲಿ creative spirit—ಸೃಜನಶೀಲ ಮನೋ ವೃತ್ತಿ—ಏನಾದರೂ ಬಂದಿದ್ದರೆ ಅದಕ್ಕೂ ನಾವು ಶ್ರೀಕಂಠಯ್ಯನವರಿಗೇ ಕೃತಜ್ಞತೆ ಸಲ್ಲಿಸಬೇಕು. ಇವರಲ್ಲಿ ನನಗೆ ಯಾವ ಸಂಶಯವೂ ಇಲ್ಲ.

ಶ್ರೀಕಂಠಯ್ಯನವರ ಸೇವೆ ಬಹುಮುಖವಾದದ್ದು. ಅವರು ಕನ್ನಡಕ್ಕಾಗಿ ನಿಂತು ಪ್ರಚಾರಮಾಡಿದರು ; ತಾವೇ ಸಾಹಿತ್ಯವನ್ನು ಸೃಷ್ಟಿಸಿದರು ; ಸಾಹಿತ್ಯಸೃಷ್ಟಿಗೆ ಬೇಕಾದ ಮನೋಸ್ವಾತಂತ್ರ್ಯವನ್ನೂ ನಮಗೆ ಕೊಟ್ಟರು. ಜೊತೆಗೆ ರಾಜಕೀಯ ದೃಷ್ಟಿಯಿಂದಲೂ ಅವರು ಮಾಡಿದ ಉಪಕಾರ ದೊಡ್ಡದೇ. ನಮ್ಮ ಮೈಸೂರು ಮಹಾರಾಜರ ಕೃಪಾ ಛತ್ರದ ಆಶ್ರಯದಲ್ಲಿ ಕನ್ನಡನಾಡು ಒಂದಾಗಬೇಕು ಅನ್ನುವುದು ಅವರ ಹಿರಿಯಾಸೆ. ಮಹಾರಾಜರ ಕೃಪಾಛತ್ರದ ಕೆಳಗಲ್ಲದಿದ್ದರೂ ಕನ್ನಡನಾಡು ಒಂದಾಯಿತು. ಅದಾಗುವವರೆಗೆ ಅವರು ಬದುಕಿರಲಿಲ್ಲ. ಆದರೆ ಈಗಲೂ ಅವರ ಬಯಲುಚೇತನ ಇಲ್ಲೆಲ್ಲ ಓಡಾಡುತ್ತಿರಬಹುದೇನೋ, ನಾಡು ಒಂದಾದದ್ದನ್ನು ಕಂಡು ಸಂತೋಷಪಟ್ಟು ಕೊಳ್ಳುತ್ತಾ ಇರಬಹುದೇನೋ ಅನ್ನಿಸುತ್ತೆ. ಕನ್ನಡನಾಡಿನಲ್ಲಿ ಭಾಷೈಕ್ಯವುಂಟಾಗು ವುದಕ್ಕೂ ಅವರ ಸೇವೆ ಸಹಾಯಕವಾಯಿತು. ಬಾಕಿ ಕೆಲಸವನ್ನು ರಾಜಕಾರಣಿಗಳು ಮಾಡಿದರು. ಶ್ರೀಕಂಠಯ್ಯನವರು ರಾಜಕೀಯ ಕ್ಷೇತ್ರಕ್ಕೆ ಕಾಲಿಡಲಿಲ್ಲ.

ಅವರು ಆಗಾಗ ಹೇಳುತ್ತಿದ್ದ ವಿಷಯಗಳಲ್ಲಿ ಮುಖ್ಯವಾದ ಒಂದೆರಡು ಈಗ ನೆನಪಿಗೆ ಬರುತ್ತಿವೆ. ಇವತ್ತು ಕನ್ನಡ ಸಾಹಿತ್ಯವನ್ನು ನೋಡಿ ನಾವೆಲ್ಲ ಹೆಮ್ಮೆಪಟ್ಟು ಕೊಳ್ಳುತ್ತೇವೆ. ಕನ್ನಡ ಸಾಹಿತ್ಯ ಎಷ್ಟುಮಟ್ಟಿಗೆ ಬೆಳೆದಿದೆ, ನಾವು ಯಾರ ಮುಂದೂ ತಲೆತಗ್ಗಿಸಿ ನಿಲ್ಲಬೇಕಾಗಿಲ್ಲ, ಅನ್ನುವ ಭಾವನೆ ಇವತ್ತು ನ್ಯಾಯವಾಗಿ, ಸ್ವಾಭಾವಿಕ ವಾಗಿ ನಮ್ಮೆಲ್ಲರಲ್ಲೂ ಮೂಡಿದೆ. ಉತ್ಕೃಷ್ಟವಾದ ಸಾಹಿತ್ಯದ ಸೃಷ್ಟಿಯಾಗಿದೆ. ಆದರೂ ಕೂಡ ನಾವು "ನಮ್ಮ ಕನ್ನಡದಲ್ಲಿ ಏನು ತಾನೇ ಇಲ್ಲ !" ಅನ್ನುವ ಮಾತನ್ನೂ ಆಡಬಾರದು ಅನ್ನಿಸುತ್ತೆ. ಶ್ರೇಯಸ್ಸಿಗೆ ಅಸಂತೋಷವೇ ಮೂಲ ಎನ್ನುವ

ಮಾತನ್ನು ಶ್ರೀಕಂಠಯ್ಯನವರು ಅನೇಕ ಸಲ ಹೇಳಿದರು. ಯಾವಾಗಲೂ ತೃಪ್ತಿ ಬರಬಾರದು. ತೃಪ್ತಿ ಬಂತು ಅಂದರೆ ಅಲ್ಲಿಗೇ ನಮ್ಮ ಕೆಲಸ ನಿಲ್ಲುತ್ತೆ. ಕನ್ನಡದಲ್ಲಿ ಶಾಸ್ತ್ರಗಳನ್ನು ಕುರಿತ ಬರವಣಿಗೆ ಸಾಲದು, ತುಂಬ ಬರಬೇಕು, ಅನ್ನುವುದು ಶ್ರೀಕಂಠಯ್ಯನವರ ಮನಸ್ಸಿನಲ್ಲಿತ್ತು. ಆ ಭಾಗದಲ್ಲಿ ಈಗಲೂ ನಡೆಯಬೇಕಾದ ಕೆಲಸ ಬೇಕಾದಷ್ಟಿದೆ. ಪ್ರಪಂಚ ಮಿಂಚಿನ ವೇಗದಲ್ಲಿ ಸಾಗುತ್ತಿದೆ. ಎಷ್ಟೋ ಹೊಸ ಕಾರ್ಯಗಳು ನಡೆದಿವೆ ; ಹೊಸ ಹೊಸ invention ಗಳು ಬಂದಿವೆ ; ನಮ್ಮ ಕಣ್ಣ ಮುಂದೆ ಹೊಸ ಕ್ಷೇತ್ರಗಳು ಹುಟ್ಟಿಕೊಂಡು ವಿಸ್ತಾರವಾಗುತ್ತಿವೆ. ನಮ್ಮ ಬರವಣಿಗೆ ಇವೆಲ್ಲವನ್ನೂ ಗಣನೆಗೆ ತಂದುಕೊಂಡು ಅವಕ್ಕೆ ಅಭಿವ್ಯಕ್ತಿ ಕೊಡಬೇಕು. ಅದಕ್ಕಾಗಿ ಹೊಸ ಹೊಸ ಪದಗಳೂ ನುಡಿಗಟ್ಟೂ ಬೇಕು. ಅವು ಈಗ ನಮ್ಮಲ್ಲಿಲ್ಲ ; ಇಂಗ್ಲಿಷಿನಲ್ಲಿ ದೊರಕುತ್ತವೆ ; ಹೊಸ concept ಗಳಿಗೆ ಅಭಿವ್ಯಕ್ತಿ ಕೊಡಲು ಸಂಸ್ಕೃತ ನೆರವಾಗ ಬಹುದು. ಎಲ್ಲೆಲ್ಲಿ ಏನೇನು ಸಿಕ್ಕುತ್ತದೆಯೋ ಎಲ್ಲವನ್ನೂ ನಾವು ಬರಮಾಡಿಕೊಳ್ಳ ಬೇಕು. ನಮ್ಮ ಆಲೋಚನೆಯೂ ದೃಷ್ಟಿಯೂ ಇತ್ತ ಕಡೆ ಹರಿಯಬೇಕು. "ನಾವು ಏನು ತಾನೇ ಮಾಡಿಲ್ಲ ? ಎಲ್ಲವನ್ನೂ ಮಾಡಿದ್ದೇವೆ" ಅನ್ನುವ ಭಾವನೆಯನ್ನು ಬಿಟ್ಟು "ಮಾಡದಿರುವುದು ಬೇಕಾದಷ್ಟಿದೆ, ಅದನ್ನು ಮಾಡೋಣ " ಎಂದುಕೊಂಡು ಕಾರ್ಯೋನ್ಮುಖರಾಗಬೇಕು. ಶ್ರೀಕಂಠಯ್ಯನವರು ಕೊಟ್ಟ ಎಚ್ಚರಿಕೆಗಳಲ್ಲಿ ಇದೊಂದು : "ನಿಮ್ಮಲ್ಲಿ ಅಸಂತೋಷ ಇರಲಿ, ತೃಪ್ತಿಪಟ್ಟುಕೊಳ್ಳಬೇಡಿ."

ಇನ್ನೊಂದು, ಅವರು ಧಾರವಾಡದಲ್ಲಿ ಏಳು ದಶಕಗಳ ಹಿಂದೆ ಮಾಡಿದ ಭಾಷಣ ದಲ್ಲೇ ಹೇಳಿದ ಮಾತು : ನಮ್ಮ ನಾಡಿನಲ್ಲಿ ವಿದ್ಯಾವಂತರೆಲ್ಲರಿಗೂ ಕೂಡ ಕನ್ನಡ, ಸಂಸ್ಕೃತ, ಇಂಗ್ಲಿಷು—ಈ ಮೂರು ಭಾಷೆಗಳಲ್ಲೂ ಚೆನ್ನಾಗಿ ಪ್ರವೇಶವಿರಬೇಕು, ಚೆನ್ನಾಗಿ ಅವುಗಳ ಪರಿಚಯವಿರಬೇಕು. ಇತ್ತೀಚೆಗೆ ಈ ವಿಷಯದಲ್ಲಿ ನಮ್ಮ ಜನ ಬೇರೆ ಅಭಿಪ್ರಾಯಗಳಿಗೆ ಮನಸೋತಿದ್ದಾರೆಯೇನೊ ಅನ್ನುವ ಸಂದೇಹಕ್ಕೆ ಅವಕಾಶ ವಿದೆ. ಸ್ಪಷ್ಟವಾಗಿ ಯಾರೂ ಸಂಸ್ಕೃತ ಬೇಡ ಅನ್ನೋದಿಲ್ಲ, ಇಂಗ್ಲಿಷ್ ಬೇಡ ಅನ್ನೋದಿಲ್ಲ. ಆದರೂ ಕೆಲವರು "ಇಂಗ್ಲಿಷ್ ನಮ್ಮ ಶತ್ರು" ಎಂದದ್ದನ್ನು ಕೇಳಿದ್ದೇನೆ. ಇಂಗ್ಲಿಷಿನ ಪರವಾಗಿ ವಕೀಲಿ ವಹಿಸಲು ನಾನೇನೂ ಆತುರನಾಗಿಲ್ಲ. ನನ್ನ ಅಂಗಡಿಯಲ್ಲಿ ನಾನು ಮಾರಿದ್ದೇನೋ ಇಂಗ್ಲಿಷೇ. ಆದರೆ ಆ ಅಂಗಡಿಯನ್ನು ಮುಚ್ಚಿ ದಶಕಗಳಾಗಿ ಹೋದವು. ಅಲ್ಲದೆ ಆಗಿನ ಕಾಲದಿಂದಲೂ ನನ್ನ ಮನಸ್ಸಿನಲ್ಲಿ—ಬಹುಶಃ ನಮ್ಮೆಲ್ಲರ ಮನಸ್ಸಿನಲ್ಲಿ—ಇನ್ನೊಂದು ಭಾವನೆಯಿದೆ : ಪ್ರಪಂಚದಲ್ಲಿ ಎಷ್ಟೊಂದು ಜನ ಕೇಡಿಗರು ಎಷ್ಟೊಂದು ಕೆಟ್ಟ ಕೆಲಸಮಾಡಿದ್ದಾರೆ, ಎಷ್ಟೊಂದು ಹಿಂಸೆ ಕೊಟ್ಟಿದ್ದಾರೆ, ಎಷ್ಟೊಂದು

ನೋವು ಉಂಟುಮಾಡಿದ್ದಾರೆ—ಇಂಥ ಕೆಲಸವನ್ನು ಯಾರು ಹೆಚ್ಚು ಮಾಡಿದ್ದಾರೆ ಅಂತ ಲೆಕ್ಕಹಾಕಿದರೆ, ಬಹುಶಃ ನಾವು ಈ ಬಿಳೀ ಜನಾಂಗದವರನ್ನು ಹೆಸರಿಸಬೇಕಾಗುತ್ತೆ. ಅವರಿಂದ ಪ್ರಪಂಚಕ್ಕೆ ಬಹುಶಃ ಇನ್ನೆಲ್ಲರಿಂದ ಆಗಿರೋದಕ್ಕಿಂತ ಹೆಚ್ಚು ಕೇಡಾಗಿದೆ. ಅಂದ ಮೇಲೆ ಇಂಗ್ಲೆಂಡನ್ನಾಗಲಿ ಆದಕ್ಕೆ ಸಂಬಂಧಪಟ್ಟ ವಿಷಯಗಳನ್ನಾಗಲಿ ನಾನು ಪ್ರೀತಿಯಿಂದ ಸ್ಮರಿಸುತ್ತೇನೆ ಅಂತಲೇನೂ ಹೇಳಲಾರೆ. ಅವರನ್ನು ದ್ವೇಷಿಸುವುದಿಲ್ಲ. ಯಾತಕ್ಕೆ ಅಂದರೆ ಗಾಂಧೀಜಿ ನಮಗೆ ಹೇಳಿಕೊಟ್ಟಿದ್ದಾರೆ: "ನೀವು ದ್ವೇಷಿಸಬೇಕಾದ್ದು ಜನರನ್ನಲ್ಲ. ಅವರಲ್ಲಿ ಕೇಡಿಗತನವನ್ನು ಕಂಡರೆ ಆ ಕೇಡಿಗತನವನ್ನು ದ್ವೇಷಿಸಿ" ಎಂದು. ಅಂದಮೇಲೆ ನಾನು ಇಂಗ್ಲಿಷಿನ ಪರವಾಗಿ ಮಾತಾಡಿದರೆ ಅದರ ಮೇಲಿನ ದುರಭಿಮಾನದಿಂದಲ್ಲ. ಸಂಸ್ಕೃತದ ವಿಷಯ ಮಾತಾಡಿದರೂ ಕೂಡ ಅದರ ಮೇಲಿನ ದುರಭಿಮಾನದಿಂದಲ್ಲ. ಒಂದಾನೊಂದು ಕಾಲದಲ್ಲಿ ನಾವು ಇವೆರಡರ ಮೇಲೆ ಯುದ್ಧವನ್ನೇ ಹೂಡಬೇಕಾಗಿತ್ತು. ಶ್ರೀಕಂಠಯ್ಯನವರೇ ಆ ಯುದ್ಧದ ನೇತಾರರಾದರು. ಅವೆರಡೂ ನಮ್ಮನ್ನು ಅಂದು ಮುತ್ತಿದ್ದವು. ಆದ್ದರಿಂದ ನಾವು ಯುದ್ಧ ಮಾಡಬೇಕಾಯಿತು, ಮಾಡಿದೆವು. ಆವಾಗ ಅವೆರಡನ್ನೂ ಹಳಿಯಬೇಕಾಗಿತ್ತು, ಹಳಿದೂ ಹಳಿದೆವು. ನ್ಯಾಯ—ನಾವು ಒಂದು ದೊಡ್ಡ ಕೆಲಸ ಸಾಧಿಸೋಕೆ ಅಂತ ಹಾಗೆ ಮಾಡಿದೆವು. ನ್ಯಾಯವಾಗಿ ಎಲ್ಲಿಯವರೆಗೆ ಹೋಗಬಹುದೋ ಅದಕ್ಕಿಂತ ಒಂದೆರಡು ಹೆಜ್ಜೆ ಮುಂದಕ್ಕೂ ಹೋದೆವೇನೊ! ಇವತ್ತು ನಾವು ಆ ಯುದ್ಧದಲ್ಲಿ ಗೆದ್ದಿದ್ದೇವೆ. ಆ ವಿಷಯದಲ್ಲಿ ಯಾರೂ ಸಂಶಯ ಇಟ್ಟುಕೊಳ್ಳಬೇಕಾಗಿಲ್ಲ. ಕನ್ನಡದಲ್ಲಿ ಆಗಬೇಕಾದ್ದೆಲ್ಲ ಆಗಿದೆ ಅಂತ ನಾನು ಸೂಚಿಸುತ್ತಾ ಇಲ್ಲ. ಆಗಬೇಕಾದ ಕೆಲಸ ಇನ್ನೂ ಇದೆ. ಅಂದರೆ ಅದೆಲ್ಲಾ, ಜನರಲ್‌ಗಳು ಹೇಳುವ ಹಾಗೆ, ಗೆದ್ದ ಮೇಲೆ ಮಾಡಬೇಕಾದ mopping-up operations, ಅಷ್ಟೇನೆ. ಅದು ಆಗುತ್ತೆ, ಯಾರು ಬೇಡ ಅಂದರೂ ಆಗಿಯೇ ಆಗುತ್ತೆ. ಆದ್ದರಿಂದ, ನಾವು ಹಿಂದೆ ಸಂಸ್ಕೃತಕ್ಕೆ ಹೆದರಿದ ಹಾಗೆ, ಇಂಗ್ಲಿಷಿಗೆ ಹೆದರಿದ ಹಾಗೆ, ಇವತ್ತು ಹೆದರಬೇಕಾದ್ದಿಲ್ಲ. ಶ್ರೀಕಂಠಯ್ಯನವರ ಮನಸ್ಸಿನಲ್ಲಿದ್ದದ್ದನ್ನು ನೆನಪಿಸಿಕೊಳ್ಳೋಣ: ನಮಗೆಲ್ಲರಿಗೂ ಕೂಡ ಇಂಗ್ಲಿಷ್ ಬೇಕು, ಹೊಸ ಶಾಸ್ತ್ರಗಳು ಹುಟ್ಟಿವೆ, ಹೊಸ ಅನುಭವ ಆಗುತ್ತಿದೆ. ಹಿಂದಿನ 500 ವರ್ಷಗಳಲ್ಲಿ ಆದಷ್ಟು ಬದಲಾವಣೆಗಳು ಈಗ 10-20 ವರ್ಷಗಳಲ್ಲಿ ಆಗುತ್ತಿವೆ. ಅವೆಲ್ಲಕ್ಕೂ ತಕ್ಕಂತೆ ಭಾಷೆ ಬೆಳೆಯಬೇಕು. ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಮಾನವಶಾಸ್ತ್ರ—ಭೌತಶಾಸ್ತ್ರಗಳ ವಿಷಯವನ್ನಂತೂ ಹೇಳಬೇಕಾದ್ದೇ ಇಲ್ಲ—ಎಲ್ಲ ತಮ್ಮ ಹಳೆಯ ಎಲ್ಲೆಗಳನ್ನು ಮೀರಿ ಬೆಳೆದಿವೆ. ಇದೆಲ್ಲಕ್ಕೂ ತಕ್ಕಂತೆ ನಮ್ಮ ಭಾಷೆಯನ್ನು ಸಜ್ಜುಗೊಳಿಸಿಕೊಳ್ಳಬೇಕು. ಆದ್ದರಿಂದ, ಇವತ್ತು ಪ್ರಪಂಚದಲ್ಲಿ ಯಾವ ಭಾಷೆ ಪ್ರಬಲವಾಗಿದೆ, ಯಾವ ಭಾಷೆಯಲ್ಲಿ ನಮಗೆ ಯೂರೋಪ್ ಅಮೆರಿಕಗಳ ಹೊಸ ಶಾಸ್ತ್ರ

ಗಳೆಲ್ಲ ಕರಗತವಾಗುತ್ತವೆ—ಅದನ್ನ ನಾವು ಚಾಲತಿಯಲ್ಲಿಟ್ಟುಕೊಳ್ಳಬೇಕು. ಅದರ ವಿಷಯದಲ್ಲಿ ಮಮತೆಯನ್ನು ಕೂಡ ಬೆಳಸಿಕೊಳ್ಳಬೇಕು. ಕನ್ನಡಿಗರು ಆ ಭಾಷೆಗೆ ಹೆದರಬೇಕಾದ್ದಿಲ್ಲ ಅಂತ ಹೇಳಿದೆನಷ್ಟೆ. ಇನ್ನೂ ಮುಂದೆ ಹೋಗಿ ಹೇಳುತ್ತೇನೆ: ಒಂದಾನೊಂದು ಕಾಲದಲ್ಲಿ ನಮ್ಮಿಂದ ಆ ಭಾಷೆಗಳು (ಇಂಗ್ಲಿಷ್, ಸಂಸ್ಕೃತ) ಸೇವೆ ತಗೊಂಡವು. ಇವತ್ತು ನಾವೇ ಯಾತಕ್ಕೆ ಆ ಭಾಷೆಗಳಿಂದ ಸೇವೆ ತೆಗೊಳ್ಳಬಾರದು? ಇಂಗ್ಲಿಷು ನಮಗೆ ತೊತ್ತಾಗಿ ಬರಲಿ. ನಮ್ಮ ಕನ್ನಡಕ್ಕೆ ಮಾಡಬೇಕಾದ ಸೇವೆ ಮಾಡೋದಕ್ಕೆ ಬರಲಿ. ಕನ್ನಡದ ಮಹಾನದಿ ಹರಿಯಬೇಕಾದರೆ ಅದಕ್ಕೆ ಉಪನದಿಗಳು ಬೇಕು, ಇಂಗ್ಲಿಷು ಆ ಉಪನದಿಯಾಗಿ ಬರಲಿ, ಕನ್ನಡ ಚಕ್ರವರ್ತಿಸ್ಥಾನದಲ್ಲಿರ ಬೇಕಾದರೆ ಸಾಮಂತರಾಜರಿರಬೇಕು. ಇಂಗ್ಲಿಷ್ ಸಾಮಂತರಾಜನಾಗಿ ಒರಲಿ.

ಅಥವಾ ಈ ಚಕ್ರವರ್ತಿ-ಸಾಮಂತ, ಮೇಲು-ಕೆಳಗು—ಇಂಥ ಅರಿವಿನ ಮಾತ್ರ ಯಾತಕ್ಕೆ? ಆ ಅಂಥ ಭಾವನೆಯನ್ನು ಹೊರದೂಡೋಣ. ನಾವೆಲ್ಲರೂ ಸ್ನೇಹಭಾವ ದಲ್ಲಿ ಕೂಡಿ ಸಹಕರಿಸಿ ಪ್ರಪಂಚದ ಜ್ಞಾನವನ್ನೆಲ್ಲ ವಶಪಡಿಸಿಕೊಳ್ಳೋಣ. ಚಕ್ರವರ್ತಿ ಇತರರಿಂದ ಬಯಸಬಹುದಾದ ಕಪ್ಪಕಾಣಿಕೆಗಳನ್ನು—ಸತ್ಯ ಸೌಂದರ್ಯ ಸೌಶೀಲ್ಯ ಈ ಮೂರು ದೊಡ್ಡ ಗುಣಗಳೇನುಂಟು, ಆ ಮೌಲ್ಯಗಳು ಮೂರ್ತಿವತ್ತಾದ ದೊಡ್ಡ ತತ್ವಕ್ಕೆ ಸಲ್ಲಿಸೋಣ. ಆ ತತ್ವ ಚಕ್ರವರ್ತಿ ಸ್ಥಾನದಲ್ಲಿದ್ದರೆ ನಮಗೆಲ್ಲ ನೆಮ್ಮದಿ ನಾವೆಲ್ಲರೂ ಕೂಡ ದಾನ, ಸ್ವೀಕಾರ, ಇವೆರಡನ್ನೂ ಮಾಡಿಕೊಂಡು ಒಟ್ಟಿಗೆ ಯಾವ ಕಾಣಿಕೆಯನ್ನು ಕೊಡಬಹುದೋ ಅದನ್ನು ಅಲ್ಲಿ—ಆ ಹಿರಿಯ ತತ್ವದ ಸನ್ನಿಧಿಯಲ್ಲಿ—ಅರ್ಪಿಸೋಣ. ಪರಿಪೂರ್ಣತೆ ದೊರೆಯುವುದು ಅಲ್ಲಿ.

ಅಥವಾ ಆ ಪರಿಪೂರ್ಣತೆ ಎಂಬ ಪದವೂ ಸರಿಯಲ್ಲವೇನೊ. ಪರಿಪೂರ್ಣತೆ ಅಂತ ಹೇಳಿದರೆ—ನಾವು ಮಾಡಬೇಕಾದ್ದನ್ನೆಲ್ಲ ಮಾಡಿದೀವಿ, ಮಾಡಿ ಮುಗಿಸಿದೀವಿ. ಇನ್ನು ಶವಾಸನ ಹಾಕುವುದೊಂದೇ ಬಾಕಿ, ಅಂದಂತಾಗುತ್ತೆ. ಈ ಸಂದರ್ಭದಲ್ಲಿ ಶವಾಸನ ಹಾಕೋಕೆ ಹೊರಟರೆ ನಾವು ಶವವೇ ಆಗಿ ಹೋಗುತೀವಿ! ನಾವು ಯಾವಾಗ ಪರಿಪೂರ್ಣತೆಯ ಹತ್ತಿರಕ್ಕೆ ಬರುತೀವಿ, ಆಗ ಆ ಪರಿಪೂರ್ಣತೆಯಿಂದ ಆಚೆಗೆ ಇನ್ನೊಂದು ವಿಶಾಲವಿಶ್ವ, ಬೃಹತ್ಸತ್ಯ, ಕಣ್ಣಿಗೆ ಕಾಣುತ್ತೆ. ಈ ಪರಿಪೂರ್ಣತೆಯ ಪ್ರಭೆ ಆ ಬೃಹತ್ಸತ್ಯವನ್ನು ನಮಗೆ ಕಾಣದಂತೆ ಮುಚ್ಚಿತ್ತು!

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ತತ್ ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ ॥

ಆ ಬೃಹತ್ಸತ್ಯದ ಹತ್ತಿರಕ್ಕೆ ಹೋದರೆ ಅಲ್ಲಿಂದ ಮುಂದೆ ಇನ್ನೂ ಬೃಹತ್ತಾದ ಸತ್ಯ

ಕಾಣುತ್ತೆ ! ನಾವು ಮಾಡಬೇಕಾದ ಕೆಲಸ ಮುಗಿಯತಕ್ಕದ್ದಲ್ಲ. ಯಾವತ್ತು ಕೆಲಸ ಮುಗಿಯಿತು ಅಂತೀವೋ ಅವತ್ತು ಮೃತ್ಯು ಬಂತು ಅಂತಲೇ ಲೆಕ್ಕ. ಅಮೃತತ್ವ ಅಂತಂದರೆ ಸದಾ ಸತ್ಯ ಸೌಂದರ್ಯ ಸೌಶೀಲ್ಯಗಳ ಬೆನ್ನಟ್ಟಿ ಹೋಗುತ್ತಿರುವುದು, ಅವುಗಳ ಅರಿವನ್ನು ಹೆಚ್ಚಿಸಿಕೊಳ್ಳುತ್ತಲೇ ಇರುವುದು, ಅವುಗಳ ಪ್ರಭೆಯನ್ನು ಹೀರಿ ಕೊಳ್ಳುತ್ತಲೇ ಇರುವುದು. ಈ ಸಂದೇಶವನ್ನು ಕೂಡ ಶ್ರೀಕಂಠಯ್ಯನವರು ಕೊಟ್ಟರು. ಅದು ನಮ್ಮ ಮನಸ್ಸಿನಲ್ಲಿ ಸದಾ ಜೀವಂತವಾಗಿರಲಿ.

ತಾವೆಲ್ಲ ಇದುವರೆಗೆ ತಾಳ್ಮೆಯಿಂದ ನನ್ನ ಮಾತನ್ನ ಕೇಳಿದ್ದಕ್ಕೆ ನಾನು ಕೃತಜ್ಞ ನಾಗಿದ್ದೇನೆ. ಈ ಸಮಾರಂಭದಲ್ಲಿ ಭಾಗವಹಿಸುವುದಕ್ಕೆ ನನ್ನನ್ನು ಆಹ್ವಾನಿಸಿದ ಕನ್ನಡ ಅಧ್ಯಯನ ಸಂಸ್ಥೆಯವರಿಗೂ ಕೃತಜ್ಞನಾಗಿದ್ದೇನೆ. ಶ್ರೀಕಂಠಯ್ಯನವರಿಗೆ—ಅವರ ನೆನಪಿಗೆ—ನಮನವನ್ನು ಸಲ್ಲಿಸಿ, ಕನ್ನಡ ಅಧ್ಯಯನ ಸಂಸ್ಥೆಯವರು ಈ ಪುಸ್ತಕವನ್ನು ಪ್ರಕಟಿಸಿದ್ದಕ್ಕಾಗಿ ಅವರನ್ನು ಅಭಿನಂದಿಸಿ, ನನ್ನ ಮಾತನ್ನು ಮುಗಿಸುತ್ತೇನೆ.

## ಡಾ. ಎಸ್. ವಿ. ರಂಗಣ್ಣ

ಈ ದಿವಸ ನಾವು ಕೈಗೊಂಡಿರುವ ಕೆಲಸ ಕನ್ನಡನಾಡಿನ ಇತ್ತೀಚಿನ ಚರಿತ್ರೆಗೆ ವಿಷಯಬೋಧಕವಾಗುವ ಅಂಶವಾಗಿದೆ. ಶ್ರೀಯವರು ನನ್ನ ಗುರುಗಳು. ನಾನು ಸೆಂಟ್ರಲ್ ಕಾಲೇಜಿನಲ್ಲಿ ಒಬ್ಬಿಬ್ಬರು ಮಹಾ ವಿದ್ವಾಂಸರ ಅಡಿಯಲ್ಲಿ ಇಂಗ್ಲಿಷ್ ಮುಖ್ಯವಾಗಿ, ಆಮೇಲೆ ಸ್ವಲ್ಪ ಕನ್ನಡ ಪರಿಚಯ ಮಾಡಿಕೊಂಡು ಇಲ್ಲಿಗೆ ಬಂದೆ. ಇಂಗ್ಲಿಷ್ ವಿಷಯವನ್ನೆ ತೆಗೆದುಕೊಂಡು ಎಂ. ಎ. ಪರೀಕ್ಷೆ ಓದುವುದಕ್ಕೋಸ್ಕರ ನಾನಿಲ್ಲಿಗೆ ಬಂದೆ. ಎರಡು ವರ್ಷ ನಮಗೆ ಅವರು ಪಾಠ ಹೇಳಿದರು. ಈಗ ಯಾವ ವಿಷಯವನ್ನೂ ನಾನೇನು ಮುಚ್ಚುಮರೆ ಮಾಡಬೇಕಾದ್ದಿಲ್ಲ. ಐವತ್ತರವತ್ತು ವರ್ಷದ ಹಿಂದಿನ ಮಾತಾದ್ದರಿಂದ, ಅದನ್ನು ನೇರವಾಗಿ ಮುಚ್ಚುಮರೆಯಿಲ್ಲದೆ ಸತ್ಯವಾಗಿ ಹೇಳಬೇಕೆಂದಿದ್ದೇನೆ.

ನಾನೊಂದು ದಿವಸ ಮಹಾರಾಜರವರ ಕಾಲೇಜಿನಲ್ಲಿ ಗ್ರಂಥಾಲಯಕ್ಕೆ ಹೋಗಿದ್ದೆ; ಯಾವುದೋ ಪುಸ್ತಕವನ್ನು ತೆಗೆದುಕೊಳ್ಳಬೇಕು ಅಂತ ಹೇಳಿ ಹೋಗಿದ್ದೆ. ಆಗೇನಾಗಿತ್ತು ಎಂದರೆ, ಆ ಸಮಯದಲ್ಲಿ ಶ್ರೀಕಂಠಯ್ಯನವರು ಎಂ. ಎ. ಕ್ಲಾಸಿಗೆ ಒಂದು ಪಾಠ ಮಾಡುತ್ತಾ ಇದ್ದರು. ನಾನು ಉದ್ದೇಶಪೂರ್ವಕವಾಗಿ ಮಾಡಲಿಲ್ಲ, ಆದರೆ ಅದು ಹೇಗೋ ನಡೆದು ಹೋಯಿತು. ಆ ಕ್ಲಾಸಿನಿಂದ ತಪ್ಪಿಸಿಕೊಂಡು ಬಂದಿದ್ದೆ ನಾನು. ನನ್ನ ಉದ್ದೇಶ ಅದಾಗಿರಲಿಲ್ಲ. ಅವರ ಕ್ಲಾಸು ಇರುವುದು ಹೇಗೆ ಮರೆತುಹೋಯಿತೋ ಏನು ಕಥೆಯೊ, ಅಂತೂ ಬೇಗ ಬಂದು ಆ ಗ್ರಂಥಾಲಯದಲ್ಲಿ ನೋಡುತ್ತಾ ಇದ್ದೆ. ನಾವು ಎಂ.ಎ. ಕ್ಲಾಸಿನಲ್ಲಿ ಇದ್ದವರು ನಾಲ್ಕೈದು ಜನ ಅಷ್ಟೆ. ಆದ್ದರಿಂದ ಒಬ್ಬರು ತಪ್ಪಿಸಿಕೊಂಡರೂ ಕೂಡ ಉಪಾಧ್ಯಾಯರ ಕಣ್ಣು ತಪ್ಪಿಸುವುದಕ್ಕೆ ಆಗುತ್ತಾ ಇರಲಿಲ್ಲ. ಅವರು ಜ್ಞಾಪಕ ಇಟ್ಟುಕೊಂಡಿದ್ದರು. ಆಮೇಲೆ ಅವರು ನಗುತ್ತಾ 'ಓಹೋ, Perhaps you are engaged in more useful business' ಅಂದುಬಿಟ್ಟರು ! ನನಗೆ ಆಗ ನಿಜವಾಗಿಯೂ ಚುಳ್ಳೆಂದಿತು. ಏನು ಎಂಥಾ ಕೆಲಸವಾಯಿತು ; ಏನು ಬಂತು, ಇಂಥ ಕೆಟ್ಟ ಕೆಲಸವನ್ನು ಮಾಡಿದೆನಲ್ಲಾ ನಾನು ಎಂದುಕೊಂಡೆ. ನಾನು ಯಾವಾಗಲೂ ತರಗತಿಗಳಿಗೆ ತಪ್ಪಿಸಿಕೊಂಡವನಲ್ಲ, ತಪ್ಪಿಸಿಕೊಳ್ಳುವ ಉದ್ದೇಶ ನನಗೆ ಬರುತ್ತಾ ಇರಲಿಲ್ಲ. ಆ ಕಾಲದ ನಮ್ಮ ಉಪಾಧ್ಯಾಯರಲ್ಲಿ ಹೀಗೆ ಅಷ್ಟೊಂದು ದುರ್ಬಲ ವ್ಯಕ್ತಿತ್ವ ಉಳ್ಳವರು ಇರುತ್ತಾ ಇರಲಿಲ್ಲ, ಕೆಲವರು ಕಳಪೆಯುವರು ಇರುತ್ತಾ ಇದ್ದರು. ಅವರು ಏನೇ ತಪ್ಪು ಹೇಳಿದರೂ ಕೂಡ ನಾನು ಸುಮ್ಮನೆ ಕುಳಿತುಕೊಂಡು

ಕೇಳುತ್ತಾ ಇದ್ದೆ. ಆಮೇಲೆ ಅವರನ್ನು ಬೇರೆ ಒಂದು ಗೊತ್ತಾದ ಕಡೆ ಸಂದರ್ಶಿಸಿ 'ಸಾರ್, ನೀವು ಹೇಳಿದಿರಲ್ಲ ಅದು ನಾನು ಓದಿದ ರೀತಿ ಹೀಗಿದೆ' ಎಂದು ಹೇಳಿ ಸೂಚನೆ ಕೊಡುತ್ತಾ ಇದ್ದೆ ಅಷ್ಟೆ. ಇಂಥವನಿಗೆ ಹೀಗಾಯ್ತಲ್ಲ ಎಂದು ಬಹಳ ವ್ಯಸನ ಆಯಿತು, ಆವಾಗ. ಅಷ್ಟು ಸೂಕ್ಷ್ಮದೃಷ್ಟಿ ಒಂದು ಇಂಗಿತಜ್ಞತೆ ಎಲ್ಲಾ ಅವರಲ್ಲಿ ಇರುತ್ತಾ ಇತ್ತು.

ಅವರನ್ನು ನಾವು ಸೆಂಟ್ರಲ್ ಕಾಲೇಜಿನಲ್ಲಿದ್ದಾಗಲೇ ಬಹಳ ಒಳ್ಳೆಯ ಪ್ರಾಧ್ಯಾಪಕರು, ಹುಡುಗರ ಮನಸ್ಸನ್ನು ಗೆಲ್ಲುತ್ತಾರೆ, ಒಂದು ಗಂಟೆ ಪೂರ್ತಿಯಾಗಿ ಅವರು ಅಷ್ಟೂ ಹುಡುಗರನ್ನು—ಬೇರೆ ಬೇರೆ ಮನಸ್ಸುಗಳ ಹುಡುಗರನ್ನು—ಒಟ್ಟಿಗೆ ಕೂರಿಸಿ ಅವರಿಗೆ ಒಳ್ಳೆ ಸವಿ ಊಟವನ್ನು ಕೊಡುತ್ತಾರೆ, ಎಂದು ಹೇಳಿದ್ದರು. ಬಾಯಿ ತುಂಬಾ ಹೊಗಳುತ್ತಾ ಇದ್ದರು. ನಾನು ಎಂ. ಎ. ಕ್ಲಾಸಿನಲ್ಲಿ ಕುಳಿತುಕೊಂಡು, ನೋಡೋಣ, ಸ್ವಲ್ಪ ಹೆಚ್ಚು ಕಡಿಮೆ ಕುಚೋದ್ಯಕ್ಕಲ್ಲ ನಿಜವಾಗಿಯೂ, ಇವರೇನು ಹೇಳುತ್ತಾರೆ ಎಂದು ಪರೀಕ್ಷೆ ಮಾಡುವ ಹಂಬಲವನ್ನೂ ಇಟ್ಟುಕೊಂಡಿದ್ದೆ. ಆದರೆ ಆ ಪರೀಕ್ಷೆಯಲ್ಲಿ ನಾನು ಅವರಿಗೆ ತೇರ್ಗಡೆ ಮಾಡಿಸಲು ಆಗಲಿಲ್ಲ. ಏಕೆಂದರೆ ಅಲ್ಲಿ ಸುಮ್ಮನೆ ಬಂದು Cultural Anarchy ಮ್ಯಾಥ್ಯೂ ಆರ್ನಾಲ್ಡನ ಗ್ರಂಥ ಕುರಿತು ಹೇಳಿದರು. ಎಲ್ಲಕ್ಕಿಂತ ಟೆನಿಸನ್ನನ ಒಂದು ಕಾವ್ಯ, ಪದ್ಯ—ಅದೇನಷ್ಟು ದೊಡ್ಡ ಪದ್ಯವಲ್ಲ, ಇಂಗ್ಲಿಷ್ ಸಾಹಿತ್ಯದ ವಿಮರ್ಶೆಯಲ್ಲಿ ಅದನ್ನೇನೂ ಅಷ್ಟು ದೊಡ್ಡದು ಎಂದು ನಾವು ಭಾವಿಸಿಲ್ಲ—ಓದಿದರು. ಟೆನಿಸನ್ನನೇನು ಅಷ್ಟೊಂದು ದೊಡ್ಡ ಕವಿಯಲ್ಲ ಎಂದು ನಾವು ಆಗಲೇ ಅರ್ಥಮಾಡಿಕೊಂಡೆವು. ಟೆನಿಸನ್ನನ ಲಾಸ್ಟ್ ಟೆನಿಸನ್ ಎನ್ನುವುದನ್ನು ಲಾನ್ ಟೆನಿಸನ್ ಎಂಬುದಾಗಿ ಹಾಸ್ಯಮಾಡುತ್ತಿದ್ದೆವು. ಅವನು ಮನಸ್ಸಿಗೆ ಒಂದು ರೀತಿ ಆನಂದಕೊಡುವ ಹಾಗೆ ಹೇಳುತ್ತಾನಷ್ಟೇ ಹೊರತು ಅಷ್ಟು ತೂಕವಾದ ಅಭಿಪ್ರಾಯಗಳಾಗಲಿ ಘನವಾದ ಚಿಂತನೆಗಳಾಗಲಿ, ಅವನಲ್ಲಿ ಎಲ್ಲಿಯೂ ಕಾಣಿಸುವುದಿಲ್ಲ. ಆ ಟೆನಿಸನ್ನನನ್ನು ನೆಪವಾಗಿಟ್ಟುಕೊಂಡು, ತಮಗೆ ವಿಕ್ಟೋರಿಯನ್ ಪೀರಿಯಡ್ ಐಚ್ಛಿಕ ಭಾಗವಾಗಿತ್ತು ಎಂ.ಎ. ಕ್ಲಾಸಿನಲ್ಲಿ ಎಂದು, ಅದನ್ನು ಕುರಿತು ಹೇಳಿದ್ದೇ ಹೇಳಿದ್ದು. ಇದೆಲ್ಲ ಏನು ಹೇಳುತ್ತಾರೆ ಅಂತ ಹೇಳಿ ನನಗೆ ಬೇಸರವಾಗಿ ಬಿಡುವುದು, ತುಂಬ ಬೇಸರವಾಗುವುದು. ಇದೇನಿದು, ಸಾಧಾರಣವಾಗಿ ಹೈಸ್ಕೂಲು ವಿದ್ಯಾರ್ಥಿಗಳು ಹೇಳುವ ಪದ್ಯಗಳಿವು, ಇವುಗಳ ವಿಚಾರವನ್ನು ಇಷ್ಟೊಂದು ಹೇಳುತ್ತಾರಲ್ಲ, ದೊಡ್ಡ ದೊಡ್ಡ ಕವಿಗಳಿದ್ದಾರೆ, ಯಾವ ಒಂದೂ ಪೀರಿಯಡ್ಡಿನಲ್ಲಿ ಅವರ ವಿಚಾರವಾಗಿ ಹೇಳುವುದಿಲ್ಲವಲ್ಲ ಎಂದುಕೊಳ್ಳುತ್ತಿದ್ದೆ, ಆ ರೀತಿ ಆಗುತ್ತಾ ಇತ್ತು.

ಹೀಗೆ ನಾವು ವಿಷಯ ವಿಮರ್ಶೆ ಮಾಡಿಕೊಂಡರೆ ಅವರ ಕ್ಲಾಸಿನಲ್ಲಿ ನನಗೆ ನಿಜವಾಗಿಯೂ ಅಷ್ಟೊಂದೇನೂ ಉಪಯೋಗವಾಯಿತು ಎಂಬುದಾಗಿ ಹೇಳಲಾರೆ ಈಗ.

ಅವರೇನು ಮಾಡುತ್ತಿದ್ದರು ಎಂದರೆ, ಎಲ್ಲವನ್ನು ಓದಿರುವರು. ಆದರೆ ಓದಿದ ವಿಮರ್ಶಕರ ಹೆಸರನ್ನು ಹೇಳುತ್ತಾ ಇರಲಿಲ್ಲ. ತಾವು ವಿಮರ್ಶೆ ಮಾಡುವಾಗ ತೋರಿಸಿಕೊಳ್ಳುತ್ತಾ ಇರಲಿಲ್ಲ. ಪಠ್ಯಗ್ರಂಥವನ್ನು ಅದರ ಅರ್ಥಸ್ವಾರಸ್ಯ ಕಾಣುವ ಹಾಗೆ ನಿರೂಪಣೆ ಮಾಡುತ್ತಾ ಇದ್ದರು, ಅಷ್ಟೆ. Interpretative ಎಂದು ಹೇಳಿ, ಅಷ್ಟೆ. ಅವರು ಏನೇ ಆದರೂ, ಅದನ್ನು ಈ ರೀತಿಯಾಗಿ ಅದರ ವಿಷಯವನ್ನು ತಿರುಗಿ ಎಲ್ಲಾ ತಿಳಿಯುವ ಹಾಗೆ ಹೇಳುತ್ತಾ ಇದ್ದರು. ಅದರ ವಿಚಾರವಾಗಿ ಹೆಚ್ಚಾಗಿ ವಿಮರ್ಶೆ ಮಾಡುತ್ತಾ ಇರಲಿಲ್ಲ. ಅದು, ನಾವು ನಮ್ಮ ಪ್ರೊಫೆಸರ್ ಟೇಟ್ ಅವರು ಹೇಳಿಕೊಟ್ಟ ಹಾಗೆ ಬೇರೆ ವಿಚಾರವಾಗಿತ್ತು. ವಿಮರ್ಶಕರು ಏನು ಏನು ಹೇಳುತ್ತಾರೆ ಎಂದೆಲ್ಲ ಹೇಳಿ, ಆ ವಿಮರ್ಶಕರು ಏನು ತಪ್ಪುಮಾಡಿದ್ದಾರೆ, ನಾವು ಹೇಗೆ ನೋಡಬೇಕು ಎಂದು ಹೇಳಿ ಟೇಟ್ ಸಾಹೇಬರು ಇಂಗ್ಲಿಷ್‌ನಲ್ಲಿ ಹೇಳುತ್ತಾ ಇರುವಾಗ, ಅಷ್ಟು ಬುದ್ಧಿ ಕಲಿಸುತ್ತಿದ್ದರು. ಎಲ್ಲ ವಿಮರ್ಶಕರೂ ಹೇಳಿದ್ದನ್ನು ಹೇಳಬೇಕು, ಅವರಿಗೆ. ಆಗ I don't want what Matthew Arnold says, tell me what you have to say, ಎಂದು ಹೇಳುವರು ಆಮೇಲೆ, ಕಡೆಯಲ್ಲಿ. ಅದೆಲ್ಲವನ್ನೂ ಅರಗಿಸಿಕೊಳ್ಳಬೇಕು. ಅದರಲ್ಲಿ ಒಳ್ಳೆಯದು ಸ್ವೀಕರಣವಾಗಬೇಕಾದ ಅಂಶವೇನಾದರೂ ಇದ್ದರೆ ತೆಗೆದುಕೊಳ್ಳಬೇಕು, ಉಳಿದದ್ದನ್ನು ಬಿಟ್ಟುಬಿಡಬೇಕು. ಆ ವಿಮರ್ಶಕರನ್ನೆ ನಾವು ವಿಮರ್ಶೆಮಾಡಬೇಕು ಎಂಬುದಾಗಿ ನಮಗೆ ಆ ರೀತಿ ಒಂದು ಸ್ವಂತ ಬುದ್ಧಿ, ಸ್ವಂತ ದೃಷ್ಟಿಯಿಂದ ನೋಡುವುದು, ಇದನ್ನು ಅವರು ಚೆನ್ನಾಗಿ ಹೇಳಿಕೊಡುತ್ತಿದ್ದರು. ಆ ಟೇಟರು ಶ್ರೀಕಂಠಯ್ಯನವರಿಗೂ ಗುರುವಾಗಿದ್ದರಂತೆ, ಹಿಂದೆ. ಅವರು ಓದುತ್ತಿದ್ದಾಗ ಬಹಳ ತಿಳಿದುಕೊಂಡಿದ್ದರು. ಆದರೂ ಆಗಾಗ ಹೇಳುತ್ತಾ ಇದ್ದರು. ಆದರೆ ಅವರು ಯಾವ ವಿಚಾರವನ್ನೂ ಕೂಡ ವಿದ್ಯಾರ್ಥಿಗಳ ಜೊತೆ ಚರ್ಚೆ ಮಾಡುತ್ತಿರಲಿಲ್ಲ. ಸುಮ್ಮನೆ ಏನೋ ಸೂಚನೆ ಮಾಡಿಬಿಟ್ಟು ಹೊರಟುಹೋಗಿಬಿಡುತ್ತಿದ್ದರು. ಮೊದಲಿನಿಂದಲೂ ಅವರು ಇಂಗ್ಲಿಷ್ ಭಾಷಣ ಮಾಡುತ್ತಾ ಇದ್ದರೆ ಹೊರತು, ಕನ್ನಡದ ವಿಚಾರದಲ್ಲಿ ಅವರಿಗೆ ಇಷ್ಟೊಂದು ಮಮತೆ ಇದೆ, ಕನ್ನಡಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದಾರೆ ಅನ್ನುವುದು ನಮಗೆ ಅನುಭವಕ್ಕೆ ಬರುತ್ತಾ ಇರಲಿಲ್ಲ, ಆವಾಗ.

ನಾವು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘವನ್ನು ಸ್ಥಾಪನೆ ಮಾಡಿದಾಗ ಶ್ರೀಕಂಠಯ್ಯನವರನ್ನು ಕರೆಸಿ ಪ್ರಾರಂಭ ಭಾಷಣವನ್ನು ಮಾಡಿಸಬೇಕು ಎಂಬುದು





ನಮ್ಮ ಉದ್ದೇಶ. ಇಲ್ಲಿಗೆ ನಮ್ಮ ಪ್ರತಿನಿಧಿಯೊಬ್ಬರನ್ನು ಕಳಿಸಿದೆವು. ಆತ ಬಂದು ಅವರನ್ನು ಪ್ರಾರ್ಥಿಸಿಕೊಂಡಾಗ 'ನಾನು ಬರ್ತೀನೆ. ಆದರೆ ನಾನು ಇಂಗ್ಲಿಷಿನಲ್ಲಿ ಮಾತಾಡ್ತೇನೆ' ಎಂದು ಹೇಳಿದರು. ಇದನ್ನು ಕೇಳಿದರೆ ನಿಮಗೆಲ್ಲ ಆಶ್ಚರ್ಯವಾಗ ಬಹುದು. ಇದನ್ನು ನಂಬಬಹುದೇ ಎಂದು ನೀವು ಶಂಕೆಪಡಬಹುದು. ನನಗೂ ನಂಬುವುದಕ್ಕಾಗುವುದಿಲ್ಲ. ಅಂಥ ವಿಚಾರ. ಕನ್ನಡದಲ್ಲಿ ಇಷ್ಟೊಂದು ಭಕ್ತಿ ಇಟ್ಟುಕೊಂಡಿದ್ದಾರೆ ಎಂಬುದಾಗಿ ಹೆಸರು ಮಾಡಿಕೊಂಡಿದ್ದಾರೆ, ಕನ್ನಡ ಸಂಘ, ಕರ್ನಾಟಕ ಸಂಘ—ಅವರ ಶಿಷ್ಯರಾದ ಕೃಷ್ಣಶಾಸ್ತ್ರಿಗಳು ಪ್ರಾರಂಭಮಾಡಿದ ಕರ್ಣಾಟಕ ಸಂಘ—ಅದರ ಪ್ರಾರಂಭೋತ್ಸವಕ್ಕೆ, ಸೆಂಟ್ರಲ್ ಕಾಲೇಜಿನಲ್ಲಿ, ನೀವು ಬರಬೇಕು ಎಂದು ಹೇಳಿದರೆ 'ನಾನು ಇಂಗ್ಲಿಷಿನಲ್ಲಿ ಭಾಷಣ ಮಾಡ್ತೀನಿ ಅಂತ ಹೇಳ್ತಾರೆ.' ಕೃಷ್ಣಶಾಸ್ತ್ರಿಗಳು, ನಮ್ಮ ಗುರುಗಳು, ಅವರು 'ಆಗಲಪ್ಪ ನಾವು ಯಾಕೆ ಅವರ ಹತ್ರ ಹೋರಾಡಬೇಕು, ಬಂದು ಹೇಳಲಿ ಇಂಗ್ಲಿಷಿನಲ್ಲಿ, ಏನೀಗ? ನಿಮ್ಗೂ ಎಲ್ಲಾ ಇಂಗ್ಲಿಷ್ ಬೇಕು. ನಮ್ಗೂ ಬೇಕು. ಅದ್ದರಿಂದ ಆಗಬಹುದಲ್ಲ' ಅಂದರು. ಆದರೆ ನಮ್ಮಲ್ಲಿ ಕೆಲವರು, ನಾನು ನನ್ನ ಜೊತೆಯವರಾದ ಸಿ. ಕೆ. ವೆಂಕಟರಾಮಯ್ಯ, ಆಮೇಲೆ ಇನ್ನೊಂದಿಬ್ಬರು—ಸ್ವಲ್ಪ ವೀರಾವೇಶ ನಮಗೆ. ಕನ್ನಡ ಎಂದಾಗ ಕನ್ನಡದಲ್ಲಿ ಭಾಷಣ ಮಾಡದೆ ಕನ್ನಡ ಸಂಘದ ಉದ್ಘಾಟನೆ, ಇಂಗ್ಲಿಷಿನಲ್ಲಿ ಭಾಷಣ, ಅದೇನೋ ವಿರೋಧಾ ಭಾಸವಾಗಿ ಕಂಡಿತು ನಮಗೆ. 'ಆ ರೀತಿ ಆಗೋದಿಲ್ಲ ನಮಗೆ, ಬೇಡ ಅಂತ ಹೇಳಿ ಬಿಟ್ಟೆವು.' ಹಾಗೆ ಅವರು ಮಾಡುತ್ತಿದ್ದರು, ಕನ್ನಡದ ವಿಚಾರದಲ್ಲಿ ಆವಾಗ.

ಅವರಿಗೆ ಕೆಲವು ಬಂಧನಗಳಿದ್ದುವು, ಅವನ್ನು ನಾನೊಂದು ಕಡೆ ಬರೆದಿದ್ದೇನೆ. ಅವರದು ಒಂದು ವಿಚಿತ್ರವಾದ ಸ್ಥಾನ. ಇಂಗ್ಲಿಷಿನ ಪ್ರೊಫೆಸರ್. ಆ ಪ್ರೊಫೆಷನ್ನಲ್ಲಿ ಎರಡು ಗ್ರೇಡುಗಳಿದ್ದವು ಆವಾಗ. ಮೊದಲನೆಯ ಗ್ರೇಡು ಒಂದು, ಎರಡನೆಯ ಗ್ರೇಡು ಒಂದು. ನಮ್ಮ ಇಂಗ್ಲಿಷ್ ಅಧ್ಯಾಪಕರೊಬ್ಬರು—ಆತನ ವಿಚಾರವಾಗಿ ನಮಗೇನೂ ಅಷ್ಟೊಂದು ಗೌರವವಿಲ್ಲ, ಆತನಿಗೆ ಇಂಗ್ಲಿಷ್ ಅಷ್ಟು ಚೆನ್ನಾಗಿ ಬರುತ್ತಾ ಇತ್ತೋ ಅನ್ನುವುದನ್ನು ಈಗ ಯೋಚನೆ ಮಾಡಿಕೊಂಡರೆ ಹಾಗಾಗುತ್ತದೆ. ಗುರುಗಳನ್ನು ನಿಂದಿಸಬಾರದು. ಅವರೂ ಆತ ಹೇಳುತ್ತಿದ್ದ, 'It was a mistake to have Srikantaiah as Professor' ಅಂತ. ನನಗೆ ಈಚೀಚೆಗೆ ಅದನ್ನು ನೆನಸಿ ಕೊಂಡಾಗ ಬಹಳ ಸಿಟ್ಟುಬರುತ್ತದೆ. ಅವನು ಸ್ಕಾಟ್ಲೆಂಡಿನವರಾದರೂ ಕೂಡ ಇಂಗ್ಲಿಷಿ ನಲ್ಲಿ ಅಷ್ಟೇನೂ ದೊಡ್ಡ ವಿದ್ವಾಂಸನಲ್ಲ. ಅವನು ಇಂಗ್ಲಿಷಿನಲ್ಲಿ ಹೇಗೆ ಪಾಠ ಹೇಳಿಕೊಟ್ಟ ಎನ್ನುವುದನ್ನು ನಾನು ವಿವರಿಸಬೇಕಾದ್ದಿಲ್ಲ. ಅಂಥವನು ಶ್ರೀಕಂಠಯ್ಯನವರನ್ನು ಮಾತ್ರ ಇಂಗ್ಲಿಷ್ ಪ್ರೊಫೆಸರರಾಗಿ ಮಾಡಬಾರದಾಗಿತ್ತು ಅಂತ ಹೇಳಿದ. ಆಗ

ಶ್ರೀಕಂಠಯ್ಯ ಆ ಸ್ಥಿತೀಲಿ ಇದ್ದರು. ಅದಕ್ಕೋಸ್ಕರವಾಗಿಯೇ ದಿವಾನ್ ವಿಶ್ವೇಶ್ವರಯ್ಯನವರು, ಬಹಳ ದೂರದರ್ಶಿಗಳು ಅವರು, ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದವರು, ಕನ್ನಡ ಮುಂದುವರಿಯಬೇಕು ಎಂದು ಬಹಳ ಆಸಕ್ತಿಯನ್ನು ಇಟ್ಟುಕೊಂಡವರು, ಶ್ರೀಕಂಠಯ್ಯನವರನ್ನು ಕರೆಸಿ, ಅವರು ಅಸಿಸ್ಟೆಂಟ್ ಪ್ರೊಫೆಸರ್ ಆಗಿದ್ದರೂ ಇನ್ನೂನೆ, ಕೇಳಿದರಂತೆ 'ನೀನೀಗ ಎರಡರಲ್ಲಿ ಒಂದನ್ನು ಆರಿಸಿಕೊಳ್ಳಬೇಕು. ಜೂನಿಯರ್ ಪ್ರೊಫೆಸರ್ ಆಫ್ ಇಂಗ್ಲಿಷ್ ಆಗ್ತಿಯೋ ಸೀನಿಯರ್ ಪ್ರೊಫೆಸರ್ ಆಫ್ ಕನ್ನಡ ಆಗ್ತಿಯೋ ?' ಶ್ರೀಕಂಠಯ್ಯನವರು ಆಗಲೇ ಕನ್ನಡಕ್ಕೆ ಒಪ್ಪಿಕೊಂಡುಬಿಟ್ಟಿದ್ದಿದ್ದರೆ ಕನ್ನಡದ ದಾರಿ ಇನ್ನೂ ಸುಗಮವಾಗುತ್ತಿತ್ತು ಎಂದು ನಾವು ಭಾವಿಸಬಹುದು. ಆದರೆ ಏನೋ ಅದು ಆಗಲಿಲ್ಲ. ಜೂನಿಯರ್ ಪ್ರೊಫೆಸರ್ ಆಫ್ ಇಂಗ್ಲಿಷ್ ಎಂದು ಒಪ್ಪಿಕೊಂಡುಬಿಟ್ಟರು. ಆಮೇಲೆ ಕನ್ನಡದ ಆನರರಿ ಪ್ರೊಫೆಸರರೇನೋ ಆದರು. ಅವರು ಇಕ್ಕಟ್ಟಿನಲ್ಲಿ ಆಗ ಸಿಕ್ಕಿಕೊಂಡಿದ್ದರು.

ನಮಗೆ ಆವಾಗ, ಐದು ಜನ ಇಂಗ್ಲೆಂಡಿನ ಸ್ಕಾಟ್ಲೆಂಡಿನ ವಿದ್ವಾಂಸರು, ಅಥವಾ ವಿದ್ವಾಂಸರು ಎಂದು ಹೇಳಿಕೊಂಡವರು, ಅವರನ್ನು ವಿದ್ವಾಂಸರೆಂದು ಬರೆದವರು, ಅಷ್ಟೇನೂ ದೊಡ್ಡ ವಿದ್ವಾಂಸರಲ್ಲ, ಟೇಟ್ ಒಬ್ಬರನ್ನು ಬಿಟ್ಟು, ಗುರುಗಳಾಗಿದ್ದರು. ಮಧ್ಯೆ ಶ್ರೀಕಂಠಯ್ಯನವರೇ ಇಂಗ್ಲಿಷ್ ಪ್ರೊಫೆಸರ್ ಆಗಿಬಿಟ್ಟರು. ಅವರಿಗೆಲ್ಲಾ ಒಂದು ರೀತಿ ಏನೋ, ಇದೇನು ಹೀಗಾಯಿತಲ್ಲ ಎಂದು. ಒಳಗೊಳಗೇ ವಿರೋಧ ವಿದ್ದರೂ ಕೂಡ ಹೊರಗಡೆ ತೋರಿಸಿಕೊಳ್ಳುತ್ತಾ ಇರಲಿಲ್ಲ. ಏಕೆಂದರೆ ವಿದ್ಯಾರ್ಥಿಗಳು ಗುರುಗಳನ್ನು ಅಥವಾ ಅಧ್ಯಾಪಕರನ್ನು ಚೆನ್ನಾಗಿ ಪರೀಕ್ಷೆ ಮಾಡಿಬಿಡುತ್ತಾರೆ. ಒಟ್ಟಿನಲ್ಲಿ ಸಾಮೂಹಿಕವಾಗಿ ತೆಗೆದುಕೊಂಡರೆ ಅವರ ಅಭಿಪ್ರಾಯ ಏನು ಎಂದು ತಿಳಿದು ಕೊಳ್ಳುವುದು ಒಳ್ಳೆಯದು ಅಧ್ಯಾಪಕರಾದವರಿಗೆ. ಯಾವ ಯಾವ ಮಟ್ಟ ಯಾವುದು ಎಂದು ಆ ಹುಡುಗರು ನಿರ್ಧಾರ ಮಾಡಿಬಿಡುತ್ತಾರೆ. ಅವರಿಗೆ ಗೊತ್ತಾಗುತ್ತದೆ, ಅವರನ್ನು ಕೇಳಿದರೆ ಗೊತ್ತಾಗುತ್ತದೆ. ಎಲ್ಲರೂ ಶ್ರೀಕಂಠಯ್ಯನವರನ್ನು ಹೊಗಳುವುದು, ಇದೆಲ್ಲಾ ಆಯಿತು. ಈ ವಿದ್ವಾಂಸರು ಬೇರೆ ಕಡೆಯಿಂದ ಬಂದವರು. ಅವರು ಅಷ್ಟು ದೊಡ್ಡ ವಿದ್ವಾಂಸರಲ್ಲ. ಯಾವುದೋ ಕಾರಣದಿಂದ ಬಂದವರನ್ನು ಇಲ್ಲಿ ಅಧ್ಯಾಪಕ ರನ್ನಾಗಿ ತೆಗೆದುಕೊಂಡಿದ್ದರು. ಆಗ ನಮ್ಮ ನಾಡಿಗಿನ್ನೂ ಸ್ವಾತಂತ್ರ್ಯ ಬಂದಿರಲಿಲ್ಲ. ಶ್ರೀಕಂಠಯ್ಯನವರೂ ಕೂಡ 'ಬ್ರಿಟಾನಿಯಾ, ಆಳೌ ಬ್ರಿಟಾನಿಯಾ' ಎಂದು ಹೀಗೆಲ್ಲಾ ಹೊಗಳಿದ್ದರು. ಅನೇಕರು ಅದರ ವಿಚಾರದಲ್ಲಿ ಅಸಮಾಧಾನಗೊಂಡು ಶ್ರೀಕಂಠಯ್ಯ ನವರ ಎದುರಿಗೇ ಹೇಳಿ- 'ನೀವು ಹೀಗೆಲ್ಲಾ ಹೊಗಳಬೇಡಿ, ಇದು ಅತಿಯಾಗುತ್ತದೆ,

ಇಂಗ್ಲಿಷಿನವರ ಪ್ರಭಾವದಿಂದ ನಮಗೆ ಒಳ್ಳೆಯದಾಗಿದೆ ಎಂದು ತಿಳಿದುಕೊಂಡಿದ್ದೇವೆ, ಆದರೆ ಕೆಟ್ಟದು ಎಷ್ಟಾಗಿದೆ ಎನ್ನುವುದು ನಿಮಗೆ ಗೊತ್ತಿಲ್ಲವೆ?' ಎನ್ನುತ್ತಿದ್ದರು.

ಮೂರ್ತಿರಾಯರು ಹೇಳಿದಹಾಗೆ ಈ ಸೃಜನಶೀಲಪದ್ಧತಿ—Creative method ಇದು ಸರಿಯಾಗಿ ಆಗಬೇಕಾದರೆ ಅದು ಯಾವ ಭಾಷೆಯಲ್ಲಿ ಆಗಬೇಕು ಎಂದು ಅವರು ಹೇಳುತ್ತಿದ್ದರು. ಅದಕ್ಕೋಸ್ಕರವೇ ಅವರು, ಆ ಹೊರಗಿನ ವಿದ್ವಾಂಸರು, ಇಲ್ಲಿ ಅಧ್ಯಾಪಕರಾಗಿ ನಮ್ಮಲ್ಲಿ ಅಧಿಕಾರ ನಡೆಸುತ್ತಾ ಇದ್ದುದರಿಂದ ಅವರ ಮಧ್ಯೆ ಸಿಕ್ಕಿಕೊಂಡು ಪಾಪ ಒದ್ದಾಡಬೇಕಾಯಿತು. ಅದಕ್ಕೋಸ್ಕರವಾಗಿ ಅವರು ಕನ್ನಡದಲ್ಲಿ ಭಾಷಣ ಮಾಡಲಿಲ್ಲ. ನಾನು ಕನ್ನಡದಲ್ಲಿ ಭಾಷಣ ಮಾಡಲಿಲ್ಲ ಎಂದು ಹೇಳಿದರೆ ಏಕೆ ಎಂದು ನಿಮಗೆ ಗೊತ್ತಾಗುತ್ತಾ ಇತ್ತು. ನಮಗೆ ಬಹಳ ಮನಸ್ಸಿಗೆ ಬೇಜಾರಾಗಿ ಹೋಯಿತು. ಇದೇನು ಕನ್ನಡ ಭಕ್ತರು ಎಂದು ಹೇಳುತ್ತಾರೆ, ಕೇಳಿದರೆ ಹೀಗೆ ಮಾಡಿದರಲ್ಲ ಎಂದು. ಆಮೇಲೆ ನಾವು ನರಸಿಂಹಾಚಾರ್ಯರನ್ನು ಕರೆಸಿ ಆ ನಮ್ಮ ಕನ್ನಡ ಸಂಘವನ್ನು ಪ್ರಾರಂಭಮಾಡಿದೆವು. ಅವರ ಭಾಷಣ ಒಂದು ಥರಾ ಮಡಿ ಸ್ಟೈಲಿಗೆ ಇದ್ದಹಾಗೆ, ಕನ್ನಡದಲ್ಲಿ ಭಾಷಣ ಮಾಡುವುದಕ್ಕೆ ಅವರಿಗೆ ಎಲ್ಲಿ ಉಳಿದ ಪ್ರಾಧ್ಯಾಪಕರುಗಳು ಓ ನನಗೆ ಇಂಗ್ಲಿಷಿನಲ್ಲಿ ಮಾತನಾಡಲು ಬರುವುದಿಲ್ಲ. ಇಂಗ್ಲಿಷ್ ಪರಿಚಯ ಇಲ್ಲ ಚೆನ್ನಾಗಿ, ಇಂಗ್ಲಿಷ್ ಕಲಿತುಕೊಳ್ಳುವುದಕ್ಕೂ ಆಗುವುದಿಲ್ಲ ಇವನ ಕೈಯಲ್ಲಿ, ಅದಕ್ಕಾಗಿ ಕನ್ನಡದ ನೆಪ ಹೂಡಿಕೊಳ್ಳುತ್ತಾನೆ ಎಂದು ಎಲ್ಲಿ ಹಾಸ್ಯ ಮಾಡುತ್ತಾರೋ, ಎಲ್ಲಿ ಹೋಗಿ ಚಾಡಿ ಹೇಳುತ್ತಾರೊ ಎಂಬುದಾಗಿ ಅವರು ಪೇಚಾಡುತ್ತಿದ್ದರು.

ಚಾಡಿ ಹೇಳುವ ಅಭ್ಯಾಸ ಇತ್ತು ಆವಾಗ ಬೇಕಾದಷ್ಟು. ಯಾವ ವಿಷಯ ಹೋದರೂ ಕೂಡ ಸೀದ ರೆಸಿಡೆಂಟ್ ಹತ್ತಿರಕ್ಕೆ ಹೋಗಿಬಿಡೋದು. ಅದಕ್ಕೋಸ್ಕರವಾಗಿ ಹೆದರಿಕೆ ಅವರಲ್ಲಿತ್ತು ಪಾಪ. ಆಮೇಲೆ ತಿಳಿದುಕೊಂಡೆವು, ಶ್ರೀಯವರು ಕನ್ನಡಕ್ಕೆ ಏನುಮಾಡುತ್ತಾರೆ, ಕನ್ನಡದಲ್ಲಿ ಹೇಗೆ ಭಾಷಣ ಮಾಡುತ್ತಾರೆ, ಅವರ ಭಾಷಣದ ಮುಂದೆ ಇನ್ನಾವ ಭಾಷಣ ನಿಲ್ಲುತ್ತೆ ಅಂತ. ಎಲ್ಲಾ ಆಮೇಲೆ ತಿಳಿದುಕೊಂಡೆವು. ಹೀಗೆ ಅವರು ಬಿಕ್ಕಟ್ಟಿನ ಸಮಯದಲ್ಲಿದ್ದರು. ಈ ಕಡೆಯೂ ಹೋಗುವ ಹಾಗಿಲ್ಲ. ಆಕಡೆಯೂ ಹೋಗುವ ಹಾಗಿಲ್ಲ. ಸ್ಪಷ್ಟವಾಗಿ ಏನೂ ಹೇಳುವ ಹಾಗಿಲ್ಲ. ಇಂಥ ಸಮಯದಲ್ಲಿ ಅವರು ಇಂಗ್ಲಿಷ್ ಪ್ರೊಫೆಸರ್ ಆಗಿ ಕೆಲಸ ಮಾಡಬೇಕಾಯಿತು. ಜೊತೆಗೆ ಕನ್ನಡದ ಕೆಲಸವನ್ನೂ ಮಾಡಬೇಕಾಯಿತು.

ಆಮೇಲಾಮೇಲೆ, 1926ರಿಂದೀಚಿಗೆ ಅವರು ಕನ್ನಡದಲ್ಲಿ ಮಾತನಾಡಲು ಪ್ರಾರಂಭಿಸಿದರು. ಅಲ್ಲಿಂದ ತಡೆಯೇ ಇಲ್ಲ. ಯಾರು ಕರೆದರೂ ಕೂಡ ಎಲ್ಲಿಗೆ

ಕರೆದರೂ ಕೂಡ ಹೋಗುತ್ತಿದ್ದರು. ಅವರಿಗೆ ದೇಹಸ್ಥಿತಿ ಅಷ್ಟು ಉತ್ಕೃಷ್ಟವಾಗಿ ಇರುತ್ತಾ ಇರಲಿಲ್ಲ. ಸಿಹಿಮೂತ್ರ ರೋಗ ಬೇರೆ ಇತ್ತು–ಡಯಾಬಿಟಿಸ್ಸು. ಎಲ್ಲ ಇದ್ದರೂ ಕೂಡ, ಎಲ್ಲಿ ಕನ್ನಡದ ಕರೆ ಬಂದರೂ ಕೂಡ, ಹಳ್ಳಿಗಾದರೂ ಕೂಡ, ಎತ್ತಿನಗಾಡಿಯಲ್ಲಿ ಸಹ ಕುಳಿತುಕೊಂಡು ಹೋಗಿ, ಇದ್ದು ಭಾಷಣ ಮಾಡಿಕೊಂಡು ಬಂದುಬಿಡುವರು. ಎಲ್ಲಿಂದರೆ ಅಲ್ಲಿ ಭಾಷಣ ಮಾಡಿ ಬರಬೇಕು. ಅವರು ನಮ್ಮಲ್ಲಿ ತುಂಬಾ ವಿಶ್ವಾಸ ಇಟ್ಟುಕೊಂಡಿದ್ದರು, ಶಿಷ್ಯನಿಗಿಂತ ಹೆಚ್ಚಾಗಿ ಮಗನ ಹಾಗೆ ನನ್ನನ್ನು ನೋಡಿ ಕೊಳ್ಳುತ್ತಾ ಇದ್ದರು. ಅನೇಕ ಸಂದರ್ಭಗಳಲ್ಲಿ ನನಗೆ ಸಲ್ಲದ ಮರ್ಯಾದೆಗಳನ್ನು ಅವರು ಮಾಡುತ್ತಾ ಇದ್ದರು.

ಒಂದು ದಿವಸ ನಾನು, ನನ್ನ ಸಾಯಂಕಾಲದ ಕೆಲಸಗಳನ್ನು ಮುಗಿಸಿಕೊಂಡು, ಟೆನ್ನಿಸ್ ಆಟ ಆಡಿಕೊಂಡು ಮನೆಗೆ ಹೋದಾಗ, ಒಂಬತ್ತು ಒಂಬತ್ತೂವರೆಗಂಟೆಗೆ, ನಮ್ಮ ಮನೆಯವರು 'ಶ್ರೀಕಂಠಯ್ಯನವರು ಹೇಳಿಕಳುಹಿಸಿದ್ದರು. ನೀವು ಎಷ್ಟು ಹೊತ್ತಿಗಾದರೂ ಕೂಡ, ಎಷ್ಟೊತ್ತೇ ಆಗಲಿ ರಾತ್ರಿ, ಬಂದು ನೋಡಿಕೊಂಡೇ ಬರ ಬೇಕಂತೆ' ಅಂತ ಹೇಳಿದರು. ಹತ್ತು ಹತ್ತೂವರೆಗಂಟೆ, ಆ ಸಮಯದಲ್ಲಿ ಹೋದೆ. ಆವಾಗ ಹೋಗಿ, 'ಏನು ಅಷ್ಟೊಂದು ಅರ್ಜೆಂಟಾದ ವಿಷಯ ಇತ್ತು, ಹೇಳಿಕಳುಹಿಸಿದ್ದಿದ್ದರೆ ಆಗುತ್ತಿತ್ತು' ಎಂದು ಕೇಳಿದ್ದಕ್ಕೆ ಅವರು 'ಏನೂ ಇಲ್ಲಪ್ಪ, ನಿನ್ನ ಜೊತೆ ಒಂದು ಚರ್ಚೆ ಮಾಡಿಕೊಂಡು ನಿರ್ಧಾರಕ್ಕೆ ಬರಬೇಕು ಅಂತ ಮಾಡಿಕೊಂಡಿದ್ದೇನೆ, ಅದಕ್ಕೋಸ್ಕರ ವಾಗಿ' ಎಂದರು. ಅದೂ ಇಂಗ್ಲಿಷಿನಲ್ಲಿ, ಕನ್ನಡದಲ್ಲೂ ಅಲ್ಲ, ಇಂಗ್ಲಿಷಿನಲ್ಲೇ ಹೇಳಿದರು. ಅವರು ಏನು ಹೇಳಿದರು ಅಂದರೆ, "ಈ ಡಾಕ್ಟರ್............ನನ್ನನ್ನು ಕರೆದು, ನೀನು ರಿಜಿಸ್ಟ್ರಾರ್ ಆಗು ಅಂತ ಕೇಳುತ್ತಾ ಇದ್ದಾರೆ. ನಾನು ರಿಜಿಸ್ಟ್ರಾರ್ ಆಗುವುದಕ್ಕೆ ಹೋಗಲಿ? ನಿನ್ನ ಅಭಿಪ್ರಾಯ ಏನು ಹೇಳು ?" ಅಂತ. ನಾನೇನು, ಅಷ್ಟೊಂದು ಚಿಕ್ಕವನು. ನಾನು ಅವರಿಗೆ ಹೇಳಬೇಕಾದದ್ದು ಏನು ? ಅವರ ಸಲಹೆಗಾರನಾಗು ವುದೇನು? ನನಗೆ ಧೈರ್ಯ ಸಾಲದಾಯಿತು. ಆದರೂ ಕೂಡ "ಎಲ್ಲಾದರೂ ಉಂಟೆ ? ಈಗ ಕಾಲೇಜಿನಲ್ಲಿ ಪಾಠಗಳನ್ನ ಹೇಳಿಕೊಂಡು ಒಳ್ಳೆ ಸಾಹಿತ್ಯ ಅದೆಲ್ಲ ಬಿಟ್ಟುಕೊಟ್ಟು ನಿಮಗೆ ಹೋಗಿ ಅಂತ ಹೇಳುವುದಕ್ಕೆ ಎಷ್ಟು ಹಾತೊರೆಯುತ್ತಿದ್ದಾರೆ. ಈ ಸಂದರ್ಭದಲ್ಲಿ ನೀವು ಕಾಲೇಜನ್ನು ಬಿಟ್ಟು ಬಿಟ್ಟು ಹೆಡ್‌ಕ್ಲಾರ್ಕ್ ಕೆಲ್ಸಕ್ಕೆ ಹೋಗ್ತಿರಾ ಸಾರ್, ಬೇಡ ಬೇಡ" ಅಂದೆ. ಆದರೆ ಅವರು ಒಪ್ಪಿಕೊಂಡುಬಿಡಬೇಕು ಎಂದು ಮನಸ್ಸು ಮಾಡಿಕೊಂಡುಬಿಟ್ಟಿದ್ದರು. ನಾನು ಹೀಗೆ ವಿರೋಧಮಾಡುತ್ತಿದ್ದೀನಲ್ಲ ಎಂದು ಅವರಿಗೆ ಸ್ವಲ್ಪ ಆತಂಕವಾಯಿತು. ಆದರೂ ಕೂಡ ನನಗೆ ತುಂಬಾ ವಿಷಯ ಎಲ್ಲಾ

ಹೇಳಿಬಿಟ್ಟು ಕಡೆಗೆ ಒಂದು ಮಾತು ಹೇಳಿದರು : 'ನೋಡಪ್ಪಾ, ಇನ್ನೇನೂ ಬೇಡ. ರಿಜಿಸ್ಟ್ರಾರ್ ಆದರೆ ನನಗೊಂದು ಸ್ವಲ್ಪ ಪುರಸೊತ್ತು ಇರುತ್ತೆ; ಒಂದು ಸ್ವಲ್ಪ ಸ್ವತಂತ್ರವಾಗಿ ಕೆಲಸಮಾಡುವ ಅವಕಾಶ ಇರುತ್ತೆ ; ಕನ್ನಡಕ್ಕೇನಾದರೂ ಸ್ವಲ್ಪ ಮಾಡಬಹುದಪ್ಪಾ'. ಆಗ ನನಗೆ ಹೊಳೆಯಿತು. 'ಹೌದು ಆಗಲಿ ಸಾರ್ ತಾವು ಒಪ್ಪಿಬಿಡಿ ಪರವಾಗಿಲ್ಲ....' ಹಾಗೆ ಅವರು ಪಾಪ, ಅಷ್ಟೊಂದು ಗೌರವ ಇಟ್ಕೊಂಡು ಎಲ್ಲಾ ಮಾಡಿದರು ; ಆ ಕನ್ನಡ ಅಂದರೆ, ಅವರಿಗೆ ಅಷ್ಟೊಂದು ಪ್ರೀತಿ ಇತ್ತು. ಅದನ್ನು ಮೇಲಕ್ಕೆತ್ತಬೇಕು ಎಂದು ಅವರು ರಿಜಿಸ್ಟ್ರಾರ್ ಆದಮೇಲೆ ಅನೇಕ ಕೆಲಸಗಳನ್ನು ಮಾಡಿದ್ದಾರೆ. ಅದೆಲ್ಲಾ ವಿವರಗಳನ್ನು ಹೇಳಬೇಕಾದ್ದಿಲ್ಲ. ಈ ಪುಸ್ತಕದಲ್ಲಿ ಎಲ್ಲಾ ಬರೆದಿದ್ದಾರೆ. ವಿ. ಸೀತಾರಾಮಯ್ಯನವರು ಎಲ್ಲ ವಿಚಾರಗಳನ್ನು ಚೆನ್ನಾಗಿ ಬರೆದು ಇಟ್ಟಿದ್ದಾರೆ ಅಲ್ಲಿ. ಎಲ್ಲರೂ ಅಗತ್ಯವಾಗಿ ಓದಬೇಕಾದ್ದು—ಈ ಹೊತ್ತು ಬಿಡುಗಡೆಯಾದ 'ಶ್ರೀಸಾಹಿತ್ಯ.'

ಅಂತೂ ಪ್ರತಿಯೊಂದರಲ್ಲೂ ಹೀಗೆ, ಅವರಿಗೆ ಬಾಯಿಲೆ ಇದ್ದರೂ ಆಮೇಲೆ ಸೆಂಟ್ರಲ್ ಕಾಲೇಜಿನಲ್ಲೂ ಅವರು ಪ್ರೊಫೆಸರಾಗಿ ಬಂದರು. ನಾನೂ ಅಲ್ಲಿ ಪ್ರೊಫೆಸರಾಗಿ ಅವರ ಜೊತೆಯಲ್ಲಿ ಕೆಲಸ ಮಾಡಬೇಕಾಯಿತು. ಆಗಲೆಲ್ಲ ನಾನು ಹೇಳುತ್ತಾ ಇದ್ದೆ. "ಸಾರ್ ಸುಮ್ನೆ ನೀವು ಇಷ್ಟು ತೊಂದರೆ ತಗೊಂಡು ಅದರಲ್ಲೂ ಉತ್ತರ ಕನ್ನಡದಲ್ಲಿ ಹಳ್ಳಿಗಳು ಊರುಗಳಿಗೆಲ್ಲಾ ಹೋಗಿ ಸುಸ್ತಾಗುತ್ತೀರಿ." ಒಂದು ದಿವಸ ಎರಡು ಗಂಟೆಯವರೆಗೂ ತಿನ್ನಲು ಏನೂ ಇಲ್ಲ ಅವರಿಗೆ ಪಾಪ. ಯಾವುದೋ ಊರನ್ನು ನೋಡಿಕೊಂಡು ಬರೋದಕ್ಕೆ ಹೋಗಿಬಿಟ್ಟಿದ್ದಾರೆ. ಬಸ್ ಸಿಕ್ಕಲಿಲ್ಲ ಸರಿಯಾಗಿ. ಒದ್ದಾಡುತ್ತಾ ಇದ್ದಾರೆ. ಆಗ ಜೊತೆಯಲ್ಲಿದ್ದ ಮಿತ್ರರ ಹತ್ತಿರ ಒಂದು ಮೂಸಂಬಿ ಹಣ್ಣು ಇತ್ತಂತೆ. ಅವನ್ನು ಸುಲಿದು ಕೊಟ್ಟಾಗ 'ಒಳ್ಳೆ ಅಮೃತ ಕೊಟ್ಟರಪ್ಪ ನನಗೆ' ಎಂದು ಹೇಳಿದರಂತೆ! ಹೀಗೆ ದೇಹಾಲಸ್ಯವನ್ನೂ ಲೆಕ್ಕಿಸುತ್ತಲೇ ಇರಲಿಲ್ಲ. ಏನು ಮಾಡುವುದು ? ನಾನು 'ಸಾರ್, ನೀವು ಹೋಗಬೇಡಿ' ಎನ್ನುತ್ತಿದ್ದೆ. ನಾನಾಗಿದ್ದರೆ ಭಾಷಣ ಮಾಡುತ್ತಿರಲಿಲ್ಲ. ಅನಂತರಾಮಯ್ಯ ಎಂಬುವರಿದ್ದರು. ಅವರೂ ಭಾಷಣ ಮಾಡುತ್ತಿರಲಿಲ್ಲ. 'ಬೇಕಾದರೆ ನಾವು ಹೋಗಿ ನಮ್ಮ ಕೈಲಾದಷ್ಟು ಮಾಡಿಕೊಂಡು ಬಂದುಬಿಡುತ್ತೇವೆ. ನೀವು ಯಾಕೆ ತೊಂದರೆ ತೆಗೆದುಕೊಳ್ಳುತ್ತೀರಿ' ಎಂದು ಹೇಳಿದರೆ, 'ಇಲ್ಲಪ್ಪಾ, ಕನ್ನಡ ನಾಡಿನ ಒಂದೊಂದು ಅಂಗುಲವನ್ನೂ ನಾನು ದರ್ಶನ ಮಾಡಿಬಿಟ್ಟುಬರಬೇಕು, ಒಂದೊಂದು ಕಡೆಗೂ ನಾನು ಹೋಗಬೇಕು, ನನ್ನ ಮನಸ್ಸು ನಿಲ್ಲುವುದಿಲ್ಲ, ಏನುಮಾಡಲಿ, ಅವರು ಬಂದು ಕೇಳುತ್ತಾರೆ. ಹೋಗಲೇಬೇಕಾಗುತ್ತದೆ ಎಂದು ಹೇಳುತ್ತಿದ್ದರು. ಹಾಗೆ ದೇಹವನ್ನು ಸವೆಸಿಕೊಂಡರು.

ಬಹಳ ಕಷ್ಟಪಷ್ಟು ಹೋಗುತ್ತಿದ್ದರಲ್ಲ, ಆಗ ಕಷ್ಟಗಳು ಗೊತ್ತಾಗುತ್ತಿರಲಿಲ್ಲ. ಆಮೇಲೆ ಕಷ್ಟಪಡೋರು. ಇಂಜಕ್ಷನ್, ಇನ್ಸುಲಿನ್ ತೆಗೆದುಕೊಳ್ಳೋರು. ಎಲ್ಲೋ ಒಂದು ಕಡೆ ಊಟಕ್ಕೆ ಕರೆದುಬಿಡುವರು. ಆ ಊಟದಲ್ಲಿ ಸಿಹಿತಿಂಡಿ ಬಡಿಸಿಬಿಡುವರು. ಇವರು ಸಿಹಿತಿಂಡಿ ತಿನ್ನಕೂಡದು. ಏನು ಮಾಡುವುದು ? ದಾಕ್ಷಿಣ್ಯ ತುಂಬಾ. ಬಹಳ ಸೂಕ್ಷ್ಮಪ್ರಕೃತಿಯಾದ್ದರಿಂದ ಆ ಆತಿಥೇಯರಿಗೆ ಎಲ್ಲಿ ಮನಸ್ಸು ನೋವಾಗುತ್ತೋ ಎಂದು ತಿಂದುಬಿಡೋರು. ಆಮೇಲೆ ಒಂದು ಇನ್ಸುಲಿನ್ ಚುಚ್ಚಿಸಿಕೊಳ್ಳೋರು. ಹೀಗೆ ನಿಜವಾಗಿಯೂ ಕನ್ನಡಕ್ಕಾಗಿ ದುಡಿದವರು, ಕನ್ನಡಕ್ಕಾಗಿ ತ್ಯಾಗ ಮಾಡಿದವರು, ಕನ್ನಡಕ್ಕಾಗಿ ಏನು ಮಾಡಲೂ ಸಿದ್ಧರಾಗಿದ್ದವರು. ಈ ಕನ್ನಡನಾಡಿನ ಈಚಿನ ಪ್ರಗತಿಯಲ್ಲಿ, ಯಾವ ಭಾಗವನ್ನು ನಾವು ತೆಗೆದುಕೊಂಡರೂ ಕೂಡ, ಅಲ್ಲಿ ಆ ಶ್ರೀಕಂಠಯ್ಯನವರ ಪ್ರೇರಣೆ ಇದ್ದೇ ಇರುತ್ತೆ. ಯಾವುದೋ ಒಂದು ರೀತಿಯಲ್ಲಿ ಕೊಟ್ಟಿರುತ್ತಾರೆ.

ನಮ್ಮ ಲಿಪಿ ಮುದ್ದಾಗಬೇಕು. ಯಾರಿಗೂ ಅವರ ಮಕ್ಕಳು ಕಲಿಯುವುದು ಕಷ್ಟ ಎಂದು ಏನಿಲ್ಲ. ಮಕ್ಕಳು ಸುಲಭವಾಗಿ ಕಲಿತುಬಿಡುತ್ತಾರೆ. ಅವರಿಗೆ ಕಷ್ಟ ವಾಗುತ್ತೆ, ಎಂದು ಊಹಿಸಿಕೊಂಡು ಅದಕ್ಕೇನು ಸುಧಾರಣೆ ಮಾಡಬೇಕು ಎಂದು ಹೇಳಿದ್ದಾರೆ. 'ಕನ್ನಡ ಬಾವುಟ' ಎಂಬ ಪುಸ್ತಕದಲ್ಲಿ. 'ಬ' ಎಂದು ಬರೆದು 'ಬಾ' ಎಂದು ಹೇಳಬೇಕಾದರೆ 'ಬ' ಆಮೇಲೆ ದೀರ್ಘ....ಅದನ್ನು ಓದುವುದಕ್ಕೋ ಏನೋ ವಿಕಾರವಾಗಿ ತೋರುತ್ತದೆ ನಮಗೆ. ಕನ್ನಡ ಲಿಪಿ ಅಷ್ಟು ಚೆನ್ನಾಗಿದೆ. ಇಲ್ಲ ಅದನ್ನೂ ಸುಧಾರಣೆ ಮಾಡಬೇಕು ಎಂದು ಹೇಳುತ್ತಿದ್ದರು ಅವರು. ಇನ್ನೂ ಸ್ವಲ್ಪ ಮಾಡಬೇಕು ಎಂದು ಹೇಳಿ 'ಅದು ಯಾರ ಕೈಯಲ್ಲೂ ಆಗುವುದು ಸಾಧ್ಯವಿಲ್ಲ. ಏನೋ, ಪರಮಾಧಿಕಾರವನ್ನು ಹೊಂದಿರುವ ಒಬ್ಬ ಸರ್ವಾಧಿಕಾರಿ ಬರಬೇಕು, ಅವನು ಆಜ್ಞೆ ಮಾಡಬೇಕಷ್ಟೆ, ಕಮಲ್‌ಪಾಷ ಮಾಡಿದನಲ್ಲ ಟರ್ಕಿಯಲ್ಲಿ ಹಾಗೆ, ಎಂದು ಹೇಳು ತ್ತಿದ್ದರು. ನಮ್ಮಲ್ಲೂ ಅನೇಕ ದೊಡ್ಡ ದೊಡ್ಡ ವ್ಯಕ್ತಿಗಳು ಆಗಿ ಹೋದರು. ಅವರೇನು ಮಾಡಿದ್ದಾರೆ ? ಹೀಗೆಯೇ ಪ್ರತಿಯೊಂದಕ್ಕೂ ಅವರು ಗಮನ ಕೊಡುತ್ತಾ ಇದ್ದರು. ಈ 'ಕನ್ನಡ ಬಾವುಟ' ಹೊರಬಂದ ಸಮಯದಲ್ಲಿ, 36ನೆಯ ಇಸವಿಯಲ್ಲಿ, ನಾನು ಪರಿಷತ್ತಿಗೆ ಆಗ ಕಾರ್ಯದರ್ಶಿಯಾಗಿದ್ದೆ. ಅವರು ಉಪಾಧ್ಯಕ್ಷರು. ಆಗ ಅಧ್ಯಕ್ಷರು ಹೆಚ್ಚಾಗಿ ಬಹುದಿವಸ ಯುವರಾಜರೇ ಇದ್ದರು.

ಒಂದು ದಿವಸ ಅದೇನು ತೋರಿತೋ ಅವರಿಗೆ, ಕೆಲವು ವಿಚಾರಗಳಲ್ಲಿ ಅವರು ಚಿಕ್ಕಮಕ್ಕಳ ಹಾಗೆ, ಹುಡುಗರ ಹಾಗೆ, ಏನೋ ಉತ್ತೇಜನವೆಂದು ಹೇಳಿದರೆ, ಹುಡುಗರ ಹಾಗೆ ಕುಣಿದಾಡಿಬಿಡೋರು, ಅದೇನು ತೋಚಿತೋ ಏನು ಕತೆಯೋ

'ಕನ್ನಡ ಬಾವುಟ ಹಾರಿಸೋಣ' ಎಂದರು. 'ಒಂದು ಸಮಾರಂಭ ಇಟ್ಟುಕೊಂಡು ಹಾರಿಸೋಣ, ಪರಿಷತ್ತಿನ ಆವರಣದಲ್ಲಿ' ಎಂದು ಹೇಳಿದರು. ಕಾರ್ಯಸಮಿತಿಯಲ್ಲಿ ವೆಂಕಣ್ಣಯ್ಯನವರಿದ್ದರು, ಕೃಷ್ಣಶಾಸ್ತ್ರಿಗಳಿದ್ದರು, ಇನ್ನೂ ಯಾರು ಯಾರೋ ಇದ್ದರು. ಒಬ್ಬರೂ ಒಂದೂ ಮಾತನಾಡಲಿಲ್ಲ. ಶ್ರೀಕಂಠಯ್ಯನವರು ಹೇಳಿದರು, 'ಏನು ಮಾಡುವುದು, ಹೇಗೆ ಎಂದು ಹೇಳಿ.' ನಾನು ಕಾರ್ಯದರ್ಶಿಯಾಗಿ ಹೇಳಿದೆ, 'ಸಾರ್, ಇಟ್ಟುಕೊಳ್ಳೋಣ, ಆದರೆ ಈಗ ಸಮಯ ಸರಿಯಲ್ಲ, ಈ ಸಂದರ್ಭ ಒಳ್ಳೆಯದಲ್ಲ, ಬೇಡಿ ಈಗ, ಮುಂದೆ ಯಾವಾಗಲಾದರೂ ಇಟ್ಟುಕೊಳ್ಳೋಣ'. 'ಹ್ಞೂ,' ಯಾಕಪ್ಪಾ ಯಾಕಾಗಬಾರದು, ನಾವು ಕನ್ನಡಿಗರು, ಕನ್ನಡ ಬಾವುಟ ಹಾರಿಸುವುದಕ್ಕೆ ನಮಗೆ ಅಡ್ಡಿ ಯಾರು ಬರುತ್ತಾರೆ ?' ಎಂದು ಹೇಳಿದರು. 'ಸಾರ್, ಈ ಸಮಯದಲ್ಲಿ ಬೇಡಿ, ಯಾಕೆಂದರೆ ಈ ಕಾಂಗ್ರೆಸ್‌ನೋರು ತಮ್ಮ ಬಾವುಟವನ್ನು ಹಾರಿಸಿ ಗಲಾಟೆ ಮಾಡಿದ್ದಾರೆ. ಅಲ್ಲಿ ಅದು ಮಿರ್ಜಾ ಸಾಹೇಬರಿಗೆ ಸರಿಯಾಗಿ ತೋರದೆ, ಲಾಠಿಚಾರ್ಜ್ ಎಲ್ಲಾ ಆಗಿ, ತುಂಬಾ ಅವಾಂತರವಾಗಿತ್ತು. ಕಾಂಗ್ರೆಸ್ಸಿನವರು ತಮ್ಮ ಬಾವುಟ ಹಾರಿಸಬೇಕು ಅಂತ. ಕಾಂಗ್ರೆಸ್ ಧ್ವಜ ಹಾರಿಸುತ್ತೇವೆ ಎಂದು ಹೇಳಿ ಅವರೊಂದು ಏರ್ಪಾಡು ಮಾಡಿಕೊಂಡು ಅಲ್ಲಿ ಹೊಡೆದಾಟ ಆಗಿ, ಗಲಾಟೆ ಆಗಿತ್ತು. ಈ ಸಂದರ್ಭದಲ್ಲಿ ನಾವು ಕನ್ನಡ ಬಾವುಟ ಎಂದು ಹೇಳಿದರೆ ದಿವಾನರು ಏನು ತಿಳಿದು ಕೊಳ್ಳುತ್ತಾರೆಯೊ, ಏನು ಕತೆಯೊ, ಜನರು ಏನು ತಿಳಿದುಕೊಳ್ಳುತ್ತಾರೊ, ಇನ್ನೂ ಒಂದು ಬಾವುಟ ಬಂತೆ, ಇಷ್ಟು ಹೊತ್ತು ಆದದ್ದರ ಜೊತೆಗೆ ಇದೂ ಒಂದು ಬಾವುಟ ಎಂದು ಬರುತ್ತೆ, ಈಗ ಬೇಡಿ' ಎಂದು ಹೇಳಿದೆ. ಆಗ ಇನ್ನೂ ಕೆಲವರು ಬಂದರು. 'ಹೌದು, ಹೌದು, ಇದು ಸಮಯ ಸರಿಯಾಗಿಲ್ಲ, ಮುಂದೆ ಯಾವಾಗಲಾದರೂ ಮಾಡೋಣ' ಎಂದು ಹೇಳಿದರು. ಅವರಿಗೆ ಏನುಮಾಡುವುದಕ್ಕೂ ಆಗಲಿಲ್ಲ. ಇದೇನು ಇವನು ಇಷ್ಟು ಚಿಕ್ಕವನು, ನನ್ನ ವಿದ್ಯಾರ್ಥಿಯಾಗಿದ್ದವನು, ನಾನು ಏನು ಹೇಳಿದರೂ ಕಡೆಗೆ ಒಪ್ಪುವುದಿಲ್ಲವಲ್ಲ ಎಂದು ಮನಸ್ಸಿಗೆ ಅತೃಪ್ತಿಯಾಯಿತು ಅವರಿಗೆ. ಆದರೂ ಕೂಡ ನುಂಗಿಕೊಂಡರು, ಹೇಗೋಮಾಡಿ. ಅದಕ್ಕೆ ಆಮೇಲೆ ಯೋಚನೆಮಾಡಿ, 'ನಾವೊಂದು ಒಳ್ಳೆ ಪದ್ಯಕಾವ್ಯಗಳನ್ನು ಹೆಕ್ಕಿ, ಮೊದಲಿನಿಂದ ಕನ್ನಡದಲ್ಲಿ ಏನೇನು ಬಂದಿದೆಯೊ ಅವುಗಳನ್ನು ಸೇರಿಸಿ, ಒಂದು ಪುಸ್ತಕ ಪ್ರಕಟಣೆ ಮಾಡೋಣ, ಆದಷ್ಟು ಬೇಗ', ಎಂದು ಹೇಳಿದರು. 'ಅಗತ್ಯವಾಗಿ ಮಾಡಿ ಸಾರ್,' ಎಂದು ಹೇಳಿದೆ. 'ಅಗತ್ಯ ವಾಗಿ ನಾವು ಮಾಡೋಣ' ಎಂದು ಹೇಳಿ ಆಗ ಕುಳಿತುಕೊಂಡರು. ವಿ. ಸೀತಾ ರಾಮಯ್ಯ ಆಮೇಲೆ ಇನ್ನೊಬ್ಬರು ಯಾರೋ ಸೇರಿ ಸೆಲೆಕ್ಟ್‌ಮಾಡಿಕೊಟ್ಟದ್ದು, ಅದೆಲ್ಲ ನೋಡಿಕೊಂಡು 'ಕನ್ನಡ ಬಾವುಟ'ವನ್ನು ಆಗ ಪ್ರಕಟಣೆ ಮಾಡಿದರು.

ಹಾಗೆ ಅವರಿಗೆ ಕೆಲವು ಸಾರಿ ವ್ಯಾವಹಾರಿಕ ದೃಷ್ಟಿಯಿಂದ ಇದನ್ನು ಮಾಡಬಹುದೇ ಬಾರದೇ ಎಂಬುದಾಗಿ ತಿಳಿಯದೆ ಕಷ್ಟಕ್ಕೆ ಸಿಕ್ಕಿಕೊಳ್ಳುತ್ತಿದ್ದರು. ದಾಸ್ಯದ ಟೋಪಿ, ನಮ್ಮ ತಲೆಯ ಮೇಲೆ ಒಂದಲ್ಲ ಎರಡು ಟೋಪಿಗಳು ಇರುತ್ತಿದ್ದವು. ಇಲ್ಲಿ ಮೈಸೂರರಸರ ಕಾಟ ಒಂದು ; ಅಲ್ಲಿ ಸರಿಯೇ ಸರಿ, ಇಂಡಿಯಾ ಸರ್ಕಾರದ್ದು ; ಹೇಳಬೇಕಾದದ್ದೆ ಇಲ್ಲ. ಈ ಸಂದರ್ಭದಲ್ಲಿ ಕಷ್ಟದಲ್ಲಿ ಇದನ್ನು ಮಾಡಬೇಕಾಗಿತ್ತು. ಹಾಗಾಗಿ ಇವರ ಉದ್ದೇಶವೇನೋ ಯಾವಾಗಲೂ ಒಳ್ಳೆಯದೇ, ದೊಡ್ಡದೇ. ಕನ್ನಡ ಮುಂದಕ್ಕೆ ಬರಬೇಕು ಎಂದು ಹೇಳಿ ಮಾಡುತ್ತಾ ಇದ್ದರು. ಅವೆಲ್ಲವನ್ನೂ ಆ ರೀತಿ ಮಾಡಿಸಿಕೊಟ್ಟರು. ಯಾವುದೋ ಒಂದು ಉತ್ಸವವನ್ನು ಏರ್ಪಾಡು ಮಾಡಬೇಕಾದರೂ ಅವರ ರೀತಿ ಬೇರೆಯಾಗಿರುತ್ತಿತ್ತು. ವಸಂತ ಸಾಹಿತ್ಯೋತ್ಸವ ನಡೆಯುತ್ತಾ ಇತ್ತು. ಒಂದೆರಡು ವರ್ಷ ನಾನು ಅದಕ್ಕೆ ಕಾರ್ಯದರ್ಶಿಯಾಗಿದ್ದೆ. ನಾನು ಕಾರ್ಯದರ್ಶಿಯಾಗಿದ್ದಾಗ 'ಬರೀ ಎರಡು ಭಾಷಣಗಳನ್ನು ಇಟ್ಟುಬಿಟ್ಟರೆ ಸಾಲದು, ಏನಾದರೂ ಒಂದು ಮನರಂಜನೆ ಕಾರ್ಯ ಇರಬೇಕು' ಎಂದು ಹೇಳಿ, ಕನ್ನಡದ ಒಳ್ಳೆ ಭಾಗಗಳನ್ನು ಓದಿಸುವುದು, ಅದನ್ನು ಹಾಡಿಸುವುದು, ಹೀಗೆಲ್ಲ ಮಾಡಿದ್ದು ಕೇಳಿ ಬಹಳ ಸಂತೋಷವಾಗಿಬಿಟ್ಟು 'ನನಗೆ ಬಹಳ ಸಂತೋಷವಾಗಿದೆ, ನಾಳೆ ದಿನ ಮುಗಿಯುತ್ತೆ. ಮುಗಿದ ಮೇಲೆ ಒಂದು ಸಂತೋಷ ಭೋಜನ ಇಟ್ಟುಕೊಳ್ಳೋಣ. ನಾನು ಅದರ ಖರ್ಚನ್ನು ವಹಿಸಿಕೊಳ್ಳುತ್ತೇನೆ' ಎಂದು ಹೇಳಿ ಹಾಗೆ ಅವರು ಮಾಡುತ್ತಿದ್ದರು. ಅಷ್ಟು ಸಂತೋಷಪಡುವರು, ಕನ್ನಡ ಎಂದರೆ.

ಹೀಗೆ ತಮ್ಮ ಐಹಿಕವಾದ ಅಥವಾ ದೈಹಿಕವಾದ ಯಾವ ತೊಂದರೆಯನ್ನೂ ಗಮನಿಸದೆ ಅವರು ಕನ್ನಡ ನಾಡಿನಲ್ಲೆಲ್ಲ ಸಂಚರಿಸಿ ಎಲ್ಲರಿಗೂ ಬೇಕಾದವರಾಗಿದ್ದರು. ರಾಜಕೀಯದಲ್ಲಿ ಕೆಲವು ಸಾರಿ ಅವರು ಏನೋ ಮಾತನ್ನು ಆಡಿಬಿಟ್ಟು ಸ್ವಲ್ಪ ಕಷ್ಟಕ್ಕೆ ಸಿಕ್ಕಿಕೊಳ್ಳುವರು. ಚರ್ಚೆಗೆ ಅವಕಾಶ ಕೊಡುವರು. ಅವರಿಗೆ ಗಾಂಧೀಜಿ ಎಂದು ಹೇಳಿ ಅಷ್ಟೊಂದೇನು ಭಕ್ತಿ ಇರಲಿಲ್ಲ, ಮೊದಲು. ಓ ಏನು ಚಳುವಳಿ, ಹುಚ್ಚು ಚಳುವಳಿ, ಎಲ್ಲಾದರೂ ಉಂಟೆ, ಈ ಬ್ರಿಟಿಷ್ ಎಂಪೈರ್ ಇರುವಾಗ ಅದನ್ನು ನಾವು ನಂಬಿಕೊಳ್ಳಬೇಕಿತ್ತು, ಎಂಬ ಭಾವನೆ ಅವರಲ್ಲಿತ್ತು, ಅದನ್ನೇನೂ ಮುಚ್ಚಿಡುವ ಮಾತು ಬೇಕಾದ್ದಿಲ್ಲ. ಅವರಿಗೆ ಆ ಭಕ್ತಿಯಿತ್ತು. ಈ ಬ್ರಿಟಿಷ್ ಸಂಬಂಧ ನಮಗೆ ಬಂದದ್ದು ನಿಜವಾಗಿಯೂ ದೈವಿಕವಾಗಿ, ಈಶ್ವರ ಪ್ರೇರಿತವಾಗಿ ಬಂದಿದೆ ಎಂಬುದಾಗಿ, ಅದನ್ನು ನಾವು ಕಳೆದುಕೊಳ್ಳಬಾರದು, ಅವರ ನೇತೃತ್ವದಲ್ಲಿ ನಾವು ಮುಂದೆ ಹೋಗಬೇಕು ಎಂಬುದಾಗಿ ಹಿಂದಿನ ವಿಚಾರವನ್ನು ಅವರು ಇಟ್ಟುಕೊಂಡಿದ್ದರು. ಈ ಸ್ವಾತಂತ್ರ್ಯಕ್ಕಾಗಿ ಹೋರಾಡುವವರು ಮುದವೀಡು ಕೃಷ್ಣರಾಯರು, ಶ್ರೀನಿವಾಸರಾಯರು,

ಇವರೆಲ್ಲಾ ಬಂದು ಅವರ ಹತ್ತಿರ —"ರಾಯರೇ,-ಶ್ರೀಕಂಠಯ್ಯನವರನ್ನ-'ರಾಯರೇ' ಎಂದು ಕೂಗುವರು—ನಿಮ್ಮದೆಲ್ಲ ಸರಿ, ಪಂಪ ರನ್ನ ನಾಗಚಂದ್ರ ಏನುಬೇಕಾದರೂ ಹೇಳಿ, ನಾವು ಬೇಕಾದಷ್ಟು ಕೇಳುತ್ತೇವೆ. ಆದರೆ ರಾಜಕೀಯದ ವಿಚಾರಕ್ಕೆ ಮಾತ್ರ ಬರಬೇಡಿ ನೀವು. ಇಂಡಿಯಾ ಸ್ವಾತಂತ್ರ್ಯ.........ಅದರ ವಿಚಾರ ಎಲ್ಲಾ ಹೇಳಬೇಡಿ. ಯಾತಕ್ಕೆ ನೀವು ಹೇಳಬೇಕು? ಅದು ಬೇಡ. ಅದು ಬೇಡ. ಯಾಕೇಂದ್ರೆ ಇಲ್ಲಿ ತೀವ್ರವಾದ ಆಸಕ್ತಿಯಿದೆ. ತುಂಬಾ ಆವೇಶ. ಸ್ವಾತಂತ್ರ್ಯ ಬೇಕು ಎಂಬ ಅಭಿಲಾಷೆ ಎಲ್ಲರಿಗೂ ಇದೆ. ಮುಖ್ಯವಾಗಿ ತಾವು ಈಗ 'ನೀವು ಬ್ರಿಟಿಷರು ಇರಬೇಕು' ಹಾಗೆ ಹೀಗೆ ಎಂದು ಹೇಳಿಬಿಟ್ಟರೆ ಅದು ಬಹಳ ಕೆಟ್ಟುಹೋಗುತ್ತದೆ, ಬೇಡಿ. ಅದು ಸುಮ್ಮನೆ ವಿರೋಧಕ್ಕೆ ಕಾರಣವಾಗುತ್ತದೆ." ಎಂದು ಹೇಳಿ ಎಷ್ಟೋ ಸಲ ತಿಳಿಸಿದ್ದಾಯ್ತು. ಆಮೇಲಾಮೇಲೆ ಬಹಳ ಅದನ್ನ ಹೇಳುತ್ತಾ ಇರಲಿಲ್ಲ, ಅವರು. ಸಾಹಿತ್ಯದ ವಿಚಾರ ವಾಗಿ ಹೇಳಿಕೊಡುವರು. ಯಾವ ಊರಿನಲ್ಲಾದರೂ ಅವರು ಒಂದು ಗಂಟೆ, ಎರಡು ಗಂಟೆ, ಮೂರುಗಂಟೆಯವರೆಗೂ ಮಾತನಾಡಿಬಿಡುವರು, ಯಾವುದು ಬೇಕಾದರೂ, ಸಣ್ಣ ವಿಚಾರ ಕೂಡ. ಹೊನ್ನಮ್ಮನನ್ನು ಕುರಿತು ಭಾಷಣ ಮಾಡಬೇಕಾದರೂ ಎರಡು ಗಂಟೆ ಮಾತನಾಡುವರು. ನಿಜವಾಗಿಯೂ ಹೊನ್ನಮ್ಮ ಇಷ್ಟೊಂದು ವಿಷಯವನ್ನು ಕೊಡುವುದಕ್ಕೆ ಶಕ್ತಳಾಗಿದ್ದಾಳೆಯೆ ಎಂದು ಆಶ್ಚರ್ಯವಾಗುತ್ತದೆ. ಆ ವಿಚಾರ ಏನೂ ಇಲ್ಲ. ವಿಮರ್ಶೆ ದೃಷ್ಟಿಯೇ ಇಲ್ಲ. ಅದೇನು ಹೆಣ್ಣಲ್ಲವೆ ನಮ್ಮನ್ನೆಲ್ಲ ಪಡೆದ ತಾಯಿ, ಹೆಣ್ಣು ಹೆಣ್ಣೆಂದೇಕೆ ಬೀಳುಗಳೆವರು, ಕಣ್ಣುಕಾಣದ ಗಾವಿಲರು, ಎಂದು ಹೇಳಿದರೆ ಅವರಿಗೆ ಒಂದು ಆವೇಶ ಬಂದುಬಿಡುವುದು. 'ಎಷ್ಟು ಚೆನ್ನಾಗಿ ಹೇಳಿದ್ದಾರೆ, ನಮ್ಮ ಕನ್ನಡದ ಬುತ್ತಿ' ಎಂದು ಹೇಳಿಬಿಟ್ಟು ಹಾಗೆಯೇ ಇವನು ಸಣ್ಣವನು ಇವನು ದೊಡ್ಡವನು, ಈ ಕವಿಗಳಲ್ಲಿ ಇದು ಹೆಚ್ಚು, ಇದು ಚೆನ್ನಾಗಿದೆ, ಇದು ಅಷ್ಟು ಚೆನ್ನಾಗಿಲ್ಲ, ಇದು ಎರಡನೆ ದರ್ಜೆಯದು, ಮಧ್ಯಮ ದರ್ಜೆಯದು ಎಂದು ವ್ಯತ್ಯಾಸಮಾಡು ತ್ತಿರಲಿಲ್ಲ. ಯಾವ ಕನ್ನಡ ಗದ್ಯವಾಗಲಿ, ಯಾವ ಕನ್ನಡ ಕಾವ್ಯವಾಗಲಿ ಅದಕ್ಕೆ ಮರ್ಯಾದೆ ಕೊಟ್ಟು ಅದೆಲ್ಲಾ ಮಾಡುವರು.

ಅದೆಷ್ಟು ಜನಕ್ಕೆ ಅವರು ಮುನ್ನುಡಿ ಬರೆದುಕೊಟ್ಟಿಲ್ಲ? ನಾನೇ ಒಂದು ಸಾರಿ ಕೇಳಿದೆ: 'ಏನು ಸಾರ್, ಬಂದವರೆಲ್ಲ ಶ್ರೀಕಂಠಯ್ಯನವರ ಮುನ್ನುಡಿ ಬೇಕು ಎಂದು ಕೇಳಿದರೆ ಬರೆದುಕೊಟ್ಟುಬಿಡುತ್ತೀರಲ್ಲ, ಸ್ವಲ್ಪ ವಿಮರ್ಶೆ ಮಾಡಬೇಡವೆ, ಟೀಕ ಮಾಡಬೇಕು.' ಅದಕ್ಕೆ ಅವರೆಂದರು: 'ಅಯ್ಯಯ್ಯೋ, ಆಗುವುದಿಲ್ಲಪ್ಪ. ಎಂದಿಗೂ ಹಾಗೆ ಮಾಡಬಾರದು ನಾವು. ನಮಗೇನು, ಕನ್ನಡದಲ್ಲಿ ಬರೆಯುತ್ತಿದ್ದಾರಲ್ಲ ಅಷ್ಟೇ ಸಾಕು. ಯಾರೋ ಒಂದು ಕಡೆ ಹೇಳಿದ್ದಾರೆ. 'ನಾನೂರು ಪಂಕ್ತಿ ಬರೆದಿರುವ ಈ ಕಾವ್ಯದಲ್ಲಿ

ಬಂದಾದರೂ ಒಳ್ಳೆಯದಿರಬೇಡವೇ ?'. ಆ ದೃಷ್ಟಿ ಅವರದು. ಅವನು ಕನ್ನಡದಲ್ಲಿ ಬರೆದಿದ್ದಾನಲ್ಲ ಅಷ್ಟೇ ಸಾಕು. ಅವರು ಕನ್ನಡಕ್ಕೋಸ್ಕರವಾಗಿ ತಮ್ಮ ಪೂರ್ಣ ಹೃದಯದಿಂದ ಆಶೀರ್ವಾದ ಮಾಡುತ್ತಾ ಇದ್ದರು. ಎಲ್ಲರೂ ಅವರಿಂದ ಬರೆಸಿಕೊಳ್ಳ ಬೇಕು. ಯಾರು ಬಂದರೂ ಕೂಡ, ವಿಮಾ ಕಂಪನಿಯೋರು ಯಾರೋ ಒಬ್ಬರು ಬಂದಿದ್ದಾರೆ. ಅವರು ವಾರ್ಷಿಕೋತ್ಸವ ಏನೋ ಒಂದು ಇಟ್ಟುಕೊಂಡು ಅಲ್ಲಿ ಬಂದು 'ಏನಾದರೂ ಬರೆದು ಕೊಡಿ' ಎಂದು ಹೇಳಿ ಬರೆಸಿಕೊಂಡರು.

ಹೀಗೆ ಯಾರು ಬೇಕಾದರೂ ಆಗಲಿ ಕನ್ನಡಕ್ಕಾಗಿ ಅಷ್ಟು ಅವರು ಮಾಡುತ್ತಾ ಇದ್ದರು. ಕನ್ನಡ ಕನ್ನಡ ಎಂದು ಜಪಿಸುತ್ತಾ ಇದ್ದರು. ಅದು ಕನ್ನಡದ ಹುಚ್ಚು ಎಂಬುದಾಗಿ ವೆಂಕಟನಾರಣಪ್ಪನವರು ಅವರನ್ನು ಹಾಸ್ಯ ಮಾಡುತ್ತಾ ಇದ್ದರು. ಕನ್ನಡದ ಹುಚ್ಚು ನಿಜವಾಗಿ ಅವರಿಗೆ ಹಿಡಿದಿತ್ತು, ಅದು ಒಳ್ಳೆಯ ಹುಚ್ಚು. ಒಳ್ಳೆ ಉನ್ಮಾದ ಅದು. ಆ ಹುಚ್ಚನ್ನು ತಮ್ಮಲ್ಲಿದ್ದ ಯುವಕರಿಗೆ ಅನೇಕರಿಗೆ ಹಿಡಿಸಬೇಕು ಎಂದು ಪ್ರಯತ್ನಪಟ್ಟರು. ಆದರೆ ನಾವು ಅಷ್ಟೊಂದು ಹುಚ್ಚರಾಗಿ ಇರಲಿಲ್ಲ. ಸ್ವಲ್ಪ ಎಚ್ಚರದಿಂದ ನಡೆದುಕೊಳ್ಳುತ್ತಿದ್ದೆವು. ಆದರೂ ಆ ಉತ್ಸಾಹ, ಅವರ ಉತ್ಸಾಹಕ್ಕೆ ಸಮವಾಗಿ ನಮಗೆ ಎಂದಿಗೂ ಕೂಡ ಬರುತ್ತಿರಲಿಲ್ಲ. ಆದರೂ ಅವರಲ್ಲಿಗೆ ಹೋಗಬೇಕು ಎಂದು ನಮ್ಮ ಆಸೆ ಇರುತ್ತಾ ಇತ್ತು. ಅನೇಕ ವಿಚಾರದಲ್ಲಿ ಹಾ. ಮಾ. ನಾಯಕರು ಹೇಳಿದ ಹಾಗೆ ಅವರ ಉತ್ಸಾಹ ಅದ್ಭುತವಾದುದಾಗಿತ್ತು. ಅವರು 'ಶ್ರೀಸಾಹಿತ್ಯಕ್ಕೆ' ಮುನ್ನುಡಿ ಬರೆದಿರುವುದು ತುಂಬಾ ಚೆನ್ನಾಗಿದೆ. ಅವರನ್ನು ಇಲ್ಲಿ ಕೂರಿಸಿಕೊಂಡು ನಾನು ಹೇಳಬಾರದು. ಆದರೂ ನಾನು ಹೇಳಬೇಕಾದದ್ದು ಎಂದರೆ ನನಗೆ ಬಹಳ ಮೆಚ್ಚಿಕೆಯಾಗಿದೆ, ಆ ಮುನ್ನುಡಿ. ಶ್ರೀಕಂಠಯ್ಯನವರ ವಿಚಾರಕ್ಕೆ ಆ ಮುನ್ನುಡಿ ಯನ್ನೇ ಬೇರೆ ಅಚ್ಚುಮಾಡಿ ಹಾಕಿಸಬಹುದು. ಇನ್ನೇನೂ ಹೇಳಬೇಕಾಗಿಲ್ಲ, ಅಷ್ಟು ಚೆನ್ನಾಗಿ ಹೇಳಿಬಿಟ್ಟಿದ್ದಾರೆ, ಎಲ್ಲಾ ವಿಚಾರಗಳನ್ನೂ ಹೇಳಿಬಿಟ್ಟಿದ್ದಾರೆ. ಶ್ರೀಕಂಠಯ್ಯ ನವರ ಬಹುಮುಖ ವ್ಯಕ್ತಿತ್ವ ಎಲ್ಲವನ್ನೂ ಚೆನ್ನಾಗಿ ಕಂಡು, ಬಹುಶಃ ಅವರೂ ಉತ್ಸಾಹಪಟ್ಟುಕೊಂಡರು ಎಂದು ಕಾಣುತ್ತದೆ. ಆ ಪುಸ್ತಕವನ್ನು ಓದಿ. ಆ ಶ್ರೀಕಂಠಯ್ಯನವರ ಉತ್ಸಾಹದಿಂದ ಅವರೂ ಕೂಡ ಸ್ವಲ್ಪಮಟ್ಟಿಗೆ ಉತ್ಸಾಹಿತರಾಗಿ ಬರೆದಿದ್ದಾರೆ. ಇದು ಒಳ್ಳೆಯ ಪುಸ್ತಕ. ಅಗತ್ಯವಾಗಿ ಮಾಡಬೇಕಾಗಿದ್ದ ಕೆಲಸ. ಇಂಥ ಅನೇಕ ಗ್ರಂಥಗಳು ಬರಲಿ. ಅವುಗಳಿಂದ ಶ್ರೀಕಂಠಯ್ಯನವರ ನೆನಪು, ಸಂದೇಶಗಳು ನಿತ್ಯವಾಗಿರಲಿ.

ಕೆಳೆಯಂಗೆ ಸೋಲ್ವುದೆ ಜಯಂ ;
ಕ್ಷಮೆಯೆ ತಾನ್ ಜಯಂ
ಕ್ರೋಧಮನ್ ತುಳಿದಿಟ್ಟು,
ಬಲ್ಪಿಡಿದು ಧರ್ಮಮನ್
ಬಗೆಯೊಡನೆ ಪೋರಾಡುವುದೆ ಜಯಂ.

'ಅಶ್ವತ್ಥಾಮನ್', 'ಶ್ರೀ ಸಾಹಿತ್ಯ'ದಲ್ಲಿ ಪು. ೨೧೮






# ಸಂಪಾದಕೀಯ

ಕನ್ನಡ ಕನ್ನಡಿಗರ ಉಸಿರಾಗಿ ಬಾಳಲಿ ಎಂದು ಹಾರೈಸಿದ, ಅದಕ್ಕಾಗಿ ಬಾಳಿನ ಕೊನೆಯ ಗಳಿಗೆಯವರೆಗೂ ಶ್ರಮಿಸಿದ, 'ನುಡಿದು ಕಲಿಸಿ'ದ, 'ನುಡಿಯದೆ ಮತ್ತೆ ಕಲಿಸಿ'ದ, 'ದುಡಿದು ಕಲಿಸಿ'ದ ಹಾಗೂ 'ಮನದರಕೆಗಳನೆಚ್ಚರಿಸಿ ಎಳೆಯರೆದೆಯಲಿ ಹಾಡುವಾಸೆಯನು ಸುಳಿಸಿ'ದ ಪ್ರೊ. ಬಿ. ಎಂ. ಶ್ರೀಕಂಠಯ್ಯನವರು (1884-1946) ತಮ್ಮ ಬಹುಮುಖ ಕಾರ್ಯಗಳಿಂದ ಕನ್ನಡ ನಾಡು-ನುಡಿಗಳಿಗೆ ಹೊಸ ಚೇತನವನ್ನು ಉಂಟು ಮಾಡಿದವರು ; ಆಧುನಿಕ ಕನ್ನಡ ಸಾಹಿತ್ಯೇತಿಹಾಸದಲ್ಲಿ ಹೊಸ ಯುಗವನ್ನು ಆರಂಭಿಸಿದವರು; ಹೊಸ ಪರಂಪರೆಯನ್ನು ಸೃಷ್ಟಿಸಿದವರು; ಕನ್ನಡಕ್ಕೆ ಇಂದು ಲಭ್ಯವಾಗಿರುವ ಸ್ಥಾನ-ಮಾನಗಳಿಗೆ ನಾಂದಿಯನ್ನು ಹಾಡಿದವರು; ಹೀಗಾಗಿ 'ಕನ್ನಡದ ಕಣ್ವ'ರೆಂಬ ಅರ್ಥಪೂರ್ಣ ಪ್ರಶಂಸೆಗೆ ಪಾತ್ರರಾಗಿದ್ದವರು. "ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ, ಕನ್ನಡ" ಎಂಬ ಅರಿವನ್ನು ಮೂಡಿಸಿದ ಮಹಾಮಹಿಮರು ಅವರು. ಅಷ್ಟೇ ಅಲ್ಲ, ಡಾ. ಹಾ.ಮಾ. ನಾಯಕ ಅವರೆಂದಿರುವಂತೆ, "ಅವರನ್ನು ಸ್ಮರಿಸದೆ, ಅವರನ್ನು ಎಣಿಸದೆ ಈ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ಸಾಂಸ್ಕೃತಿಕ ಚರಿತ್ರೆ ಪೂರ್ಣಗೊಳ್ಳುವುದಿಲ್ಲ." ('ಶ್ರೀಸಾಹಿತ್ಯ', ಮುನ್ನುಡಿ, ಪು. v).

ಶ್ರೀಯವರು ಇಂಥ ಪ್ರಾತಃಸ್ಮರಣೀಯರು. ಮೇಲಾಗಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಕನ್ನಡ ಅಧ್ಯಯನಕ್ಕೆ ಅಡಿಗಲ್ಲನ್ನು ಹಾಕಿದವರು ; ವಿಶ್ವವಿದ್ಯಾನಿಲಯದ ಕುಲಸಚಿವರಾಗಿದ್ದವರು. ಹೀಗಾಗಿ, ಅವರ ಶತಮಾನೋತ್ಸವದ ಅಂಗವಾಗಿ 'ಪ್ರಬುದ್ಧ ಕರ್ಣಾಟಕ'ದ ವಿಶೇಷ ಸಂಚಿಕೆಯೊಂದನ್ನು ಹೊರತರಬೇಕೆಂದು ಯೋಚಿಸಲಾಯಿತು. ಶ್ರೀ ಶತಮಾನೋತ್ಸವದ ಅಂಗವಾಗಿ ಕನ್ನಡ ನಾಡಿನ ವಿವಿಧ ಭಾಗಗಳಲ್ಲಿನ ಸಂಘಸಂಸ್ಥೆಗಳು ನೆನಪಿನ ಸಂಚಿಕೆಗಳನ್ನು ಹೊರತಂದಿದ್ದ ಹಾಗೂ ಹೊರ ತರಲಿದ್ದ ಹಿನ್ನೆಲೆಯಲ್ಲಿ ಶ್ರೀಯವರನ್ನು ಕುರಿತು ಹಿರಿಯ ಕಿರಿಯ ಕವಿಗಳು ರಚಿಸಿರುವ ಕವನಗಳನ್ನು ಒಳಗೊಂಡ 'ಕವನ ಕಾಣಿಕೆ', ಶ್ರೀಯವರ ಸಮಕಾಲೀನರು ಮತ್ತು ಇತರ ಕಿರಿಯ ತಲೆಮಾರಿನವರು ಈ ಮೊದಲೇ ಬಿಡಿಸಿದ್ದ ಅವರ ವ್ಯಕ್ತಿ ಚಿತ್ರಗಳನ್ನು ಮತ್ತು ಶ್ರೀಯವರನ್ನು ಹತ್ತಿರದಿಂದ ಕಂಡಿದ್ದ ಶಿಷ್ಯರು, ಮಿತ್ರರು ಮತ್ತು ಬಂಧುಗಳು

ತಮ್ಮ ನೆನಪುಗಳನ್ನು ಹೊಸದಾಗಿಸಿ ದಾಖಲಿಸಿದಂಥ ಬರಹಗಳನ್ನು ಒಳಗೊಂಡ 'ನಾನು ಕಂಡಂತೆ', ಶ್ರೀಯವರು ಕನ್ನಡಕ್ಕಾಗಿ ಹಲವು ಕ್ಷೇತ್ರಗಳಲ್ಲಿ ದುಡಿದ ಬಗೆಯನ್ನು ನಿರೂಪಿಸುವ 'ಶ್ರೀಯವರು ಮತ್ತು ಕನ್ನಡ ಪ್ರಚಾರ' ಹಾಗೂ ಅವರ ಒಟ್ಟಾರೆ ಸಾಧನೆಯನ್ನು ಒರೆಹಚ್ಚಿ ನೋಡುವ 'ಸಾಹಿತ್ಯ ಸಾಧನೆ' ಎಂಬ ನಾಲ್ಕು ಭಾಗಗಳಲ್ಲಿ ವಿಶೇಷ ಸಂಚಿಕೆಯೊಂದನ್ನು ಹೊರತರುವ ಯೋಜನೆಯನ್ನು ಹಮ್ಮಿಕೊಳ್ಳಬಹುದೆಂದು 'ಪ್ರಬುದ್ಧ ಕರ್ಣಾಟಕ'ದ ಪ್ರಧಾನ ಸಂಪಾದಕರಾದ ಡಾ.ಹಾ.ಮಾ. ನಾಯಕ ಅವರು ಸೂಚಿಸಿದರು. ಅವರ ಸೂಚನೆಯನ್ನು ಅನುಸರಿಸಿ ಈ ಸಂಚಿಕೆ ಕಾರ್ಯರೂಪಕ್ಕೆ ಬಂದಿದೆ.

ಈ ಸಂಬಂಧವಾಗಿ ತಮ್ಮ ಪ್ರಕಟಿತ, ಅಪ್ರಕಟಿತ ಕವನಗಳನ್ನು, ಲೇಖನಗಳನ್ನು, ಪ್ರಬಂಧಗಳನ್ನು ಬಳಸಿಕೊಳ್ಳಲು ನಮ್ಮೆಲ್ಲ ಹಿರಿಯ ಕಿರಿಯ ಸಾಹಿತಿಗಳು ವಿಮರ್ಶಕರು ಅನುಮತಿ ಕೊಟ್ಟಿದ್ದಾರೆ; ನಮ್ಮ ಕೋರಿಕೆಯನ್ನು ಮನ್ನಿಸಿ ಸಕಾಲದಲ್ಲಿ ಹೊಸ ಲೇಖನಗಳನ್ನು ಬರೆದುಕೊಟ್ಟಿದ್ದಾರೆ. ಶ್ರೀಯವರ ಬಗ್ಗೆ ನಮ್ಮ ಸಾಹಿತ್ಯಲೋಕ ಇರಿಸಿಕೊಂಡಿರುವ ಅಪಾರ ಗೌರವಕ್ಕೆ ನಮಗೆ ದೊರೆತಿರುವ ಹೃತ್ಪೂರ್ವಕ ಸಹಕಾರ ಇನ್ನೊಂದು ಸಾಕ್ಷಿಯಾಗಿದೆ. ಈ ಎಲ್ಲ ಹಿರಿಯ-ಕಿರಿಯ ಬರೆಹಗಾರರಿಗೆ 'ಪ್ರಬುದ್ಧ ಕರ್ಣಾಟಕ' ಋಣಿಯಾಗಿದೆ.

ಈ ಸಂಚಿಕೆಗೆ ಮತ್ತೊಂದು ವಿಶಿಷ್ಟತೆಯೂ ದೊರಕಿಕೊಳ್ಳುವಂತೆ ಪ್ರಧಾನ ಸಂಪಾದಕರು ನೋಡಿಕೊಂಡಿದ್ದಾರೆ. ಕನ್ನಡ ನಾಡಿನಾದ್ಯಂತ ಶ್ರೀ ಶತಮಾನೋತ್ಸವಕ್ಕೆ ನಾಂದಿಯನ್ನು ಹಾಡಿದ ಬಿ. ಎಂ. ಶ್ರೀಯವರ ಪ್ರಕಟಿತ ಅಪ್ರಕಟಿತ ಬರಹಗಳ ಸಮಗ್ರ ಸಂಪುಟವಾಗಿರುವ 'ಶ್ರೀ ಸಾಹಿತ್ಯ'ದ ಬಿಡುಗಡೆ ಸಮಾರಂಭದ ನಡೆವಳಿಗಳನ್ನು—ಶ್ರೀಯವರ ಪ್ರಮುಖ ಶಿಷ್ಯವರ್ಗಕ್ಕೆ ಸೇರಿದ ಮೂವರು ಮಹನೀಯರಾದ ಶ್ರೀ ಕುವೆಂಪು, ಶ್ರೀ ಎ. ಎನ್. ಮೂರ್ತಿರಾವ್ ಮತ್ತು ಶ್ರೀ. ಎಸ್. ವಿ. ರಂಗಣ್ಣನವರು ಮಾಡಿದ ಭಾಷಣಗಳನ್ನು ಹಾಗೂ ತಮ್ಮ ಸ್ವಾಗತ ಭಾಷಣವನ್ನು ಅನುಬಂಧವಾಗಿ ಅಳವಡಿಸಿಕೊಳ್ಳಲು ಅವರು ಅವಕಾಶ ಮಾಡಿಕೊಟ್ಟಿದ್ದಾರೆ. ಅಂತೆಯೇ, ಮೂಗೂರು ಮಲ್ಲಪ್ಪನವರು ಶ್ರೀಯವರ ಬಗ್ಗೆ ರಚಿಸಿದ್ದ ಲಾವಣಿಯನ್ನೂ ಅವರು ದೊರಕಿಸಿ ಕೊಟ್ಟಿದ್ದಾರೆ. ಅವರ ಈ ಸಹಾಯ–ಸಹಕಾರ ಮತ್ತು ಮಾರ್ಗದರ್ಶನಗಳಿಗಾಗಿ ನಾವು ಚಿರಋಣಿಯಾಗಿದ್ದೇವೆ. ಈ ಎಲ್ಲ ಕಾರಣಗಳಿಂದಾಗಿ ಒಂದು ವಿಶಿಷ್ಟ ಆಕರ ಗ್ರಂಥದ ಸ್ವರೂಪವನ್ನು ಪಡೆದುಕೊಂಡಿರುವ ಈ ವಿಶೇಷ ಸಂಚಿಕೆ ಶ್ರೀಸಾಹಿತ್ಯ ಪ್ರಿಯರಿಗೆ ಪ್ರಿಯವಾಗಿ ಪರಿಣಮಿಸುತ್ತದೆಂದು ನಂಬಿದ್ದೇವೆ.

## ‘ಪ್ರಬುದ್ಧ ಕರ್ಣಾಟಕ’ಕ್ಕೆ ವಿನಿಮಯವಾಗಿ ಬರುವ ಪತ್ರಿಕೆಗಳು

*Annals of Oriental Research*, University of Madras, *Brahmavidya*, Adyar, Madras; *Bulletin of the School of Oriental and African Studies*, London; *Journal of the Andhra Historical Research Society*, Rajahmundry; *Journal of the Karnataka Historical Research Society*, Dharwar; *Quarterly Journal of the Mythic Society*, Bangalore; *The Indian P.E.N.*, Bombay; *Annals of the Venkateswara Oriental Institute*, Tirupati; *The Jaina Siddhanta Bhaskara and the Jaina Gazette*, Arrah; *Bulletin of the Deccan College Research Institute*, Poona; *Publication of the Kannada Research Office*, Dharwar; *Annals of the Bhandarkar Oriental Research Institute*, Poona; *Journal of the Karnataka University*, Dharwar; *Public Affairs*, Bangalore.

‘ಪ್ರಪಂಚ’, ಹುಬ್ಬಳ್ಳಿ; ‘ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ’ (ತೆಲುಗು), ಕಾಕಿನಾಡ; ‘ಪುಸ್ತಕ ಪ್ರಪಂಚ’, ಮೈಸೂರು; ‘ಕನ್ನಡ ನುಡಿ’, ಬೆಂಗಳೂರು; ‘ಸೋವಿಯೆತ್ ದೇಶ’ ಮದ್ರಾಸು; ‘ಪ್ರಕಾಶ’, ಉಡುಪಿ; ‘ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ”, ಬೆಂಗಳೂರು; ‘ಕರ್ಣಾಟಕ ಭಾರತಿ’, ಧಾರವಾಡ; ‘ಸಾಧನೆ’ ಬೆಂಗಳೂರು; ‘ಪರಂಜ್ಯೋತಿ’, ಹುಬ್ಬಳ್ಳಿ; ‘ಸಪ್ತಗಿರಿ’, ತಿರುಪತಿ; ‘ಲೋಚನ’ ಬೆಂಗಳೂರು; ‘ತುಳುವ’, ಉಡುಪಿ.

ಮೈಸೂರು ವಿಶ್ವವಿದ್ಯಾನಿಲಯದ ತ್ರೈಮಾಸಿಕಗಳು



★ ಪ್ರಬುದ್ಧ ಕರ್ಣಾಟಕ

★ ವಿಜ್ಞಾನ ಕರ್ಣಾಟಕ

★ ಮಾನವಿಕ ಕರ್ಣಾಟಕ

ವಾರ್ಷಿಕ ಚಂದಾ
(ಪ್ರತಿಯೊಂದಕ್ಕೂ)

ವಿದ್ಯಾರ್ಥಿಗಳಿಗೆ .... ನಾಲ್ಕು ರೂಪಾಯಿ

ಇತರರಿಗೆ .... ಆರು ರೂಪಾಯಿ

ಸಂಸ್ಥೆಗಳಿಗೆ .... ಎಂಟು ರೂಪಾಯಿ

(ಆಜೀವ ಸದಸ್ಯತ್ವ: ನೂರು ರೂಪಾಯಿಗಳು)